## ಇದೇ ಲೇಖಕರ ಪ್ರಮುಖ ಶ್ರೀವೈಷ್ಣವ ದರ್ಶನದ ಕೃತಿಗಳು

1. ಪವಿತ್ರ 108 ದಿವ್ಯ ದೇಶಗಳು
2. ನಿತ್ಯಾನುಸಂಧಾನ
3. ಸಂಪ್ರದಾಯ
4. ಬ್ರಹ್ಮವಾದಿನಿಯರು ಹಾಗೂ ಪವಿತ್ರ ಮೂರ್ತಿಯರು (ಶ್ರೀವೈಷ್ಣವ ರಮಣೀಯರ ಚಿತ್ರಣ)
5. ಭಾರತೀಯ ಸ್ಮೃತಿಗಳು (ಶ್ರೀವೈಷ್ಣವ ಸಿದ್ಧಾಂತದ ಪ್ರತಿಪಾದನೆಯ ಆಧಾರಸ್ತಂಭಗಳು)
6. ಪಿಳ್ಳೈ ಲೋಕಾಚಾರ್ಯರು
7. ಶ್ರೀವೈಷ್ಣವ ಸಾಹಿತ್ಯ ದೀಪಗಳು
8. ಶ್ರೀವೈಷ್ಣವ ದರ್ಶನ ಮತ್ತು ಸಂಸ್ಕೃತಿ
9. ಕನ್ನಡದಲ್ಲಿ ಶ್ರೀವೈಷ್ಣವ ಸಾಹಿತ್ಯ

# ಶ್ರೀವೈಷ್ಣವ ದರ್ಶನ ಮತ್ತು ಸಂಸ್ಕೃತಿ

## (ಶ್ರೀವೈಷ್ಣವ ದರ್ಶನದ ಇತಿಹಾಸ)

ಸಾಹಿತ್ಯ ಭೂಷಣ, ಸಾಹಿತ್ಯ ಮಹೋಪಾಧ್ಯಾಯ, ಧರ್ಮ ಸಾರಸ್ವತ
**ವಿದ್ವಾನ್ 'ರಘುಸುತ'**

**ಪುಲಿಕೇಶಿ ಪ್ರಕಾಶನ**
ಪುಲಿಕೇಶಿ ರಸ್ತೆ 1ನೇ ಮೈನ್, ಯಶವಂತಪುರ
ಬೆಂಗಳೂರು–560 022

SRIVAISHNAVA DARSHANA MATTHU SAMSKRITI — A History of Srivaishnava Philosophy — Published by M/s PULIKESHI PRAKASHANA, Pulikeshi Road, 1st Main, Yeshavanthapur, Bangalore-22.



Pages : 368 + 8 1st Edition : 2001 Price : 125-00
No of Copies : 1000


ಮುದ್ರಿತ ಪ್ರತಿಗಳು : 1000
ಪ್ರಥಮ ಮುದ್ರಣ : 2001

ಬೆಲೆ : ರೂ. 125-00



ರಕ್ಷಾ ಕವಚ :
ಶ್ರೀನಿಧಿ ಪ್ರಿಂಟರ್ಸ್
ಗಾಯಿತ್ರಿ ನಗರ, ಬೆಂಗಳೂರು-21

ಮುದ್ರಕರು :
ಪ್ರಭು ಮುದ್ರಣ
60/1, ಮೊದಲ ಮುಖ್ಯ ರಸ್ತೆ,
ಶಾಕಾಂಬರಿ ನಗರ, ಸಾರಕ್ಕಿ,
ಬೆಂಗಳೂರು-560 079.
(ದೂರವಾಣಿ : 6640976)

# ಮುನ್ನುಡಿ

ವಿದ್ವಾನ್ 'ರಘುಸುತ' ಅವರು ನಮ್ಮ ಜನರಲ್ಲಿ ಧರ್ಮ ಬೇರೂರಲು, ಸದಾಚಾರವು ಸಂಪನ್ನವಾಗಲು, ತಿಳಿಗನ್ನಡದಲ್ಲಿ ಹಲವಾರು ಸಣ್ಣ-ದೊಡ್ಡ ಪುಸ್ತಕಗಳನ್ನು ಬರೆದು ಜನಸಾಮಾನ್ಯರ ಕೈಸೇರಲು ಎಡೆಬಿಡದೆ ತೊಡಗಿರುವುದು ಎಲ್ಲರಿಗೂ ತಿಳಿದದ್ದೇ. ಇದೊಂದು ವಿಶಿಷ್ಟವಾದ ಸಾಹಿತ್ಯ ಸೇವೆ. ಸೃಜನಾತ್ಮಕ ವಾದ ಇತರ ಸಾಹಿತ್ಯ ಪ್ರಕಾರಗಳಲ್ಲೂ ಶ್ರೀಯುತರು ಕೈಯಾಡಿಸಿದ್ದಾರೆ. ಹಿಂದೂ ಧರ್ಮದ, ಅದರಲ್ಲೂ ಶ್ರೀವೈಷ್ಣವ ಧರ್ಮದ ಸರಿಯಾದ ಪರಿಚಯ ಜನರಿಗೆ ಆಗಬೇಕೆಂಬ ಅವರ ಹಂಬಲಕ್ಕೆ ಇಂಬು ಕೊಡುವಂತೆ ಅವರ ಸಾಹಿತ್ಯ ಕೃಷಿ ಸಾಗಿ ಬಂದಿದೆ.

ಇದೀಗ ಶ್ರೀವೈಷ್ಣವ ದರ್ಶನ ಮತ್ತು ಸಂಸ್ಕೃತಿಗಳನ್ನು ಕುರಿತಂತೆ ಸಮಗ್ರವಾದ, ಸ್ವಾರಸ್ಯವಾದ, ಸರ್ವಜನಪರಿಗ್ರಾಹ್ಯವಾದ ಗ್ರಂಥವೊಂದು ಅವರ ಕೊಡುಗೆಯಾಗಿ ಕನ್ನಡಿಗರ ಕೈಸೇರುತ್ತಿದೆ. ದರ್ಶನಗಳ, ಶಾಸ್ತ್ರಗಳ ವಿಚಾರವಾಗಿ ಉದ್ಗ್ರಂಥಗಳು ಈಗಾಗಲೇ ಹಲವಾರು ಹೊರಬಂದಿವೆ, ಈಗಲೂ ಹೊರಬರುತ್ತಿವೆ. ಆದರೆ ಇವು ಬಹುಮಟ್ಟಿಗೆ ಪ್ರೌಢವಾಗಿದ್ದು ವಿದ್ವಜ್ಜನರಿಗೆ ಮಾತ್ರ ದಕ್ಕುವಂಥವು. ಸಾಮಾನ್ಯ ಜನರ ನೆಲೆಗೆ ಇವು ಎಟುಕುವುದಿಲ್ಲ. ಹೀಗಾಗಿ ಶಾಸ್ತ್ರಸಾಹಿತ್ಯವು ಬಹುಸಂಖ್ಯಾತರಿಗೆ ಅಪರಿಚಿತವಾಗಿಯೇ ಉಳಿದಿದೆ.

ವಿದ್ವಾನ್ ರಘುಸುತ ಅವರು ಈ ಕೊರತೆಯನ್ನು ನೀಗಿಸಲೆಂದು ಎಲ್ಲರ ಅರಿವಿಗೂ ಒಳಪಡುವಂಥ ಸರಳ ಶೈಲಿಯಲ್ಲಿ ದರ್ಶನದ ಪ್ರಧಾನ ಪ್ರಮೇಯ ಗಳನ್ನು ಐತಿಹಾಸಿಕ ಚೌಕಟ್ಟಿನಲ್ಲಿ ಅಳವಡಿಸಿ ವಿವರಿಸಿದ್ದಾರೆ ಮತ್ತು ದರ್ಶನ ವೆಂದರೆ ಕೇವಲ ಪ್ರಮೇಯಗಳೇ ಅಲ್ಲ, ಅವು ಅನುಷ್ಠಾನದಲ್ಲಿ ಹೇಗೆ ಸಲ್ಲುತ್ತವೆ, ಅವುಗಳ ಅನ್ವಯ ಆಚಾರಗಳು ಆಚರಣೆಗಳಲ್ಲಿ ಹೇಗೆ ಎಂಬ ವಿಚಾರವೂ ಜನರಿಗೆ ಬೇಕಾಗುತ್ತದೆ. ಪ್ರಸ್ತುತ ಗ್ರಂಥದಲ್ಲಿ ಶ್ರೀವೈಷ್ಣವ ದರ್ಶನ ಮತ್ತು ವಿಶಿಷ್ಟಾದ್ವೈತವೆಂಬ ಹಂದರದ ಮೇಲೆ ಹರಡಿರುವ ಸಂಸ್ಕೃತಿ ಎರಡಕ್ಕೂ

ಸಮಾನವಾಗಿಯೇ ಗಮನ ನೀಡಲಾಗಿದೆ. ಶ್ರೀವೈಷ್ಣವ ದರ್ಶನವು ಕನ್ನಡದಲ್ಲಿ ಮೂಡಿಕೊಂಡು ಬಂದು, ಸಾಹಿತ್ಯ, ಸಂಗೀತ, ಜಾನಪದ ಎಲ್ಲದರ ಮೇಲೈ ಮೂಡಿಸಿರುವ ಪ್ರಭಾವವನ್ನು ಇಲ್ಲಿ ಗುರುತಿಸಬಹುದು. ಆಳ್ವಾರರೆಂಬ ದಿವ್ಯ ಸೂರಿಗಳೂ ಆಚಾರ್ಯರೂ ಪುರಸ್ಕರಿಸಿ, ಪ್ರವರ್ತಿಸಿ, ಪ್ರಸಾರ ಮಾಡಿದ ಭಕ್ತಿ ಸಿದ್ಧಾಂತದ ನೆಲೆಯನ್ನು ತತ್ತ್ವ-ಹಿತ-ಪುರುಷಾರ್ಥಗಳ ಕಟ್ಟುಪಾಡಿನಲ್ಲಿ ಕಾಣಿಸುವುದರಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

ಈ ಪುಸ್ತಕವು ಹೊಸದೊಂದು ದಾರಿಯನ್ನೆ ಹಿಡಿದಿದೆ. ನೀರಸವೆನ್ನ ಬಹುದಾದ ತಾತ್ತ್ವಿಕ ಸಾಮಗ್ರಿಯು ರಸಮಯವಾದ ಕೀರ್ತನ ಸಾಹಿತ್ಯದಲ್ಲಿ, ಕವಿಕಾವ್ಯ ಪರಂಪರೆಯಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಮನಗಾಣಿಸಿರುವುದು ಇಲ್ಲಿನ ಸ್ವಾರಸ್ಯ. ಹರಿದಾಸ ಪಂಥದವರ ಸಾರಸ್ವತ ವ್ಯವಸಾಯದಲ್ಲಿ ಶ್ರೀವೈಷ್ಣವ ತತ್ತ್ವಗಳು ಬೀರಿರುವ ಪ್ರಭಾವವನ್ನು ಲೇಖಕರು ಸ್ಪಷ್ಟಪಡಿಸಿದ್ದಾರೆ. ಕನ್ನಡದಲ್ಲಿ ಕಂಡುಕೊಂಡಿರುವ ಶ್ರೀವೈಷ್ಣವ ದರ್ಶನದ ಇಡೀ ಇತಿಹಾಸವನ್ನು ಕ್ರಮವರಿತು ನಿರೂಪಿಸಿದ್ದಾರೆ. ಸಂಶೋಧಕರಿಗೆ ನೆರವಾಗಬಲ್ಲ ನೂರಾರು ವಿವರಗಳು ಇಲ್ಲಿವೆ. ಶ್ರೀವೈಷ್ಣವ ಧರ್ಮದ ಹಿನ್ನೆಲೆಯನ್ನೂ ಅಡಕವಾಗಿ ಕಾಣಿಸಿದ್ದಾರೆ.

ಒಟ್ಟಿನಲ್ಲಿ, ರಾಮಾನುಜ ದರ್ಶನವನ್ನು ಚಿತ್ರಿಸಲೆಂದು ತೊರಿಕೊಂಡಿರುವ ಬರಹಗಳ ರಾಶಿಯಲ್ಲಿ ಈ ಗ್ರಂಥಕ್ಕೊಂದು ವಿಶಿಷ್ಟ ಸ್ಥಾನವೇರ್ಪಡುವುದು ದಿಟ. ರಾಮಾನುಜರು ಕಟ್ಟಿದ ಶ್ರೀವೈಷ್ಣವ ಸೌಧದ ಪರಿಚಯವು ಈ ಗ್ರಂಥದ ಓದುಗರಿಗೆ ಅಂಗೈ ಮೇಲಿನ ನೆಲ್ಲಿಕಾಯಂತೆ ಆಗುವುದರಲ್ಲಿ ಸಂಶಯವಿಲ್ಲ. ವಿದ್ವಾನ್ ರಘುಸುತರು ಭಕ್ತರು, ಭಾವುಕರು ; ವಿದ್ವಾಂಸರು, ವಿಶೇಷಜ್ಞರು ; ಅವರ ಬರವಣಿಗೆಯಲ್ಲಿ ಆಳವೂ ಇದೆ, ಅಗಲವೂ ಇದೆ ; ಸಾರಾಂಶವೂ ಇದೆ, ವಿಸ್ತಾರವೂ ಇದೆ ; ತತ್ತ್ವಾನ್ವೇಷಣೆಯೂ ಇದೆ, ರಸಮಯ ನಿರೂಪಣೆಯೂ ಇದೆ. ಮುಖ್ಯವಾಗಿ ಲೋಕಸಂಗ್ರಹ ದೃಷ್ಟಿಯಿದೆ. ಹತ್ತು ಹಲವರಿಗೆ ಉಪಕಾರಕವಾಗುವ ಬರವಣಿಗೆ ಇದು. ಇಡೀ ಸಂಸ್ಕೃತಿಯೊಂದರ ಒಟ್ಟಾರೆ ಪರಿಚಯವು ಅನಾಯಾಸದಿಂದ ಆಗುವುದು ಈ ಪುಸ್ತಕದ ಪ್ರಯೋಜನ.

ಪುಸ್ತಕದ ಒಕ್ಕಣೆ ಸರಳವಾಗಿರಬೇಕೆಂಬ ಒಂದೇ ಉದ್ದೇಶವಿದ್ದರೆ ಸಾಲದು ; ಒಕ್ಕಣೆಗೆ ಬರುವ ವಿವರಗಳು ಯಥಾರ್ಥವಾಗಿಯೂ ಇರಬೇಕು. ಇದಕ್ಕೆ ಅಗತ್ಯವಾದ ಅನ್ವೇಷಣೆ, ಅನುಸಂಧಾನ, ಅಭ್ಯಾಸ ಎಲ್ಲವೂ ಹಿನ್ನೆಲೆಯಲ್ಲಿ ಇದ್ದಾಗಲೇ ಪುಸ್ತಕವು ಪ್ರಾಮಾಣ್ಯವನ್ನು ಪಡೆದುಕೊಳ್ಳಲಾದೀತು. ವಿದ್ವಾನ್ ರಘುಸುತರು ಈ ಪುಸ್ತಕದ ಸಿದ್ಧತೆಯಲ್ಲಿ ತುಂಬ ಶ್ರಮ ವಹಿಸಿರುವುದು ತಿಳಿಯುತ್ತದೆ. ಬೇಕಾದ ಸಾಮಗ್ರಿಯನ್ನು ತಾಳ್ಮೆಯಿಂದ ಶ್ರಮದಿಂದ ಸಂಗ್ರಹ ಮಾಡಿರುವುದಲ್ಲದೆ, ಅದನ್ನು ಅಚ್ಚುಕಟ್ಟಾಗಿ, ಶ್ರಮವರಿತು ನಿರೂಪಣೆ ಮಾಡಿ ಸಾಮಗ್ರಿಗೆ ಸ್ವಾರಸ್ಯವನ್ನೂ ಸಾರ್ಥಕತೆಯನ್ನೂ ತಂದುಕೊಟ್ಟಿದ್ದಾರೆ. ಅದಕ್ಕಾಗಿ ಅವರನ್ನು ಮನಸಾರೆ ಅಭಿನಂದಿಸಿ, ಅವರ ಆದರ್ಶವನ್ನು ಕಿರಿಯ ಪೀಳಿಗೆಯ ಬರಹಗಾರರು ಅನುಸರಿಸುವಂತಾಗಲೆಂದು ಹಾರೈಸಿ ನನ್ನ ನಾಲ್ಕು ಮಾತನ್ನು ಮುಗಿಸುತ್ತೇನೆ.

ವಿದ್ಯಾಲಂಕಾರ, ಶಾಸ್ತ್ರಚೂಡಾಮಣಿ, ಸಂಗೀತಕಲಾರತ್ನ
ಪ್ರೊ|| ಸಾಲಿಗ್ರಾಮ ಕೃಷ್ಣ ರಾಮಚಂದ್ರರಾವ್
ದರ್ಶನ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ

ಭಾದ್ರಪದ ಶುದ್ಧ ಚತುರ್ಥಿ
305, 6ನೇ ಕ್ರಾಸ್, ಮೊದಲನೇ ಬ್ಲಾಕ್,
ಜಯನಗರ, ಬೆಂಗಳೂರು–560 011.

# ಪ್ರಕಾಶಕರ ಮಾತು

ಪುಲಿಕೇಶಿ ಪ್ರಕಾಶನದಿಂದ ಬಹಳಷ್ಟು ಉತ್ತಮ ಗ್ರಂಥಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಲಾಗುತ್ತಿದೆ. ಕಾಲು ಶತಮಾನ ಕಾಲ ನಮ್ಮ ಸಾಹಿತ್ಯ ಸೇವೆ ಮಾಡಿ, ಅನೇಕ ಕೃತಿಗಳು ಹಾಗೂ ಲೇಖಕರನ್ನು ಜನಪ್ರಿಯಗೊಳಿಸಿದ್ದೇವೆ.

ಪ್ರಸ್ತುತ ವಿದ್ವಾನ್ 'ರಘುಸುತ'ರ ಅಮೂಲ್ಯ ಕೃತಿಯಾದ 'ಶ್ರೀವೈಷ್ಣವ ದರ್ಶನ ಮತ್ತು ಸಂಸ್ಕೃತಿ'ಯನ್ನು ಕನ್ನಡಿಗರಿಗೆ ನೀಡುತ್ತಿದ್ದೇವೆ. ಇದೊಂದು ಜನೋಪಯೋಗಿಯಾದ ಕೃತಿಯೆಂದು ಭಾವಿಸುತ್ತೇವೆ. ಇದುವರೆವಿಗೆ ಕನ್ನಡದಲ್ಲಿ ಶ್ರೀವೈಷ್ಣವ ದರ್ಶನದ ಸ್ವರೂಪ. ಐತಿಹಾಸಿಕ ಬೆಳವಣಿಗೆ, ಇದಕ್ಕೆ ಕನ್ನಡ ಸಾಹಿತ್ಯ ನೀಡಿದ ಪ್ರೋತ್ಸಾಹ ಇತ್ಯಾದಿ ವಿವರಗಳನ್ನು ಸಂಗ್ರಹಿಸಿರಲಿಲ್ಲ. ಈಗ ರಘುಸುತ ಇಂತಹ ಅತ್ಯಮೂಲ್ಯ ವಿಷಯಗಳನ್ನು ಸರಳ ಶೈಲಿಯಲ್ಲಿ ಸಾಮಾನ್ಯ ಪ್ರಜೆಗೂ ಅರ್ಥವಾಗುವಂತೆ ಚಿತ್ರಿಸಿದ್ದಾರೆ. ಇಂತಹ ಬಹು ಉಪಯೋಗಿ ಕೃತಿಯನ್ನು ಪ್ರಕಟಿಸಲು ಅನುಮತಿ ನೀಡಿದ ಅವರಿಗೂ, ಸೂಕ್ತ ರೀತಿಯ ಮುನ್ನುಡಿ ನೀಡಿರುವ ಶ್ರೀ ಎಸ್. ಕೆ. ರಾಮಚಂದ್ರರಾಯರಿಗೂ ವಂದನೆಗಳನ್ನು ಅರ್ಪಿಸಿ, ಈ ಕೃತಿಯನ್ನು ಆಸ್ತಿಕ ಕನ್ನಡಿಗರ ಮಡಿಲಿನಲ್ಲಿ ಅರ್ಪಿಸುತ್ತಿದ್ದೇವೆ.

ಪ್ರಕಾಶಕರು

# ಮೊದಲ ಮಾತು

'ಶ್ರೀವೈಷ್ಣವ ದರ್ಶನ'ವು ಅತ್ಯಂತ ಪ್ರಾಚೀನವಾದ ದರ್ಶನ. ವಿಷ್ಣು ಪೂಜೆ ಪ್ರಪಂಚದಲ್ಲಿ ಪ್ರಾರಂಭವಾದಾಗಿನಿಂದಲೂ ಈ ದರ್ಶನ ಪ್ರವೃತ್ತವಾಗಿದೆ. ತತ್ತ್ವ ಪ್ರಾರಂಭವಾದಾಗಲೆ ಅದರೊಂದಿಗೆ ಅದರದೇ ಆದ ಸಂಸ್ಕೃತಿಯೂ ಬೆಳೆದು ಬರುವುದು. ಸಾಹಿತ್ಯ, ಸಂಗೀತ, ಶಿಲ್ಪಕಲೆ, ರೀತಿ-ನೀತಿಗಳು, ಸಂಪ್ರದಾಯ ಗಳು, ಪೂಜೆ ಪುನಸ್ಕಾರಗಳು, ನೃತ್ಯಗೀತಾದಿಗಳು – ಇವೆಲ್ಲವೂ ಸಂಸ್ಕೃತಿಯ ಅಂಗಗಳು, ಪ್ರತೀಕಗಳು. ಈ ಸಂಸ್ಕೃತಿಯು ಮಂಡ್ಯದಲ್ಲಿನ ಖ್ಯಾತ ಸಂಶೋಧಕ ಶ್ರೀ ರಾಜಗೋಪಾಲಾಚಾರ್ಯರು ತಮ್ಮ 'ವಿಶ್ವವ್ಯಾಪಿ ವೈಷ್ಣವ ಭಕ್ತಿ' ಗ್ರಂಥ ದಲ್ಲಿ ತಿಳಿಸಿರುವಂತೆ ವಿಶ್ವವ್ಯಾಪಿಯಾಗಿತ್ತು, ವಿಶ್ವವ್ಯಾಪಿಯಾಗಿದೆ. ವಿಷ್ಣು ಭಕ್ತಿಯ ವಿವಿಧ ಸ್ತರಗಳು, ಆ ಸಂಸ್ಕೃತಿಯ ವಿವಿಧ ರೂಪಗಳು ಜಗತ್ತಿನ ವಿವಿಧ ಜನಾಂಗಗಳಲ್ಲಿ ಕಂಡುಬಂದಿವೆ. ಇವನ್ನೆಲ್ಲ ಹುಡುಕಿ ತೆಗೆಯಬೇಕಾದುದು ಅತ್ಯಂತ ಅಗತ್ಯ.

ಶ್ರೀವೈಷ್ಣವ ಸಂಸ್ಕೃತಿಯ ಬಗ್ಗೆ ಇದುವರೆವಿಗೆ ಯಾವುದೇ ರೀತಿಯ ಸಂಶೋಧನೆಯೂ ಪ್ರಪಂಚದಲ್ಲಿ ನಡೆದಿಲ್ಲ. ವಿದೇಶೀಯರೇ ಏನು, ಸ್ವದೇಶೀ–ಯರೂ ಕೂಡ ಈ ಕಡೆ ಗಮನ ನೀಡಿಲ್ಲ. ಮೂಲತಃ ತಮಿಳುನಾಡು, ತದ ನಂತರ ಕರ್ನಾಟಕ, ಆಂಧ್ರಪ್ರದೇಶಗಳು ಈ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗ ಬೇಕಿತ್ತು. ಶೋಚನೀಯ ವಿಚಾರವೆಂದರೆ, ಇಂತಹುದೊಂದು ಪ್ರಯತ್ನ ಇದುವರೆವಿಗೆ ನಡೆದೇ ಇಲ್ಲದಿರುವುದು. ಶ್ರೀವೈಷ್ಣವರಲ್ಲಿ ನೂರಾರು ಪ್ರಭೇದ ಗಳಿವೆ. ಆ ಪ್ರಭೇದಗಳಲ್ಲಿರುವ ವೈಶಿಷ್ಟ್ಯತೆಗಳು ಏನೇನು ಎಂಬುದನ್ನು ಕೂಡ ಖಚಿತ ಮಾಹಿತಿಯೊಂದಿಗೆ ದಾಖಲಿಸುವ ಪ್ರಯತ್ನಗಳನ್ನು ಮಾಡಿಲ್ಲ. ಪ್ರಸ್ತುತ ಯುವ ಜನಾಂಗ, ಬುದ್ಧಿಜೀವಿಗಳು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗ ಬೇಕಾದುದು ಅತ್ಯವಶ್ಯಕ. ಸಂಘ ಸಾಹಿತ್ಯ ಕಾಲ, ಆಳ್ವಾರರ ಹಾಗೂ ಆಚಾರ್ಯರ ಕಾಲಗಳಲ್ಲಿ ಶ್ರೀವೈಷ್ಣವ ಸಂಗೀತ ಯಾವ ರೀತಿ ಇತ್ತು, ಇವಕ್ಕೆ

ತಕ್ಕ, ಶಾಸನಾಧಾರ, ಐತಿಹಾಸಿಕ ದಾಖಲೆಗಳ ಆಧಾರ, ಜನಜೀವನದ ಆಧಾರ, ಜನಜೀವನದ ತತ್ತ್ವ, ನೃತ್ಯ ಚಿತ್ರಕಲೆಗಳ ಪರಿಸ್ಥಿತಿ–ಇವು ವಿದೇಶಗಳಿಗೆ ಹರಡಿದ ರೀತಿ, ವಿದೇಶೀಯರ ಬರಹಗಳಲ್ಲಿ ಶ್ರೀವೈಷ್ಣವ ಸಂಸ್ಕೃತಿಯ ಬಗ್ಗೆ ಹೇಳಿರುವ ವಿವರಗಳು–ಇಂತಹ ನೂರಾರು, ಸಾವಿರಾರು ವಿವರಗಳ ಸಂಗ್ರಹವಾಗಬೇಕಾಗಿದೆ, ಕಂಪ್ಯೂಟರೀಕರಣ ಆಗಬೇಕಿದೆ ಇವೆಲ್ಲ ಎಂದಿಗೆ ಆಗುವುದೊ ಕಾಣೆ. ನಮ್ಮ ಜನಾಂಗದವರ (ಶ್ರೀವೈಷ್ಣವರ) ಗಮನ ಇತ್ತ ಕಡೆ ಏಕೆ ಹರಿದಿಲ್ಲವೊ ಕಾಣೆ. ನಮ್ಮಲ್ಲಿನ ಅನೇಕರು ವಿದೇಶಗಳಿಗೆ ಹೋಗಿ ಬಂದಿರುವವರು. ಅನೇಕ ಬುದ್ಧಿಜೀವಿಗಳು ಇದ್ದಾರೆ. 'ಅಲ್ಲಿ' ಇಂತಹ ಸಂಸ್ಕೃತಿಗಳ ವೈಜ್ಞಾನಿಕ, ಕ್ರಮಬದ್ಧ ಅಧ್ಯಯನ ನಡೆದು, ಸುವ್ಯವಸ್ಥಿತವಾದ ಮಾಹಿತಿ ಜ್ಞಾನವನ್ನು ಸಿದ್ಧಪಡಿಸಿಟ್ಟಿದ್ದಾರೆ. ಆದರೆ ನಾವಿಂದು ಮಾಡುತ್ತಿರುವುದೇನು ? ದಿವ್ಯ ಪ್ರಬಂಧಗಳನ್ನು ಮಾತ್ರ ಅಧ್ಯಯನ (?) ಮಾಡುತ್ತೇವೆನ್ನುತ್ತಾ ಊಟ, ಪ್ರಸಾದಗಳನ್ನು ಹೊಡೆದು, ಹಾದಿಬೀದಿಯಲ್ಲಿ ಸಣ್ಣ ವಿಷಯಗಳಿಗೆಲ್ಲ ಮನಸ್ತಾಪ ಜಗಳಗಳನ್ನು ಮಾಡಿಕೊಂಡು, ನಮ್ಮ ದರ್ಶನವೇ ಅಲ್ಲದೆ ನಮ್ಮ ಸಂಸ್ಕೃತಿಯನ್ನೂ ರಕ್ಷಿಸಲಾರದವರಾಗಿದ್ದೇವೆ. ಇಂತಹ ಹೀನ ಸ್ಥಿತಿಗೆ ಏನನ್ನೋಣ ? ನಮ್ಮವರಿಗೆಲ್ಲ ಬುದ್ಧಿ ಎಂದು ಬಂದೀತು ? ಇಂತಹ ಸಮಯದಲ್ಲಿ ಇವರಿಗೆಲ್ಲ ತಿಳಿಯ ಹೇಳುವವರು ಯಾರು ? ನಮ್ಮ ಹಿರಿಯರು ಶ್ರೀವೈಷ್ಣವ ಪ್ರೇಮಿಗಳು ಅಪಾರ ಜ್ಞಾನ ಭಂಡಾರವನ್ನು ಬಿಟ್ಟುಹೋಗಿದ್ದಾರೆ. ಆ ಮಾಹಿತಿ ಜ್ಞಾನವನ್ನು ಕ್ರೋಢೀಕರಿಸಬೇಕಾದುದು ಈಗ ನಮ್ಮೆಲ್ಲರ ಕರ್ತವ್ಯ. ಇಂತಹ ಒಂದು ಸಣ್ಣ ಪ್ರಯತ್ನ, ಪ್ರಸ್ತುತ ನಾನು ಬರೆದು ಪ್ರಸ್ತುತಪಡಿಸುತ್ತಿರುವ ಈ ಕೃತಿ. ನಮ್ಮ ದರ್ಶನ, ಸಂಸ್ಕೃತಿಗಳು ಎನ್ನುವುದು ಮಹಾ ಸಾಗರದ ಒಂದು ಬಿಂದು ಮಾತ್ರ ನಾನಿಲ್ಲಿ ನೀಡುತ್ತಿರುವುದು. ಪರಿವಿಡಿಯಲ್ಲಿ ಸೂಚಿಸಿರುವ ಒಂದೊಂದು ಅಧ್ಯಾಯದ ಒಂದೊಂದು ಉಪವಿಭಾಗವೂ ಒಂದು ಅದ್ಭುತ ಸಂಶೋಧನಾ ಗ್ರಂಥವಾಗಬಲ್ಲದು. ಇವನ್ನೆ ಸರಿಯಾದ ಅರ್ಥದಲ್ಲಿ ಬರೆದಿಟ್ಟರೆ ವಿಶ್ವಕೋಶದ ಹತ್ತಾರು ಬೃಹತ್ ಸಂಪುಟಗಳಾದೀತು. ಮುಂದೊಂದು ದಿನ ನನ್ನ ಈ ಕನಸನ್ನು ನನಸಾಗಿ ಮಾಡುವಲ್ಲಿ ಭಾವೀ ಯುವ ಪೀಳಿಗೆಯೇ ಮುಂದಾಗಬಹುದು.

ಕಾಲಾಯ ತಸ್ಮೈ ನಮಃ.

ಬೇರೆ ಯಾವ ಭಾಷೆಯಲ್ಲಿಯೂ ಇಷ್ಟೊಂದು ವಿಪುಲವಾಗಿ ಶ್ರೀವೈಷ್ಣವ ದರ್ಶನ ಮತ್ತು ಸಂಸ್ಕೃತಿಯ ಪರಿಚಯ ಬಂದಿಲ್ಲ. ನಮ್ಮ ದರ್ಶನದಿಂದಲೇ ಶ್ರೀವೈಷ್ಣವ ಧರ್ಮ ಉಳಿದಿರುವುದು. ನಮ್ಮ ಹಿಂದಿನ ಹಿರಿಯರು ನಿರ್ಮಿಸಿ, ನಮಗಾಗಿ ಬಿಟ್ಟುಹೋಗಿರುವ ದರ್ಶನದ ಮಹಾನ್ ಕೃತಿಗಳೇ ನಮ್ಮ ಆಧಾರ. ಆದುದರಿಂದ ಅವರನ್ನೆಲ್ಲ ನೆನೆಯುವುದು ನಮ್ಮೆಲ್ಲರ ಕರ್ತವ್ಯ.

ಈ ಕೃತಿಯ ರಚನೆಗೆ ಪ್ರೇರಣೆ ಅನೇಕರದು. ಪ್ರಾರಂಭಿಕ ಧನ ಸಹಾಯ ಮಾಡಿ, ಒತ್ತಾಸೆ ನೀಡಿದ ನನ್ನ ಕಿರಿಯ ಮಿತ್ರ ಡಾ|| ಹೆಚ್. ಕೆ. ನಾರಾಯಣ ರವರಿಗೆ ನಾನು ಕೃತಜ್ಞ, ಅವರ ಮಾತಾ-ಪಿತೃರವರು ನನಗೆ ಪೂಜನೀಯರು.

ನನ್ನೆಲ್ಲ ಕಿರುಕುಳವನ್ನು ಸಹಿಸಿಕೊಂಡು ಪುಸ್ತಕವನ್ನು ಮುದ್ರಿಸಿ, ಪ್ರೂಫ್ ಕರೆಕ್ಷನ್‌ಗಳನ್ನು ಮಾಡಿರುವ ಸನ್ಮಿತ್ರರಾದ ಶ್ರೀ ಹೆಚ್. ವಿ. ರಾಮಚಂದ್ರರಾವ್ ಹಾಗೂ ಅವರ ಸಂಸಾರಕ್ಕೆ ನನ್ನ ಅಭಿನಂದನೆಗಳು.

ಕನ್ನಡ ಜನತೆಯ ಮುಂದಿಡುತ್ತಿದ್ದೇನೆ. ಅವರು ಸ್ವೀಕರಿಸುವುದು ಅವರ ಕರ್ತವ್ಯ ಹಾಗೂ ಚಿತ್ತ.

ರಘುಸುತ

# ಆಧಾರ ಗ್ರಂಥಗಳು


1. ಹಿಸ್ಟರಿ ಆಫ್ ಶ್ರೀವೈಷ್ಣವಿಸಂ – ಡಾ|| ಬಿ. ವಿ. ರಾಮಾನುಜಂ.
2. ಹಿಸ್ಟರಿ ಆಫ್ ಇಂಡಿಯನ್ ಫಿಲಾಸಫಿ – ಎಸ್. ಎನ್. ದಾಸ್‌ಗುಪ್ತಾ.
3. ಶ್ರೀವೈಷ್ಣವಿಸಂ ತ್ರೂ ದಿ ಯೇಜಸ್ – ಸ್ವಾಮಿ ಹರ್ಷಾನಂದ.
4. ಆಚಾರ್ಯ ರಾಮಾನುಜರು – ಪ್ರೊ|| ಯಾಮುನಾಚಾರ್ಯ.
5. ಪಿಳ್ಳೈ ಲೋಕಾಚಾರ್ಯರು ಜೀವನ ಮತ್ತು ಕೃತಿಗಳು
– ವಿದ್ವಾನ್ ರಘುಸುತ.
6. ವೇದಾಂತ ದೇಶಿಕ – ಎಸ್. ಸತ್ಯಮೂರ್ತಿ ಅಯ್ಯಂಗಾರ್.
7. ಶ್ರೀ ವೇದಾಂತ ದೇಶಿಕರು-ಜೀವನ ಮತ್ತು ಕೃತಿಗಳು
– ಶ್ರೀವತ್ಸ ಕಲ್‌ಬಾಗಲ್.
8. ಆಚಾರ್ಯ ಯಾಮುನರ ಗ್ರಂಥಗಳು
– ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.
9. ನಾಥಮುನಿ – ವಿದ್ವಾನ್ ರಘುಸುತ.
10. ಸಂಘ ಸಾಹಿತ್ಯಮು-ವೈಷ್ಣವ ತತ್ತ್ವಮು – ಧನಕುಧರಂ ವರದಾಚಾರ್ಯ.
11. ಆಳ್ವಾರುಲ ಭಕ್ತಿ ಸಿದ್ಧಾಂತ ಪ್ರಾಶಸ್ತ್ಯಮು
– ಜಿ. ಟಿ. ಗೋಪಾಲಕೃಷ್ಣ ನಾಯ್ಡು.
12. ಆಳ್ವಾರುಲ ಭಕ್ತಿ ತತ್ತ್ವಮು – ಧನಕುಧರಂ ವರದಾಚಾರ್ಯ.
13. ಶ್ರೀವೈಷ್ಣವ ಮತ ಪ್ರಾಶಸ್ತ್ಯಮು – ಡಾ|| ಕಿಡಾಂಬಿ ನರಸಿಂಹಾಚಾರ್ಯ.
14. ಮಹಾಪ್ರಭುವುಲು-ವೈಷ್ಣವ ಮತ ಪ್ರಭಾವಮು
– ಡಾ|| ಸಮುದ್ರಾಲ ವೆಂಕಟರಂಗ ರಾಮಾನುಜಾಚಾರ್ಯ.
15. ಕೀರ್ತನ ಸಾಹಿತ್ಯದಲ್ಲಿ ಶ್ರೀವೈಷ್ಣವ ಪರಂಪರೆ – ನಾ. ಗೀತಾಚಾರ್ಯ.
16. ಕರ್ನಾಟಕದ ಇತಿಹಾಸ ದರ್ಶನ – ಡಾ|| ಎಂ. ವಿ. ಕೃಷ್ಣರಾವ್
ಟಿ. ಕೇಶವಭಟ್

# ವಿಷಯಸೂಚಿ

ಈ ಹಿರಿಯ ಜೀವಿಗಳ ಪವಿತ್ರ ನೆನಪಿಗೆ ಈ ಕೃತಿ ಅರ್ಪಿತ



ರೇವಣಚರ್ಲ ಕೃಷ್ಣಮಾಚಾರ್ಯ (ಮಾಟ್ಲಕಿಟ್ಟಪ್ಪ)ಮತ್ತು ಎಸ್. ನಾರಾಯಣಮ್ಮ (ನಾಣಕ್ಕ)

# 1. ಶ್ರೀವೈಷ್ಣವ ದರ್ಶನ

ನಮೋ ನಮೋ ವಾಙ್ಮನಸಾತಿ ಭೂಮಯೇ
ನಮೋ ನಮೋ ವಾಙ್ಮನ ಸೈಕ ಭೂಮಯೇ
ನಮೋ ನಮೋಽನಂತ ಮಹಾವಿಭೂತಯೇ
ನಮೋ ನಮೋಽನಂತ ದಯೈಕ ಸಿಂಧವೇ ||

ಪರಮ ಪಾವನವಾದ ನಮ್ಮ ಭರತ ಭೂಮಿಯಲ್ಲಿ ಆಧ್ಯಾತ್ಮಿಕ ತತ್ತ್ವಗಳನ್ನು ಪ್ರಕಾಶಪಡಿಸುವ ದರ್ಶನಗಳು ಅನೇಕವಿವೆ. ಅವುಗಳಲ್ಲಿ ಶ್ರೀ ವಿಶಿಷ್ಟಾದ್ವೈತ ದರ್ಶನವು ವೇದ, ವೇದಾಂಗ, ಆಗಮಾದಿಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ತತ್ತ್ವ ವಿಶೇಷಗಳಿಂದ ಕೂಡಿ, ಅತ್ಯಂತ ವಿಶಿಷ್ಟಯುತವಾಗಿ, ಸಕಲ ಚೇತನ ಸಮುದ್ಧರಣ ಸಮರ್ಥವಾಗಿ ಪರಪುರುಷಾರ್ಥಪ್ರದವಾಗಿ ಬೆಳಗುತ್ತಿದೆ.

'ಚಿದ ಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೊಬ್ಬನೇ ತತ್ತ್ವವು. ಸೂಕ್ಷ್ಮವೂ, ಚಿದಚಿದ್ವಿಶಿಷ್ಟವೂ ಆದ ಬ್ರಹ್ಮವು ಜಗತ್ಕಾರಣವು. ಸ್ಥೂಲವೂ, ಆ ಚಿದಚಿದ್ವಿಶಿಷ್ಟವೂ ಆದ ಆ ಪರಬ್ರಹ್ಮವೇ ಕಾರ್ಯಭೂತವಾದ ಈ ಜಗತ್ತು. ವಿಶಿಷ್ಟಕಾರ್ಯ, ಕಾರಣಗಳೆರಡೂ ಅಭಿನ್ನಗಳು. ಚೇತನರಿಗೆ ಆತನೇ ಪ್ರಾಪ್ಯನು, ಪ್ರಾಪಕನು' ಎನ್ನುವ ಅತಿ ವಿಶಿಷ್ಟವಾದ ತತ್ತ್ವಗಳನ್ನು ಬೋಧಿಸುವುದರಿಂದಲೇ ಈ ದರ್ಶನಕ್ಕೆ 'ವಿಶಿಷ್ಟಾದ್ವೈತ' ಎನ್ನುವ ಹೆಸರು ಪ್ರಸಿದ್ಧಿಯಾಗಿದೆ. ಅಲ್ಲದೆ ವಿಶಿಷ್ಟರಿಂದ, ವಿಶಿಷ್ಟ ಕ್ರಮದಲ್ಲಿ ಉಪದೇಶಿಸಲ್ಪಟ್ಟ ಉಪನಿಷತ್ ಸಿದ್ಧಿನಾದ ಅದ್ವೈತವಾದುದರಿಂದಲೇ, ಇದು 'ವಿಶಿಷ್ಟಾದ್ವೈತ' ಎಂದು ವ್ಯವಹರಿಸಲ್ಪಟ್ಟಿದೆ.

ಈ ದರ್ಶನಕ್ಕೆ "ಶ್ರೀ ಸಂಪ್ರದಾಯ, ಶ್ರೀವೈಷ್ಣವ ಸಂಪ್ರದಾಯ, ಶಾರೀರಿಕ ಮೀಮಾಂಸ ದರ್ಶನ, ಉಭಯವೇದಾಂತ ದರ್ಶನ, ಶುದ್ಧಾಂತ ದರ್ಶನ, ಭಾಗವತ ಮತ, ಶ್ರೀ ರಾಮಾನುಜ ದರ್ಶನ ಎಂಬ ಅನೇಕ ಹೆಸರುಗಳಿವೆ.

ಅನಾದಿಯಿಂದ ಪರಂಪರಾ ಸಿದ್ಧವಾದ ಪ್ರಮಾಣ, ಪ್ರಮೇಯ, ಬಂಧ, ಮೋಕ್ಷಾದಿಗಳ ಪರಮ ತತ್ತ್ವಗಳನ್ನು ಬೋಧಿಸುತ್ತಿದ್ದುದರಿಂದಲೇ ಇದು ನಿಖಿಲ ದರ್ಶನ ಭೂಷಣವಾಗಿದೆ. ಭಗವನ್ನಿರ್ಹೇತುಕ ಕೃಪಾ ಕಟಾಕ್ಷದಿಂದ ಪ್ರವರ್ತಿತವಾದ ಸಂಸ್ಕೃತ-ದ್ರಾವಿಡ, ರಹಸ್ಯ ಆಗಮ ಪ್ರಸ್ಥಾನಗಳನ್ನು ಚತುರ್ವಿಧ ಪುರುಷಾರ್ಥಗಳಾಗಿ ಸಕಲ ಚೇತನ ಹಿತಪ್ರಬೋಧವಾಗಿ ಬೆಳಗುತ್ತಿದೆ.

ಇದರಲ್ಲಿ ಸಂಸ್ಕೃತ ವೇದಾಂತ ಪ್ರಸ್ಥಾನವು ಮೊದಲನೆಯದು. ಇದರಲ್ಲಿ ಉಪನಿಷತ್ಪ್ರಸ್ಥಾನವೆಂದೂ, ಸೂತ್ರ ಪ್ರಸ್ಥಾನವೆಂದೂ, ಭಗವದ್ಗೀತಾ ಪ್ರಸ್ಥಾನವೆಂದು ಮೂರು ವಿಧಗಳಿವೆ.

ಉಪನಿಷತ್ತುಗಳು ಪ್ರತಿ ಕಲ್ಪದ ಪ್ರಾರಂಭದಲ್ಲಿ ಸಾಕ್ಷಾತ್ ಪರಮಾತ್ಮನಿಂದಲೇ ಉಪಾದಿಷ್ಟವಾದುವು. ಬ್ರಹ್ಮಸೂತ್ರಗಳು ಶ್ರೀಮನ್ನಾರಾಯಣನ ಅಪರಾವತಾರವಾದುದರಿಂದ ಶ್ರೀ ವೇದವ್ಯಾಸ ಪ್ರಣೀತವಾದವುಗಳಾಗಿವೆ. ಭಗವದ್ಗೀತಾ ಪ್ರಸ್ಥಾನವು ಶ್ರೀಕೃಷ್ಣಾವತಾರಿಯಾದ ಶ್ರೀಮನ್ನಾರಾಯಣನಿಂದ ಪ್ರವರ್ತಿತವಾಗಿರುವುದು.

ಹೀಗೆ ಸಂಸ್ಕೃತ ಪ್ರಸ್ಥಾನವೆಲ್ಲವು ಸಾಕ್ಷಾತ್ತಾಗಿ ಸಕಲ ಜಗತ್ಕಾರಣಕರ್ತನಾದ ಭಗವಂತನಿಂದ ಪ್ರವರ್ತಿತವಾದುವುಗಳು. ಆದುದರಿಂದಲೇ ಶ್ರೀ ವಿಶಿಷ್ಟಾದ್ವೈತ ಪ್ರಥಮಾಚಾರ್ಯನು 'ಶ್ರೀಮನ್ನಾರಾಯಣ'ನೆಂದೇ ಪ್ರಸಿದ್ಧಿ ಹೊಂದಿದೆ.

ಅನಾದಿನಿಧನವಾದ ಶ್ರೀ ವಿಶಿಷ್ಟಾದ್ವೈತ ಪ್ರಸ್ಥಾನವು ಬಾದರಾಯಣ, ಬೋಧಾಯನ, ಟಂಕ, ಗುಹದೇವ, ಭಾರುಚಿ, ದ್ರಮಿಡಾಚಾರ್ಯ, ಬ್ರಹ್ಮನಂದಿ, ಭರ್ತೃಮಿತ್ರ, ಭರ್ತೃಪ್ರಪಂಚ-ಇತ್ಯಾದಿ ಪ್ರಮುಖ ಆಚಾರ್ಯವರ್ಯರಿಂದ ವಿಶಿಷ್ಟ ಸಂಪ್ರದಾಯ ಕ್ರಮದಲ್ಲಿ ಅವತರಿಸುವಂತೆ ಮಾಡಲಾಗಿದೆ.

ತನಗೆ ಅಂತರಂಗ ಕೈಂಕರ್ಯ ನಿರ್ವಾಹಕವಾದ ನಿತ್ಯ ಸೂರಿಗಳನ್ನು ಅಖಿಲ ಚೇತನಗಳ ಉಜ್ಜೀವನಾರ್ಥವಾಗಿ ಶ್ರೀಮನ್ನಾರಾಯಣನು ನಿಯಮಿಸಿ, ಅವರನ್ನು ಭಗವನ್ನಿಯಮಾನುಸಾರವಾಗಿ ಭೂಲೋಕದಲ್ಲಿ ದಕ್ಷಿಣ ಭಾರತದಲ್ಲಿ ಅವತರಿಸುವಂತೆ ಮಾಡಿ, ಅದನ್ನು ಪುಣ್ಯಭೂಮಿಯನ್ನಾಗಿಸಿದನು. ಇವರೇ ದಿವ್ಯಸೂರಿಗಳು. ಇವರು 'ಆಳ್ವಾರರು' ಎಂಬ ಹೆಸರಿನಿಂದ ಪ್ರಸಿದ್ಧರಾದರು. ಅವರಿಗೆ ಶ್ರೀಮನ್ನಾರಾಯಣನ ಮೇಲೆ ನಿರುಪಾಧಿಕ, ನಿರವಧಿಕ ಪ್ರಾವಣ್ಯವದ್ದು ಆ ಭಗವಂತನ ಅನುಗ್ರಹದಿಂದ ಪ್ರಾಪ್ತವಾದ ಪರಭಕ್ತಿ, ಪರಜ್ಞಾನದ ಪರಿಣಾಮವಾಗಿ ಪರಮ ಭಕ್ತರಾಗಿರುತ್ತಿದ್ದರು. ಅವರಿಗೆ ಭಗವದನುಭವವಾದ ಕಾರಣ, ಅವರ ದಿವ್ಯ ವದನಾರವಿಂದದಿಂದ ದಿವ್ಯ ಪ್ರಬಂಧಗಳ ಆವಿರ್ಭಾವಗೊಂಡವು. ಇವೇ ದ್ರಾವಿಡ ವೇದಾಂತಗಳು.

ಇವರು ವಿಷ್ವಕ್ಸೇನನ ಅಪರಾವತಾರಗಳಾಗಿದ್ದು, ಭಗವಂತನ ಅವಯವ ಸ್ವರೂಪಗಳಾಗಿದ್ದರು. ಇವರಲ್ಲಿ ಪ್ರಪನ್ನ ಜನ ಕೂಟಸ್ಥರಾದ ನಮ್ಮಾಳ್ವರರ

ವದನಾರವಿಂದದಿಂದ ಸಂಸ್ಕೃತದ ವೇದ ಚತುಷ್ಟಯಗಳು-ತಿರುವಿರುತ್ತಮ್, ತಿರುವಾಶಿರಿಯಮ್, ಪೆರಿಯ ತಿರುವಂದಾದಿ, ತಿರುವಾಯ್ಮೊಳಿ ಎನ್ನುವ ಹೆಸರುಗಳಿಂದ ಅವತರಿಸಿದುವು.

ಹೀಗೆ ಇವರ ದ್ರಾವಿಡ ವೇದಗಳಿಗೆ, ಇತರ ದಿವ್ಯ ಸೂರಿಗಳು ಪ್ರಸಾದಿಸಿದ ದಿವ್ಯ ಪ್ರಬಂಧಗಳೆಲ್ಲವೂ ಸಂಸ್ಕೃತ ವೇದಗಳಿಗೆ ಶಿಕ್ಷಾದಿಗಳಂತೆ ಅವುಗಳ ಅಂಗಗಳಂತೆ ವ್ಯವಸ್ಥೆಗೊಳಿಸಲಾಗಿದೆ. ಇದು ದ್ರಾವಿಡ ವೇದಾಂತ ಪ್ರಸ್ಥಾನ.

ಶ್ರೀಮನ್ನಾರಾಯಣನು ತಾನು ಪ್ರವರ್ತಗೊಳಿಸಿದ ಸಂಸ್ಕೃತ ವೇದಾಂತ ಪ್ರಸ್ಥಾನವು ಕೇವಲ ಶಾಸ್ತ್ರಗಳ ಪರಿಚಯವಿರುವವರಿಗೆ ಮಾತ್ರವೇ ಹೊರತು ಇತರರಿಗಲ್ಲ. ಇವು ಸಕಲ ಚೇತನರ ಮಿತಿಯಲ್ಲಿ ಇಲ್ಲ. ಆದುದರಿಂದ ಸಕಲರನ್ನು ಉಜ್ಜೀವನಗೊಳಿಸುವುದಕ್ಕಾಗಿ ಅರ್ಥ ಪಂಚಕ ಜ್ಞಾನೋಪದೇಶಗಳನ್ನು, ಆತ್ಮ ಸ್ವರೂಪಕ್ಕೆ ಅನುಗುಣವಾದ ಧರ್ಮಗಳನ್ನು ಪ್ರಬೋಧಕಗಳಾದ ರಹಸ್ಯಗಳನ್ನು ಉಪದೇಶಿಸಲಾಯಿತು.

ಇಂತಹ ರಹಸ್ಯಗಳಲ್ಲಿ ಮೂರು ಮುಖ್ಯವಾದುವುಗಳಿವೆ. ಇವುಗಳನ್ನು 'ರಹಸ್ಯತ್ರಯ' ಎಂದು ಕರೆಯುತ್ತಾರೆ. ಹಾಗೆಂದು ಪ್ರಸಿದ್ಧಿ ಹೊಂದಿದ ರಹಸ್ಯಗಳಲ್ಲಿ ಮೊದಲನೆಯದು 'ತಿರುಮಂತ್ರ' ಎನ್ನುವುದು. ಶ್ರೀಮನ್ನಾರಾಯಣನು ಬದರಿಕಾಶ್ರಮದಲ್ಲಿ ತನ್ನ ಅಂಶದಿಂದ ಅವತರಿಸಿದ 'ನರ'ನ ಉಜ್ಜೀವಿಕರಿಸುವುದರ ಮುಖಾಂತರ ನಿಖಿಲ ಲೋಕೋಜ್ಜೀವನಾರ್ಥವಾಗಿ ಪ್ರವರ್ತಿಸಿದನು.

ಎರಡನೇ ರಹಸ್ಯವಾದ 'ದ್ವಯ'ವನ್ನು ಶ್ರೀ ಲಕ್ಷ್ಮೀದೇವಿಯನ್ನು ವ್ಯಾಜೀಕರಿಸಿಕೊಂಡು ಸಕಲ ಲೋಕಗಳಿಗೂ ಉಪದೇಶಿಸಿದನು.

ಮೂರನೇ ರಹಸ್ಯವಾದ 'ಚರಮ ಶ್ಲೋಕ'ವನ್ನು ಶ್ರೀಮನ್ನಾರಾಯಣನೇ ಕುರುಕ್ಷೇತ್ರದಲ್ಲಿ ಅಲ್ಲಿನ ಸ್ನೇಹ ಕಾರುಣ್ಯಗಳಿಂದಾಗಿ ಧರ್ಮಾಧರ್ಮಾದಿಗಳನ್ನು ಪರಮಾಪನ್ನವಾದ ಪಾರ್ಥನನ್ನು ಕಾರಣಭೂತನನ್ನಾಗಿ ಮಾಡಿಕೊಂಡು ಸಕಲ ಜಗತ್ತಿಗೂ ಬೋಧಿಸಿದನು.

ಈ ರೀತಿಯಲ್ಲಿ ಇನ್ನೂ ಅನೇಕ ರಹಸ್ಯಗಳಿವೆ. ಇದಕ್ಕೆ 'ರಹಸ್ಯ ಪ್ರಸ್ಥಾನ'ವೆಂದು ಹೆಸರು.

ಅಲ್ಲದೆ ಸ್ವಾತಂತ್ರರಂಗ ಕೈಂಕರ್ಯ ನಿರ್ವಾಹಕರಾದ ಅನಂತ ಗರುಡ ವಿಷ್ವಕ್ಸೇನಾದಿಗಳಿಗೆ ಪಾಂಚರಾತ್ರ ಶಾಸ್ತ್ರವನ್ನು ಆ ಶ್ರೀಮನ್ನಾರಾಯಣನೇ

ಉಪದೇಶಿಸಿದನು. ಅಷ್ಟೋತ್ತರ ಶತ ಸಂಹಿತಾತ್ಮಕವಾದ ಈ ಶಾಸ್ತ್ರವು ಭಗವಂತನ ಮುಖೋದ್ಗತವಾದುದರಿಂದ ಭಗವತ್ಸಂಬಂಧವಾದ ವಿಷಯವನ್ನು ಬೋಧಿಸುವುದರಿಂದ 'ಭಗವತ್ ಶಾಸ್ತ್ರ' ಎಂಬ ಹೆಸರಿನಿಂದ ಸುಪ್ರಸಿದ್ಧಗೊಂಡಿತು. ಇದಕ್ಕೆ 'ಅಗಮ ಪ್ರಸ್ಥಾನ' ಎಂಬ ಹೆಸರಿದೆ. ಇದರಲ್ಲಿ ಶ್ರೀರಂಗ, ಶ್ರೀ ವೇಂಕಟಾದ್ರಿ, ಶ್ರೀ ಹಸ್ತಗಿರಿ ಮೊದಲಾದ ದಿವ್ಯ ಕ್ಷೇತ್ರಗಳಲ್ಲಿ ನಿಖಿಲ ಲೋಕಗಳ ಉಜ್ಜೀವನಾರ್ಥವಾಗಿ ಅರ್ಚಾ ರೂಪವನ್ನು ಹೊಂದಿರುವ ಪರಮಾತ್ಮನ ದಿವ್ಯ ಮಂಗಳ ವಿಗ್ರಹದ ವಿಭವ, ವಿಭೂತಾದಿಗಳನ್ನು ಅಭಿವರ್ಣಿಸಲಾಗಿದೆ. ಇಷ್ಟೇ ಅಲ್ಲದೆ ವೈಶಿಷ್ಟ್ಯಪೂರ್ಣಗಳಾದ ತತ್ತ್ವಹಿತ ಪುರುಷಾರ್ಥಗಳನ್ನು ಅತ್ಯಂತ ಸುಲಭವಾಗಿ ವಿವರಿಸಲಾಗಿದೆ.

ಹೀಗೆ ವಿಶಿಷ್ಟಾದ್ವೈತದಲ್ಲಿನ ಎಲ್ಲ ಪ್ರಸ್ಥಾನಗಳನ್ನು ಸಾಕ್ಷಾತ್ ಶ್ರೀಮನ್ನಾರಾಯಣನೇ ಪ್ರವರ್ತಿಸಿದ್ದಾನೆ. ಆದುದರಿಂದ ಇದು ಪರಮ ವೈದಿಕ ಸಿದ್ಧಾಂತವಾಗಿ ಪ್ರಸಿದ್ಧಿಗೊಂಡು, ಸಕಲ ಚೇತನರಿಗೆ ಪರಮಾರ್ಥವನ್ನು ಪ್ರಸಾದಿಸಿ ಮುಮುಕ್ಷು ಜನರನ್ನು ಉದ್ಧಾರ ಮಾಡುತ್ತಿದೆ.

ಈ ರೀತಿಯಲ್ಲಿ ಅನೂಚಾನವಾಗಿ ಅತಿ ವಿಲಕ್ಷಣವಾಗಿ ವಿಶಾಲ ಭಾರತದಲ್ಲಿ ಹರಡಿರುವ ಈ ಸಂಪ್ರದಾಯವು ಮಧ್ಯದಲ್ಲಿ ಕಲಿ ಪ್ರಾಬಲ್ಯದಿಂದ ಉಚ್ಛಿನ್ನವಾಗಿತ್ತು. ಅಂತಹ ಸಮಯದಲ್ಲಿ ಅದನ್ನು ಪುನರುದ್ಧರಣ ಮಾಡಲು ಕೆಲವು ಮಹನೀಯರು ಭರತ ಖಂಡದಲ್ಲಿ ಅವತರಿಸಬೇಕಾಯಿತು. ಅಂತಹವರಲ್ಲಿ ಪ್ರಪನ್ನ ಜನ ಭಾಗಧೇಯರಾದ 'ಶ್ರೀಮನ್ನಾಥ ಮುನಿ'ಗಳು ಎನ್ನುವ ಮಹಾಪ್ರಾಜ್ಞರು ಮೊದಲಿಗರು.

ಈ ಮುನೀಂದ್ರರ ನಿಷ್ಕಳಂಕ ಪ್ರತಿಭಾ ವಿಶೇಷದ ಕಾರಣ ಅಷ್ಟಾಂಗ ಯೋಗಾದಿ ತಪಃ ಪ್ರಭಾವದಿಂದ ನಮ್ಮಾಳ್ವಾರರನ್ನು ಸಾಕ್ಷಾತ್ಕರಿಸಿಕೊಂಡು ಅವರಿಂದ ಪೂರ್ವದರ್ಶಿತಗಳಾದ ಎಲ್ಲ ಪ್ರಸ್ಥಾನಗಳನ್ನು ತತ್ತ್ವ ರಹಸ್ಯಗಳೊಂದಿಗೆ ಸಾಂಗೋಪಾಂಗವಾಗಿ ಅಧಿಕರಿಸಿ, ತಾವು ಅನುಭವಿಸಿದ ಪರಮಾನುಭವಗಳನ್ನು ಎಲ್ಲರೂ ಉಜ್ಜೀವಿಸಬೇಕೆಂಬ ವಿಶಾಲ ಹೃದಯದಿಂದ ಪರಮ ಕಾರುಣಿಕರಾಗಿ ಸಕಲ ಜನ ಸಮುದ್ಧರಣಕ್ಕಾಗಿ ಈ ಎಲ್ಲ ಪ್ರಸ್ಥಾನಗಳನ್ನು ತಾವೇ ಸ್ವಯಂ ಪ್ರವರ್ತಿಗೊಳಿಸಿದರು. ಈ ಸಂಪ್ರದಾಯಕ್ಕೆ ಸ್ಪಷ್ಟ ಪ್ರಚಾರವನ್ನು ಒದಗಿಸಿದರು.

ಇಷ್ಟೇ ಅಲ್ಲದೆ ಶ್ರೀ ವಿಶಿಷ್ಟಾದ್ವೈತ ದರ್ಶನ ವೈಶಿಷ್ಟ್ಯವನ್ನು ಜನಪ್ರಿಯ ಗೊಳಿಸುವುದಕ್ಕಾಗಿ 'ನ್ಯಾಯತತ್ತ್ವ' ಎನ್ನುವ ಒಂದು ಮಹಾ ಗ್ರಂಥವನ್ನು ರಚಿಸಿ, ಅದರ ಮುಖಾಂತರ ಈ ಸಿದ್ಧಾಂತದ ಸ್ವರೂಪವನ್ನು ಈ ಲೋಕಕ್ಕೆಲ್ಲ ಪ್ರಚಾರಪಡಿಸಿದರು. 'ಪುರುಷ ನಿರ್ಣಯ' ಎನ್ನುವ ಮತ್ತೊಂದು ಗ್ರಂಥದ ಮುಖಾಂತರ ಪರಮ ಪುರುಷನಾದ ಶ್ರೀಮನ್ನಾರಾಯಣನ ಅಪ್ರತಿಮ ಪ್ರತಿಭಾ ವಿಶೇಷಗಳನ್ನು ಹಾಗೂ ದಿವ್ಯ ವೈಭವಗಳನ್ನು ತೃಪ್ತಿಕರವಾಗಿ ವರ್ಣಿಸಿ, ಪುರುಷೋತ್ತಮನೂ, ಷಡ್ಗುಣೈಶ್ವರ್ಯ ಪರಿಪೂರ್ಣನಾದ ಶ್ರೀಮನ್ನಾರಾಯಣನೇ ಸಕಲ ಚೇತನರಿಗೂ ಆಶ್ರಯಭೂತನೆಂದು ಬೋಧಿಸಿದರು. 'ಯೋಗರಹಸ್ಯ' ಎನ್ನುವ ಮೂರನೇ ಗ್ರಂಥದಲ್ಲಿ ಅಷ್ಟಾಂಗ ಯೋಗಕ್ಕೆ ಸಂಬಂಧಿಸಿದ ವಿಧಿ ವಿಧಾನ ಗಳನ್ನು ವಿಪುಲವಾಗಿ ತಿಳಿಸುತ್ತಾ, ಈ ಯೋಗ ಪ್ರಭಾವವನ್ನು ಅದ್ಭುತವಾಗಿ ವರ್ಣಿಸಿದ್ದಾರೆ. ಹೀಗೆ, ನಾಥ ಮುನಿಗಳು ಲೋಕಕಲ್ಯಾಣಾರ್ಥವಾಗಿ ತಮ್ಮ ತಪಶ್ಶಕ್ತಿಯನ್ನು ಬಹುರೂಪವಾಗಿ ವಿನಿಯೋಗಿಸಿ, ಈ ಸಂಪ್ರದಾಯವನ್ನು ಚಿರಸ್ಮರಣೀಯವನ್ನಾಗಿ ಮಾಡಿದರು.

ಆ ನಂತರದಲ್ಲಿ ಇವರ ಪೌತ್ರ (ಮೊಮ್ಮಕ್ಕಳಾದ) ರಾದ ಶ್ರೀ ಯಾಮುನ ಮುನೀಂದ್ರರು ಪಂಡಿತೋದ್ದಂಡರಾಗಿ, ಪ್ರಚಂಡವಾದ ಪ್ರಜ್ಞಾಪ್ರಭಾವವನ್ನು ಹೊಂದಿದವರಾಗಿ, ಪ್ರತಿಭಾ ವಿಶೇಷದಿಂದ ಎಲ್ಲರನ್ನೂ ಸಂಭ್ರಮಾಶ್ಚರ್ಯ ಪುಲಕಿತರನ್ನಾಗಿಸುತ್ತಿದ್ದರು. ಪರತತ್ತ್ವ ನಿರ್ಣಯವನ್ನು ಪ್ರಸರಿಸಿ, ರಾಜಾಧಿ ರಾಜರಾಗಿ, ಪರಮಯೋಗಿ ಪುಂಗವರಾಗಿ, ದರ್ಶನ ಸ್ಥಾಪನಾಚಾರ್ಯರಾಗಿ, ದಿಗ್ವಿಜಯಗಳನ್ನು ಹೊಂದಿ 'ಆಳವಂದಾರ್' ಎಂಬ ಹೆಸರಿನಿಂದ ಪ್ರಖ್ಯಾತ ರಾದರು.

ಈ ಮಹನೀಯರು ತಮ್ಮ ತಾತನವರಿಂದ ಉಭಯವೇದಾಂತ ಸಂಪ್ರ ದಾಯವಾಗಿ ಪ್ರಸಿದ್ಧಿ ಹೊಂದಿದ ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತವನ್ನು ತಮ್ಮ ಶಿಷ್ಯ ಪ್ರಶಿಷ್ಯರಿಗೆ ಉಪದೇಶಿಸಿ, ಪ್ರವರ್ತಿಸಿದುದೇ ಅಲ್ಲದೆ, ಸಂಪ್ರದಾಯ ಪ್ರಬೋಧಕವಾದ ಅನೇಕ ಗ್ರಂಥಗಳನ್ನು ರಚಿಸಿದರು.

ಅಂತಹವುಗಳಲ್ಲಿ 'ಗೀತಾರ್ಥ ಸಂಗ್ರಹ' ಎನ್ನುವ ಕೃತಿಯಲ್ಲಿ ಶ್ರೀ ವಿಶಿಷ್ಟಾ ದ್ವೈತ ಮತಾನುಸಾರವಾಗಿ ಭಗವದ್ಗೀತೆಯಲ್ಲಿನ ರಹಸ್ಯಗಳನ್ನು ತಿಳಿಯಪಡಿಸಿ ದರು. 'ಶ್ರೀ ಚತುಃಶ್ಲೋಕಿ' ಗ್ರಂಥವು ಶ್ರೀ ವೈಷ್ಣವ ಧರ್ಮಕ್ಕೆ ಪ್ರಥಮ

ಪ್ರವರ್ತಕಳಾದ ಶ್ರೀ ಲಕ್ಷ್ಮೀಮಾತೆಯನ್ನು ಸಂಸ್ತುತಿಸಿದೆ. ಆತ್ಮಸಿದ್ಧಿ, ಈಶ್ವರ ಸಿದ್ಧಿ, ಸಂವಿತ್ ಸಿದ್ಧಿ ಎನ್ನುವ ತ್ರಿವಿಧ ಸಿದ್ಧಿಗಳಿಂದ ಕೂಡಿದ 'ಸಿದ್ಧಿ ತ್ರಯ' ಎನ್ನುವ ಗ್ರಂಥದಲ್ಲಿ ಚಿದಚಿದೀಶ್ವರ ತತ್ತ್ವಗಳನ್ನು ವಿಪುಲವಾಗಿ, ವಿಸ್ತಾರವಾಗಿ ತಿಳಿಸಲಾಗಿದೆ. ಶ್ರೀವೈಷ್ಣವ ದರ್ಶನಕ್ಕೆ ಮೂಲಾಧಾರವಾದ, ಭಗವತ್ ಶಾಸ್ತ್ರವಾಗಿ ಪ್ರಸಿದ್ಧಿ ಹೊಂದಿದ ಶ್ರೀ ಪಾಂಚರಾತ್ರಾಗಮಕ್ಕೆ ಇರುವ ಪ್ರಾಮಾಣ್ಯ, ಪ್ರಾಮುಖ್ಯತೆಗಳು 'ಆಗಮ ಪ್ರಾಮಾಣ್ಯ' ಎನ್ನುವ ಗ್ರಂಥದಲ್ಲಿ ನಿರೂಪಿಸಲ್ಪಟ್ಟಿದೆ. ಮಧುರ ಮಂಜುಳವಾದ ಗಂಭೀರ ಭಾವಗಳೊಂದಿಗೆ ಲಲಿತ ಕೋಮಲವಾದ ಪದ ವಿನ್ಯಾಸದೊಂದಿಗೆ ಶರಣಾಗತಿ ತತ್ತ್ವವನ್ನು ಅತ್ಯಂತ ಆಕರ್ಷಣೀಯವಾಗಿ ಎಂಟು ಶ್ಲೋಕಗಳಿಂದ ಕೂಡಿರುವ 'ಸ್ತೋತ್ರ ರತ್ನ' ಎನ್ನುವ ಕೃತಿಯಲ್ಲಿ ರೂಪಿಸಲಾಗಿದೆ. ಇದು 'ಆಳವಂದಾರ್ ಸ್ತೋತ್ರ' ಎನ್ನುವ ಹೆಸರಿನಿಂದ ನಿತ್ಯ ಪಾರಾಯಣ ಯೋಗ್ಯವಾಗಿ ಪ್ರಸ್ಫುಟಿತಗೊಂಡಿದೆ.

ಶ್ರೀ ಯಾಮುನರಿಂದ ರಚಿತವಾದ ಈ ವೈಶಿಷ್ಟ್ಯಪೂರ್ಣ ಗ್ರಂಥಗಳು ಶ್ರೀ ವಿಶಿಷ್ಟಾದ್ವೈತ ಸಂಪ್ರದಾಯ ಎನ್ನುವ ಮಹಾ ಸೌಧಕ್ಕೆ ಮೂಲಸ್ತಂಭವಾಗಿ ನಿಂತು ಪ್ರಖ್ಯಾತಿ ಪಡೆದಿವೆ. ಈ ರೀತಿಯಲ್ಲಿ ಶ್ರೀ ಯಾಮುನರು ಈ ಸಂಪ್ರದಾಯ ವೈಶಿಷ್ಟ್ಯವನ್ನು ಜಗತ್ತಿನಾದ್ಯಂತ ಹರಡಿ, ಅದಕ್ಕೆ ಅಖಂಡ ಯಶಸ್ಸು ಸಿಗುವಂತೆ ಮಾಡಿದರು.

ಅಲ್ಲದೆ ಇವರು ಅನಂತಾವತಾರರೂ. ಶ್ರೀ ವೈಷ್ಣವ ಧರ್ಮದ ನಿರ್ಧಾರಕರೂ ಆದ ಶ್ರೀ ರಾಮಾನುಜರಿಗೆ ಆಚಾರ್ಯರಾಗಿ, ಅವರಿಂದ ಶ್ರೀ ವಿಶಿಷ್ಟಾದ್ವೈತ ಸಂಪ್ರದಾಯಾನುಸಾರ ಬಾದರಾಯಣ ಪ್ರಣೀತವಾದ ಬ್ರಹ್ಮಸೂತ್ರಗಳಿಗೆ ಶ್ರೀ ಭಾಷ್ಯಾದಿ ಗ್ರಂಥಗಳನ್ನು ಅವತರಿಸುವಂತೆ ಮಾಡಿ, ವ್ಯಾಸ ಪರಾಶರರ ಹೆಸರಿಗೆ ಸುಪ್ರಸಿದ್ಧತೆಯನ್ನು ಒದಗಿಸಿ ಈ ಸಂಪ್ರದಾಯಕ್ಕೆ ಪರಮಾಚಾರ್ಯರಾಗಿ ಪ್ರಕಾಶಗೊಂಡರು.

ಆ ನಂತರ ಈ ವಿಶಿಷ್ಟ ಸಂಪ್ರದಾಯದ ಸಂಸ್ಥಾಪಕರಾಗಿ ಭಗವಂತನ ಕೈಂಕರ್ಯ ನಿರ್ವಾಹಕನಾದ ಆದಿಶೇಷನೇ ಭಗವನ್ನಿಯಮಾನುಸಾರ ಭೂತಪುರಿ ಕ್ಷೇತ್ರದ ಶ್ರೀ ಕಾಂತಿಮತೀ ಕೇಶವ ಯಜ್ವರ ಪುತ್ರರಾಗಿ 'ಶ್ರೀ ರಾಮಾನುಜ' ಎನ್ನುವ ಹೆಸರಿನಿಂದ ಅವತರಿಸಿದರು.

ಇವರು ಪರಭಕ್ತಿ–ಪರಜ್ಞಾನ–ಪರಮ ಭಕ್ತಿಗಳನ್ನು ಅತಿಶಯಗೊಳಿಸಿ, ಪರಮಾತ್ಮನಲ್ಲಿ ತಲ್ಲೀನರಾಗಿ, ಇತರೇ ವಿಷಯಗಳಲ್ಲಿ ವಿರಕ್ತರಾಗಿ, ಅತಿ ವಿಲಕ್ಷಣ ದಿವಾಕರರಾಗಿ ಪ್ರಕಾಶಿಸುತ್ತಾ, ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪನೆಗಾಗಿ ದೀಕ್ಷೆ ವಹಿಸಿ, ಲಕ್ಷ್ಯವನ್ನು ಸಾಧಿಸಿ, ಅದರ ವಿಜಯ ಧ್ವಜವನ್ನು ಸಂಸ್ಥಾಪಿಸಿದರು.

ಈ ಯತಿ ಸಾರ್ವಭೌಮರು ಬೋದಾಯನ ವೃತ್ತಿ, ದ್ರಮಿಡ ಭಾಷ್ಯ, ಸಿದ್ಧಿತ್ರಯಾದಿಗಳನ್ನು ಅನುಸರಿಸಿ, ಸೂತ್ರ ಪ್ರಸ್ಥಾನಕ್ಕೆ ವಿಶಿಷ್ಟವಾದ ಶ್ರೀ ಭಾಷ್ಯವನ್ನು ರಚಿಸಿ, ಕಾಶ್ಮೀರದ ಸರಸ್ವತೀ ಪೀಠದಿಂದ 'ಶ್ರೀಭಾಷ್ಯಕಾರರು' ಎನ್ನುವ ಬಿರುದಿನೊಂದಿಗೆ ಬಂಗಾರದ ಶ್ರೀ ಲಕ್ಷ್ಮೀ ಹಯಗ್ರೀವ ವಿಗ್ರಹವನ್ನು ಬಹುಮಾನ ಪುರಸ್ಸರವಾಗಿ ಪಡೆಯಬಲ್ಲವರಾದರು. ಇದಲ್ಲದೆ 'ವೇದಾಂತ ಸಾರ', 'ವೇದಾಂತ ದೀಪ' ಎನ್ನುವ ಎರಡು ಗ್ರಂಥಗಳನ್ನು ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ ರೂಪವಾಗಿ ಇವರು ರಚಿಸಿದರು. ಉಪನಿಷತ್ತುಗಳಲ್ಲಿ ಅದ್ವೈತಗಳಿಗೆ ವಿಶಿಷ್ಟಾದ್ವೈತಗಳಿಗೆ ಭೇದಾಭಿಪ್ರಾಯಗಳಿರುವ ವಾಕ್ಯಗಳಿಗೆ ಅರ್ಥವನ್ನು ತಮ್ಮ ಶೇಮುಷೀ ವಿಶೇಷತೆಯಿಂದ ಸಮುಚಿತ ವಿಧಾನವನ್ನು ಸಮನ್ವಯಿಸಿ, ಆ ವಾಕ್ಯಗಳಲ್ಲಿನ ಗಂಭೀರ ಭಾವಗಳನ್ನು, ರಹಸ್ಯಗಳನ್ನು ವಿಶದೀಕರಿಸುತ್ತಾ 'ವೇದಾರ್ಥ ಸಂಗ್ರಹ' ಎನ್ನುವ ಗ್ರಂಥವನ್ನು ರಚಿಸಿದರು. ಭಗವದ್ಗೀತಾ ಪ್ರಸ್ಥಾನಕ್ಕೆ ಭಾವಮಧುರವಾದ ಶೈಲಿಯಲ್ಲಿ ಭಾಷ್ಯವನ್ನು ರಚಿಸಿ, ಅದರಲ್ಲಿನ ಭಗವದ್ವೈಭವವನ್ನು, ಭಕ್ತಿ ಪ್ರಪತ್ತಿಗಳ ವಿಶಿಷ್ಟತೆಯನ್ನು ವಿಶದೀಕರಿಸಿದರು. 'ಶರಣಾಗತಿ ಗದ್ಯ' 'ರಂಗನಾಥ ಗದ್ಯ' 'ವೈಕುಂಠ ಗದ್ಯ' ಎನ್ನುವ ಹೆಸರಿನ 'ಗದ್ಯತ್ರಯ'ವನ್ನು ರಚಿಸಿ, ಅದರಲ್ಲಿ ಪರಮಪದನಾಥನ ಅಪ್ರಾಕೃತ ದಿವ್ಯ ಮಂಗಳ ವಿಗ್ರಹವನ್ನು, ಆತನ ಕಲ್ಯಾಣ ಗುಣಗಳನ್ನು, ಅಖಿಲ ಜಗನ್ಮಾತೆಯೂ, ಅಪಾರ ಕರುಣಾ ಸ್ವರೂಪಿಯೂ ಆದ ಶ್ರೀ ಲಕ್ಷ್ಮೀದೇವಿಯ ವಿಭವ ವಿಭೂತ್ಯಾದಿಗಳನ್ನು ಹೃದಯಂಗಮವಾಗಿ ವರ್ಣಿಸಿ, ಆ ಶ್ರೀ ಹಾಗೂ ಶ್ರಿಯಃ ಪತಿಯರನ್ನು ಬಹಳವಾಗಿ ಸ್ತುತಿಸಿದ್ದಾರೆ. ಭಗವದಾರಾಧನ ವಿಧಾನವನ್ನು ಬೋಧಿಸುವ 'ನಿತ್ಯ ಗ್ರಂಥ'ವನ್ನು ರಚಿಸಿ, ಮುಮುಕ್ಷುಗಳಿಗೆ ಇವರು ಮಾರ್ಗದರ್ಶನ ಮಾಡಿಸಿದರು.

ಇದೇ ಅಲ್ಲ; ಆಸೇತು ಹಿಮಾಚಲ ಪರ್ಯಂತ ದಿಗ್ವಿಜಯ ಯಾತ್ರೆಗಳನ್ನು ಮಾಡುತ್ತಾ, ಶ್ರೀ ವೈಷ್ಣವ ಮತದಲ್ಲಿನ ಪರಮ ಸೌಭಾಗ್ಯವನ್ನು ಸಕಲ

ಚೇತನ ಶುಭದಾಯಕತ್ವವನ್ನು ಎಲ್ಲೆಡೆ ಪಸರಿಸುತ್ತಾ, ಭಾರತಾದ್ಯಂತ ಶ್ರೀವೈಷ್ಣವ ಮತ ಸಂಸ್ಥೆಗಳನ್ನು ಸಂಸ್ಥಾಪಿಸಿದರು ಇದರ ಮುಖಾಂತರ ಒಂದು ಶ್ರೀ ವೈಷ್ಣವ ಸಮಾಜವನ್ನೇ ಸ್ಥಾಪಿಸಿದರು. ಈ ಸಮಾಜದಲ್ಲಿ ಎಲ್ಲ ವರ್ಣದವರಿಗೂ ಪ್ರವೇಶ ವನ್ನು ಕಲ್ಪಿಸಿ, ವಿಶ್ವ ವಿಖ್ಯಾತಿಯನ್ನು ಹೊಂದಿದರು.

ಇಷ್ಟೇ ಅಲ್ಲದೆ ನಿಖಿಲ ಲೋಕೋಜ್ಜೀವನಾರ್ಥವಾಗಿ ಶ್ರಿಯಃಪತಿಯು ಸ್ವಯಂ ವ್ಯಕ್ತಸ್ಥಳಗಳಾಗಿ ಪ್ರಖ್ಯಾತಿ ಪಡೆದ ಶ್ರೀರಂಗಂ, ಶ್ರೀ ವೆಂಕಟಾದ್ರಿ, ಶ್ರೀ ಹಸ್ತಿಗಿರಿ, ಶ್ರೀ ಯಾದವಾದ್ರಿ ದಿವ್ಯದೇಶಗಳನ್ನು ಸಮೀಕರಿಸಿ, ಅನೇಕ ರೀತಿಯ ಕಟ್ಟುಪಾಡುಗಳನ್ನು ಏರ್ಪಡಿಸಿ, ಅಲ್ಲಿ ಮಠ ಮಂದಿರಗಳನ್ನು ಸ್ಥಾಪಿಸಿ, ಸಕಲ ಜನರಿಗೂ ಒಂದು ನೂತನ ಚೈತನ್ಯವನ್ನು ನೀಡಿ, ಈ ಸಂಪ್ರದಾಯದಲ್ಲಿ ಅಭಿರುಚಿಯನ್ನು, ಅಭಿನಿವೇಶನವನ್ನು ಉದ್ಭವಿಸುವಂತೆ ಮಾಡಿ, ಅದರ ಮುಖಾಂತರ ಶ್ರೀವೈಷ್ಣವ ಸಿದ್ಧಾಂತಕ್ಕೆ ವಿಶೇಷವಾದ ಪರಿಪುಷ್ಟಿಯನ್ನು ಜೊತೆ ಗೂಡಿಸುವುದೇ ಅಲ್ಲದೆ, ಈ ವಿಶಿಷ್ಟಾದ್ವೈತ ಮತ ಪ್ರಚಾರಕ್ಕಾಗಿ 74 ಪೀಠಾಧಿ ಪತಿಗಳ ವ್ಯವಸ್ಥೆ ಮಾಡಿದರು.

ಬಹುಮುಖವಾದ ಇಂತಹ ಧರ್ಮವನ್ನು ವಿಜಯ ತೇಜಸ್ಸಿನಿಂದ ಪ್ರಕಾಶ ಗೊಳಿಸುತ್ತಾ, ಶ್ರೀವೈಷ್ಣವ ಧರ್ಮ ಸುಮ ಸೌರಭವನ್ನು ಭಾರತಾದ್ಯಂತ ಈ ಯತಿ ಸಾರ್ವಭೌಮರು ಹರಡಿದ ಕಾರಣ ಈ ದರ್ಶನಕ್ಕೆ 'ಶ್ರೀ ರಾಮಾನುಜ ದರ್ಶನ' ಎನ್ನುವ ಅನ್ವರ್ಥನಾಮ ಉಂಟಾಗಿ, ಸುಪ್ರಸಿದ್ಧವಾಯಿತು.

ಶ್ರೀ ರಾಮಾನುಜರ ನಂತರ ಅನೇಕ ಆಚಾರ್ಯವರ್ಯರು ಈ ಸಂಪ್ರ ದಾಯವನ್ನು ಪ್ರಚಾರ ಮಾಡಿದರು. ಶ್ರೀ ಪಿಳ್ಳೈ ಲೋಕಾಚಾರ್ಯರು ಈ ವಿಶಿಷ್ಟಾದ್ವೈತದಲ್ಲಿನ ಪ್ರಸ್ಥಾನಗಳೆಲ್ಲವನ್ನೂ ಜನಸಾಮಾನ್ಯರಿಗಾಗಿ ಕರತಳಾ ಮಲಕವಾಗುವಂತೆ ದ್ರಾವಿಡ ಭಾಷೆಯಲ್ಲಿ ಸಲಿಲ ಸುಮಧುರ ರಮಣೀಯ ಸೂತ್ರಗಳಾಗಿ 'ಅಷ್ಟಾದಶ ರಹಸ್ಯ'ಗಳಾಗಿ ರಚಿಸಿ, ಈ ಸಂಪ್ರದಾಯಕ್ಕೆ ಒಂದು ನೂತನ ತೇಜಸ್ಸು ಕೊಡಿಸಿದರು. ಇವರ ಗ್ರಂಥಗಳಲ್ಲಿ ದ್ರಾವಿಡವೇದಾಂತ ಗಳಲ್ಲಿನ ಪರಮ ವಿಲಕ್ಷಣವಾದ ಭಗವದ್ದಿವ್ಯ ಕಲ್ಯಾಣ ಗುಣಗಳ ವೈಭವಾದಿ ಗಳು ಪ್ರಜ್ವಲಿಸುವಂತೆ ಮಾಡಿರುವುದು ಒಂದು ವಿಶೇಷ.

ಕ್ರಿ.ಶ. 15ನೇ ಶತಮಾನದ ಕೊನೆಯಲ್ಲಿ ಅಥವಾ 16ನೇ ಶತಮಾನದ ಪ್ರಾರಂಭದಲ್ಲಿ ಸೌಮ್ಯ ಜಾಮಾತೃ ಮುನಿಗಳ ಶಿಷ್ಯರಾದ ಕಸ್ತೂರಿ ರಂಗಾ

ಚಾರ್ಯ (ಶ್ರೀ ರಂಗ ಸೂರಿ) ಎನ್ನುವವರು ಶ್ರೀ ರಾಮಾನುಜರ ಸಿದ್ಧಾಂತವನ್ನು ಸ್ಪಷ್ಟಪಡಿಸುತ್ತಾ 'ಕಾರ್ಯಾಧಿಕರಣವಾದ' ಮತ್ತು 'ಕಾರ್ಯಾಧಿಕರಣ ತತ್ತ್ವ' ಎಂಬೆರಡು ಗ್ರಂಥಗಳನ್ನು ರಚಿಸಿದ್ದಾರೆ.

ತಿರುಪತಿ ಶ್ರೀನಿವಾಸರ ಘಂಟಾವತಾರಿಗಳಾದ ಶ್ರೀ ವೇದಾಂತ ದೇಶಿಕರು ಭಗವದನುಗ್ರಹದಿಂದ ಸರ್ವತಂತ್ರ ಸ್ವತಂತ್ರರಾಗಿ, ಮೂವತ್ತು ಸಲ ಶ್ರೀಭಾಷ್ಯ ವನ್ನು ಅಧಿಕರಿಸಿದರು. ತತ್ತ್ವಟೀಕ, ಶತದೂಷಿಣಿ, ಗೀತಾಭಾಷ್ಯ, ವ್ಯಾಖ್ಯಾನ ದೊಂದಿಗೆ ಅಧಿಕರಣ ಸಾರಾವಳಿ, ತತ್ತ್ವಮುಕ್ತಾಕಲಾಪ, ನ್ಯಾಯ ಸಿದ್ಧಾಂತ, ನ್ಯಾಯ ಪರಿಶುದ್ಧಿ ಮುಂತಾದ ಅನೇಕ ಗ್ರಂಥಗಳನ್ನು ಇವರು ರಚಿಸಿದ್ದಾರೆ. ಸಂಸ್ಕೃತ, ವೇದಾಂತ ಪ್ರಸ್ಥಾನಕ್ಕೆ ನಾವೀನ್ಯತೆಯನ್ನು ನೀಡಿದರು. ಅಲ್ಲದೆ ದ್ರಮಿಡೋಪನಿಷತ್ ತಾತ್ಪರ್ಯ ರತ್ನಾವಳಿಯನ್ನು ರಚಿಸಿ, ದ್ರಾವಿಡ ವೇದಾಂತ ಪ್ರಸ್ಥಾನಕ್ಕೂ, ದ್ವಾಂತ್ರಿಶ ದ್ರಹಸ್ಯಗಳನ್ನು ರಚಿಸಿ, ರಹಸ್ಯ ಪ್ರಸ್ಥಾನಕ್ಕೂ ಪಾಂಚರಾತ್ರ ರಕ್ಷೆ ಮೊದಲಾದುವನ್ನು ರಚಿಸಿ, ಶ್ರೀ ಪಾಂಚರಾತ್ರಕ್ಕೂ ವಿಶೇಷ ಪ್ರಚಾರವನ್ನು ಕೊಡಿಸಿಕೊಟ್ಟರು. ಇಷ್ಟೇ ಅಲ್ಲದೆ ದ್ರಾವಿಡ ಭಾಷಾಮಯವಾದ ಪ್ರೌಢ ಸ್ತೋತ್ರ ಮಾಲಿಕೆಗಳನ್ನೇ ಅಲ್ಲದೆ ದ್ರಾವಿಡ ಭಾಷಾ ಮಯವಾದ ದಿವ್ಯ ಪ್ರಬಂಧಗಳನ್ನು ಕೂಡ ರಚಿಸಿದ್ದಾರೆ. ಇವನ್ನು ದೇಶಿಕ ಪ್ರಬಂಧಗಳೆಂದು ಕರೆಯ ಲಾಗುವುದು. ಈ ರೀತಿಯಲ್ಲಿ ದೇಶಿಕರು ಬಹುಗ್ರಂಥಕರ್ತರಾಗಿ 'ಕವಿತಾರ್ಕಿಕ ಸಿಂಹ' ಎಂಬ ಬಿರುದನ್ನು ಪಡೆದರು. ಶ್ರೀ ವಿಶಿಷ್ಟಾದ್ವೈತ ಮತ ವಿಕಾಸಕ್ಕೆ ಇವರು ನೀಡಿದ ಕಾಣಿಕೆಗಳು ಶ್ರೀ ವೈಷ್ಣವ ಲೋಕಕ್ಕೆ ಚಿರಸ್ಮರಣೀಯವಾದವು ಗಳಾಗಿವೆ.

ಶ್ರೀ ರಾಮಾನುಜರು ತಮ್ಮ 120 ವರ್ಷಗಳಲ್ಲಿ ಒಂದು ಘಳಿಗೆಯನ್ನೂ ವ್ಯರ್ಥಮಾಡದೆ ಈ ಸಂಪ್ರದಾಯವನ್ನು ಅಭ್ಯುದಯ ಹಾದಿಯಲ್ಲಿ ಮುಂದುವರೆ ಯಲು ಶ್ರಮಿಸಿದರು. ಆದರೆ ದ್ರಾವಿಡ ವೇದಾಂತ ಪ್ರಸ್ಥಾನದ ಅಭಿವೃದ್ಧಿಗೆ ದುಡಿಯಲು ಅವರಿಗೆ ಸಮಯವಿರಲಿಲ್ಲ. ಇದರಿಂದ ಭಗವನ್ನಿಯಮಕ್ಕೆ ಅನು ಸಾರವಾಗಿ ಅವರೇ 'ಮಣವಾಳ ಮಾಮುನಿ'ಗಳಾಗಿ ಅವತರಿಸಿದರು. ಯತಿವರರ ಪುನರಾವತಾರವಾಗಿದ್ದುದರಿಂದಲೇ ಸಂಪ್ರದಾಯಾರ್ಥಗಳನ್ನೆಲ್ಲ ಗ್ರಹಿಸಬಲ್ಲವ ರಾದರು. ಅವರು ತಮ್ಮೆಲ್ಲ ಜ್ಞಾನವನ್ನು ಸರ್ವತೋಮುಖವಾಗಿ ದ್ರಾವಿಡ ವೇದಾಂತ ಪ್ರಸ್ಥಾನದ ಅಭ್ಯುದಯಕ್ಕಾಗಿಯೇ ವಿನಿಯೋಗಿಸಬೇಕೆಂದು ಸಂಕ

ಲ್ಪಿಸಿ, ನಮ್ಮಾಳ್ವರರು ಅನುಗ್ರಹಿಸಿದ ದ್ರಾವಿಡ ದಿವ್ಯ ಪ್ರಬಂಧಗಳಿಗೆ ವ್ಯಾಖ್ಯಾನ ರೀತಿಯದ್ದಾದ 'ಈಡು ಮುಪ್ಪತ್ತಾರಾಯಿರಪ್ಪಡಿ' (ಭಗವದ್ವಿಷಯಮ್) ಮೊದಲಾದ ಗ್ರಂಥಗಳನ್ನು ಪರಿಶೀಲಿಸಿ, ಪರಿಷ್ಕರಿಸಿ, ಪ್ರಮಾಣಬದ್ಧ ನಿರ್ದೇಶನಾದಿಗಳನ್ನು ಸೂಚಿಸಿದರು. ಪೆರಿಯವಾಚ್ಚಾನ್ ಪಿಳ್ಳೈರವರ 'ಪೆರಿಯಾಳ್ವಾರ್ ತಿರುಮೊಳಿ ವ್ಯಾಖ್ಯಾನ'ವು ಶಿಥಿಲವಾದುದರಿಂದ, ಆ ದಿವ್ಯ ಪ್ರಬಂಧಕ್ಕೆ ಸುಲಲಿತವಾದ ಶೈಲಿಯಲ್ಲಿ ವ್ಯಾಖ್ಯಾನವನ್ನು ರಚಿಸಿ, ದ್ರಾವಿಡ ವೇದಾಂತ ಪ್ರಸ್ಥಾನಕ್ಕೆ ಸಮುಚಿತವಾದ ಸರಳ, ಗಂಭೀರ ವ್ಯಾಖ್ಯಾನಗಳನ್ನು ಅನುಗ್ರಹಿಸಿದರು. ಶ್ರೀ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನಾಡಿನಾದ್ಯಂತ ವ್ಯಾಪಿಸುವಂತೆ ಮಾಡಿದುದೇ ಅಲ್ಲದೆ, ಶ್ರೀ ರಾಮಾನುಜರಂತೆ ದೇವಾಲಯಗಳನ್ನು ದುರಸ್ತಿಗೊಳಿಸಿ, ಶ್ರೀವೈಷ್ಣವ ಸಮಾಜಕ್ಕೆ ಹೊಸ ರೂಪವನ್ನೇ ನೀಡಿದರು. ಇವೆಲ್ಲದರ ಪರಿಣಾಮವಾಗಿ ಇವರು ಶ್ರೀ ರಂಗನಾಥನ ಕೃಪಾ ವಿಶೇಷಕ್ಕೆ ಪಾತ್ರರಾಗಿ, ಆ ದೇವನಿಂದಲೇ 'ಪೆರಿಯ ಜೀಯರ್' ಎಂದು ಪ್ರಶಂಸಿಸಲ್ಪಟ್ಟರು.

ಈ ರೀತಿಯಲ್ಲಿ ಶ್ರೀ ವೈಷ್ಣವ ದರ್ಶನವು ಮುಂದುವರಿದು, ಇಂದು ಜಗತ್ತಿನಾದ್ಯಂತ ಹರಡಿದೆ.

# 2. ಶ್ರೀ ವೈಷ್ಣವ ತತ್ತ್ವದ ಇತಿಹಾಸ

ಶ್ರೀ ವೈಷ್ಣವ ದರ್ಶನವು ಶ್ರೀವೈಷ್ಣವ ಮತ (ಧರ್ಮ)ದ ಮೂಲವಾಗಿದೆ. ಈ ಧರ್ಮವನ್ನು ಶ್ರೀವೈಷ್ಣವ ಸಂಪ್ರದಾಯ, ಭಾಗವತ ಮತ, ಶ್ರೀ ಸಂಪ್ರದಾಯ ಎನ್ನುವ ಹೆಸರುಗಳಿಂದಲೂ ಕರೆಯುತ್ತಾರೆ. ಈ ದರ್ಶನಕ್ಕೆ ಪಾಂಚರಾತ್ರಾಗಮವೇ ಪ್ರಧಾನ ಆಧಾರವಾಗಿರುವುದರಿಂದ ಇದನ್ನು ಪಾಂಚರಾತ್ರ ಮತ (ಧರ್ಮ) ವೆಂದೂ ಕರೆಯಲಾಗುತ್ತದೆ.

ಈ ಪಾಂಚರಾತ್ರವು ಒಂದು ಮಹೋಪನಿಷತ್ತು ಎಂದೂ, ನಾಲ್ಕು ವೇದಗಳೊಂದಿಗೆ, ಸಾಂಖ್ಯ ಯೋಗವೂ ಸೇರಿ–ಐದು ಸಂಖ್ಯೆಯಿವುಗಳದ್ದಾಗಿ, ಇದಕ್ಕೆ 'ಪಾಂಚರಾತ್ರ' ಎಂಬ ಹೆಸರು ಬಂದಿದೆಯೆಂದೂ ಹೇಳಲಾಗುತ್ತದೆ. ಶ್ರೀಮನ್ನಾರಾಯಣ ಮುಖೋದ್ಗತವಾದ ಈ ಪಾಂಚರಾತ್ರ ಶಾಸ್ತ್ರವನ್ನು ಮೊಟ್ಟಮೊದಲು ದೇವರ್ಷಿಯಾದ ನಾರದನು ಆಲಿಸಿದನೆಂದೂ, ನಂತರ ಆತನು ಇತರರಿಗೆ ತಿಳಿಸಿದನೆಂದೂ, ಪ್ರವಚನ ಮಾಡಿದನೆಂದೂ ಮಹಾಭಾರತದ ಶಾಂತಿ ಪರ್ವವು (339–11, 12) ವಿವರಿಸಿದೆ.

ಮಹರ್ಷಿಗಳಿಗೆ ಈತನು ಪ್ರವಚನ ಮಾಡಿದ ನಂತರ ಅನೇಕರ ಪ್ರಾರ್ಥನೆಯಂತೆ ಈತನು ಪಾಂಚರಾತ್ರಾಗಮ ಪ್ರಾಶಸ್ತ್ಯದಿಂದ ಕೂಡಿದ ಗ್ರಂಥವೊಂದನ್ನು ಈತನು ರಚಿಸಿದನೆಂದೂ, ಅದೇ 'ನಾರದ ಪಾಂಚರಾತ್ರ'ವೆಂದು ಆ ನಂತರದಲ್ಲಿ ಪ್ರಸಿದ್ಧವಾಯಿತೆಂದೂ ಶಾಸ್ತ್ರಗಳು ತಿಳಿಸಿವೆ. ಆ ಶಾಸ್ತ್ರಗಳ ಪ್ರಕಾರ ವೇದಗಳಿಗಿಂತ ಮುಂಚೆಯೇ ಈ 'ಪಾಂಚರಾತ್ರಾಗಮ'ವು ರಚಿತವಾಯಿತೆಂದೂ, ಆದುದರಿಂದ ಇದನ್ನು ಜಗತ್ತಿನ ಪ್ರಪ್ರಥಮ ಗ್ರಂಥವೆಂದೂ ಹೇಳಲಾಗುತ್ತದೆ.

ಈ ಗ್ರಂಥದಲ್ಲಿ ವಿವರಿಸಿರುವಂತೆ, ರಾತ್ರಿ ಎನ್ನುವ ಪದವು ಜ್ಞಾನವಾಚಕವಾಗಿದೆ. ಈ ಜ್ಞಾನವು ಐದು ವಿಧವಾಗಿರುತ್ತದೆ. ಆದುದರಿಂದಲೇ ವಿದ್ವಾಂಸರು ಇದನ್ನು 'ಪಾಂಚರಾತ್ರ' ಎನ್ನುವ ಹೆಸರಿನಿಂದ ವ್ಯವಹರಿಸುವರು.

ಮೊದಲನೆಯದು ಜನ್ಮ, ಜರಾ, ಮರಣ ಇತ್ಯಾದಿಗಳನ್ನು ನಿವಾರಿಸುವ ಪರಮತತ್ತ್ವಜ್ಞಾನ.

ಎರಡನೆಯದು ಮೋಕ್ಷಾರ್ಥಿಗಳಿಗೆ ಮುಕ್ತಿದಾಯಕವಾದ ಪವಿತ್ರ ಜ್ಞಾನ. ಶ್ರೀಮನ್ನಾರಾಯಣನ ಪಾದಪದ್ಮಗಳ ಸನ್ನಿಧಿಗೆ ಚೇತನನನ್ನು ಸೇರಿಸುವಂತಹುದು.

ಮೂರನೆಯದು ಪರಿಶುದ್ಧವೂ, ಶ್ರೇಯಸ್ಕರವೂ ಆದ ಜ್ಞಾನ. ಇದು ಶ್ರೀಮನ್ನಾರಾಯಣನ ಮೇಲೆ ಭಕ್ತಿಭಾವವನ್ನು ಹುಟ್ಟಿಸುವಂತಹುದು. ಭಗವಂತನ ದಾಸ್ಯವನ್ನು ಅನುಗ್ರಹಿಸಿ, ಅವನ ಅನುಗ್ರಹಕ್ಕೆ ಚೇತನನು ಪಾತ್ರನಾಗುವಂತೆ ಮಾಡುವ ಈ ಜ್ಞಾನವೂ ಕೂಡ ಮಾನವನಿಗೆ ಅವಶ್ಯಕವಾದುದು.

ನಾಲ್ಕನೆಯದು ಸಮಸ್ತ ಸಿದ್ಧಿಗಳನ್ನು ಪ್ರಸಾದಿಸುವಂತಹ ಯೋಗಜ್ಞಾನ. ಇದು ಯೋಗಿಗಳ ಸರ್ವಸ್ವ. ಸಿದ್ಧಪುರುಷರಿಗೆ ಸುಖಪ್ರದವಾದುದು.

ಐದನೆಯದು ಪರಮಜ್ಞಾನ. ಇದನ್ನೇ ಮಾಯೆ ಎನ್ನುವುದು. ಇದು ಮಾನವನ ಮೋಹಕ್ಕೆ ಕಾರಣವಾಗುತ್ತದೆ. ಅವನನ್ನು ಸಾಂಸಾರಿಕ ವಿಷಯ ಭೋಗಗಳ ಕಡೆ ಹೊರಳುವಂತೆ ಮಾಡುವುದು. ಇಂತಹ ಜ್ಞಾನದಿಂದ ಮಾನವನು ತನ್ನ ಹಾಗೂ ತನ್ನ ಕುಟುಂಬವನ್ನು ಪೋಷಿಸಬಲ್ಲನು. ಆದರೆ ಹೀಗೆ ಸಂಸಾರದಲ್ಲಿ ಮುಳುಗಿದ್ದೂ, ನಡುನಡುವೆ ಪರಮಾತ್ಮನ ಧ್ಯಾನ ಮಾಡುವವನೇ ನಿಜವಾದ ಜ್ಞಾನಿಯಾಗುವನು.

ಈ ವಿವರಗಳನ್ನು ಅನುಸರಿಸಿ, ತಿಳಿದು ಬರುವ ಸಾರಾಂಶವೇನೆಂದರೆ– 'ರಾತ್ರ' ಎಂದರೆ ಜ್ಞಾನವೆಂದಾಗಿಯೂ, ಅಂತಹ ಜ್ಞಾನವು ಪರಮತತ್ತ್ವವನ್ನು, ಮುಕ್ತಿ, ಭುಕ್ತಿ, ಯೋಗವನ್ನು, ವಿಷಯ (ಸಂಸಾರ)–ಎನ್ನುವ ಐದು ತಪ್ಪುಗಳನ್ನು ಒಳಗೊಂಡಿರುವುದೆಂದೂ ಅದುವೆ 'ಪಾಂಚರಾತ್ರ'ವೆಂದು ವ್ಯವಹರಿಸಲ್ಪಡುತ್ತದೆಯೆಂದೂ ತಿಳಿದುಬರುತ್ತದೆ.

ಇಂತಹ ಪಾಂಚರಾತ್ರ ಮಹಾಂಬುಧಿಯಿಂದ ಉದ್ಭವಿಸಿದ ಶ್ರೀವೈಷ್ಣವ ತತ್ತ್ವ ಹಾಗೂ ಧರ್ಮಗಳು ಭರತ ಖಂಡದಲ್ಲಿ ಅನಾದಿ ಕಾಲದಿಂದಲೂ ಪ್ರಚಲಿತದಲ್ಲಿದೆ. ಇಂತಹ ಪ್ರಚಲಿತ ಸಂಪ್ರದಾಯಕ್ಕೆ ಶ್ರೀ ಮಹಾವಿಷ್ಣುವೆ ಉಪಾಸ್ಯ ದೈವವಾಗಿ, ಅಂತಹ ದೈವವನ್ನೇ ಪರತತ್ತ್ವವೆಂದು ಭಾವಿಸಿ, ಅಂತಹ ಮಹಾನ್ ಮಹಿಮ ಜಗನ್ನಾಥನನ್ನೆ ಅನನ್ಯ ಭಕ್ತಿಯಿಂದ ಆರಾಧಿಸುವವನೆ ಶ್ರೀವೈಷ್ಣವನು. ಸರ್ವಭೂತ ಸಮನ್ವತೆಯೇ, ಸಮಾನತೆಯೇ ಶ್ರೀವೈಷ್ಣವ ಧರ್ಮದ ಮುಖ್ಯ

ಲಕ್ಷಣ. ಆದುದರಿಂದಲೇ ಶ್ರೀವೈಷ್ಣವ ಧರ್ಮ (ತತ್ತ್ವ)ವು ಜಗದ್ವಂದ್ಯವಾಗಿದೆ.

ಭಾರತದಲ್ಲಿ, ಅದರಲ್ಲೂ ದಕ್ಷಿಣ ಭಾರತದಲ್ಲಿ ಉದಯಿಸಿದ ಇಂತಹ ಶ್ರೀವೈಷ್ಣವ ಧರ್ಮವನ್ನು ತಮ್ಮ ದಿವ್ಯ ಪ್ರಬಂಧಗಳಲ್ಲಿ ಆಳ್ವಾರರು ರಕ್ಷಿಸಿಟ್ಟರು.

ಆಳ್ವಾರರ ನಂತರ ಆಚಾರ್ಯ ಪರಂಪರೆಯಲ್ಲಿ ಮೊದಲಿಗರು ನಾಥಮುನಿಗಳು. ದ್ರಾವಿಡ ವೇದ ವೈಶಿಷ್ಟ್ಯವನ್ನು ಬಹಳ ಚೆನ್ನಾಗಿ ಅರಿತುಕೊಂಡು ಅದರಲ್ಲಿನ ಶ್ರೀವೈಷ್ಣವ ತತ್ತ್ವಗಳನ್ನು ಬಹಳವಾಗಿ ಪ್ರಚಾರ ಮಾಡಿದರು. ಇವರು ಭಕ್ತಿ ಪ್ರಧಾನವಾದ ಈ ಧರ್ಮಕ್ಕೆ ಅದರದ್ದೇ ಆದ ಮಹಾದ್ವಾರದ ಮುಖಾಂತರ ಎಲ್ಲರನ್ನೂ ಹೃದಯಾಂತರಾಳದಿಂದ ಸ್ವಾಗತಿಸಿ, ಅವರಿಗೆ ಪ್ರವೇಶಾವಕಾಶವನ್ನು ಕಲ್ಪಿಸಿದರು.

ನಾಥಮುನಿಗಳ ನಂತರ ಅವರ ಪೌತ್ರರಾದ ಯಾಮುನಾಚಾರ್ಯರು ನಮ್ಮಾಳ್ವಾರರ ದಿವ್ಯ ಪ್ರಬಂಧಗಳಲ್ಲಿ ನಿಕ್ಷಿಪ್ತವಾದ ಶ್ರೀವೈಷ್ಣವ ಧರ್ಮದಿಂದ ಪ್ರಭಾವಿತರಾಗಿ, ಆಳ್ವಾರರ ದಿವ್ಯ ಪ್ರಬಂಧಗಳನ್ನು ಅಧ್ಯಯನ ಮಾಡಿ, ಅವುಗಳ ಅಧ್ಯಾಪನದ ಮೂಲಕ ಅವುಗಳ ಸಾರವನ್ನು ಪ್ರಚಾರ ಮಾಡಿದುದೇ ಅಲ್ಲದೆ, ಆ ಧರ್ಮದ ಪ್ರತಿಪಾದನೆಗಾಗಿ ಕೆಲವು ಗ್ರಂಥಗಳನ್ನು ಗೀರ್ವಾಣ ಭಾಷೆಯಲ್ಲಿ ರಚಿಸಿದರು.

ಯಾಮುನಾಚಾರ್ಯರ ನಂತರ ಭಗವದ್ರಾಮಾನುಜರು ಶ್ರೀವೈಷ್ಣವ ಪೀಠಾಧಿಪತಿಗಳಾಗಿ, ಆಸೇತು ಹಿಮಾಚಲ ಪರ್ಯಂತ ಪಾದಯಾತ್ರೆ ಮಾಡಿ, ಶ್ರೀವೈಷ್ಣವ ಧರ್ಮಕ್ಕೆ ಒಂದು ಸುಂದರ ಚೌಕಟ್ಟು ನೀಡಿ, ಭಾರತಾದ್ಯಂತ ಅದರ ಪ್ರಚಾರಕ್ಕಾಗಿ ಶ್ರಮಿಸಿದರು. ಈ ಗುರಿಯನ್ನು ತಲುಪುವುದಕ್ಕಾಗಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರೂಪಿಸಿ, ಅದರ ಪ್ರತಿಪಾದನೆಗಾಗಿ ವೇದಾರ್ಥ ಸಂಗ್ರಹ, ಶ್ರೀಭಾಷ್ಯ, ಗೀತಾಭಾಷ್ಯಾದಿ ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿ, ಅವುಗಳಲ್ಲಿ ಶ್ರೀವೈಷ್ಣವ ಧರ್ಮವನ್ನು ಪ್ರತಿಷ್ಠಾಪಿಸಿದರು.

ಈ ರೀತಿಯಲ್ಲಿ ಶ್ರೀ ರಾಮಾನುಜರು ಈ ಧರ್ಮಕ್ಕೆ ವಿಶೇಷ ರೀತಿಯ ಪ್ರಚಾರ ನೀಡಿದುದೇ ಅಲ್ಲದೆ, ಅದರ ಪ್ರಚಾರಕ್ಕಾಗಿ ಎಪ್ಪತ್ನಾಲ್ಕು ಸಿಂಹಾಸನ (ಪೀಠಾಧಿಪತಿ)ಗಳನ್ನು ವ್ಯವಸ್ಥೆ ಮಾಡಿದರು. ಇವುಗಳಲ್ಲಿ ಎಂಟು ಸಿಂಹಾಸನಗಳು ಪ್ರಮುಖವಾದವುಗಳು. ಇವುಗಳಲ್ಲಿಯೂ ಆರು ಸನ್ಯಾಸ ಸಿಂಹಾಸನಗಳು, ಎರಡು ಗೃಹಸ್ಥ ಸಿಂಹಾಸನಗಳನ್ನಾಗಿ ಮಾಡಿದರು.

ಈ ರೀತಿಯಲ್ಲಿ ಭಗವದ್ರಾಮಾನುಜರಿಂದ ಬಹುವ್ಯಾಪ್ತಿ ಹೊಂದಿದ ಶ್ರೀವೈಷ್ಣವ ಧರ್ಮವು ಮುಮುಕ್ಷುಗಳಿಗೆ ಮಾರ್ಗದರ್ಶನ ನೀಡಿ, ವಿಸ್ತೃತ ಗೊಂಡಿದೆ. ಆದುದರಿಂದಲೇ ಶ್ರೀರಂಗದ ಶ್ರೀ ರಂಗನಾಥ ಸ್ವಾಮಿಯು "ಪರಮ ವೈದಿಕವಾದ ಶ್ರೀವೈಷ್ಣವ ಧರ್ಮವು 'ರಾಮಾನುಜ ಮತ'ವೆಂಬ ಹೆಸರಿನಿಂದ ಇನ್ನುಮುಂದೆ ವ್ಯವಹರಿಸಲ್ಪಡಲಿ" ಎಂಬ ಮಂಗಳಾಶಾಸನ ಮಾಡಿರುವುದರಿಂದ, ಆ ಧರ್ಮವು 'ರಾಮಾನುಜ ಮತ'ವೆಂದು ಹೆಸರು ಪಡೆದಿದೆ.

ಇಂತಹ ರಾಮಾನುಜ ಧರ್ಮದಿಂದ ಮಾಧ್ವ, ನಿಂಬಾರ್ಕ, ವಲ್ಲಭ, ರಮಾನಂದ, ಚೈತನ್ಯಾದಿ ಸಂಪ್ರದಾಯಗಳು ಪ್ರಭಾವಿತಗೊಂಡಿವೆ. ಇಂದು ಈ ರೀತಿಯಲ್ಲಿ ಈ ಧರ್ಮವು ವಿಶ್ವವ್ಯಾಪಿಯಾಗಿದೆ.

ವಿಷ್ಣುವೇ ಸರ್ವವ್ಯಾಪಿಯಾದ ದೈವ. ಇಂತಹ ದೈವದ ವೈಭವವನ್ನು ವಿವರಿಸುವ ವೇದ, ವೇದಾಂತ, ಇತಿಹಾಸ, ಪುರಾಣ, ಶಾಸ್ತ್ರಗಳನ್ನು ದಿವ್ಯ ಪ್ರಬಂಧಗಳಲ್ಲಿ ಸಮನ್ವಯಿಸಿ, ವಿಶ್ವಕಲ್ಯಾಣಕ್ಕಾಗಿ ನಮ್ಮ ಪೂರ್ವೀಕರಾದ ಆಚಾರ್ಯರಿಂದ ನಿರೂಪಿಸಲ್ಪಟ್ಟ ದರ್ಶನವೇ 'ಶ್ರೀವೈಷ್ಣವ ದರ್ಶನ'.

ಸೃಷ್ಟ್ಯಾರಂಭದಲ್ಲಿ ಶ್ರೀಮನ್ನಾರಾಯಣನು ಮೊಟ್ಟಮೊದಲಿನಲ್ಲಿ ಬ್ರಹ್ಮ ನನ್ನು ಸೃಷ್ಟಿಸಿ, ಆತನಿಗೆ ವೇದ, ಶಾಸ್ತ್ರಗಳನ್ನು ಬೋಧಿಸಿದನು. ತದನಂತರ ತಾನೇ ನರ-ನಾರಾಯಣ ರೂಪದಲ್ಲಿ ಶಿಷ್ಯ-ಆಚಾರ್ಯ ರೂಪದಲ್ಲಿ ಬದರಿಕಾಶ್ರಮ ದಲ್ಲಿ ಅವತರಿಸಿ, ಮಂತ್ರ-ಮಂತ್ರಾರ್ಥಗಳೊಂದಿಗೆ ಈ ದರ್ಶನದ ವಿಶೇಷಗಳನ್ನು ವಿವರಿಸಿ, ವಾಲ್ಮೀಕಿ-ವಸಿಷ್ಠ-ವ್ಯಾಸಾದಿ ಮಹರ್ಷಿಗಳ ಮುಖಾಂತರ ಆತನನು ಹರಡುವಂತೆ ಮಾಡಿದನು. ಪರವಾಸುದೇವನ ಆಜ್ಞೆಯಿಂದ ಅವತರಿಸಿದ ವಿಷ್ವ ಕ್ಸೇನ-ಶಠಕೋಪನಾಥಮುನಿ-ಯಾಮುನ-ರಾಮಾನುಜರಂತಹ ಪ್ರಮುಖರ ಸೂಕ್ತಿಗಳ ಮುಖಾಂತರ ಶ್ರೀವೈಷ್ಣವ ದರ್ಶನವು ಅಪ್ರತಿಹತವಾಗಿ ವ್ಯಾಪಿಸ ತೊಡಗಿತು.

ಜಗತ್‌ಪ್ರಳಯದೆಶೆಯಲ್ಲಿ ಶ್ರೀ ಪಾಂಚರಾತ್ರ ಶಾಸ್ತ್ರದ ವಿಧಾನಗಳ ಮುಖಾಂತರ ಸಪ್ತರ್ಷಿಗಳಿಂದ ಪೂಜಿಸಲ್ಪಟ್ಟಿದ್ದರ ಪರಿಣಾಮವಾಗಿ, ಶಾಸ್ತ್ರದ ಅನುಸಾರ, ಅದರ ಆಧಾರದ ಮೇಲೆ ರೂಪುಗೊಂಡ ಶ್ರೀವೈಷ್ಣವ ಸಂಪ್ರದಾಯ ಹಾಗೂ ದರ್ಶನಗಳು ಅತಿ ಪ್ರಾಚೀನವಾದುದೆಂದು ಸ್ಪಷ್ಟವಾಗುತ್ತದೆ.

ಶ್ರೀವೈಷ್ಣವ ದರ್ಶನದಲ್ಲಿನ ವಿಶೇಷಗಳು ಅನಂತವಾದವುಗಳು. ಈ ದರ್ಶನದಲ್ಲಿ ಪ್ರತಿಪಾದಿಸಲ್ಪಟ್ಟಿರುವವರು ಶ್ರೀಹರಿ-ಕಲ್ಯಾಣಮೂರ್ತಿ; ವಿಷ್ಣು ಪತ್ನಿ-ಶ್ರೀದೇವಿ ಎಂದು. ಇವರಿಬ್ಬರೂ ಆಕಾರಪ್ರಿಯ ಸಂಪನ್ನರು ಹಾಗೂ ಆದಿ ದಂಪತಿಗಳು. ಇಂತಹವರ ವೈಭವವನ್ನು ವಿವರಿಸುವ ವೇದ-ಪುರಾಣ-ಇತಿಹಾಸ ಗ್ರಂಥಗಳು ಪರಮ ಪವಿತ್ರವಾದವುಗಳು. ಇವುಗಳನ್ನು ಅಧ್ಯಯನ ಮಾಡಿ, ಪಾರಾಯಣ ಕ್ರಮದಲ್ಲಿ ಪಠಿಸುವುದು, ಕ್ರಮರೂಪದಲ್ಲಿ, ಅರ್ಚನೆಯ ಮುಖಾಂತರ, ನಿತ್ಯೋತ್ಸವ ಪೂಜಾದಿಗಳ ಸಹಿತ ಅವರ ಸೇವೆ ಮಾಡಿದಲ್ಲಿ ಲೋಕಕ್ಷೇಮವಾಗಿ ವಿಶ್ವಕಲ್ಯಾಣ ಉಂಟಾಗುವುದು. ಇಂತಹ ಮಾರ್ಗಗಳನ್ನು ವಿವರಿಸುವವರು ದರ್ಶನ ಪ್ರವರ್ತಕರು, ಪ್ರಚಾರಕರು ಎಂದೆನಿಸಿಕೊಳ್ಳುವವರನ್ನು ಸಂದರ್ಶಿಸುವುದೇ ಸೌಭಾಗ್ಯಕರವಾದುದು.

ಶ್ರೀವೈಷ್ಣವ ತತ್ತ್ವ ಪ್ರತಿಪಾದಕಗಳಾದ ವೇದ-ವೇದಾಂತ ಇತ್ಯಾದಿಗಳು ಮಾನವ ಕೋಟಿಯ ಇಹಪರ ಶ್ರೇಯೋದಾಯಕಗಳಾಗಿ ಆಧ್ಯಾತ್ಮಿಕ ವಿಷಯಗಳು, ಐಹಿಕಾಮುಷ್ಮಿಕ ಕಲ್ಯಾಣಕರಗಳಾದ ಪ್ರವರ್ತನೆಗಳನ್ನು ವಿವರಿಸುತ್ತವೆ. ವೇದಗಳು ತ್ರಿಗುಣಾತ್ಮಕಗಳಾದರೂ ಶುದ್ಧ ಸತ್ತ್ವಮಾರ್ಗವನ್ನು ಪ್ರತ್ಯೇಕವಾಗಿ ನೋಡಿ, ಅಮೃತಪ್ರಾಯವಾದವುಗಳನ್ನು ನೀಡುತ್ತವೆ.

ಶ್ರೀಹರಿಯು ಸರ್ವವಿಧದಲ್ಲಿಯೂ ಜಗತ್ತಿನ ಕ್ಷೇಮವನ್ನು ಕೋರಿ, ಅನುಗ್ರಹಿಸುವವನು ಆದುದರಿಂದಲೇ ವ್ಯಾಸ, ವಾಲ್ಮೀಕಿಗಳಿಂದ ಇತಿಹಾಸಗಳ ಮುಖಾಂತರ ಭಾಗವತೋತ್ತಮರ ಪ್ರವರ್ತನೆ, ಭಗವದವತಾರ ರಹಸ್ಯ ಜ್ಞಾನವನ್ನು ಜಗತ್ತಿನಲ್ಲೆಲ್ಲ ಹರಡುವಂತೆ ಮಾಡಿದನು. ಪಿತೃಭಕ್ತಿ ಮುಂತಾದ ಆದರ್ಶಪ್ರಾಯವಾದ ಕಲ್ಯಾಣಗುಣಗಳನ್ನು, ಸೀತಾದೇವಿಯ ಪರಮ (ಪತಿ) ಭಕ್ತಿ, ಪುರುಷಾಕಾರ, ಭರತ ಲಕ್ಷ್ಮಣರ ಪಾರತಂತ್ರ್ಯ, ಶೇಷತ್ವ, ತ್ಯಾಗನಿರತತೆಯನ್ನು, ಶತ್ರುಘ್ನನ ಷಡ್ವರ್ಗ ಜಯ-ಇತ್ಯಾದಿ ಪ್ರವರ್ತನೆಗಳು ಎಲ್ಲೆಡೆ ಆದರ್ಶಪ್ರಾಯವೆ! ಗುಹ, ಶಬರಿ, ವಿಭೀಷಣ, ಆಂಜನೇಯ, ಜಟಾಯು ಇತ್ಯಾದಿಯವರುಗಳ ಪ್ರವರ್ತನೆಗಳು ಸರ್ವರಿಗೂ ಮಾನ್ಯ. ದ್ರೌಪತಿಯ ಕೃಷ್ಣನಲ್ಲಿನ ಶರಣಾಗತಿ, ಶ್ರೀಕೃಷ್ಣನು ಪಾಂಡವರಿಗೆ ಭಕ್ತಪರಾಧೀನನಾದುದು ಮಾನವ ಕುಲಕ್ಕೆ ಆದರ್ಶಪ್ರಾಯ. ಪ್ರಹ್ಲಾದನ ನೈತಿಕ ಪ್ರವರ್ತನೆ, ವಿಷ್ಣುವಿನ ನಿರಂತರ ಧ್ಯಾನ, ಆತನ

ಪಾದಾರವಿಂದಗಳ ದಿವ್ಯ ಸ್ಮರಣೆ-ಎಲ್ಲರ ಜೀವನಧರ್ಮವಾಗಬೇಕಾದುದು ಅತ್ಯಗತ್ಯ. ಇದೇ ರೀತಿಯಲ್ಲಿ ನಾರದ, ಧೃವ, ಅಂಬರೀಷ, ರುಕ್ಮಾಂಗಾದಿ ಭಗವದ್ಭಕ್ತರ ಚರಿತ್ರೆಗಳು ಪಠನ ಯೋಗ್ಯವಾದವುಗಳು. ಅಂತೆಯೇ ಭಗವದ್ಗೀತೆಯು 'ಅಭಯಂ ಸತ್ತ್ವಸಂಶುದ್ಧಿಃ' ಎಂಬುದರಿಂದ ಪ್ರಾರಂಭವಾಗಿ ಲೋಕೋಜೀವನಕರವಾದ ದೈವೀ ಸಂಪತ್ತನ್ನು ವಿವರಿಸುತ್ತದೆ. ಸಾತ್ವಿಕ ಕ್ರಿಯೆಗಳು, ಧರ್ಮಗಳು, ಜ್ಞಾನಗಳು, ಫಲಗಳನ್ನು ಇದು ತಿಳಿಸುತ್ತದೆ.

# 1. ವೇದಗಳಲ್ಲಿ ವೈಷ್ಣವತ್ವ

ವೇದಗಳ ಕಾಲದಿಂದಲೂ ವಿಷ್ಣುಪೂಜೆ ಹಾಗೂ ವೈಷ್ಣವ ಮತವು ಪ್ರಚಾರದಲ್ಲಿತ್ತು ಎಂಬುದಕ್ಕೆ ಅನೇಕ ನಿದರ್ಶನಗಳಿವೆ. ವೇದಗಳು ಇವಕ್ಕೆ ಮುಖ್ಯ ಸಾಕ್ಷ್ಯಾಧಾರಗಳಾಗಿವೆ.

ಅ) ಸಂಹಿತೆಗಳು :- 'ಶೃಣೋತು ಮಿತ್ರೋ ಅರ್ಯಮಾಭಗೋಃ' ಇತ್ಯಾದಿಗಳು ವೇದಗಳಲ್ಲಿ ಭಗವದ್ದೇವತಾ ಹೆಸರುಗಳು ಕಾಣಿಸುತ್ತವೆ. ಈ ಭಗವದ್ದೇವತೆಯು ಶುಭಾಶೀರ್ವಚನ ಪ್ರಧಾನವಾಗಿ ವ್ಯವಹೃತವಾಗುತ್ತಿದ್ದಿತು. ಈ 'ಭಗ' ಶಬ್ದದಲ್ಲಿ 'ಶ್ರೇಯಶ್ಶಕ್ತಿ' ಎನ್ನುವ ಭಾವವು ಇದ್ದು, ಕ್ರಮಶಃ ಅಂತಹ ಶಕ್ತಿ ಇರುವವನು 'ಭಗವಾನ'ನು ಎಂದು ತಿಳಿಯಲಾಯಿತು. ಭಗವದಾರಾಧನೆಯೊಂದಿಗೆ ಕೂಡಿದ ಮತವೇ 'ಭಾಗವತ ಮತ' ಎಂಬ ಹೆಸರು ಪಡೆಯಿತು. ಅಂತಹ ಭಾಗವತ ಮತವೇ ಮುಂದೆ (ಶ್ರೀ) ವೈಷ್ಣವ ಮತವಾಯಿತು.

ಭಾಗವತರು ವಿಷ್ಣುವನ್ನು ಭಗವಂತನನ್ನಾಗಿ ಗ್ರಹಿಸಿದರು. ಈ ಭಾಗವತ ಮತವೇ ಸಾತ್ತ್ವತ (ಸಾತ್ತ್ವಿಕ) ಮತವೆಂಬ ಹೆಸರನ್ನು ಪಡೆಯಿತು. 'ಭಗ' ಶಬ್ದದಲ್ಲಿರುವ 'ಭ' ಕಾರಕ್ಕೆ 'ಆಧಾರವಾದುದು' ಎಂಬ ಅರ್ಥವಿದೆ. ವಾಸುದೇವ ಶಬ್ದವು ಕೂಡ ಜಗತ್ತಿಗೆ ಆಶ್ರಯದಾತನಾದವನು ಎಂಬ ಅರ್ಥವನ್ನು ಕೊಡುತ್ತದೆ. ಆಹಾರ ರೂಪದಲ್ಲಿ ಆವನು ಸರ್ವಪ್ರಾಣಿಗತನು ಎಂಬರ್ಥವೂ ಆಗುತ್ತದೆ. ಆದುದರಿಂದ ಭಾಗವತ ಮತವೇ ವಾಸುದೇವ ಮತವಾಗಿದೆ. ಈ ವಾಸುದೇವ ಮತವೇ ವೈಷ್ಣವ ಮತವಾಗಿದೆ. ಈ ವೈಷ್ಣವ ಮತವೇ ಆಳ್ವಾರಾಚಾರ್ಯರ ನಂತರ ಶ್ರೀವೈಷ್ಣವ ಮತ (ಸಂಪ್ರದಾಯ)ವಾಯಿತು.

ವಿಷ್ಣುಪೂಜೆ ಮಾಡುವವರದ್ದೇ ಒಂದು ವರ್ಗ (ಗುಂಪು) ಇತ್ತೆಂದು ವೇದಗಳು ತಿಳಿಸುತ್ತವೆ. ಕೆಲವು ಕಡೆಗಳಲ್ಲಿ ವಿಷ್ಣುವೇ ದೈವವೆಂದು ಹೇಳಲಾಗಿದೆ. ಆತನು ಚೈತನ್ಯರೂಪನು. ಆತನನ್ನು 'ಸಿಪಿವಿಷ್ಟ'ನೆಂದು ವ್ಯವಹರಿಸಿದರು. ಹೀಗೆಂದರೆ 'ಕಿರಣಗಳನ್ನು ಧರಿಸಿರುವವನು' ಎಂಬರ್ಥ. ಅಂದರೆ ವಿಷ್ಣುವು ತನ್ನ ಕಿರಣಗಳೊಂದಿಗೆ ಅವತರಿಸುತ್ತಾನೆ ಎಂದಾಗುತ್ತದೆ. ಈ ಕಾರಣದಿಂದಲೇ ವಿಷ್ಣುವನ್ನು ಸೂರ್ಯನ ಅನೇಕ ರೂಪಗಳಲ್ಲಿ ಒಂದೆಂದು ಭಾವಿಸಲಾಯಿತು. ವಿಷ್ಣುಚಕ್ರವನ್ನು ಸೂರ್ಯಚಕ್ರವೆಂದಾಗಿ ವರ್ಣಿಸಲಾಯಿತು. ಸೂರ್ಯನನ್ನು ರೆಕ್ಕೆಗಳನ್ನು ಹೊಂದಿರುವ ದೇವತಾ ಪಕ್ಷಿ ಎಂದು ಸಂಭೋದಿಸಲಾಯಿತು. ವಿಷ್ಣು ವಾಹನವು ಗರುಡನಾದುದರಿಂದ ವಿಷ್ಣುವಾಧಿಕ್ಯವು ಹರಡಿದುದು ಗಮನಾರ್ಹವಾದುದು. ಅಂತೆಯೇ ಈತನನ್ನು ಆದಿತ್ಯನೊಂದಿಗೆ ಸೇರಿಸಿ ವರ್ಣಿಸಲು ಪ್ರಾರಂಭಿಸಿದರು. ವಿಷ್ಣುವನ್ನು ಗೋರಕ್ಷಕನನ್ನಾಗಿಯೂ ಚಿತ್ರಿಸಲಾಯಿತು. ವಿಷ್ಣುವಿನ ಪ್ರಕಟಣೆಯಿಂದ 'ಕುಚರ' ಶಬ್ದವನ್ನು ಉಪಯೋಗಿಸಲು ಪ್ರಾರಂಭಿಸಲಾಯಿತು. ಈ ಕುಚರ ಶಬ್ದದಿಂದ ಹುಟ್ಟಿದುದೇ ಕೃಷ್ಣ ಎನ್ನುವ ಶಬ್ದ. ಈ ಕೃಷ್ಣನೇ ವಿಷ್ಣು. ಭೂಮಿಯ ಮೇಲೆ ಅವತಾರ ಮಾಡಿದುದರಿಂದ ಕೃಷ್ಣ ಎನ್ನುವ ಹೆಸರು ಬಂದಿತು. ಆದುದರಿಂದಲೇ ವಿಷ್ಣುವು ಪ್ರಾಣಕೋಟಿಯ ರಕ್ಷಕನಾದನು. 'ವಸಂತಿ ಅಸ್ಮಿನ್ನಿತಿ–ವಾಸುದೇವಃ', 'ಜಗತಿ ವಸತಿ ಆಯಮಿತಿ' ಎಂದಿದೆ.

ಋಗ್ವೇದದಲ್ಲಿ 'ಇದಂ ವಿಷ್ಣುರ್ವಿಚಕ್ರಮೇ–ತ್ರೇಧಾ ನಿದದೇ ಪದಮ್', 'ತ್ರೀಣಿ ಪ್ರದಾ ವಿಚಕ್ರಮೇ ವಿಷ್ಣುರ್ಗೋಪಾದೇಭ್ಯಃ ಎಂಬ ಮಂತ್ರಗಳಿವೆ. ಈ ಮಂತ್ರಗಳು ವಿಷ್ಣು ಪ್ರಶಂಸೆಯೊಂದಿಗೆ ಆತನ ತ್ರಿವಿಕ್ರಮತ್ವವನ್ನು ಸೂಚಿಸುತ್ತವೆ...'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂ ತಮಾಪ್'.

ಋಕ್ ಸಂಹಿತೆಯಲ್ಲಿ ವಿಷ್ಣು ವರ್ಣನೆಗಳು ಅನೇಕವಿವೆ. ಮೇಲೆ ತಿಳಿಸಿರುವ ಋಗ್ವೇದದ ಪ್ರಶಂಸೆಗಳು ವಿಷ್ಣುವಿಗೆ ನೀಡಲಾಗಿರುವ ಪ್ರಾಚೀನತ್ವವನ್ನು, ದೈವತ್ವವನ್ನು ಹಾಗೂ ಶಕ್ತಿ ಸಾಮರ್ಥ್ಯಗಳನ್ನು ಗ್ರಹಿಸುವುದಕ್ಕೆ ಉಪಯುಕ್ತವಾದ ಅಂಶಗಳಾಗಿವೆ.

'ತತ್ ಕೇಶವಾಯ ವಿದ್ಮಹೇ ನಾರಾಯಣಾಯ ಧೀಮಹಿ | ತನ್ನೋ

ವಿಷ್ಣುಃ ಪ್ರಚೋದಯಾತ್' ಎನ್ನುವುದು ವಿಷ್ಣು ಗಾಯತ್ರಿ ಎನ್ನುವ ಹೆಸರಿನಲ್ಲಿ ಋಗ್ವೇದದಲ್ಲಿದೆ.

ಪಾಂಚರಾತ್ರ ವಾಙ್ಮಯವನ್ನು ಸಂಹಿತೆಗಳಾಗಿ ವಿಭಾಗಿಸಲ್ಪಟ್ಟಿದೆ. ಈ ಸಂಹಿತೆಗಳು ಅಷ್ಟೋತ್ತರ ಶತ (108) ಸಂಖ್ಯೆಯಲ್ಲಿವೆ. ಇವುಗಳಲ್ಲಿ ಸಾತ್ತ್ವತ ಸಂಹಿತ, ಪರಮ ಸಂಹಿತ, ಪಾಷ್ಕರ ಸಂಹಿತ, ಈಶ್ವರ ಸಂಹಿತ, ಶ್ರೀಮನ್ನಾರಾಯಣ ಸಂಹಿತ, ಹಯಶೀರ್ಷ ಸಂಹಿತ, ಪಾರಮೇಶ್ವರ ಸಂಹಿತ, ವಿಷ್ಣು ತತ್ತ್ವ ಸಂಹಿತ, ಪರಾಶರ ಸಂಹಿತ, ಬೃಹದ್ಬ್ರಹ್ಮ ಸಂಹಿತ, ಜಯಾಖ್ಯ ಸಂಹಿತ, ಅಹಿರ್ಬ್ಬುಧ್ನ್ಯ ಸಂಹಿತ, ಖಗೇಶ್ವರ ಸಂಹಿತ (ವಿಷ್ಣು ತಿಲಕ), ಪುರುಷೋತ್ತಮ ಸಂಹಿತೆಗಳು ಮುಖ್ಯವಾದವು.

ಈ ಎಲ್ಲ ಸಂಹಿತೆಗಳಲ್ಲಿ ಜ್ಞಾನ, ಯೋಗ, ಕ್ರಿಯಾ, ಚರ್ಯ ಎನ್ನುವ ನಾಲ್ಕು ವಿಷಯಗಳನ್ನು ಮುಖ್ಯವಾಗಿ ಪ್ರಸ್ತಾಪಿಸಲಾಗಿದೆ. ಅಲ್ಲದೆ ಇವುಗಳಲ್ಲಿ ಅಭಿಗಮನ, ಉಪಾದಾನ, ಇಜ್ಯ, ಸ್ವಾಧ್ಯಾಯ ಹಾಗೂ ಯೋಗ ಎನ್ನುವ ಐದು (ಪಂಚ) ವಿಧ ಕ್ರಿಯೆಗಳನ್ನು ಭಗವತ್ ಕಟಾಕ್ಷ ಪ್ರಾಪ್ತಿಗಾಗಿ ಅತ್ಯಂತ ಉಪಯುಕ್ತವಾದವುಗಳೆಂದು ವ್ಯಕ್ತಪಡಿಸಲಾಗಿದೆ. ಇದು ಶ್ರೀವೈಷ್ಣವ ಮತಕ್ಕೆ ಅದರ ಬೇರೆ ಬೇರೆ ಆಚಾರ್ಯರು ಅನುಗುಣವಾದುದೆಂದು ನಿರೂಪಿಸುವುದರಲ್ಲಿ ಬಹಳವಾಗಿ ಪರಿಶ್ರಮ ವಹಿಸಿರುವರು. ಶ್ರೀಮದ್ರಾಮಾನುಜರು ತಮ್ಮ ಬ್ರಹ್ಮಸೂತ್ರಗಳನ್ನು ಕುರಿತಾದ ಶ್ರೀ ಭಾಷ್ಯದ ಉತ್ಪತ್ತಿ ಸಂಭವಾಧಿಕರಣದಲ್ಲಿ (2-2-42) ಈ ಸಂಹಿತೆ (ಪಾಂಚರಾತ್ರವನ್ನು) ಗಳನ್ನು ಬಹಳವಾಗಿ ಪ್ರಸ್ತಾಪಿಸಿದ್ದಾರೆ. ಇದೇ ಅಲ್ಲದೆ ಸಾತ್ತ್ವತ, ಪರಮ, ಪೌಷ್ಕರಾದಿ ಸಂಹಿತೆಗಳನ್ನು ಪ್ರಮಾಣ ಗ್ರಂಥಗಳಾಗಿ ತೆಗೆದುಕೊಂಡು, ತಮ್ಮ ಶ್ರೀಭಾಷ್ಯದ ರಚನೆಯನ್ನು ಪೂರ್ಣಗೊಳಿಸಿದರು. ಶ್ರೀ ರಾಮಾನುಜರಿಗಿಂತ ಮುಂಚಿನವರಾದ ಶ್ರೀ ಯಾಮುನಾಚಾರ್ಯರು ಶ್ರೀ ಪಾಂಚರಾತ್ರ್ಯ, ಪ್ರಾಶಸ್ತ್ಯವನ್ನು, ಪ್ರಾಮಾಣ್ಯವನ್ನು ತಾವು ರಚಿಸಿದ 'ಆಗಮ ಪ್ರಾಮಾಣ್ಯ' ಎನ್ನುವ ಗ್ರಂಥದಲ್ಲಿ ವಿವರಿಸಿ, ಈಶ್ವರ, ಪರಮ, ಶಾಂಡಿಲ್ಯ, ಸನತ್ಕುಮಾರ, ಪದ್ಮೋದ್ಭವಾದಿ ಸಂಹಿತೆಗಳನ್ನು ಪ್ರಮಾಣ ಗ್ರಂಥಗಳಾಗಿ ಸ್ವೀಕರಿಸಿದ್ದಾರೆ.

ಶ್ರೀ ರಾಮಾನುಜರ ನಂತರದಲ್ಲಿ ಶ್ರೀ ವೇದಾಂತ ದೇಶಿಕರು ಜಯಾಖ್ಯ, ಪಾರಮೇಶ್ವರ, ಪೌಷ್ಕರ, ನಾರದೀಯ, ಸಾತ್ತ್ವತ, ಅಹಿರ್ಬುಧ್ನ್ಯ,

ಭಾರ್ಗವ, ವಿಹಗೇಂದ್ರ, ಹಯಗ್ರೀವಾದಿ ಸಂಹಿತೆಗಳನ್ನು ಪ್ರಮಾಣ ಗ್ರಂಥಗಳಾಗಿ ಉಪಯೋಗಿಸಿಕೊಂಡು, 'ಪಾಂಚರಾತ್ರ ರಕ್ಷೆ' ಎನ್ನುವ ಹೆಸರಿನಲ್ಲಿ ಒಂದು ಗ್ರಂಥವನ್ನು ರಚಿಸಿದರು. ಅದರಲ್ಲಿ ಇವರು ಸಂಹಿತೆಗಳ ವೈಶಿಷ್ಟ್ಯವನ್ನು ಬಹಳವಾಗಿ ಪ್ರಶಂಸಿಸಿದ್ದಾರೆ.

ಅ) ಬ್ರಾಹ್ಮಣಗಳಲ್ಲಿ ವೈಷ್ಣವತ್ವ :

ಐತ್ತರೇಯ ಬ್ರಾಹ್ಮಣದಲ್ಲಿ ವಿಷ್ಣುವು ಇಂದ್ರನಿಗೆ ಮಿತ್ರನಾಗಿದ್ದು, ಯುದ್ಧದಲ್ಲಿ ಸಹಕರಿಸಿದ್ದನೆಂದು ತಿಳಿಸಲಾಗಿದೆ—'ಅಗ್ನಿರ್ವೈ ದೇವಾನಾಮವಮಃ ವಿಷ್ಣುಃ ಪ್ರಥಮಃ ತದಂತರೇಣ ಸರ್ವೇ ಅನ್ಯಾ ದೇವತಾಃ'. ಅಂದರೆ ವಿಷ್ಣುವು ಅಧಿಕನು. ನಂತರದಲ್ಲೆ ಅಗ್ನಿಯೊಂದಿಗೆ ಇತರೇ ದೇವತೆಗಳು–ಎಂಬುದು ಅರ್ಥ.

ಶತಪಥ ಬ್ರಾಹ್ಮಣದಲ್ಲಿ ವಿಷ್ಣುವು ಸರ್ವದೇವತಾಧಿಕ್ಯತೆಯನ್ನು ಹೊಂದಿದ್ದನೆಂದು ತಿಳಿದುಬರುತ್ತದೆ. ಇದರಲ್ಲಿ 'ವಾಮನ' ಪ್ರಶಂಸೆಯೂ ಇದೆ. ಈತನ ತ್ರಿವಿಕ್ರಮತ್ವವನ್ನು ಅನೇಕ ರೀತಿಗಳಲ್ಲಿ ವಿವರಿಸಲ್ಪಟ್ಟಿದೆ. ಒಂದೆಡೆ ಆತನನ್ನು ಸೂರ್ಯೋದಯ–ಮಧ್ಯಾಹ್ನ–ಅಸ್ತಮಾನ ರೂಪಗಳಲ್ಲಿ ವರ್ಣಿಸಲಾಗಿದೆ. ಅಂತೆಯೇ ಮತ್ತೊಂದೆಡೆ ಪೃಥ್ವಿಯ ಮೇಲೆ, ಅಗ್ನಿಯ ಮೇಲೆ, ಪರಿಸರದ ಮೇಲೆ ಬೆಳಕಾಗಿ, ಆಕಾಶದಲ್ಲಿ ಸೂರ್ಯನಾಗಿ ಬೆಳಗುವ ತ್ರಿವಿಕ್ರಮನೆಂದು ಈತನನ್ನು ವರ್ಣಿಸಲಾಗಿದೆ. ದೇವತೆಗಳನ್ನು ಸ್ವರ್ಗವಾಸಿಗಳು, ರೋದಸಿ ಅಧಿಪತಿಗಳು, ಭೂದೇವತೆಗಳು ಎಂದು ಮೂರು ಭಾಗವಾಗಿ ಯಾಸ್ಕನು ತನ್ನ 'ನಿರುಕ್ತಿ' ಗ್ರಂಥದಲ್ಲಿ ವಿಂಗಡಿಸುತ್ತಾನೆ. ಈ ಮೂರು ವಿಧಗಳ ಸಮಾಹಾರವೇ ತ್ರಿವಿಕ್ರಮತ್ವ. ಇದೇ ಸರ್ವದೇವತಾನೇಕ ಐಕ್ಯಮತ್ಯ ಸೂಚನೆ.

ಬಹು ಮುಖ್ಯ ಉಪನಿಷತ್ತುಗಳಲ್ಲಿ ಬೃಹದಾರಣ್ಯಕವು ನಿಷ್ಠಾವಂತಿಕೆಯ ಆಧಿಕ್ಯವನ್ನು ವಿವರಿಸುತ್ತದೆ. ಸ್ವರ್ಣದ್ವಾರಕ್ಕೆ ವಿಷ್ಣುವು ಪ್ರಧಾನನೆಂದೂ, ಗತಿಸಿದವರ ನಿವಾಸಕ್ಕೆ 'ವಿಷ್ಣು ಪದ'ವೆಂದು ಇದರಲ್ಲಿ ವಿವರಿಸಲ್ಪಟ್ಟಿದೆ. ಮೈತ್ರೇಯೋಪನಿಷತ್ತಿನಲ್ಲಿ ವಿಷ್ಣು ಪದದಲ್ಲಿ ಸರ್ವ ಪುಣ್ಯಕೋಟಿಯು ವಿಷ್ಣುವಿಗೆ ಆಹಾರವಾಗಿರುತ್ತದೆ ಎಂದು ವರ್ಣಿಸಲಾಗಿದೆ—'ನಾವೈಷಾ ತನೂಃ ಭಗವತೋ ವಿಷ್ಣೋಃ ಯದಿದಮನ್ನಃ'. ತೈತ್ತರೀಯಾರಣ್ಯಕದಲ್ಲಿ 'ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹೀ | ತನ್ನೋ ವಿಷ್ಣು ಪ್ರಚೋದಯಾತ್ |' ಎನ್ನುವುದನ್ನು ವಿಷ್ಣುಗಾಯತ್ರಿಯಾಗಿ ಹೇಳಲ್ಪಟ್ಟಿದೆ. ವಿಷ್ಣು

ಗಾಯತ್ರಿಯಾಗಿ ಹೊಂದಿದ ಬದಲಾವಣೆ ಇದು.

ಕಠೋಪನಿಷತ್ತಿನಲ್ಲಿ ಆತ್ಮಜ್ಞಾನಾಭಿವೃದ್ಧಿಯು ವಿಷ್ಣುವಿನ ಪರಮಪದಕ್ಕೆ ಮಾರ್ಗಸೂಚಿಯೆಂದು ಹೇಳಲ್ಪಟ್ಟಿದೆ—ವಿಜ್ಞಾನ ಸಾರಥಿರ್ಯಸ್ತು—ಮನಃ ಪ್ರಗಹನಾನ್ನರಃ । ಸಾಧ್ವನಃ ಪಾರಮಾಪ್ನೋತಿ-ತದ್ವಿಷ್ಣೋಃ ಪರಮಂ ಪದಮ್॥

ಇ) ಉಪನಿಷತ್ತುಗಳಲ್ಲಿ ವೈಷ್ಣವತ್ವ :

ವಿಷ್ಣುವಿಗೆ ಇರುವ ಎರಡು ವಿಶಿಷ್ಟ ಗುಣಗಳನ್ನು ಸಂಹಿತೆಗಳು ವಿವರಿಸುತ್ತವೆ—ಆತನಿಗೆ ತನ್ನ ಆಶ್ರಿತರನ್ನು ರಕ್ಷಿಸುವುದು ಹಾಗೂ ಹಾಗೆ ರಕ್ಷಿಸುವುದರಲ್ಲಿ ಆತನಿಗೆ ಇರುವ ಆತುರ, ಕಾತುರಗಳು. ಇಂತಹ ವಿಷ್ಣುವಿನ ಹೆಸರಿನಲ್ಲಿ ಮಾಡುವ ಯಜ್ಞವು ಸಮಸ್ತ ಇಷ್ಟ ಕಾಮಾರ್ಥಗಳು ಸಫಲವಾಗಲು ಇವು ಸಹಕಾರಿಯಾಗುತ್ತವೆ ಎಂದು ಉಪನಿಷತ್ತುಗಳು ತಿಳಿಸುತ್ತವೆ. ಈ ರೀತಿಯಲ್ಲಿ ವೇದಗಳು, ಬ್ರಾಹ್ಮಣಗಳು, ಉಪನಿಷತ್ತುಗಳು ಹಾಗೂ ಸಂಹಿತೆಗಳಲ್ಲಿ ಅನುಸ್ಯೂತವಾಗಿ ವರ್ಣಿಸಲ್ಪಟ್ಟಿರುವ ವಿಷ್ಣುವು, ವೈಷ್ಣವತ್ವವು, ವಿಷ್ಣುವಿನ ಆರಾಧನೆಗಳು ಅನಾದಿಕಾಲದಿಂದ ಇರುವಂತಹವುಗಳು ಎಂಬುದನ್ನು ಪ್ರಮಾಣ ಪೂರ್ವಕವಾಗಿ ವಿವರಿಸುತ್ತದೆ.

## 2) ಇತಿಹಾಸದಲ್ಲಿ ವೈಷ್ಣವತ್ವ

ಇತಿಹಾಸ ಎಂದರೆ ರಾಮಾಯಣ, ಮಹಾಭಾರತಗಳು ಎಂಬುದು ಹಿಂದಿನ ಅರ್ಥ. ಈ ಎರಡೂ ಮಹಾಕಾವ್ಯಗಳಲ್ಲಿ ಶ್ರೀವೈಷ್ಣವತತ್ತ್ವವು ಅನೇಕ ಕಡೆಗಳಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ವಿವರಿಸಲ್ಪಟ್ಟಿವೆ.

ವೇದಗಳ ನಂತರ ಇತಿಹಾಸಗಳೆಂದು ಕರೆಯಲ್ಪಡುವ ರಾಮಾಯಣವು ಪ್ರಮಾಣ ಗ್ರಂಥವಾಗಿದೆ. ಇದರಲ್ಲಿ ವಿಷ್ಣುವಿನ ಅವತಾರಗಳಾದ ಅಂದು ಪ್ರಸಿದ್ಧವಾದ ದಶಾವತಾರಗಳನ್ನು ಕುರಿತು ವಿವರವಾದ ವಿವರಗಳನ್ನು ನೀಡಲಾಗಿದೆ. ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆಯೇ ಪ್ರಧಾನಾಂಶಗಳಾಗಿ, ಆ ಕಾರ್ಯಾರ್ಥವಾಗಿಯೇ ಭಗವಂತನು ಹೊಂದುವ ರೂಪವೇ ಅವತಾರ. ರಾಮಾಯಣದ ಗ್ರಂಥದ ಪ್ರಯೋಜನವು ರಾವಣಾಸುರ ಸಂಹಾರವೇನೇ ! ಶ್ರೀರಾಮನು ವಿಷ್ಣುವಿನ ಅವತಾರವಾದುದರಿಂದ ವಿಷ್ಣು ಪ್ರಾಧಾನ್ಯತೆಯ ಪ್ರತಿಪಾದಿತ ಗ್ರಂಥವಾಯಿತು. ಇದಕ್ಕೆ ಸಂಬಂಧಪಡುವ ಅಂಶಗಳು ಅನೇಕ ಕಡೆಗಳಲ್ಲಿ ಸ್ಪಷ್ಟ

ವಾಗಿದೆ. ಪುತ್ರಕಾಮೇಷ್ಟಿಯಾಗದ ಸಂದರ್ಭದಲ್ಲಿ, ವಿಷ್ಣುವು ದೇವತೆಗಳಿಗೆ ವರವನ್ನು ನೀಡಿದ ಸಂದರ್ಭದಲ್ಲಿ, ಶ್ರೀರಾಮನು ಜಟಾಯುವಿಗೆ ಮೋಕ್ಷವನ್ನು ನೀಡುವಾಗ, ರಾವಣ ಸಂಹಾರದ ನಂತರ ಆತನನ್ನು ಬ್ರಹ್ಮಾದಿಗಳು ಸ್ತುತಿಸುವ ಸಂದರ್ಭಗಳಲ್ಲಿ ವಾಲ್ಮೀಕಿಯು ಈ ವಿಚಾರವನ್ನು ಸೂಚಿಸಿದ್ದಾನೆ. ಇಷ್ಟೇ ಅಲ್ಲದೆ ಉತ್ತರ ಕಾಂಡದಲ್ಲಿಯೂ ಈ ಅಂಶವು ವಿಪುಲವಾಗಿ ವಿಸ್ತರಿಸಲ್ಪಟ್ಟಿದೆ.

ಮಹಾಭಾರತವು ಪೂರ್ತಿಯಾಗಿ ಕೃಷ್ಣ ಮಹಿಮೆ ಹಾಗೂ ಕೃಷ್ಣಾವತಾರಗಳ ಮಹಿಮೆಯನ್ನು ವಿವರಿಸುವ ಕೃತಿಯಾಗಿದೆ.

ಕೃಷ್ಣಾವತಾರದ ತತ್ತ್ವದ ಮಹತ್ವ, ಭಗವಾನ್ ಮಾಹಾತ್ಮ್ಯ, ಸರ್ವಾಂತರ್ಯಾಮಿಯಾದ ವಾಸುದೇವ (ವಿಷ್ಣು) ತತ್ತ್ವವನ್ನು ಪ್ರಸಾರ ಮಾಡುವ ಮಹತ್ವದ ಗ್ರಂಥವಾಗಿದೆ. ಇದರಲ್ಲಿನ ಶಾಂತಿ ಹಾಗೂ ಅಶ್ವಮೇಧ ಪರ್ವಗಳು ವಿಷ್ಣು ಪ್ರಧಾನತ್ವವನ್ನು ಪ್ರಶಂಸೆ ಮಾಡುವ ಪರ್ವಗಳಾಗಿವೆ. 'ಭಗವಾನ್ ವಾಸುದೇವೋऽತ್ರ ಕೀರ್ತ್ಯತೇऽತ್ರ ಸನಾತನಃ ಎಂದು ಆತನನ್ನು ಕುರಿತು ವಿವರಿಸಲಾಗಿದೆ.

'ನಾರಾಯಣಂ ನಮಸ್ಕೃತ್ಯ'–ಎಂದು ಪ್ರಾರಂಭಿಸುವ ವಿವರಣೆಯು ಶಾಂತಿಪರ್ವದಲ್ಲಿದ್ದು, ಅದು 'ಪಾಂಚರಾತ್ರ ಪ್ರಕರಣ'ಕ್ಕೆ ವ್ಯಾಖ್ಯಾನವಿರುವಂತಿದೆ. ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಆಧಾರವಾಗಿರುವವುಗಳಲ್ಲಿ ಪಾಂಚರಾತ್ರವೂ ಒಂದು. ವೇದಗಳ ಕಾಲದಿಂದಲೂ ಮೂಲಾಧಾರವಾಗಿದ್ದು, ಅದಕ್ಕೆ ಬೀಜಪ್ರಾಯವಾಗಿರುವ ಪಾಂಚರಾತ್ರವು ಈ ನಾರಾಯಣಿಯೊಂದಿಗೆ ಮಹಾವಟವೃಕ್ಷದಂತಿದೆ.

ಇವಕ್ಕೆಲ್ಲ ಕಳಶಪ್ರಾಯದಂತಿರುವುದು ಎಂದರೆ ಭಗವದ್ಗೀತೆ. ಇದು ಶ್ರೀವೈಷ್ಣವ ಧರ್ಮದ ಆಧಾರಸ್ತಂಭವಾಗಿದೆ. ಈ ಸಿದ್ಧಾಂತದ ಪ್ರತಿಪಾದನೆಗೆ ಆಳ್ವಾರರಾದಿಯಾಗಿ, ಶ್ರೀ ಯಾಮುನರು, ಶ್ರೀ ರಾಮಾನುಜರು ಇತ್ಯಾದಿ ಅನೇಕ ಆಚಾರ್ಯರು ಭಗವದ್ಗೀತೆಯ ಸಹಾಯದಿಂದಲೇ ಈ ತತ್ತ್ವದ ಪ್ರತಿಪಾದನೆ ಮಾಡಿರುವರು. ಭಗವದ್ಗೀತೆಯಲ್ಲಿ ವಿವರಿಸಲಾಗಿರುವ ಮೋಕ್ಷೋಪಾಯವೇ ಶರಣಾಗತಿ. ಸರ್ವಾತ್ಮನಾದ ಭಗವಂತನಿಗೇ ಆತ್ಮಸಮರ್ಪಣೆ ಮಾಡಿಕೊಳ್ಳುವುದು ಶರಣಾಗತಿ. ಭಗವಂತನ ಚರಣಾರವಿಂದದ ಪ್ರಾಪ್ತಿಗಾಗಿ ಈ ಸಾಧನವೇ ಮುಖ್ಯ ಉಪಾಯವೆಂದು ವಿಶಿಷ್ಟಾದ್ವೈತದಲ್ಲಿ ಪ್ರತಿಪಾದಿಸಲ್ಪಟ್ಟಿರು

ವುದು ಈ ಗ್ರಂಥವೊಂದರಲ್ಲಿಯೇ. ಇಂತಹ ಮಹತ್ವಪೂರ್ಣವಾದ ತಾತ್ತ್ವಿಕ ವಿಷಯವನ್ನು ವಿಷ್ಣುರೂಪಿಯಾದ ಸಾಕ್ಷಾತ್ ಭಗವಾನ್ ಕೃಷ್ಣನೇ ಇದರಲ್ಲಿ ವಿವರಿಸಿರುವುದು ಈ ಕೃತಿಯ ಒಂದು ವಿಶೇಷತೆ.

ಇದೇ ರೀತಿಯಲ್ಲಿ ಭೀಷ್ಮಸ್ತುತಿಯೂ ಕೂಡ ಶ್ರೀವೈಷ್ಣವ ತತ್ತ್ವವನ್ನು ಪ್ರತಿಪಾದಿಸುವ ಭಾಗವಾಗಿದೆ. ವಿದುರ ನೀತಿ, ಕೃಷ್ಣನ ಸಂಧಾನದ ಸಮಯದಲ್ಲಿ ಪ್ರದರ್ಶಿತವಾದ ಅವನ ವಿಶ್ವರೂಪ ಪ್ರದರ್ಶನ, ದ್ರೌಪದಿ ವಸ್ತ್ರಾಪಹರಣದ ಸಮಯದಲ್ಲಿ ಹಾಗೂ ದೂರ್ವಾಸಾತಿಥ್ಯದ ಸಂದರ್ಭದಲ್ಲಿ ಉಂಟಾದ ಶ್ರೀಕೃಷ್ಣನ ಅನುಗ್ರಹ ಪ್ರಸಂಗಗಳು–ಇತ್ಯಾದಿ ಅನೇಕ ಮಹಾಭಾರತದ ಸನ್ನಿವೇಶಗಳು ಶ್ರೀಕೃಷ್ಣನ ಪರತ್ವವನ್ನು ಹಾಗೂ ಅವನ ಪರಮ ಕರುಣೆಯನ್ನು ಪ್ರದರ್ಶಿಸುವ ಘಟನೆಗಳಾಗಿವೆ.

ಈ ರೀತಿಯ ಅನೇಕ ಸನ್ನಿವೇಶಗಳು ಮಹಾವಿಷ್ಣುವಿನ ಹಿರಿಮೆಯನ್ನು ಹಾಗೂ ವಿಷ್ಣುತತ್ತ್ವವನ್ನು ಸಾರುವ ಪ್ರಧಾನಾಂಶಗಳಾಗಿವೆ.

ಹಾಗೆ ನೋಡಿದರೆ ಇವೆರಡೂ ಮಹಾಕಾವ್ಯಗಳು ವಿಷ್ಣುಪರತ್ವವನ್ನು ವಿವರಿಸುವಂತಹ ಕೃತಿಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸುತ್ತವೆ.

## 3. ಪುರಾಣಗಳಲ್ಲಿ ವೈಷ್ಣವ ತತ್ತ್ವ

ಅಷ್ಟಾದಶ ಪುರಾಣಗಳಲ್ಲಿ ಸಾತ್ತ್ವಿಕ ಪುರಾಣಗಳು ಆರು, ರಾಜಸ ಪುರಾಣಗಳು ಆರು, ತಾಮಸ ಪುರಾಣಗಳು ಆರು ಇವೆ. ಇವುಗಳಲ್ಲಿ ಸಾತ್ತ್ವಿಕ ಪುರಾಣಗಳಲ್ಲಿ ಮಹಾವಿಷ್ಣುವಿನ ಮಹಿಮೆ, ಆತನ ರಕ್ಷಕತ್ತ್ವದ ಸ್ವರೂಪ, ಆತನಿಂದ ಪಡೆಯುವ ಮೋಕ್ಷಕ್ಕೆ ಮಾರ್ಗ ಇತ್ಯಾದಿಗಳ ವಿವರಗಳು ಇರುವುದರಿಂದ ಶ್ರೀವೈಷ್ಣವರಿಗೆ ಈ ಪುರಾಣಗಳು ಮುಖ್ಯವಾದುವು. ಇದರ ದರ್ಶನಾಚಾರ್ಯರುಗಳು ತಮ್ಮ ವಿಶಿಷ್ಟಾದ್ವೈತ ತತ್ತ್ವಗಳ ಪ್ರತಿಪಾದನೆಗಾಗಿ ಇವುಗಳಲ್ಲಿನ ವಿಷ್ಣುಪರತ್ವ ಹೇಳಿಕೆಗಳನ್ನು ಬಹಳಷ್ಟು ಉಪಯೋಗಿಸಿಕೊಂಡಿದ್ದಾರೆ.

**1.** ವಿಷ್ಣುಪುರಾಣ: ಸಾತ್ತ್ವಿಕ ಪುರಾಣಗಳು ಹೆಚ್ಚಾಗಿ ಭಗವಂತನ ಸಾತ್ತ್ವಿಕಗುಣಗಳ ಪ್ರಾಧಾನ್ಯತೆಯನ್ನೇ ವಿವರಿಸಿವೆ. ಇದರಲ್ಲಿನ ವಿಷ್ಣುಪುರಾಣವು ವಿಷ್ಣುವಿನ ಮಹಿಮೆಯನ್ನು ವಿವರಿಸುವ ಗ್ರಂಥವಾಗಿದೆ.

ಭಗವಾನ್ ವಿಷ್ಣುವು ಸತ್ತ್ವಗುಣ ಸಂಪನ್ನನಾದುದರಿಂದಲೂ, ಸಾತ್ತ್ವ

ತಾಂಪತಿಯಾಗಿರುವುದರಿಂದಲೂ, ಅಂತಹ ವಿಷ್ಣು ಭಗವಾನನ ವಿಶೇಷಾದಿಗಳನ್ನು ಈ ಪುರಾಣವು ವಿವರಿಸುತ್ತದೆ.

ವೇದೇಸು ಪೌರುಷಂ ಸೂಕ್ತಂ ಧರ್ಮಶಾಸ್ತ್ರೇಷು ಮಾನಸಂ |
ಭಾರತೇ ಭಗವದ್ಗೀತಾ ಪುರಾಣೇಷು ಚ ವೈಷ್ಣವಮ್ ||

ವೇದಗಳಲ್ಲಿ ಪುರುಷಸೂಕ್ತವೂ, ಧರ್ಮಶಾಸ್ತ್ರಗಳಲ್ಲಿ ಮನುಸ್ಮೃತಿಯೂ, ಮಹಾಭಾರತದಲ್ಲಿ ಭಗವದ್ಗೀತೆಯೂ, ಪುರಾಣಗಳಲ್ಲಿ ವಿಷ್ಣುಪುರಾಣವೂ ಪ್ರಮುಖವಾದವುಗಳು ಎಂದು ಹೇಳಲಾಗುತ್ತದೆ.

ಇಂತಹ ಪ್ರಮುಖ ಸ್ಥಾನವನ್ನು ಅಲಂಕರಿಸಿರುವ ಈ ಪುರಾಣದಲ್ಲಿ ಎರಡು ಭಾಗಗಳಿದ್ದು, ಇವೆರಡರಲ್ಲೂ ಆರು ಭಾಗ (ಅಂಶ)ಗಳಿವೆ. ಇವೆರಡರಲ್ಲಿನ ಆರು ಅಂಶಗಳಲ್ಲಿ 126 ಅಧ್ಯಾಯಗಳಿದ್ದು, ಒಟ್ಟು 23,000 ಶ್ಲೋಕಗಳಿವೆ.

ಈ ಪುರಾಣವು ಪಾಂಚರಾತ್ರಕ್ಕೆ ಸೇರಿದ ಶ್ರೀವೈಷ್ಣವ ಮತೀಯ ಗ್ರಂಥ ವಾದರೂ, ಆ ಮತಕ್ಕೆ ಸಂಬಂಧಪಡದ ವಿಷಯಗಳೂ ಇವೆ. ಇದರ ಐದನೇ ಭಾಗದಲ್ಲಿ ಬೃಂದಾವನ ಹಾಗೂ ದ್ವಾರಕೆಗಳಲ್ಲಿ ಶ್ರೀಕೃಷ್ಣನು ನಡೆಸಿದ ಲೀಲಾ ವಿನೋದಗಳು ಹಾಗೂ ಸಾಹಸ ಕೃತ್ಯಗಳ ನಿರೂಪಣೆ ಇದ್ದು, ತುಂಬಾ ವಿಸ್ತಾರವಾಗಿದೆ.

ಆರನೇ ಭಾಗದಲ್ಲಿ ಕಲಿಯುಗದ ದೋಷಗಳು ಹಾಗೂ ಈ ಯುಗದಲ್ಲಿ ಜನಿಸಿದವರ ದೋಷಗಳನ್ನು ನಿವಾರಿಸಿಕೊಳ್ಳುವುದರ ಬಗೆಗೆ ವಿವರಗಳನ್ನು ನೀಡಲಾಗಿದೆ. ಇದಕ್ಕಾಗಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದೂ ತಿಳಿಸಲಾಗಿದೆ. ಈ ಪರಬ್ರಹ್ಮನೇ ಭಗವಾನ್ ವಿಷ್ಣುವೆಂದೂ ಇದರಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

ವರಾಹಕಲ್ಪ ವೃತ್ತಾಂತ ರುಧಿಕೃತ್ಯ ಪರಾಶರಃ |
ಯತ್ರಾಹ ಧರ್ಮಾನಖಿಲಾನ್ ತದುಕ್ತಂ ವೈಷ್ಣವಂ ವಿದುಃ ||
(ಮತ್ಸ್ಯ ಪುರಾಣ–53ನೇ ಅಧ್ಯಾಯ)

ಈ ಪುರಾಣದಲ್ಲಿನ ಪೂರ್ವಖಂಡದಲ್ಲಿ ಶ್ವೇತವರಾಹ ಕಲ್ಪದಲ್ಲಿನ ವೃತ್ತಾಂತ ವನ್ನು ಆಧಾರವಾಗಿಟ್ಟುಕೊಂಡು ಪರಾಶರ ಮಹರ್ಷಿಯು ಗ್ರಹಿಸಿದ ಧರ್ಮಗಳನ್ನು ವಿವರಿಸಲಾಗಿದೆ. ಅಂತಹ ವಿಷ್ಣುಪುರಾಣದಲ್ಲಿನ ಪೂರ್ವಭಾಗದಲ್ಲಿ ಸೃಷ್ಟಿಕ್ರಮ, 'ವಾಸುದೇವ' ಶಬ್ದದ ನಿರ್ವಚನ, 'ನಾರಾಯಣ' ಶಬ್ದದ

ನಿರ್ವಚನ, ಇಂದ್ರನ ಗರ್ವಭಂಗ, ಕ್ಷೀರಸಾಗರ ಮಥನ, ಲಕ್ಷ್ಮೀ ಪ್ರಾಪ್ತಿಕ್ರಮ, ಧ್ರುವೋಪಾಖ್ಯಾನ, ಪ್ರಹ್ಲಾದ ಚರಿತ್ರೆ, ಜಡಭರತೋಪಾಖ್ಯಾನ, ಸಗರನ ಚರಿತ್ರೆ, ಶ್ರೀರಾಮ ಚರಿತ್ರೆ, ಶ್ರೀಕೃಷ್ಣ ಜನನ, ಶ್ರೀಕೃಷ್ಣ ಲೀಲೆಗಳು, ಕಾಳಿಂಗ ಮರ್ಧನ, ಧೇನಕಾಸುರ ಸಂಹಾರ, ಗೋವರ್ಧನೋದ್ಧರಣ, ರಾಸಕ್ರೀಡೆ, ಜರಾಸಂಧ ವಧೆ, ಪಾರಿಜಾತೋಪಹರಣ, ಬಾಣಾಸುರ ವಧೆ, ಶ್ರೀಕೃಷ್ಣ ನಿರ್ಯಾಣ-ಇತ್ಯಾದಿ ಚರಿತ್ರಾಂಶಗಳೇ ಅಲ್ಲದೆ ಮಧ್ಯೆ ಮಧ್ಯೆ ಸಂದರ್ಭೋಚಿತ ವಾಗಿ ಶ್ರೀ ವೈಷ್ಣವ ಮಹಾತ್ಮ್ಯೆ, ಶ್ರೀವೈಷ್ಣವ ಲಕ್ಷಣ, ವರ್ಣಾಶ್ರಮ ಧರ್ಮ ಗಳು, ಕಲಿಯುಗದೋಷಾದಿ ವಿವರಣೆ, ಕಲಿಯುಗದ ಧರ್ಮಗಳು, ಯಮ ನಿಯಮಾದಿ ಅಷ್ಟಾಂಗ ಯೋಗಗಳು ಇತ್ಯಾದಿ ಅನೇಕ ವಿಷಯಗಳನ್ನು ವಿವರಿಸ ಲಾಗಿದೆ.

ಈ ಪುರಾಣವು ಹಿಂದಿನ ಕಾಲದಲ್ಲಿ ಭಾರತದ ಇತರೇ ಭಾಷೆಗಳಿಗೂ ಅನುವಾಗಿ, ಆಯಾ ಪ್ರದೇಶದ ಮಹಾವಿಷ್ಣುವಿನ ರೂಪಗಳ, ಅವತಾರಗಳ ಮಹಿಮೆಯನ್ನು ಅಲ್ಲಲ್ಲಿ ಸೇರಿಸಲಾಗಿದೆ. ಆದರೂ ಮೂಲದ ಸತ್ತ್ವಗುಣ ಕಣ್ಮರೆಯಾಗಿಲ್ಲ.

ಇದರಲ್ಲಿ ವಿಷ್ಣುಪ್ರಭಾವವನ್ನು ವಿವರಿಸುತ್ತಾ ಆಶ್ರಿತರಾದ ಭಕ್ತರನ್ನು ರಕ್ಷಿಸುವವನು ಆ ವಿಷ್ಣುವೇ ಎಂದೂ, ಆತನೇ ದೇವತೆಗಳೆಲ್ಲೆಲ್ಲ ವ್ಯಾಪಿಸಿರುವ ನೆಂದೂ, ಆತನೇ ಸರ್ವ ವಿಶ್ವಕ್ಕೂ ಗುರುವಾಗಿರುವನೆಂದೂ, ಸಕಲ ಚರಾಚರ ಪ್ರಪಂಚವೂ ವಿಷ್ಣುಮಯವಾಗಿ ಪ್ರವರ್ತಿಸುತ್ತದೆಯೆಂದೂ, ಇವೆಲ್ಲ ವಿವರಗಳಿರು ವುದರಿಂದ ಇದು ವೇದ ಸಮಾನವೆಂದೂ ತಿಳಿಸಲಾಗಿದೆ.

ನಾರದ, ಸನಕ, ಸನಂದನ, ಸನತ್ಕುಮಾರಾದಿ ದೇವರ್ಷಿಗಳು ಸತತವಾಗಿ ವಿಷ್ಣು ಭಗವಾನನ ಚರಣಾರವಿಂದಗಳನ್ನು ಸೇವಿಸುತ್ತಾ, ನಿರಂತರವೂ ಅಷ್ಟಾ ಕ್ಷರ ಮಂತ್ರಂ ಜಪ ತತ್ಪರರಾಗಿ ಭಗವದಾನಂದವನ್ನೂ ಹೊಂದಿದವರಾಗಿರು ತ್ತಾರೆ. 'ತದ್ವಿಷ್ಣೋಃ ಪರಮಂ ಪದಮ್' ಎನ್ನುವ ದಿವ್ಯಮಂತ್ರವನ್ನು ನಿರಂ ತರವಾಗಿ ಅನುಸಂಧಾನ ಮಾಡುವ ಇವರು ನೆಲಸಿರುವ ವೈಕುಂಠ ಸನ್ನಿಧಿಯೆ ವಿಷ್ಣು ಭಗವಾನನ ಪರಮಪದವಾಗಿರುವುದು.

ತನ್ನಲ್ಲಿ ಸಕಲ ಚರಾಚರ ಪ್ರಪಂಚವನ್ನು ಹೊಂದಿದ್ದು, ತಾನೇ ಸ್ವತಃ ಜಗತ್ತಿನ ವ್ಯವಹಾರಗಳೆಲ್ಲವನ್ನೂ ನಿರ್ವಹಿಸುವವನೇ ವಾಸುದೇವ. ಇದೇ ಈ

ಶಬ್ದದ ನಿರ್ವಚನ.

ಇಂತಹ ವಾಸುದೇವನ ಸ್ವರೂಪವೂ ವಿಚಿತ್ರವಾದುದು. ಆದ್ಯಂತ ರಹಿತ ವಾಗಿಯೂ, ಅಶೇಷವಾಗಿಯೂ ಇರುವ ಈ ಜಗತ್ತನ್ನು ತನ್ನ ಅಧೀನದಲ್ಲಿರಿಸಿ ಕೊಂಡು, ತನ್ನ ಆಜ್ಞೆಯ ಪ್ರಕಾರ ಕಾಲವು ವರ್ತಿಸುವಂತೆ ಮಾಡುವ ಪ್ರಕೃತಿ ಸ್ವರೂಪನೇ ಆ ವಾಸುದೇವನು.

ಇಂತಹ ಭಗವಂತನನ್ನು ಶರಣು ಹೊಂದಿದ, ಅವನನ್ನು ಸದಾ ಸೇವಿಸು ವವನಿಗೆ ನರಕದ ಭಯವೂ ಇಲ್ಲ, ಯಮಕಿಂಕರರ ಕಾಟವೂ ಇಲ್ಲ. ಶಾಶ್ವತಾ ನಂದವನ್ನು ನೀಡುವ ಪರಮಪದವು ಇಂತಹ ಶ್ರೀವೈಷ್ಣವರಿಗೆ ತಪ್ಪದೆ ಲಭಿಸುವುದು.

ಈ ರೀತಿಯ ವಿಷ್ಣು ಪಾರಮ್ಯದ ವಿವರಗಳನ್ನು ನೀಡುವ ಈ ವಿಷ್ಣು ಪುರಾಣವನ್ನು ವೇದವಾಗಿ, ಧರ್ಮಶಾಸ್ತ್ರವಾಗಿ, ಆಗಮಶಾಸ್ತ್ರವಾಗಿ, ಜ್ಯೋತಿ ಶ್ಶಾಸ್ತ್ರವಾಗಿ, ಮಹೇತಿಹಾಸ ಸಮುಚ್ಚಯವಾಗಿ, ಯೋಗಶಾಸ್ತ್ರವಾಗಿ, ಮಹಾ ಕಾವ್ಯವಾಗಿ ವಿರಾಜಿಸುತ್ತಾ, ಚೇತನರಿಗೆ ಮಾರ್ಗದರ್ಶಕವಾಗಿದೆ.

ಈ ರೀತಿಯಲ್ಲಿ ವಿಷ್ಣು ಪಾರಮ್ಯ ಪ್ರತಿಪಾದಕವಾದ ಈ ಪುರಾಣವನ್ನು ಕುರಿತು ಯಾಮುನಾಚಾರ್ಯರು—

ತತ್ತ್ವೇನ ಯಶ್ಚಿದಚಿದೀಶ್ವರ ತತ್ಸ್ವಭಾವ
ಭೋಗಾಪವರ್ಗ ತದುಪಾಯ ಗತೀರುದಾರಃ ।
ಸಂದರ್ಶಯ ದವನ್ನಿರಮಿಮೀತ ಪುರಾಣರತ್ನಂ
ತಸ್ಮೈ ನಮೋ ಮುನಿವರಾಯ ಪರಾಶರಾಯ ॥

ವಿಷ್ಣು ತತ್ತ್ವ ಪ್ರತಿಪಾದನೆಯನ್ನೇ ಅಲ್ಲದೆ ತತ್ತ್ವತ್ರಯ, ಅರ್ಥಪಂಚಕ ಗಳನ್ನು ಬೋಧಿಸುವುದರಿಂದ ಇದು ಪುರಾಣಗಳ ರತ್ನ ಎಂಬ ಹೆಸರು ಪಡೆದಿದೆ. ಇಷ್ಟೇ ಅಲ್ಲದೆ ಈ ಪುರಾಣವನ್ನು ಬ್ರಹ್ಮಾಂಡ, ವಾಯು, ಮಾರ್ಕಂಡೇಯ ಪುರಾಣಗಳು ಇದನ್ನು ಪ್ರಶಂಸಿಸಿವೆ.

**2.** ಪದ್ಮಪುರಾಣ : ಈ ಪುರಾಣದಲ್ಲಿ ಐದು ಖಂಡಿಗಳಿವೆ. 1. ಸೃಷ್ಟಿ ಖಂಡ–72 ಅಧ್ಯಾಯ, 2. ಭೂಮಿಖಂಡ–125 ಅಧ್ಯಾಯ, 3. ಸ್ವರ್ಗ ಖಂಡದಲ್ಲಿ 39 ಅಧ್ಯಾಯ, 4. ಪಾತಾಳ ಖಂಡದಲ್ಲಿ 113 ಅಧ್ಯಾಯ, 5. ಉತ್ತರ ಖಂಡದಲ್ಲಿ 272 ಅಧ್ಯಾಯಗಳಿದ್ದು ಒಟ್ಟು 621 ಅಧ್ಯಾಯ

ಗಳಿವೆ. ಒಟ್ಟು 55000 ಶ್ಲೋಕಗಳು ಇದರಲ್ಲಿವೆ.

ಇದರಲ್ಲಿ ಗೌಡೀಯ (ಬಂಗಾಳ) ಮತ್ತು ದಾಕ್ಷಿಣಾತ್ಯ (ದಕ್ಷಿಣ ಭಾರತ) ಎನ್ನುವ ಎರಡು ಸಂಸ್ಕರಣ (ಆವತರಣಿಕೆ)ಗಳು. ಈ ಪುರಾಣದಲ್ಲಿ ಮೊದಲನೆಯದು ಅಚ್ಚಾಗದೆ ಇನ್ನೂ ಹಸ್ತಪ್ರತಿ ರೂಪದಲ್ಲಿದೆ. ದಾಕ್ಷಿಣಾತ್ಯ ಮಾತ್ರ ಅಚ್ಚಾಗಿ, ಪ್ರಚಲಿತವಾಗಿದೆ.

ಹಿರಣ್ಮಯ ಪದ್ಮದಿಂದ ಜಗತ್ತಿನ ಸೃಷ್ಟಿಯಾಗಿರುವುದರಿಂದ ಈ ಪುರಾಣವನ್ನು 'ಬ್ರಹ್ಮಜನ್ಮ ಪಾದ್ಮ' ಎಂಬ ಹೆಸರಿನಿಂದ ಕರೆಯಲಾಗುತ್ತದೆ.

ಈ ಪುರಾಣದ ಉತ್ತರ ಖಂಡದಲ್ಲಿ ಮಾತ್ರ ಶ್ರೀವೈಷ್ಣವ ಧರ್ಮವನ್ನು ವಿವರಿಸುವ ಭಾಗಗಳಿವೆ. ಇದರಲ್ಲಿ ಮೋಕ್ಷಮಾರ್ಗ, ವೈಷ್ಣವ ಸಂಪ್ರದಾಯದ ವಿಶೇಷಗಳು, ಅದಕ್ಕೆ ಸಂಬಂಧಪಟ್ಟ ಅನೇಕ ತಾತ್ತ್ವಿಕ ವಿಷಯಗಳನ್ನು ವಿವರಿಸಲಾಗಿದೆ. ಅಲ್ಲದೆ ಜೈನ, ಬೌದ್ಧ, ಪ್ರಚ್ಛನ್ನ ಬೌದ್ಧ, ಚಾರ್ವಾಕ ಮತಗಳನ್ನು ಖಂಡಿಸಲಾಗಿದೆ. ಇದರೊಂದಿಗೆ ವೈಷ್ಣವ ಕಥೆಗಳು ಹಾಗೂ ವೈಷ್ಣವ ಸ್ತೋತ್ರ ವಿಭಾಗಗಳೂ ಇವೆ. ಇದಲ್ಲದೆ ತೀರ್ಥ ಮಾಹಾತ್ಮ್ಯ, ಪರ್ವಮಹಾತ್ಮ್ಯೆಯ ವಿವರಗಳೂ ಇವೆ. ಕಡೆಯಲ್ಲಿ ಇಹಲೋಕದಲ್ಲಿ ಸಕಲ ಭೋಗಗಳನ್ನೂ, ಪರಲೋಕದಲ್ಲಿ ವಿಷ್ಣು ಸಾಯುಜ್ಯವನ್ನು ಪಡೆಯಲು ಯಾವ ಯಾವ ರೀತಿಯ ಭಗವತ್, ಭಾಗವತ ಸೇವೆಗಳನ್ನು ಮಾಡಬೇಕು ಎಂಬುದನ್ನೂ ತಿಳಿಸಲಾಗಿದೆ.

**3. ವರಾಹ ಪುರಾಣ :** ಇದರಲ್ಲಿ ಪೂರ್ವ ಭಾಗ, ಉತ್ತರ ಭಾಗ ಎನ್ನುವ ಎರಡು ಭಾಗಗಳಿದ್ದು, ಒಟ್ಟು 218 ಅಧ್ಯಾಯಗಳಿವೆ. ಇದರಲ್ಲಿ 24,000 ಶ್ಲೋಕಗಳಿವೆ. ಆದರೂ ಇದು ಅಪೂರ್ಣವಾದ ಗ್ರಂಥ. ಮೂಲ 10,000 ಶ್ಲೋಕಗಳು ಮಾತ್ರವಿದ್ದು, ಉಳಿದವುಗಳು ಹೆಚ್ಚುವರಿಯಾಗಿ ಸೇರಿಸಲ್ಪಟ್ಟಿರುವವುಗಳೆಂದು ತಿಳಿಸಲಾಗಿದೆ. ಇದು ಮುಖ್ಯವಾಗಿ ವೈಷ್ಣವ ಪುರಾಣ. ಇದರಲ್ಲಿ ವಿಷ್ಣು ಭಗವಾನನ ಮಹಾತ್ಮ್ಯವನ್ನು ವಿವರಿಸಲಾಗಿದೆ. ಭೂವರಾಹಾವತಾರದ ವಿಶೇಷಗಳೊಂದಿಗೆ ಕೂಡಿದ ಈ ವರಾಹ ಪುರಾಣವನ್ನು 24,000 ಗ್ರಂಥ (ಬಹುಶಃ ಶ್ಲೋಕಗಳಿರಬೇಕು) ವಾಗಿ ರಚಿಸಲಾಗಿದೆಯೆಂದು ಚತುರಾನನು ನಾರದನೊಂದಿಗೆ ತಿಳಿಸುತ್ತಾನೆ. ಇದನ್ನು ಈ ಪುರಾಣದ 20ನೇ ಅಧ್ಯಾಯದಲ್ಲಿ ತಿಳಿಸಲಾಗಿದೆ. ಇದರಲ್ಲಿ ಚಾತುರ್ಮಾಸ ಮಾಹಾತ್ಮ್ಯೆ, ವಿಮಾನ ಮಾಹಾತ್ಮ್ಯೆ, ವೇಂಕಟಾಚಲ ಮಾಹಾತ್ಮ್ಯೆ—ಇತ್ಯಾದಿ ಅನೇಕ ವಿಶೇಷ ವಿಷಯ

ಗಳನ್ನು ಇದರಲ್ಲಿ ವಿವರಿಸಲಾಗಿದೆ.

**4.** ನಾರದ ಪುರಾಣ : ಈ ಪುರಾಣವು ಎರಡು ಭಾಗಗಳಲ್ಲಿದ್ದು, ಮೊದಲನೆಯದರಲ್ಲಿ 125 ಅಧ್ಯಾಯಗಳು, ಎರಡನೆಯದರಲ್ಲಿ 62 ಅಧ್ಯಾಯ ಗಳಿವೆ. ಒಟ್ಟು 25,000 ಶ್ಲೋಕಗಳಿರಬೇಕಾಗಿದ್ದರೂ ದೊರೆತಿರುವುದು 18100 ಶ್ಲೋಕಗಳು ಮಾತ್ರ. ಇದರಲ್ಲಿ ಕಾರ್ತೀಕ ಮಾಸ ಮಾಹಾತ್ಮ್ಯೆ, ಯದುಗಿರಿ ಮಾಹಾತ್ಮ್ಯೆ, ಶ್ರೀಕೃಷ್ಣ ಮಾಹಾತ್ಮ್ಯೆ ಇತ್ಯಾದಿಗಳ ವರ್ಣನೆಗಳಿವೆ.

**5.** ಗರುಡ ಪುರಾಣ : ಅಗ್ನಿ ಪುರಾಣದ ಮಾದರಿಯಲ್ಲಿರುವ ಈ ಪುರಾಣವು ವಿಶ್ವಕೋಶದಂತಿದ್ದು, ಅನೇಕ ವಿಷಯಗಳನ್ನು ಒಳಗೊಂಡಿದೆ. ವ್ಯಕ್ತಿಯ ಮರಣದ ನಂತರದ ಸಮಯದಲ್ಲಿ ಇದನ್ನು ಪಠಿಸಲಾಗುವುದು. ಇದರಲ್ಲಿ ಶ್ರಾದ್ಧ ಕ್ರಿಯೆಗಳು, ವಾನಪ್ರಸ್ಥಾಶ್ರಮದ ಧರ್ಮಗಳು ಅದರ ಪರಿಪಾಲ ನೆಯ ಫಲಗಳು, ಗಯಾದಿ ಪುಣ್ಯಕ್ಷೇತ್ರಗಳ ಮಾಹಾತ್ಮ್ಯೆ–ಇತ್ಯಾದಿಗಳ ವಿವರ ಗಳಿವೆ. ಇಷ್ಟೇ ಅಲ್ಲದೆ ಇದರಲ್ಲಿ ವಿಷ್ಣುಭಕ್ತಿ ವೈಶಿಷ್ಟ್ಯತೆ, ವಿಷ್ಣುವಿನ ಅರ್ಚನಾ ವಿಧಿ, ವಿಷ್ಣುವಿನ ಧ್ಯಾನದ ಮಹತ್ವ, ಅಷ್ಟಾಂಗ ಯೋಗ, ಗೀತಾರ್ಥ-ಸಾರ, ವಿಷ್ಣು ಧರ್ಮೋತ್ತರ, ವೇಂಕಟಾಚಲ ಮಾಹಾತ್ಮ್ಯೆ, ಸುಂದರಪುರ ಮಾಹಾತ್ಮ್ಯೆ, ಸ್ವರ್ಗಲೋಕದ ಪ್ರಶಸ್ತಿ–ಇತ್ಯಾದಿಗಳ ವಿವರಗಳಿವೆ.

**6.** ಭಾಗವತ ಪುರಾಣ : ಭಕ್ತಿಪ್ರಧಾನವಾದ ಶ್ರೀವೈಷ್ಣವ ಸಂಪ್ರದಾ ಯಕ್ಕೆ ನಾರಾಯಣೋಪನಿಷತ್ತು, ಪಾಂಚರಾತ್ರಾಗಮಕ್ಕೆ ಸೇರಿದ ಸಾತ್ವತ ಸಂಹಿತೆ, ಪರಮ ಸಂಹಿತೆ, ಪರಮಪುರುಷ ಸಂಹಿತೆ, ಪುರುಷೋತ್ತಮ ಸಂಹಿತೆ, ಪರಮೇಶ್ವರ ಸಂಹಿತೆ–ಇತ್ಯಾದಿ ಆಗಮ ಶಾಸ್ತ್ರಗಳು, ನಾರದ ಭಕ್ತಿಸೂತ್ರಗಳು, ಶಾಂಡಿಲ್ಯ ಭಕ್ತಿಸೂತ್ರಗಳು, ಭಗವದ್ಗೀತಾ ಶಾಸ್ತ್ರ, ವಿಷ್ಣು ಭಾಗವತಾದಿ ಸಾತ್ತ್ವಿಕ ಪುರಾಣಗಳನ್ನು ಆಧಾರವಾಗಿ ಇರಿಸಿಕೊಂಡೇ ನಾಥಮುನಿ, ಯಾಮುನ, ಶ್ರೀ ರಾಮಾನುಜಾದಿ ಶ್ರೀವೈಷ್ಣವ ಮತ ಪ್ರವರ್ತಕರು ಶ್ರೀವೈಷ್ಣವ ಗ್ರಂಥಗಳನ್ನು ರಚಿಸಿ, ಖ್ಯಾತಿಗೊಂಡರು. ಇಂತಹ ಆಧಾರಗ್ರಂಥಗಳಲ್ಲಿ ಪ್ರಮುಖ ವಾದುದು ಭಾಗವತ ಮಹಾಪುರಾಣ.

ಇಂತಹ ಭಾಗವತ ಮಹಾಪುರಾಣಕ್ಕೆ 14ನೇ ಶತಮಾನಕ್ಕೆ ಸೇರಿದ ಶ್ರೀವೈಷ್ಣವ ಪ್ರಮುಖರಾದ ರಾಘವಾಚಾರ್ಯ ಎನ್ನುವರೊಬ್ಬರು 'ಭಾಗವತ ಚರಿತ್ರ ಚಂದ್ರಿಕ' ಎನ್ನುವ ಹೆಸರಿನಲ್ಲಿ ವ್ಯಾಖ್ಯಾನವೊಂದನ್ನು ರಚಿಸಿದರು.

ಇದರಲ್ಲಿ ಭಾಗವತ ಪುರಾಣವು ಸರ್ವವೇದ ಸಾರ ಎಂದು ತಿಳಿಸಲಾಗಿದೆ. ಇದೇ ಈ ಪುರಾಣದ ವೈಶಿಷ್ಟ್ಯವೆಂದು ಹೇಳಬಹುದು.

ಇದು ವೈಷ್ಣವರಿಗೇ ಮೀಸಲಾದ ಗ್ರಂಥ. ವೈಷ್ಣವರ ದೇವತಾಶಾಸ್ತ್ರ, ತತ್ತ್ವ, ಸಿದ್ಧಾಂತಗಳ ಅಪರೂಪ, ಅಮೂಲ್ಯ ಸಂಗ್ರಹಗಳು ಇದರಲ್ಲಿವೆ.

12 ಸ್ಕಂಧಗಳಿದ್ದು, ಅನೇಕ ಅಧ್ಯಾಯಗಳಿಂದ ಈ ಪುರಾಣದಲ್ಲಿ ಶ್ರೀಕೃಷ್ಣನ ಆರಾಧನೆ ಹಾಗೂ ಸ್ತೋತ್ರಗಳಿವೆ. ವಿಷ್ಣುಪುರಾಣಕ್ಕೆ ಹತ್ತಿರದ ಸಂಬಂಧವನ್ನು ಹೊಂದಿರುವ ಈ ಪುರಾಣದಲ್ಲಿ ಅನೇಕ ಆಖ್ಯಾಯಿಕೆಗಳಿವೆ. ಹೆಸರೇ ಹೇಳುವಂತೆ ಈ ಕೃತಿಯಲ್ಲಿ ಶ್ರೀಕೃಷ್ಣನ ಸಂಪೂರ್ಣ ಜೀವನಚರಿತ್ರೆ ಇದೆ.

ಈ ಕೃತಿಯಲ್ಲಿ ಸೂತನು ನಾರಾಯಣನ ಕಥಾ ಪ್ರಶಂಸೆ ಮಾಡುವಿಕೆ, ಭಗವಂತನ ಏಕವಿಂಶತಿ ಅವತಾರಗಳು, ಕುಂತೀದೇವಿ ಶ್ರೀಕೃಷ್ಣನನ್ನು ಸ್ತುತಿಸುವಿಕೆ, ಭೀಷ್ಮನು ಶ್ರೀಕೃಷ್ಣನನ್ನು ಸ್ತುತಿಸುವಿಕೆ, ಶ್ರೀಕೃಷ್ಣನು ದ್ವಾರಕಾನಗರವನ್ನು ಪ್ರವೇಶಿಸುವಿಕೆ, ಶ್ರೀಕೃಷ್ಣನನ್ನು ಅಂತಃಪುರ ಕಾಂತೆಯರು ನೋಡಿಕೊಳ್ಳುವಿಕೆ, ಪರೀಕ್ಷಿತ್ ಮಹಾರಾಜನು ಕಲಿಯನ್ನು ನಿಗ್ರಹಿಸಿ, ಧರ್ಮ ಪರಿಪಾಲನೆಯನ್ನು ಮಾಡುವಿಕೆ, ಶುಕನು ಪರೀಕ್ಷಿತ್ತನಿಗೆ ಮುಕ್ತಿಮಾರ್ಗವನ್ನು ಬೋಧಿಸುವಿಕೆ, ನಾರದನು ಪ್ರಪಂಚ ಪ್ರಕಾರಗಳ ಬಗ್ಗೆ ಬ್ರಹ್ಮನನ್ನು ಕೇಳುವಿಕೆ, ಬ್ರಹ್ಮನು ತಪಸ್ಸು ಮಾಡುವಿಕೆ ಹಾಗೂ ಆ ತಪಸ್ಸಿಗೆ ಮೆಚ್ಚಿ ನಾರಾಯಣನು ವರಗಳನ್ನು ನೀಡುವಿಕೆ, ಶ್ರೀಯಜ್ಞ ವರಾಹಾವತಾರದ ವರ್ಣನೆ, ಸನಕ–ಸನಂದಾದಿಗಳು ಶ್ರೀವೈಕುಂಠವನ್ನು ತಲುಪಿ ನಾರಾಯಣನನ್ನು ಪ್ರಾರ್ಥಿಸುವಿಕೆ, ಧ್ರುವೋಪಾಖ್ಯಾನ, ಪುರಂಜನೋಪಾಖ್ಯಾನ, ಭರತೋಪಾಖ್ಯಾನ, ನರಕಲೋಕ ವರ್ಣನೆ, ವಿಷ್ಣುದೂತ–ಯಮದೂತರ ನಡುವೆ ನಡೆಯುವ ಸಂವಾದ, ಶ್ರೀಮನ್ನಾರಾಯಣ ಕವಚ, ಪ್ರಹ್ಲಾದ ಚರಿತ್ರೆ, ಗಜೇಂದ್ರ ಮೋಕ್ಷ, ಮಹಾವಿಷ್ಣುವು ಮೋಹಿನಿ ಸ್ವರೂಪವನ್ನು ಪಡೆಯುವಿಕೆ, ದೇವಾಸುರ ಯುದ್ಧ, ಅಂಬರೀಷೋಪಾಖ್ಯಾನ, ಶ್ರೀರಾಮ ಚರಿತ್ರೆ, ಶ್ರೀ ಕೃಷ್ಣಾವತಾರ ಘಟ್ಟ, ಶ್ರೀಕೃಷ್ಣ ಲೀಲೆಗಳು, ಕಾಳೀಯ ಮರ್ಧನ, ಗೋಪಿಕಾ ವಸ್ತ್ರಾಪಹರಣ, ರಾಸಕ್ರೀಡಾಭಿವರ್ಣನೆ, ವೃಷಭಾಸುರ ಸಂಹಾರ, ಕುವಲಯಾ ಪೀಡನನ್ನು ಕೃಷ್ಣನು ವಧಿಸುವಿಕೆ, ಗೋವರ್ಧನೋದ್ಧರಣ, ರುಕ್ಮಿಣಿ ಕಲ್ಯಾಣ, ಕುಚೇಲೋಪಾಖ್ಯಾನ, ಶುಕನು ಪರೀಕ್ಷಿತ್ತನಿಗೆ ವಿಷ್ಣು ಸೇವಾ ಹಿರಿಮೆಯನ್ನು ತಿಳಿಸುವಿಕೆ–

ಇತ್ಯಾದಿ ವಿಶೇಷ ವಿಷಯಗಳ ವಿವರಗಳಿವೆ.

ಹೀಗೆ ಸ್ಕಂದ ಪುರಾಣದಲ್ಲಿನ ವಿಷ್ಣು ಖಂಡವನ್ನು ವಿಪುಲವಾಗಿ ಈ ಪುರಾಣದಲ್ಲಿ ವಿವರಿಸಲಾಗಿದೆ. ಅಲ್ಲದೆ ಈ ಪುರಾಣದ ಮಾಹಾತ್ಮ್ಯೆಯನ್ನು ಪದ್ಮ ಪುರಾಣದಲ್ಲಿ ವರ್ಣಿಸಲಾಗಿದೆ.

ಇಂತಹ ಭಾಗವತ ಪುರಾಣವನ್ನು ಕನ್ನಡ, ತೆಲುಗು ಭಾಷೆಗಳಲ್ಲಿ ಅಲ್ಲದೆ ಭಾರತದ ಇತರೇ ಭಾಷೆಗಳಿಗೂ ಅನುವಾದವಾಗಿದೆ. ಕನ್ನಡದ ಕುಮಾರವ್ಯಾಸ, ತೆಲುಗಿನ ಪೋತನರಿಗೆ ಈ ಕಾವ್ಯ ತುಂಬಾ ಪ್ರಿಯವಾದುದು.

'ವಿಶ್ವವೇ ವಿಷ್ಣು–ವಿಷ್ಣು ವಿಲ್ಲದೆ ಜಗತ್ತಿನಲ್ಲಿ ಬೇರೇನೂ ಇಲ್ಲ. ಈ ವಿಷ್ಣುವಿನಿಂದಲೇ ಧನವೃದ್ಧಿ, ಜಯ–ಇತ್ಯಾದಿಗಳು ಲಭಿಸುವುವು. ಶ್ರೀಕೃಷ್ಣನ ಹೆಸರನ್ನು ನಾಮಸಂಕೀರ್ತನೆಯಂತೆ ಜಪಿಸಬೇಕು. ಮನಸ್ಸಿನಲ್ಲಿ ಸದಾ ಕಾಲದಲ್ಲಿಯೂ ಶ್ರೀಕೃಷ್ಣ-ಶ್ರೀಕೃಷ್ಣ ಎನ್ನುವ ನಾರಾಯಣ ನಾಮಸ್ಮರಣೆಯನ್ನೇ ಮಾಡಬೇಕು. ಕಾಡಿನಲ್ಲಿದ್ದರೂ ಹರಿಕಥನವನ್ನು ಭಕ್ತಿಭಾವದಿಂದ ಹಾಡುತ್ತಾ, ಆತನ ಹೆಸರಿನೊಂದಿಗೆ ಆಡುತ್ತಾ ಇರಬೇಕು. ಈ ಪ್ರಪಂಚದಲ್ಲಿ ಹುಚ್ಚನಂತೆ ವರ್ತಿಸುತ್ತಾ, ಬಾಹ್ಯಲೋಕವನ್ನು ಮರೆತು, ಸರ್ವವೂ ವಿಷ್ಣುಮಯವೆಂದು ತಿಳಿಯಬೇಕು. ವಿಷ್ಣು ಭಗವಾನನಿಗೆ ಸಂಬಂಧಪಟ್ಟ ವಿಶೇಷಗಳನ್ನು ಬಲ್ಲವರಿಗೆ, ಆತನ ಪಾದ ಪದ್ಮಗಳನ್ನು ಸ್ಮರಿಸುವವರಿಗೆ, ಆ ದೇವದೇವನ ದಿವ್ಯಚರಿತ್ರೆಯನ್ನು ಆಲಿಸುವವರಿಗೆ ಮರಣ ಸಂಬಂಧದ ಮೋಹವು ಕಾಡುವುದಿಲ್ಲ' ಎಂದು ಈ ಭಕ್ತರು ವಿಷ್ಣು ಮಹಿಮೆಯನ್ನು ಹೊಗಳುವರು.

ಈ ರೀತಿಯಲ್ಲಿ ಈ ಪುರಾಣವು ಭಗವಾನ್ ಮಹಾವಿಷ್ಣುವಿನ ಸರ್ವಾಂತರ್ಯಾಮಿತ್ವವನ್ನು, ಆತನ ಸೃಷ್ಟಿ–ಸ್ಥಿತಿ–ಲಯ ಕಾರಕತ್ವವನ್ನು ಪ್ರತಿಪಾದಿಸುವ ಹರಿವಂಶಾವಳಿಯು ಶ್ರೀಕೃಷ್ಣ ತತ್ತ್ವವನ್ನು ನಿರೂಪಿಸುತ್ತದೆ. ಶಂಖ, ಚಕ್ರ, ಗದಾ, ಪದ್ಮ ಲಾಂಛನನಾದ ಮಹಾವಿಷ್ಣುವಿನ ತತ್ತ್ವಮಾಹಾತ್ಮ್ಯವನ್ನು ವಿಪುಲವಾಗಿ ಇದರಲ್ಲಿ ವಿಶದೀಕರಿಸಿದೆ.

**7. ಬ್ರಹ್ಮಾಂಡ ಪುರಾಣ :** ಈ ಪುರಾಣದಲ್ಲಿರುವ ಕೆಲವು ಶ್ಲೋಕಗಳು ವೈಷ್ಣವ ಮತದ ಛಾಯೆಯನ್ನು ಹೊಂದಿವೆ.

**8. ವಾಮನ ಪುರಾಣ :** ಇದು ಮೂಲತಃ ವೈಷ್ಣವ ಮತದ್ದಾಗಿದ್ದು, ಕಾಲಾಂತರದಲ್ಲಿ ಶಿವೋಪಾಸಕರು ಇದನ್ನು ಪುನರ್ರಚಿಸಿದ್ದಾರೆ.

9. ಬ್ರಹ್ಮ ಪುರಾಣ : ಇದು ವೈಷ್ಣವ ಪುರಾಣವಾದರೂ, ವಿಷ್ಣು ತತ್ತ್ವಕ್ಕೆ ಸಂಬಂಧಪಟ್ಟ ವಿವರಗಳು ಬಹಳ ಕಡಿಮೆ. ವಿಷ್ಣು ಕ್ಷೇತ್ರಗಳ ವಿವರಗಳು ಅಲ್ಲಲ್ಲಿವೆ.

10. ಬ್ರಹ್ಮ ವೈವರ್ತ ಪುರಾಣ : ಇದರಲ್ಲಿರುವ ನಾಲ್ಕು ಖಂಡಗಳಲ್ಲಿ ಒಂದು ಕೃಷ್ಣ ಜನ್ಮಖಂಡ. ಇದರಲ್ಲಿ ಕೃಷ್ಣ-ರಾಧೆಯರ ಆರಾಧನೆಯ ಚಿತ್ರಣಗಳಿವೆ.

11. ಭವಿಷ್ಯ ಪುರಾಣ : ಇದರಲ್ಲಿರುವ ಐದು ಪರ್ವಗಳಲ್ಲಿ ಒಂದು ವೈಷ್ಣವ ಪರ್ವವಿದೆ.

12. ತಾಮಸ ಪುರಾಣಗಳು : ಇದರಲ್ಲಿನ ಮತ್ಸ್ಯಪುರಾಣದಲ್ಲಿ ಯಾವುದೇ ವಿಷ್ಣುತತ್ವವೂ ಇಲ್ಲ. ಕೂರ್ಮ ಪುರಾಣವು ಪ್ರಾರಂಭದಲ್ಲಿ ವೈಷ್ಣವ ಸ್ವರೂಪವನ್ನು ಹೊಂದಿದ್ದು, ನಾಲ್ಕು ವಿಭಾಗಗಳಿವೆ. ನಾಲ್ಕನೆಯದಾದ ವೈಷ್ಣವೀ ಸಂಹಿತೆಯಲ್ಲಿ ಮೋಕ್ಷವನ್ನು ಪಡೆಯಲು ಅನುಸರಿಸಬೇಕಾದ ಕರ್ತವ್ಯಗಳ ಬಗ್ಗೆ ವಿವರಗಳಿವೆ. ಉಳಿದ ಪುರಾಣಗಳಲ್ಲಿ ವಿಷ್ಣುತತ್ವದ ಅಂಶಗಳಾವುವೂ ಇಲ್ಲ.

## ಉಪಪುರಾಣಗಳು

ಉಪಪುರಾಣಗಳಲ್ಲಿ ಧಾರ್ಮಿಕ ವಿಷಯಗಳ ಆಧಾರದ ಮೇಲೆ ವರ್ಗೀಕರಿಸಲ್ಪಟ್ಟವುಗಳಲ್ಲಿ ವೈಷ್ಣವ ಉಪಪುರಾಣಗಳ ಗುಂಪೂ ಒಂದು.

ಈ ವೈಷ್ಣವ ಉಪಪುರಾಣಗಳನ್ನು ಶ್ರೀವೈಷ್ಣವ ಆಳ್ವಾರಾಚಾರ್ಯರುಗಳು ಹೆಚ್ಚಾಗಿ ಪರಾಮರ್ಶೆಗಾಗಿ ಉಪಯೋಗಿಸಿಕೊಂಡಂತೆ ಕಾಣುವುದಿಲ್ಲ. ಬಹುಶಃ ಉಪಪುರಾಣಗಳು ವೇದಗಳಷ್ಟು, ಸಂಹಿತೆಗಳಷ್ಟು ನಂಬಿಕೆಗೆ ಅರ್ಹವಲ್ಲವೆಂಬ ಭಾವನೆಯೋ ಏನೋ ! ಅಲ್ಲದೆ ಪುರಾಣಗಳು, ಉಪಪುರಾಣಗಳು ನಂತರದ ವರ್ಷಗಳಲ್ಲಿ ಬಹಳಷ್ಟು ಬದಲಾವಣೆಗೆ ಒಳಗಾದದ್ದರಿಂದ ಆಚಾರ್ಯರುಗಳೂ ಕೂಡ ಅವನ್ನು ವಿಶಿಷ್ಟಾದ್ವೈತ ತತ್ತ್ವದ ಪ್ರತಿಪಾದನೆಯಲ್ಲಿ ಹೆಚ್ಚಾಗಿ ಉಪಯೋಗಿಸಿಕೊಂಡಿಲ್ಲ. ಹೀಗಾಗಿ ಈ ಕೃತಿಗಳಲ್ಲಿ ವಿಷ್ಣುತತ್ತ್ವ ಪ್ರತಿಪಾದನೆಯ ವಿವರಗಳನ್ನು ಮಾತ್ರ ಗಮನಿಸುವುದು ಉತ್ತಮ.

ಈ ಉಪಪುರಾಣಗಳಲ್ಲಿ ಮುಖ್ಯವಾದವುಗಳೆಂದರೆ—ವಿಷ್ಣು ಧರ್ಮ, ವಿಷ್ಣು ಧರ್ಮೋತ್ತರ, ನಾರಸಿಂಹ, ಬೃಹನ್ನಾರದೀಯ ಹಾಗೂ ಕ್ರಿಯಾಯೋಗ

ಸಾರ ಎಂಬವುಗಳು.

ವಿಷ್ಣುಧರ್ಮದಲ್ಲಿ ವೈಷ್ಣವ ತತ್ತ್ವಜ್ಞಾನ ಮತ್ತು ಅದರ ಮತಾಚಾರಗಳನ್ನು ನಿನರಿಸುವ ಒಂದು ಬೃಹದ್ಗ್ರಂಥ. ಬೌದ್ಧ, ಜೈನ ಇತ್ಯಾದಿ ನಾಸ್ತಿಕ ಧರ್ಮಗಳನ್ನು ಎದುರಿಸಿ, ಅವುಗಳ ವಿರುದ್ಧ ಹೋರಾಡುವುದಕ್ಕಾಗಿ ಆ ಪುರಾಣವು ರಚನೆಯಾಗಿರಬೇಕು.

ವಿಷ್ಣು ಧರ್ಮೋತ್ತರ ಉಪಪುರಾಣದಲ್ಲಿ ವೈಷ್ಣವ ಧರ್ಮ, ಪುಣ್ಯಕ್ಷೇತ್ರಗಳ ಮಹಿಮೆಯನ್ನು ವಿವರಿಸಲಾಗಿದೆ.

ಅತ್ಯಂತ ಪ್ರಾಚೀನವಾದ ನೃಸಿಂಹ ಉಪಪುರಾಣವು ಭಾಗವತ ಸಂಪ್ರದಾಯದ ಪಾಂಚರಾತ್ರರು ರಚಿಸಿದ ಗ್ರಂಥವಾಗಿದೆ. ಇದು ಪ್ರಮುಖವಾಗಿ ನರಸಿಂಹ ಹಾಗೂ ಆತನ ಪೂಜಾಕಲ್ಪವನ್ನು ಕುರಿತಾದ ಗ್ರಂಥ.

ಬೃಹನ್ನಾರದೀಯ ಉಪಪುರಾಣವು ಭಾಗವತ ಛಾಯೆಯ ಒಂದು ಪಾಂಚರಾತ್ರ ಕೃತಿ. ವಿಷ್ಣುಭಕ್ತಿಯಿಂದ ಮೋಕ್ಷಪ್ರಾಪ್ತಿ ಎಂಬುದನ್ನು ಇದು ವಿವರಿಸುತ್ತದೆ. ವಿಷ್ಣುಭಕ್ತರ ಹಬ್ಬ ಹರಿದಿನಗಳು ಮತ್ತು ಅವರು ಮಾಡಬೇಕಾದ ಪೂಜಾವಿಧಿಗಳನ್ನು ಇದು ವಿವರಿಸುತ್ತದೆ. ವಿಷ್ಣುಶಕ್ತಿಯೇ ಲಕ್ಷ್ಮಿ, ದುರ್ಗಾ ಇತ್ಯಾದಿ ಹೆಸರುಗಳಿಂದ ಪ್ರಖ್ಯಾತಳಾಗಿರುವಳೆಂದೂ, ತ್ರಿಗುಣಗಳ ಸಂಪರ್ಕದಿಂದ ಮಹಾವಿಷ್ಣುವು ಬೇರೆ ಬೇರೆ ರೂಪಗಳನ್ನು ಪಡೆದನೆಂದೂ ಇದು ತಿಳಿಸುತ್ತದೆ.

ಕ್ರಿಯಾಯೋಗ ಸಾರವು ಭಾಗವತ ಸಂಪ್ರದಾಯವನ್ನು ಎತ್ತಿಹಿಡಿಯುತ್ತದೆ. ವಿಷ್ಣುವಿನ ಧ್ಯಾನಶಕ್ತಿಯ ಬಗ್ಗೆ ಒತ್ತು ನೀಡುತ್ತದೆ.

## 4. ಸಂಘ ಸಾಹಿತ್ಯಗಳಲ್ಲಿ ಶ್ರೀವೈಷ್ಣವ ತತ್ವ

ಶೃತಿ, ಸ್ಮೃತಿ, ಇತಿಹಾಸ, ಪುರಾಣಗಳಿಂದಲೂ, ಭಗವತ್ ಶಾಸ್ತ್ರದಿಂದಲೂ ಪ್ರಭಾವಿತವಾದ ಭಕ್ತಿ ಸಿದ್ಧಾಂತವು ಬಹಳ ಕಾಲದಿಂದಲೂ ಭರತಖಂಡಾದ್ಯಂತ ಹರಡಿರುವುದು, ಹರಡುತ್ತಿರುವುದು ಸರ್ವವಿದಿತವಾದುದೆ ! ಇಡೀ ಪ್ರವೃತ್ತಿಯು ತಮಿಳು ಮಾತನಾಡುವವರ ಪ್ರದೇಶಗಳಲ್ಲಿಯೂ ಪ್ರಚಲಿತವಾಗಿತ್ತು. ಇದಕ್ಕೆ ಅದರಲ್ಲಿನ ಆಳ್ವಾರರ ಯುಗವೇ ಉದಾಹರಣೆ. ಆಳ್ವಾರರ ಈ ವಿಷ್ಣುಭಕ್ತಿ ಸ್ರವಂತಿಯು ಪೂರ್ತಿ ದಕ್ಷಿಣ ಭಾರತವನ್ನೆ ಅಲ್ಲದೆ ಉತ್ತರ

ಭಾರತವನ್ನೂ ಕೂಡ ಪ್ರಭಾವಿತಗೊಳಿಸಿತು.

ಆದುದರಿಂದ ಆಳ್ವಾರರ ಯುಗದಿಂದ ಪ್ರಾರಂಭವಾಗಿ ಆಚಾರ್ಯರ ಯುಗ ಹಾಗೂ ತದನಂತರದ ಯುಗದ ಭಕ್ತಿ ಸಾಹಿತ್ಯ ನಿರ್ಮಾಣವು ಭಾರತ ವಾಙ್ಮಯ ಜಗತ್ತನ್ನು ಪ್ರಜ್ವಲಿತಗೊಳಿಸಿ, ಅದರ ಸ್ವರ್ಣಯುಗಕ್ಕೆ ಕಾರಣ ವಾಯಿತು. ಅಂತಹ ಸ್ವರ್ಣಯುಗವೆ ತಮಿಳು ಭಾಷೆಯನ್ನು, ತಮಿಳು ಪ್ರದೇಶಗಳನ್ನು 'ಮಹಾಯೋಗ ಕಾಲ' ಎಂದು ಕರೆಯುವಂತೆ ಮಾಡಿತು.

ತಮಿಳು ಪ್ರದೇಶಗಳಲ್ಲಿ ವಿದ್ವಾಂಸರು ಹಾಗೂ ಕವಿಗಳಿಗೆ ಸೂಕ್ತ ಪ್ರೋತ್ಸಾಹ ನೀಡಲು ಅವರವರ ರಚನೆಗಳನ್ನು ಪರೀಕ್ಷಿಸಿ, ಅವುಗಳ ಗುಣಾವ ಗುಣಗಳನ್ನು ತೀರ್ಮಾನಿಸುವುದಕ್ಕಾಗಿ ಅಲ್ಲಿನ ನಾಡಪ್ರಭುಗಳು ಒಂದು 'ಪಂಡಿತರ ಪರಿಷತ್ತ'ನ್ನು ಏರ್ಪಡಿಸಿದ್ದರು. ಇಂತಹ ಪರಿಷತ್ತನ್ನು 'ಸಂಘವರ್' ಎಂದು ಕರೆಯುವ ರೂಢಿ ಮಾಡಿಕೊಂಡರು. ಇಂತಹ ಕಾಲದ ಸಾಹಿತ್ಯವನ್ನು 'ಸಂಘಂಸಾಹಿತ್ಯ' ಎಂದು ಕರೆಯುವ ವಾಡಿಕೆಯು ರೂಢಿಗೆ ಬಂದಿತು.

ಈ ಪರಿಷತ್ತು ಕ್ರಿ.ಪೂ. 500ರಿಂದ ಕ್ರಿ.ಶ. 2ನೇ ಶತಮಾನದವರೆಗೆ ಹರಡಿದೆ ಎಂದು ಅಂದಾಜು. ಆ ನಂತರದಲ್ಲಿ ಕ್ರಿ.ಶ. 3ನೇ ಶತಮಾನದಿಂದ 5ನೇ ಶತಮಾನದವರೆವಿಗಿನ ಕಾಲವನ್ನು 'ಜೈನ ಬೌದ್ಧ ಕಾಲ' ಎಂದೂ, ಕ್ರಿ.ಶ. 6ನೇ ಶತಮಾನದಿಂದ 9ನೇ ಶತಮಾನವವರೆಗೆ 'ಭಕ್ತಿ ಕಾಲ' ಎಂದೂ ಕರೆಯು ಲಾಗುತ್ತದೆ.

ಸಂಘಪೂರ್ವಕಾಲದಲ್ಲಿ 'ತೊಲ್ ಕಾಪ್ಪಿಯುವರ್' ಎನ್ನುವ ಗ್ರಂಥ ವೊಂದೇ ನಮಗಿಂದು ಲಭ್ಯವಾಗಿದೆ. ಇದೊಂದು ಲಕ್ಷಣ ಗ್ರಂಥ. ಇದನ್ನು 'ತೊಲ್ ಕಾಪ್ಪಿಯನಾರ್' ಎನ್ನುವ ವಿದ್ವಾಂಸನು ರಚಿಸಿದ್ದಾನೆ. ಇದರಲ್ಲಿ ಪ್ರತಿಪಾದಿಸಿರುವ ಅನೇಕ ವಿಷಯಗಳು ಇದಕ್ಕೆ ಹಿಂದೆ ಇದ್ದಂತಹ ಗ್ರಂಥಗಳಲ್ಲಿ ವಿವರಿಸಿರುವ ಸಿದ್ಧಾಂತಗಳ ಮರುಪ್ರತಿಪಾದನೆಯೇ ಎಂದು ಕವಿ ಸ್ವತಃ ವಿವರಿಸಿ ದ್ದಾನೆ. ಇದರಿಂದ ಈ ಗ್ರಂಥ ರಚನೆಗೆ ಮುಂಚೆಯೂ ಕೆಲವು ಗ್ರಂಥಗಳು ತಮಿಳು ಭಾಷೆಯಲ್ಲಿ ರಚಿತವಾಗಿದ್ದವು ಎಂಬ ಅಂಶ ಸ್ಪಷ್ಟವಾಗುತ್ತದೆ. ಆದರೆ ಈ ಗ್ರಂಥಗಳು ದೊರೆಯದಿರುವುದರಿಂದ, ಆ ಕಾಲದಲ್ಲಿನ ಆಧ್ಯಾತ್ಮಿಕ ಚಿತ್ರಣ ನಮಗೆ ಸ್ಪಷ್ಟವಾಗುತ್ತಿಲ್ಲ. ಆದುದರಿಂದ 'ತೊಲ್ ಕಾಪ್ಪಿಯುವರ್' ಗ್ರಂಥವು ಯಾವ ಯಾವ ಧಾರ್ಮಿಕ ಭಾವನೆಗಳನ್ನು ವಿವರಿಸುತ್ತವೆಯೋ ಅವೇ ಅಗ್ಗ

ಹಿಂದೆಯೂ ಇದ್ದಿರಬಹುದೆಂದು ಊಹಿಸಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ತಮಿಳು ಜನರು ಪ್ರಕೃತಿ ಪೂಜಕರಾಗಿದ್ದು, ಪರಿಶುದ್ಧ ಜೀವನ ನಡೆಸುತ್ತಿದ್ದರೆಂದೂ, ನಿರ್ವಿಕಾರ ಮನೋಭಾವದಿಂದ ತಮ್ಮ ತಮ್ಮ ಜೀವನಗಳನ್ನು ನಡೆಸುತ್ತಿದ್ದರೆಂದು ಸಂಘಕಾಲದ ಸಾಹಿತ್ಯವು ತಿಳಿಸುತ್ತದೆ. ಈ ಸಂಘಕಾಲದ ರಚನೆಗಳಲ್ಲಿ ಪ್ರೇಮ, ಶೌರ್ಯಗಳೆರಡನ್ನೂ ವಿಶೇಷವಾಗಿ ವರ್ಣಿಸಲಾಗಿದೆ.

'ಎಟ್ಟುತೋಕೈ' (ಎಂಟು ಖಂಡ ಕಾವ್ಯಗಳ ಸಂಪುಟ), 'ಪತ್ತುಪಾಟ್ಟು' (ಹತ್ತು ಖಂಡ ಕಾವ್ಯಗಳ ಸಂಪುಟ) ಎನ್ನುವ ಎರಡು ಗ್ರಂಥಗಳು ಇದಕ್ಕೆ ಪ್ರಮಾಣಗಳಾಗಿವೆ.

ಇದರ ಪರಿಣಾಮವಾಗಿ ಸಂಘಕಾಲದ ಕಾವ್ಯಗಳು ಕೇವಲ ಪ್ರಕೃತಿಯಲ್ಲಿರುವ ಮಹತ್ತರ ಶಕ್ತಿಗಳನ್ನೇ ಅಲ್ಲದೆ ಇತರೆ ಅಜ್ಞಾತ ವಿಷಯಗಳನ್ನೂ ನಮಗೆ ತಿಳಿಸುತ್ತವೆ. ಅಷ್ಟೇ ಅಲ್ಲದೆ ವೃಕ್ಷಗಳು, ಅರಣ್ಯಗಳು, ಪರ್ವತಗಳಲ್ಲಿ ಅಡಗಿರುವ ಶುಭಾಶುಭಗಳನ್ನು ಹೊರಚೆಲ್ಲುವ ದೇವತೆಗಳನ್ನು ತೃಪ್ತಿಗೊಳಿಸುವುದಕ್ಕಾಗಿ ಅಂದಿನ ತಮಿಳು ಜನತೆ ಪ್ರಾರ್ಥನೆಗಳನ್ನು ಸಲ್ಲಿಸುತ್ತಿದ್ದರು. ಆಗಾಗ ಸೂರ್ಯ ಚಂದ್ರರನ್ನು ಕೂಡ ಪೂಜಿಸುತ್ತಿದ್ದರು. ಅಂತಹ ಪೂಜೆಯನ್ನು 'ಸಿರೈತೊಳುದಲ್' ಎಂದು ಕರೆಯುತ್ತಿದ್ದರು. ಭಗವಂತನನ್ನು ಭಕ್ತನು ಯಾವ ರೂಪದಲ್ಲಿ ಬೇಕಾದರೂ ಪೂಜಿಸಬಹುದಾಗಿತ್ತು, ಧ್ಯಾನಿಸಬಹುದಿತ್ತು. ಅಂತಹ ರೂಪದಿಂದಲೂ ಭಗವಂತನು ಭಕ್ತನನ್ನು ಸಾಕ್ಷಾತ್ಕರಿಸುತ್ತಿದ್ದನೆಂದು 'ಪರಿಪಾಡಲ್' ಎನ್ನುವ ಗ್ರಂಥದಲ್ಲಿ 'ಯೇ ಯಥಾಂ ಮಾಂ ಪ್ರಪದ್ಯಂತೇ; ತಾಂ ಸ್ತಥೈವ ಭಜಾಮ್ಯಹಮ್ |' ಎಂಬ ಸಾಲಿನಿಂದ ತಿಳಿಸಲಾಗಿದೆ. ಇದು ಭಗವದ್ಗೀತೆಯಲ್ಲಿನ ಸಾಲನ್ನು ನೆನಪಿಗೆ ತರುತ್ತದೆ.

ಹೀಗೆ ಸಂಘಕಾಲದ ಸಾಹಿತ್ಯದಲ್ಲಿರುವ ವಿಶೇಷಗಳನ್ನು ತಿಳಿದುಕೊಳ್ಳುವುದಕ್ಕೆ ಮೊದಲು ಅದಕ್ಕೆ ಹಿಂದಿನ ಕಾಲದಲ್ಲಿ ತಮಿಳು ಪ್ರದೇಶಗಳಲ್ಲಿ ಪ್ರಚಲಿತವಾಗಿದ್ದ ಪ್ರಕೃತಿ ಪೂಜೆಯ ಬಗ್ಗೆ ರೂಢಿಯಲ್ಲಿದ್ದ ಸ್ವರೂಪವೇನೆಂಬುದನ್ನು ತಿಳಿದುಕೊಳ್ಳಬೇಕಾದುದು ಆವಶ್ಯಕ.

## ತಮಿಳು ಪ್ರದೇಶಗಳಲ್ಲಿನ ಅಧಿದೇವತೆಗಳು

'ತೊಲ್ ಕಾಪ್ಪಿಯಮ್' ಗ್ರಂಥದಲ್ಲಿ ತಮಿಳರು ಆರಾಧಿಸುವ ಮುಖ್ಯ

ದೇವತೆಗಳ ವಿವರಗಳಿವೆ. ತಮಿಳು ಪ್ರದೇಶಗಳಲ್ಲಿನ ಜಲ, ವಾಯುಗಳಿಗೆ ಸಂಬಂಧಪಟ್ಟಂತೆ, ಅವನ್ನು ನಾಲ್ಕು ಭಾಗಗಳಾಗಿ ವಿಭಾಗಿಸಲಾಗಿತ್ತು. ಪ್ರತಿ ಭಾಗವನ್ನೂ ಜನರು 'ತಿಣ್ಣೈ' ಎಂದು ವ್ಯವಹರಿಸುತ್ತಿದ್ದರು. ಈ ನಾಲ್ಕೂ ತಿಣ್ಣೈಗಳಿಗೆ ನಾಲ್ಕು ಬೇರೆ ಬೇರೆ ಹೆಸರುಗಳಿದ್ದುವು. ಅರಣ್ಯ ಪ್ರದೇಶವನ್ನು 'ಮುಲ್ಲೈ' ಎಂದೂ, ಪರ್ವತ ಪ್ರದೇಶವನ್ನು 'ಕುರುಂಜಿ' ಎಂದೂ, ಸಾರವತ್ತಾದ, ಫಲವತ್ತಾದ ಭೂಮಿಯನ್ನು 'ಮರುದವಾ್' ಎಂದೂ, ಸಮುದ್ರ ತೀರವನ್ನು 'ನೆಯದಲ್' ಎಂದೂ ಕರೆಯಲಾಗುತ್ತಿತ್ತು. ಮಳೆ, ಬೆಳೆಗಳಿಲ್ಲದ ಮರುಭೂಮಿಯನ್ನೇ ಬೇರೆ ಭಾಗ ಮಾಡಿದ್ದರು. ಇದನ್ನು 'ಪಾಲೈ' ಎಂದು ಕರೆಯುತ್ತಿದ್ದರು. ಇವುಗಳ ಪ್ರತಿಯೊಂದು ಭಾಗಕ್ಕೂ ಬೇರೆ ಬೇರೆಯೇ ಆದ ಅಧಿದೇವತೆಗಳಿದ್ದರು. ಇಂತಹ ಭೂವಿಭಜನೆಯು ವೇದ ವಾಙ್ಮಯದಲ್ಲೂ ಕಂಡುಬರುತ್ತದೆ. ಕೃಷ್ಣ ಯಜುರ್ವೇದದಲ್ಲಿ ಇದರ ಸ್ಪಷ್ಟ ಉದಾಹರಣೆಗಳಿವೆ.

ಮೇಲೆ ತಿಳಿಸಿರುವವುಗಳಲ್ಲಿ 'ಮುಲ್ಲೈ' ಪ್ರದೇಶದ ಅಧಿದೇವತೆಯನ್ನು 'ಮಾಯೊನ್' ಎಂದು ಕರೆಯಲಾಗುತ್ತಿತ್ತು. ಈತನೇ ಶ್ಯಾಮಲ ವರ್ಣದವನಾದ 'ತಿರುಮಾಲ' ಎನ್ನುವವನು. ಈತನೇ ಶ್ರೀ ಮಹಾವಿಷ್ಣು. 'ಕುರುಂಜಿ'ಯ ಅಧಿದೇವತೆ 'ಶೆಯೊನ್' ಎನ್ನುವವನು ಅಂದರೆ ಈತನೇ ಗೌರವ ವರ್ಣದವನಾದ 'ಮುರುಗನ್' ಎನ್ನುವ ಸುಬ್ರಹ್ಮಣ್ಯಸ್ವಾಮಿ. ಗೋವುಗಳು ಸಂಚರಿಸುವ 'ಮರುದವ್' ಎನ್ನುವ ಭೂಭಾಗಕ್ಕೆ ಮಳೆ ಸುರಿಸುವ 'ದೇವೇಂದ್ರ'ನು ಅಧಿದೇವತೆ. ಸಮುದ್ರತೀರ ಪ್ರದೇಶಕ್ಕೆ ಅಧಿದೇವತೆ ವರುಣನು. ಐದನೆಯ ಭೂಭಾಗಕ್ಕೆ 'ಕೊಟ್ರವೈ' ಎನ್ನುವಾತನು ಅಧಿದೇವತೆ.

ದ್ರಾವಿಡರ ಕಲ್ಪನೆಗೆ ಅನುಗುಣವಾಗಿ ಈ ಹೆಸರುಗಳನ್ನು ಇಟ್ಟಿದ್ದರೂ ಮೊದಲಿನಿಂದಲೂ ಆರ್ಯರ ದೇವತೆಗಳೊಂದಿಗೆ ದ್ರಾವಿಡರ ದೇವತೆಗಳ ಸಂಬಂಧವಿದ್ದಿರಬಹುದೆನ್ನುವ ಅನುಮಾನ ಇದ್ದೇ ಇದೆ. ದ್ರಾವಿಡ, ಆರ್ಯರ ಸತ್ಸಂಬಂಧದ ಫಲವಿದ್ದರೂ ಇರಬಹುದು ಈ ಭಾವನೆ.

ಈ ಐದು ದೇವತೆಗಳಲ್ಲಿ 'ತಿರುಮಾಲ' (ಮೊಯನ್), ಮುರುಗನ್ (ಸುಬ್ರಹ್ಮಣ್ಯ ಸ್ವಾಮಿ), 'ಕೊಟ್ರವೈ' ಈ ಮೂವರು ಮಾತ್ರ ಪ್ರಧಾನರಾಗಿದ್ದು, ಇತರೇ ಇಬ್ಬರು ಕೇವಲ ನಿಮಿತ್ತ ಮಾತ್ರರಾಗಿದ್ದರು. ಇಂದ್ರ, ವರುಣರು ಗೌಣರಾಗಿದ್ದರು. ಈ ವಿಷಯ ಶಾಸನಾಧಾರಗಳಿಂದಲೂ ಸ್ಪಷ್ಟವಾಗಿದೆ.

'ತೊಲ್ ಕಾಪ್ಪಿಯನ್' ಗ್ರಂಥದಲ್ಲಿ ವಿವರಿಸಲ್ಪಟ್ಟಿರುವ ದೇವತೆಗಳಿಗೂ, ತದನಂತರದ ಗ್ರಂಥಗಳಲ್ಲಿ ವರ್ಣಿಸಲ್ಪಟ್ಟಿರುವ ದೇವತೆಗಳಿಗೂ ತುಂಬಾ ಹೋಲಿಕೆಗಳಿವೆ. ಈ ಎರಡೂ ಕಾಲಗಳ ನಡುವೆ ಸುಮಾರು ಎರಡು ಶತಮಾನ ಗಳ ಅಂತರವಿದೆ. ಬಹುಶಃ ಈ ಸಂಧಿಕಾಲದಲ್ಲೆ ಆರ್ಯ ದ್ರಾವಿಡ ಸಂಸ್ಕೃತಿಗಳು ಮಿಶ್ರವಾಗಿರಬಹುದೆಂದು ಇತಿಹಾಸಕಾರರು ಊಹಿಸಿದ್ದಾರೆ.

ಪ್ರಕೃತಿಯೊಂದಿಗೆ ಆನಂದದಿಂದ ಒಂದುಗೂಡಿದ್ದ ತಮಿಳರ ಭಕ್ತಿಭಾವವು ಕ್ರಮ ಕ್ರಮವಾಗಿ ವೈದಿಕ ಪ್ರಕ್ರಿಯೆಗಳೊಂದಿಗೆ ಸಮ್ಮಿಳಿತವಾಗಿ ಒಂದು ವಿಶಿಷ್ಟ ರೀತಿಯ ಭಕ್ತಿ ತತ್ವವು ರೂಪುಗೊಂಡಿತು. ಇದರ ಫಲವಾಗಿ ತಮಿಳರ ದೇವತೆ ಗಳಲ್ಲಿಯೂ ಬದಲಾವಣೆಗಳು ಕಂಡುಬಂದವು.

ಆರ್ಯ, ದ್ರಾವಿಡ ಸಂಸ್ಕೃತಿಗಳು ಒಂದಾದುದರಿಂದ ಎರಡಾಗಿದ್ದ ಭಿನ್ನ ಭಕ್ತಿ ಸಿದ್ಧಾಂತಗಳು ಒಂದಾದುವು. ಈ ಏಕೀಕರಣವು ಕ್ರಿ.ಶ. ಎರಡು, ಮೂರು ಶತಮಾನಗಳವರೆಗೂ ಮುಂದುವರಿಯಿತು. ಇದಕ್ಕೆ ಪ್ರಮಾಣಗಳು ಸಂಘೋತ್ತರ ಕಾಲದ ರಚನೆಗಳಲ್ಲಿರುವುದನ್ನು ಗಮನಿಸಬಹುದು. ಈ ಮಧ್ಯ ಕಾಲೀನ ರಚನೆಗಳಲ್ಲೂ ಕೂಡ ವೈದಿಕ ದೇವತೆಗಳನ್ನು ಕುರಿತಾದ ವಿವರಗಳು ಅಲ್ಲಲ್ಲಿ ಕಂಡುಬರುತ್ತವೆ.

'ಮುಲ್ಲೈ' ಅರಣ್ಯ ಪ್ರಾಂತ್ಯದ ಅಧಿದೇವತೆ 'ಮಾಯೊನ್' ಉಳಿದ ದೇವತೆಗಳಿಗಿಂತ ಅಗ್ರಸ್ಥಾನ ದೊರೆತು, ಕಾಲಾನುಕ್ರಮದಲ್ಲಿ ಈ ದೇವತೆಯು ಇತರೇ ಭೂಭಾಗಗಳ ಮೇಲೂ ಪ್ರಭಾವ ಬೀರತೊಡಗಿದನು. 'ಮಾಯೊನ್' ಅಂದರೆ 'ನೀಲಮೇಘಶ್ಯಾಮನಾದ ಭಗವಂತನು' ಎಂದರ್ಥ. ಈ ಭಗವಂತನ ಮತ್ತೊಂದು ಹೆಸರು ತಿರುಮಾಲ.

'ಕುರುಂಜಿ' ಎನ್ನುವ ಪರ್ವತ ಪ್ರದೇಶಕ್ಕೆ 'ಶೆಯೊನ್' ಎನ್ನುವ ದೇವತೆ ಯಾದರೂ, ಈತನನ್ನು 'ಮುರುಗನ್' ಎನ್ನುವ ಹೆಸರಿನಿಂದ ವ್ಯವಹರಿಸುತ್ತಾರೆ. ತಮಿಳುನಾಡಿನಲ್ಲಿ ಅವಿವಾಹಿತರಾದ ಕನ್ಯೆಯರು ಯೋಗ್ಯನಾದ ವರನೇ ತನಗೆ ಪತಿಯಾಗಬೇಕೆಂಬ ಆಕಾಂಕ್ಷೆಯಿಂದ ಈ ದೇವತೆಯನ್ನು ಪೂಜಿಸುತ್ತಿದ್ದರಂತೆ. ಈ ದೇವತೆಯ ಆಯುಧ ಭಲ್ಲೆ. ಈತನಿಗೆ ದಂಡಾಯುಧನ್, ದಂಡಪಾಣಿ ವೇಲನ್, ವೇಲಾಯುಧನ್, ವೇಲವನ್ ಎಂಬ ಹೆಸರುಗಳೂ ಉಂಟು. ಈ ಹೆಸರುಗಳು ಈತನ ವೀರತ್ವದ ಸ್ವರೂಪವನ್ನು ಸೂಚಿಸುತ್ತವೆ. ಈತನನ್ನು

ಸಂಸ್ಕೃತದಲ್ಲಿ ಕಾರ್ತಿಕೇಯ, ಸ್ಕಂದ ಎಂಬ ಹೆಸರುಗಳಿಂದ ಕರೆಯುತ್ತಾರೆ. ಆದರೆ ಸುಬ್ರಹ್ಮಣ್ಯಸ್ವಾಮಿ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿರುವ ಈತನಿಗೆ ಆ ಕಾಲದಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿರುವ ಉದಾಹರಣೆಗಳು ಇವೆ.

ಮೇಘಾಧಿಪತಿಯಾದ ದೇವೇಂದ್ರನು 'ಮರುದಮ್' ಎನ್ನುವ ಫಲವತ್ತಾದ ಭೂಮಿಯ ಅಧಿದೇವತೆ. ಈತನ ಆಯುಧ ವಜ್ರ (ವಜ್ರಾಯುಧ). ನೆಲವೆಲ್ಲ ಒಣಗಿದಾಗ, ಅವಶ್ಯಕತೆ ಇದ್ದಾಗ, ಈತನು ಮೇಘಗಳನ್ನು ಕಳುಹಿಸಿ, ಮಳೆಯನ್ನು ಸುರಿಸುವನು. ಈತನಿಗೆ ಪ್ರಿಯವಾದ ಭೋಜನ ವಸ್ತುವೆಂದರೆ 'ಪೊಂಗಲ್' ಎನ್ನುವ ಮುದ್ಗಾನ್ನ. ಮಕರ ಸಂಕ್ರಾಂತಿ ಸಮಯದಲ್ಲಿ ತಮಿಳರು ಈ ದೇವತೆಯನ್ನು ಪೂಜಿಸಿ, ಪೊಂಗಲ್‌ನಿಂದ ಈತನನ್ನು ತೃಪ್ತಿಪಡಿಸುವ ಪದ್ಧತಿ ಇಂದಿಗೂ ತಮಿಳುನಾಡಿನಲ್ಲಿ ರೂಢಿಯಲ್ಲಿದೆ. ಐರಾವತ ಎನ್ನುವ ಗೌರವರ್ಣ ಗಜೇಂದ್ರನು ಈತನ ವಾಹನ. ಆ ಕಾಲದಲ್ಲಿ ಈ ದೇವೇಂದ್ರನಿಗೆ ದೇವಾಲಯಗಳನ್ನು ಕೂಡ ನಿರ್ಮಾಣ ಮಾಡಿದ್ದರು. ಇವನ ವಜ್ರಾಯುಧಕ್ಕೆ ಬೇರೆಯೇ ಆದ ದೇವಾಲಯವೊಂದನ್ನು ನಿರ್ಮಿಸಿದ್ದಾಗಿ 'ಶಿಲಪ್ಪದಿಕಾರಂ'ನಲ್ಲಿ ತಿಳಿಸಿದೆ. ಇವನ ಅನುಗ್ರಹದಿಂದ ಎಲ್ಲ ವಿಧವಾದ ಸಸ್ಯಗಳೂ ಸಮೃದ್ಧವಾಗಿ ಫಲಿಸಲೆಂದು, ಒಳ್ಳೆಯ ಫಸಲಿನಿಂದ ಭೂಮಿಯು ಕೂಡಿರಲೆಂದು ಇಂದ್ರನನ್ನು ಪ್ರಾರ್ಥಿಸುತ್ತಿದ್ದರು. ಪ್ರತಿವರ್ಷ ಆ ದೇವನ ಸಂತೋಷಕ್ಕಾಗಿ 'ಇಂದ್ರವಿಲಾ' ಎನ್ನುವ ಇಂದ್ರೋತ್ಸವವನ್ನು ಏರ್ಪಡಿಸುತ್ತಿದ್ದು, ಆ ಉತ್ಸವವು ತುಂಬಾ ವೈಭವಯುತವಾಗಿ ನಡೆಯುತ್ತಿತ್ತೆಂದು 'ಶಿಲಪ್ಪದಿಕಾರ' ಕೃತಿಯು ತಿಳಿಸುತ್ತದೆ.

ವರುಣನು 'ನೆಯದಲ್' ಎನ್ನುವ ಕರಾವಳಿ ಪ್ರದೇಶಕ್ಕೆ ಅಧಿದೇವತೆಯಾಗಿದ್ದನು. ಈ ದೇವರನ್ನು ಬೆಸ್ತರು ಬಹಳಷ್ಟು ಶ್ರದ್ಧಾಭಕ್ತಿಗಳಿಂದ ಪೂಜಿಸುತ್ತಿದ್ದರು. ಈ ದೇವತೆಗೆ ತಿಮಿಂಗಲದ ದಂತವು ಆಯುಧ. ಆ ಕಾಲದಲ್ಲಿದ್ದ ಪಾಂಡ್ಯರಾಜನು ಪ್ರತಿವರ್ಷ ಮಹಾವೈಭವದಿಂದ ಈ ಮಹೋತ್ಸವವನ್ನು ಆಚರಿಸುತ್ತಿದ್ದನಂತೆ ! ಈ ವರುಣ ದೇವತೆಗೆ ಹಾಗೂ ಇಂದ್ರದೇವನಿಗೆ ತಂಜಾವೂರಿನಲ್ಲಿ ದೇವಾಲಯಗಳು ಇದ್ದುವೆಂದು ಆ ದೇವಾಲಯದಲ್ಲಿ ದೊರೆತಿರುವ ಶಿಲಾಶಾಸನವು ತಿಳಿಸುತ್ತದೆ.

'ಪಾಲೈ' ಎನ್ನುವ ಮರುಭೂಮಿಗೆ 'ಕೊಟ್ರವೈ' ಎನ್ನುವ ಅಧಿಷ್ಠಾನ ದೇವತೆ. ಈಕೆಯು ಯುದ್ಧಭೂಮಿಯಲ್ಲಿ ವಿಜಯವನ್ನು ತಂದುಕೊಡುತ್ತಾ

ಳೆಂದು ತಮಿಳರ ನಂಬಿಕೆ. ಆದುದರಿಂದ ಯುದ್ಧದಲ್ಲಿ ವಿಜಯ ಹೊಂದಬೇಕೆಂಬ ಆಸೆ ಇರುವವರೆಲ್ಲರೂ ಈ ದೇವತೆಯನ್ನು ಪೂಜಿಸುತ್ತಿದ್ದರೆಂದು 'ತೊಲ್ ಕಾಪ್ಪಿಯಮ್' ತಿಳಿಸುತ್ತದೆ. ಈ ದೇವತೆಯನ್ನು ಸಾಧಾರಣವಾಗಿ 'ಮಿರವರ್' ಎನ್ನುವ 'ಕಲ್ಲಾರ್' ಪ್ರಜೆಗಳು ಪೂಜಿಸುವರಂತೆ. ಇವರು ಸಾಮಾನ್ಯವಾಗಿ ನಿಮ್ನ ಜಾತಿಯವರಾಗಿದ್ದು, ತಮ್ಮ ದೇವತೆಯ ಸಂತೃಪ್ತಿಗಾಗಿ ಪಶುಗಳನ್ನು, ಒಮ್ಮೊಮ್ಮೆ ನರಬಲಿಯನ್ನೂ ಅರ್ಪಿಸುತ್ತಿದ್ದರಂತೆ. ಈ ದೇವತೆಯು ತ್ರಿನೇತ್ರಳಾಗಿದ್ದಳೆಂದು 'ಶಿಲಪ್ಪದಿಕಾರಂ' ತಿಳಿಸುತ್ತದೆ.

### ತಮಿಳುನಾಡಿನಲ್ಲಿ ವೈಷ್ಣವ ಧರ್ಮ

ತಮಿಳುನಾಡಿನಲ್ಲಿ 'ತಿರುಮಾಲ್ಕೆ' ಎಂದರೆ ವಿಷ್ಣುವೆಂದೂ, 'ತಿರುಮಾಲಿನ್ಕೆ' ಎಂದರೆ ಲಕ್ಷ್ಮೀದೇವಿ ಎಂದೂ ಅರ್ಥವಿದೆ. ಲಕ್ಷ್ಮಿಯನ್ನು 'ಪೆರಿಯ ಪಿರಾಟ್ಟಿ' ಎಂದು ಶ್ರೀವೈಷ್ಣವ ಸಂಪ್ರದಾಯಗಳು ವ್ಯವಹರಿಸುತ್ತವೆ. ಈ ಪೆರಿಯ ಪಿರಾಟ್ಟಿಯೇ ಮೊಟ್ಟಮೊದಲನೆಯದಾಗಿ ಶ್ರೀವೈಷ್ಣವ ಸಂಪ್ರದಾಯವನ್ನು ಜಗತ್ತಿನಾದ್ಯಂತ ಪ್ರವರ್ತಿಸುವಂತೆ ಮಾಡಿದ್ದು, ಆದರಿಂದ ಈ ಸಂಪ್ರದಾಯಕ್ಕೆ 'ಶ್ರೀ ಸಂಪ್ರದಾಯ' ಎಂಬ ಹೆಸರು ಬಂದಿತು. ಆದರಿಂದಲೇ ಈ ಸಂಪ್ರದಾಯವನ್ನು ತಮಿಳು ಭಕ್ತರುಗಳು 'ತಿರುಮಾಲ್ಕೆ ಧರ್ಮ' ಎಂದು ವ್ಯವಹರಿಸುತ್ತಾರೆ. ಕಾಲಾನುಕ್ರಮದಲ್ಲಿ ಇದು 'ತಿರುಮಾಲ ಧರ್ಮ' ಎಂದು ರೂಢಿಯಾಯಿತು.

ಈ ವೈಷ್ಣವ ಧರ್ಮವು ಸಂಘ ಸಾಹಿತ್ಯದಲ್ಲಿ ವಿಸ್ತಾರವಾಗಿಯೇ ಕಂಡು ಬರುತ್ತದೆ. ಆದರೂ ಇತರೇ ಮತಗಳ ಪ್ರಾಬಲ್ಯದಿಂದ ಈ ಧರ್ಮಕ್ಕೆ ಆ ಕಾಲದಲ್ಲಿ ಸಿಗಬೇಕಾದಷ್ಟು ಪ್ರಚಾರ ಲಭಿಸಲಿಲ್ಲ. ಆದರೆ ಅನಂತರದಲ್ಲಿ ಈ ಧರ್ಮವು ಆಳ್ವಾರರ ದಿವ್ಯಪ್ರಬಂಧಗಳ ಮುಖಾಂತರ ಸುಪುಷ್ಟಗೊಂಡು, ಹೆಚ್ಚು ಪ್ರಚಾರ ಪಡೆಯಿತು. ಆ ದಿವ್ಯಪ್ರಬಂಧಗಳಲ್ಲಿ ವೈಶಿಷ್ಟ್ಯತೆಯು ಮುಂದೆ ನಾಥಯಾಮುನ ರಾಮಾನುಜಾದಿ ಆಚಾರ್ಯವರ್ಯರು ಚೆನ್ನಾಗಿ ಗುರ್ತಿಸಿ, ಅವುಗಳಲ್ಲಿನ ವಿಶಿಷ್ಟ ವಿಷಯಗಳನ್ನು ತಮ್ಮ ದಾರ್ಶನಿಕ ಗ್ರಂಥಗಳಲ್ಲಿ ವಿಪುಲವಾಗಿ ವಿಶದೀಕರಿಸಿದರು. ಇದರ ಮುಖಾಂತರ ಶ್ರೀವೈಷ್ಣವತ್ವದ ಧರ್ಮತೇಜವನ್ನು ಭಾರತಾದ್ಯಂತ ಹರಡಲು ಸಹಾಯವಾಯಿತು.

ಸಂಘಕಾಲದ ಮೊದಲಿನ 'ತೊಲ್ ಕಾಪ್ಪಿಯಮ್' ಗ್ರಂಥದ ರಚನಾಕಾರನು ತನ್ನ ಗ್ರಂಥದ ಪ್ರಾರಂಭದಲ್ಲಿ ಅಧಿದೇವತೆಗಳನ್ನು ವರ್ಣಿಸುವ ಸಂದರ್ಭದಲ್ಲಿ ಮೊಟ್ಟಮೊದಲು ತಿರುಮಾಲ (ವಿಷ್ಣು) ನನ್ನು ಉದಾಹರಿಸುತ್ತಾನೆ.

(ಅಹಂ-ಸೂತ್ರ 5 ಮತ್ತು 30).

ಇದೇ ರೀತಿಯಲ್ಲಿ 'ನೇದಿಕಲಾರ್' ಎನ್ನುವ ಮತ್ತೊರ್ವ ಸುಪ್ರಸಿದ್ಧ ಕವಿಯು ತಾನು ರಚಿಸಿದ 'ಪೆರಿಯ ಪುರಾಣ'ದಲ್ಲಿ ಇತರೇ ದೇವತೆಗಳಿಗಿಂತ ತಿರುಮಾಲೈ (ವಿಷ್ಣುವಿ)ಗೆ ಸಂಬಂಧಪಟ್ಟ ಮಹಿಮೆಗಳನ್ನೇ ವಿಸ್ತಾರವಾಗಿ (ತಿರುಕ್ಕುರಲ್ ಪುರಂದರ ಪುರಾಣ-16ನೇ ಪದ್ಯದಲ್ಲಿ) ಪ್ರಸ್ತಾಪಿಸುತ್ತಾನೆ. ಅರಣ್ಯ ಪ್ರದೇಶಗಳಿಗೆ ಆ ದೇವದೇವನು ಅಧಿದೇವತೆಯಾಗಿದ್ದನು ಎಂದು ಕವಿ ವರ್ಣಿಸಿದ್ದಾನೆ.

ದೇವತೆಗಳಲ್ಲಿ ವಿಷ್ಣುವಿಗಿರುವ ಪ್ರಾಮುಖ್ಯತೆಯನ್ನು ಸೂಚಿಸುವುದಕ್ಕಾಗಿ ವ್ಯವಹರಿಸುವಾಗ 'ಮಾಯೊನ್' ಪದವನ್ನೇ ಅಲ್ಲದೆ ಅದೇ ಪದದ ಅರ್ಥ ನೀಡುವ 'ತಿರುಮಾಲ' ಪದವನ್ನು ಕೂಡ ಬಹಳಷ್ಟು ಸಲ ಪ್ರಯೋಗಿಸಿರುವುದು ಕಂಡುಬರುತ್ತದೆ.

ಕೇವಲ ಮಾನವರನ್ನೇ ಅಲ್ಲದೆ ಸರ್ವ ಜೀವರಾಶಿಗಳನ್ನೂ ಸಂರಕ್ಷಿಸುವ ದೇವದೇವನೇ 'ತಿರುಮಾಲ'ನೆಂದು 'ತೊಲ್ ಕಾಪ್ಪಿಯಮ್'ನಲ್ಲಿ (ಪೊರಲ್, ಸೂತ್ರ 60ರಲ್ಲಿ) ವಿಶದೀಕರಿಸಲಾಗಿದೆ. ಈ ಲಕ್ಷಣ ಶಾಸ್ತ್ರಕಾರನು ತನ್ನ ಗ್ರಂಥದಲ್ಲಿ 'ಪುವೈನಿಲೈ' ಎನ್ನುವ ಕವಿತಾ ಲಕ್ಷಣವನ್ನು ವಿವರಿಸುತ್ತಾ, 'ಉತ್ತಮನಾದ ರಾಜನು ತಿರುಮಾಲನೊಂದಿಗೆ ಹೋಲಿಸಿಕೊಳ್ಳಲು ತಕ್ಕವನಾಗಿರುತ್ತಾನೆ' (ನಾ ವಿಷ್ಣುಃ ಪೃಥಿವೀ ಪತಿ) ಎಂದು ಉಲ್ಲೇಖಿಸುತ್ತಾನೆ. ಆ ದೇವನು ಅನಂತ ಕಲ್ಯಾಣ ಗುಣಗಣ ವಿಶಿಷ್ಟನಾಗಿದ್ದಾನೆ ಎಂದು ಸಂಕೀರ್ತಿಸಿದ್ದಾನೆ. ಬೇರೆ ಯಾವ ದೇವತೆಗಳನ್ನೂ ಇಷ್ಟೊಂದು ವೈಭವವಾಗಿ ಈ ವಿದ್ವತ್ ಕವಿಯು ತನ್ನ ಲಕ್ಷಣ ಗ್ರಂಥದಲ್ಲಿ ವರ್ಣಿಸಿರುವುದು ತಿರುಮಾಲನ ಹಿರಿಮೆಯನ್ನು ಎತ್ತಿ ತೋರಿಸುತ್ತದೆ. ಆದುದರಿಂದ ಅಂದಿನ ತಮಿಳರು ತಿರುಮಾಲನ ಮಹಿಮೆಗಳನ್ನು ಎಷ್ಟೋ ಪೆರಿಮೆಯಿಂದ ಗುರ್ತಿಸಿದ್ದರು ಎಂಬುದನ್ನು ನಾವು ಸುಲಭವಾಗಿ ಅರಿಯಬಹುದು.

'ಮುಲ್ಲೈ' ಅರಣ್ಯ ಪ್ರದೇಶದಲ್ಲಿ ವಾಸಿಸುವ 'ಆಯರ್' (ಗೊಲ್ಲ) ಕುಲದವರು ತಮ್ಮ ಇಷ್ಟದೈವವಾದ ತಿರುಮಾಲನಿಗೆ ಸಂಬಂಧಿಸಿದ ಮಹಿಮೆಗಳನ್ನು ವಿವರಿಸುವ ಗೀತೆಗಳನ್ನು ಮಧುರವಾಗಿ ಹಾಡುತ್ತಾ, ಆ ದೇವದೇವನ ವಿವಿಧ ಲೀಲೆಗಳನ್ನು ವಿಶೇಷತಃ ಕೊಂಡಾಡುತ್ತಿದ್ದರು. ಆ ಗೊಲ್ಲ ಯುವತಿಯರಿಗೆ

ತಮ್ಮ ಪತಿಯರ ಬಗ್ಗೆ ಎಷ್ಟೊಂದು ಭಕ್ತಿಭಾವವಿತ್ತೋ ಅಷ್ಟೇ ಭಕ್ತಿಭಾವವನ್ನು ತಮ್ಮ ಇಷ್ಟದೈವವಾದ 'ಮಾಯೊನ್' (ತಿರುಮಾಲ)ನ ಮೇಲೆ ಇರಿಸಿದ್ದರು (ತೊಲ್ ಕಾಪ್ಪಿಯನಾರ್-ಪೊರುಳ್-84, 85ನೇ ಸೂತ್ರ).

'ತೊಲ್ ಕಾಪ್ಪಿಯನಾರ್' ರಚಿತವಾದ ಕ್ರಿ.ಶ. 5ನೇ ಶತಮಾನದಿಂದಲೇ ತಿರುಮಾಲನಿಗೆ ಸಂಬಂಧಿಸಿದ ಗಾಥೆಗಳು ತಮಿಳರ ಮಾನಸ್ಸುಗಳನ್ನು ಬಹಳವಾಗಿ ಆಕರ್ಷಿಸತೊಡಗಿದುವು. ಆದುದರಿಂದ ಆ ಭಗವಂತನಿಗೆ ಸಂಬಂಧಿಸಿದ ಚರಿತ್ರಾಂಶ ಗಳು ಸಂಘಕಾಲದಿಂದಲೇ ಚೆನ್ನಾಗಿ ಪ್ರಚಾರಕ್ಕೆ ಬಂದಿತೆಂದೂ ಇದರಿಂದ ಸ್ಪಷ್ಟ ವಾಗುತ್ತದೆ.

## ಸಂಘ ಸಾಹಿತ್ಯದಲ್ಲಿ ಶ್ರೀವೈಷ್ಣವತ್ವ

ಸಂಘ ಸಾಹಿತ್ಯಕ್ಕೆ ಸಂಬಂಧಪಟ್ಟ ರಚನೆಗಳಲ್ಲಿ 'ಎಟ್ಟು ತೊಕೈ' (ಎಂಟು ಖಂಡಕಾವ್ಯಗಳ ಸಂಪುಟ) 'ಪತ್ತು ಪಾಟ್ಟು' (ಹತ್ತು ಖಂಡಕಾವ್ಯಗಳ ಸಂಪುಟ) 'ಪದಿನೇಣ ಕೀಳ ಕಣಕ್ಕು' (ಹದಿನೆಂಟು ಲಘುಕಾವ್ಯಗಳ ಸಂಪುಟ) ಎನ್ನುವ ಮೂರು ಗ್ರಂಥಗಳು ಮಾತ್ರ ಈಗ ಲಭ್ಯವಿದೆ.*

ಇವುಗಳಲ್ಲಿ ಮೊಟ್ಟಮೊದಲನೆಯದಾದ 'ಎಟ್ಟು ತೊಕೈ' ಎನ್ನುವ ಸಂಪುಟ ದಲ್ಲಿರುವ 'ನಟ್ಟಿಣೈ' ಎನ್ನುವ ಕಾವ್ಯವು ಉಳಿದ ಎಲ್ಲ ಕಾವ್ಯಗಳಿಗಿಂತಲೂ ಪ್ರಾಚೀನವಾದುದೆಂದು ತಿಳಿದುಬಂದಿದೆ. ಇದರಲ್ಲಿ ತಿರುಮಾಲನಿ (ವಿಷ್ಣುವಿ)ಗೆ ಸಂಬಂಧಿಸಿದ ಅನೇಕ ರೀತಿಯ ಗಾಥೆಗಳನ್ನು ಸವಿಸ್ತಾರವಾಗಿ ವರ್ಣಿಸಲಾಗಿದೆ. ಇದರಲ್ಲಿನ ಓರ್ವ ಕವಿಯು ಸಮಸ್ತ ವಿಶ್ವವೂ ತಿರುಮಾಲಮಯವಾಗಿ ದರ್ಶಿಸಿ ದ್ದಾನೆ. 'ಸರ್ವಂ ವಿಷ್ಣುಮಯಂ ಜಗತ್' ಎನ್ನುವ ಪ್ರಾಚೀನ ವೇದಗಳ ಹೇಳಿಕೆಗೆ ಸರಿಹೊಂದುವುದನ್ನು ಗಮನಿಸಬಹುದು. ವಿಶ್ವದಾದ್ಯಂತ ತಿರುಮಾಲನ ಪ್ರಭಾವವು ವ್ಯಾಪಿಸಿತ್ತು ಎನ್ನುವುದನ್ನು ಈ ಕವಿ ಗಮನಿಸಿದ್ದಾನೆ. ವಿಶ್ವ

*ಎಟ್ಟು ತೊಕೈ, ಪತ್ತು ಪಾಟ್ಟು ಎನ್ನುವ ಸಂಪುಟಗಳಲ್ಲಿನ ಕಾವ್ಯಗಳ ಹೆಸರು ಗಳನ್ನು ಈ ಮುಂಚೆಯೇ ತಿಳಿಸಲಾಗಿದೆ. ಆದುದರಿಂದ ಇಲ್ಲಿ 'ಪದಿನೇಣ ಕೀಳ ಕಣಕ್ಕು' ಎನ್ನುವ ಸಂಪುಟದಲ್ಲಿನ ಕೆಲವು ವಾಕ್ಯಗಳನ್ನು ಮಾತ್ರ ಇಲ್ಲಿ ಹೆಸರಿಸಲಾಗಿದೆ- ತಿರುಕ್ಕುರಳ್, ತಿರುಕಟುಕವಮ್, ನಾನ್ಮಣಿ ಕಟಿಕವಾ್, ತಿರುಪಂಚಮೂಲವ್, ನಾಲಡಿಯಾರ್, ಕಾರ್ ನಾರ್ಪದು, ಕಳವಳ ನಾರ್ಪದು, ಇನಿವೈ ನಾರ್ಪದು, ಇನ್ನಾ ನಾರ್ಪದು, ಎಂತಿಣೈ, ಪಳವಮೊಳಿ, ಮುದುಮೊಳಿ, ಕಾಂಚಿ-ಇತ್ಯಾದಿ ಲಘು ಕಾವ್ಯ ಗಳು ಸೇರಿ ಒಟ್ಟು ಹದಿನೆಂಟು ಇವೆ.

ವೆಲ್ಲವೂ ತಿರುಮಾಲವೆಂದೂ, ತಿರುಮಾಲನೇ ವಿಶ್ವವೆಂದು ಈ ಕವಿಯು ನಂಬಿದ್ದನು. ಈ ಕಾವ್ಯದಲ್ಲಿ ಮಂಗಳಾಚರಣವೇ ಅಲ್ಲದೆ ನೂರಎಪ್ಪತ್ತೈದು ಕವಿಗಳು ರಚಿಸಿದ ನಾಲ್ಕುನೂರು ಕವಿತೆಗಳಿವೆ. ಈ ಕವಿತೆಗಳನ್ನು ರಚಿಸಿದವರಲ್ಲಿ ಎಂಟು ಮಂದಿ ಕವಿಯತ್ರಿಯರು ಇದ್ದಾರೆ. ಕಪಿಲರ್, ಉಲ್ಲೋಚನಾರ್–ಎನ್ನುವ ಕವಿಗಳ ರಚನೆಗಳು ಉಳಿದಿರುವ ಕವಿಗಳ ರಚನೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿವೆ.

ಇವರಿಬ್ಬರಲ್ಲಿ ಮೊದಲ ಕವಿಯಾದ ಕಪಿಲರ್ ಕವಿಯು ಪ್ರಕೃತಿ ಸೌಂದರ್ಯದ ಮುಖಾಂತರವೇ ತಾನು ತಿರುಮಾಲನನ್ನು ದರ್ಶಿಸಿದುದಾಗಿ ತನ್ನ ಕವಿತೆಯಲ್ಲಿ ವರ್ಣಿಸಿದ್ದಾನೆ.

ಎರಡನೇ ಕವಿಯಾದ ಉಲ್ಲೋಚನಾರ್‌ನು ಶ್ಯಾಮವರ್ಣದಿಂದ ಕೂಡಿದ ಪರ್ವತಗಳನ್ನು, ಆ ಪರ್ವತ ಪಂಕ್ತಿಗಳಿಂದ ಜಲಜಲ ಪ್ರವಹಿಸುವ ನಿರ್ಮಲವಾದ ನಿರ್ಝರಿಣಿಯನ್ನು ವೀಕ್ಷಿಸುತ್ತಿದ್ದಂತೆಯೇ ತನಗೆ ತಿರುಮಾಲನು ತನಗೆ ನೆನಪಿಗೆ ಬರುತ್ತಾನೆಂದು ತನ್ನ ಕಾವ್ಯದಲ್ಲಿ ಸ್ಪಷ್ಟೀಕರಿಸಿದ್ದಾನೆ.

ಮತ್ತೊಬ್ಬ ಕವಿಗೆ ಕಾಯಾಊ ಪುಷ್ಪ ಎನ್ನುವ ಒಂದು ವಿಶೇಷ ಪುಷ್ಪದಲ್ಲಿ, ನೀಲಗಗನದಲ್ಲಿ, ಸಮುದ್ರ ತರಂಗಗಳಲ್ಲಿ ವಿಷ್ಣುವು ಕಂಡುಬರುತ್ತಾನೆಂದು ಒಂದು ಕವನದಲ್ಲಿ ತಿಳಿಸಿದ್ದಾನೆ.

ಈ ರೀತಿಯಲ್ಲಿ ಸಂಘಕಾಲದ ಕವಿಗಳನೇಕರು ಪ್ರಕೃತಿಯಲ್ಲಿಯೇ ತಿರುಮಾಲನನ್ನು ದರ್ಶಿಸಿದಂತೆ, ಅಂದಿನ ತಮಿಳರು ತಿರುಮಾಲನ ಮಹಿಮೆಗಳನ್ನು ಕಥೆಗಳ ರೂಪದಲ್ಲಿ ಸಂಕೀರ್ತಿಸುತ್ತಿದ್ದರೆಂದು 'ನಟ್ರಿಣೈ' ಎನ್ನುವ ಕಾವ್ಯವು ತಿಳಿಸುತ್ತದೆ.

'ಪದಿಟ್ಟುಪತ್ತು' ಎನ್ನುವ ಕಾವ್ಯದಲ್ಲಿ ಅದರ ಕವಿಯಾದ 'ಕಾಪ್ಪಿಯ ಟ್ಟೊರು ಕಾಪ್ಪಿಯನಾರ್' ಎಂಬಾತನು ತನಗೆ ಆಶ್ರಯ ನೀಡಿದ 'ನಾಕಮುಡಿ ಚೆರಲ್' ಎನ್ನುವ ಓರ್ವ ಚೇರ ರಾಜನನ್ನು ವಿಷ್ಣುಭಕ್ತನನ್ನಾಗಿ ವರ್ಣಿಸಿದ್ದಾನೆ. ವರಾಹಾವತಾರದಿಂದ ಸರ್ವ ಭೂಮಂಡಲವನ್ನೂ ಸಂರಕ್ಷಿಸಿದ ತಿರುಮಾಲನನ್ನು (ಮಹಾವಿಷ್ಣುವನ್ನು) ಸರ್ವಕಾಲದಲ್ಲಿ ಸರ್ವಾವಸ್ಥೆಗಳಲ್ಲಿ ಸದ್ಭಕ್ತಿಯಿಂದ ಆರಾಧಿಸಬೇಕೆಂದು ಆ ರಾಜನು ಪ್ರಜೆಗಳಿಗೆ ಸೂಚಿಸಿದ್ದನೆಂದು ಆ ಕಾವ್ಯದಲ್ಲಿ ಉಲ್ಲೇಖಿಸಲಾಗಿದೆ.

ಈ ಕಾವ್ಯದಲ್ಲಿಯೇ ಮತ್ತೊಂದೆಡೆ ತಿರುಮಾಲನ ಭಕ್ತರು ಸ್ನಾನ ಮಾಡಿ, ಉಪವಾಸ ವ್ರತವನ್ನು ಕೈಗೊಂಡು, ತಿರುಮಾಲನ ದೇವಾಲಯಕ್ಕೆ ಹೋಗಿ, ಅಲ್ಲಿ ದಯಮಾಡಿರುವ ದಿವ್ಯಮಂಗಳ ವಿಗ್ರಹವನ್ನು ಸಂಸೇವಿಸಿ, ಅನೇಕ ರೀತಿಗಳಲ್ಲಿ ಆ ದೇವನನ್ನು ಸ್ತೋತ್ರಮಾಡಿ, ತುಳಸೀ ಮಾಲೆಗಳಿಂದ ಅಲಂಕರಿಸಲ್ಪಟ್ಟಿರುವ ಆ ತಿರುಮಲನ ಚರಣಾರವಿಂದಗಳ ಸನ್ನಿಧಿಯಲ್ಲಿ ಪುಷ್ಪಾಂಜಲಿಯನ್ನು ಸಮರ್ಪಿಸಿ, ತನ್ಮಯತ್ವದಿಂದ ನೃತ್ಯವನ್ನು ಮಾಡುತ್ತಿದ್ದರೆಂದು ವರ್ಣಿಸಲಾಗಿದೆ.

ಈ ಕಾವ್ಯದಲ್ಲಿ ವರ್ಣಿಸಲ್ಪಟ್ಟಿರುವ ದೇವಾಲಯವು ತಿರುವನಂತಪುರದಲ್ಲಿರುವ ಶೇಷಶಾಯಿಯೇ ಇಲ್ಲಿ ವಿವರಿಸಿರುವ ತಿರುಮಾಲನೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.*

'ಚೇತ್ವ ಕಟಂಗೀ' ಎನ್ನುವ ರಾಜನು ಇಲ್ಲಿನ ತಿರುಮಲ ಸನ್ನಿಧಿಯಲ್ಲಿ ತನಗಿರುವ ಭಕ್ತಿ, ಪ್ರಪತ್ತಿಗಳನ್ನು ತೋರಿಸುವುದಕ್ಕಾಗಿ ನಿತ್ಯ ನೈವೇದ್ಯ ದೀಪಾರಾಧನೆಗಳ ನಿಮಿತ್ತವಾಗಿ 'ಓಮನೂರ್' ಎನ್ನುವ ಹೆಸರಿನ ಗ್ರಾಮವೊಂದನ್ನು ತಿರುಮಲನಿಗೆ ಶಾಶ್ವತ ಕೈಂಕರ್ಯಕ್ಕಾಗಿ ಸಮರ್ಪಿಸಿದನೆಂದು 'ಕಪಿಲರ್' ಕವಿಯು ತನ್ನ ಕಾವ್ಯದಲ್ಲಿ ಸ್ತುತಿಸಿದ್ದಾನೆ. ಆದುದರಿಂದ ತಮಿಳರ ಆಳ್ವಿಕೆಗೆ ಒಳಪಟ್ಟ ಚೇರ ರಾಜ್ಯದಲ್ಲಿ ಪ್ರಾಚೀನ ಕಾಲದಿಂದಲೂ ತಿರುಮಾಲಾರ್ಚನೆ ಜರುಗುತ್ತಿದ್ದುವೆಂದು ಸ್ಪಷ್ಟವಾಗುತ್ತದೆ.

'ನಕ್ಕೀರರ್' ಎನ್ನುವ ಈ ಕಾಲದ ಖ್ಯಾತ ಕವಿಯು 'ಪುರನಾನೂರು' ಎನ್ನುವ ತನ್ನ ಕಾವ್ಯದಲ್ಲಿ ಬಲರಾಮನನ್ನು ವಿಪುಲವಾಗಿ ವರ್ಣಿಸಿದ್ದಾನೆ. ಸಮುದ್ರದಲ್ಲಿ ಸಮುತ್ಪನ್ನವಾದ ಧವಳ ವರ್ಣದ ಶಂಖದ ಕಾಂತಿಯಂತೆ ಬಲರಾಮನ ದೇಹಕಾಂತಿಯು ಪ್ರಜ್ವಲಿಸುತ್ತಿತ್ತು. ಆತನ ರಥದ ಧ್ವಜದಲ್ಲಿನ ತಾಳವೃಕ್ಷ ಚಿಹ್ನೆಯು ಇದಕ್ಕೆ ಸಾಂಕೇತಿಕವಾಗಿತ್ತೆಂದು ಇದರಲ್ಲಿ ಉಲ್ಲೇಖಿಸಲಾಗಿದೆ (ಪುರಮ್ 55–3–4).

ಇಂತಹ ಬಲರಾಮನಿಗೆ ಅನುಜನಾದ ಕಣ್ಣನ್ (ಕೃಷ್ಣ)ನ ಶರೀರವು ನೀಲಮಣಿಯ ಕಾಂತಿಯಂತೆ ವಿರಾಜಿಸುತ್ತಿತ್ತೆಂದೂ, ಆತನನ್ನೇ ತಿರುಮಲನೆಂದು ಜನರು ಭಾವಿಸಿದ್ದರೆಂದೂ ಈ ಕವಿಶೇಖರನು ಇದರಲ್ಲಿ ವಿವರಿಸಿದ್ದಾನೆ. (ಪುರಮ್ 174–1–5).

*'ತಮಿಳಮುಮ್–ವೈಷ್ಣವಮುಮ್'–ಎಂ. ರಾಧಾಕೃಷ್ಣ ಪಿಳ್ಳೈ–6ನೇ ಪುಟ.

'ಮಾಣಿಕ್ಕತ್ತುನಪ್ಪಸಲೈಯಾರ್' ಎನ್ನುವ ಪುತ್ತೋರ್ವ ಹೆಸರಾಂತ ಕವಿಯು ಕಣ್ಣನ್ (ಕೃಷ್ಣ)ನ ಮಹಿಮೆಗಳನ್ನು ತನ್ನ ಕಾವ್ಯದಲ್ಲಿ ವಿವರಿಸುತ್ತಾ, ದೇವದಾನವರ ಯುದ್ಧ ಸಂಭವಿಸಿದಾಗ ಹಗಲಿನಲ್ಲಿಯೇ ಕತ್ತಲು ಉಂಟಾಗು ವಂತೆ ಮಾಡಲು, ಅಸುರರು ಸೂರ್ಯನನ್ನು ಪೂರ್ತಿಯಾಗಿ ಅವರಿಸಿಬಿಟ್ಟರಂತೆ. ಆಗ ಭೂಮಂಡಲವೆಲ್ಲ ಅಂಧಕಾರಮಯವಾಯಿತು. ಇದರಿಂದ ಜನರೆಲ್ಲರೂ ಭಯಭ್ರಾಂತರಾದರು. ಆಗ ನೀಲವರ್ಣ ದೇಹಧಾರಿಯಾದ ಕಣ್ಣನ್ (ಕೃಷ್ಣ)ನು ಜಗತ್ ಕಲ್ಯಾಣ ಆಕಾಂಕ್ಷೆಯೊಂದಿಗೆ ಪುತ್ತೋರ್ವ ಸೂರ್ಯನನ್ನು ಸೃಷ್ಟಿಸಿ, ಆಕಾಶದಲ್ಲಿ ಬಿಟ್ಟನಂತೆ. ಆಗ ಪ್ರಪಂಚವೆಲ್ಲ ಬೆಳಕಾಯಿತಂತೆ. ಇದರಿಂದ ಜನ ರೆಲ್ಲರೂ ಸಂತುಷ್ಟರಾಗಿ, ಬಹಳಷ್ಟು ಸಂತೋಷಗೊಂಡರು. (ಪುರವ್ 157.1-8) ಇಷ್ಟೇ ಅಲ್ಲದೆ ಪ್ರಳಯ ಕಾಲದಲ್ಲಿ ವಿಷ್ಣುವಟಪತ್ರಶಾಯಿಯಾಗಿದ್ದ ವೃತ್ತಾಂತ ವನ್ನು ಕೂಡ ಈ ಕವಿಯು ತನ್ನ ಕಾವ್ಯದಲ್ಲಿ ವರ್ಣಿಸಿದ್ದಾನೆ. (ಪುರವ್ 191-1)

'ಪರಿಪಾಡಲ್' ಎನ್ನುವ ಗ್ರಂಥದಲ್ಲಿ ವಿಷ್ಣುವನ್ನು ಕುರಿತಾದ ವರ್ಣನೆ ಗಳನ್ನು ತುಂಬಾ ವಿಸ್ತಾರವಾಗಿ ನೀಡಲಾಗಿದೆ. 'ಪಾಡಲ್' ಎಂದರೆ 'ಗೀತೆಗಳು' ಎಂದರ್ಥ. ಈ ಸಂಪುಟದಲ್ಲಿನ ಎಪ್ಪತ್ತು ಕಾವ್ಯಗಳಲ್ಲಿ ಬೇರೆಯೇ ಆದ ಎಂಟು ಕಾವ್ಯಗಳು ತಿರುಮಾಲನಿಗೆ ಸಂಬಂಧಪಟ್ಟಂತಹ ವಿವಿಧ ವರ್ಣನೆಗಳಾಗಿವೆ.

ಈ ಸಂಪುಟದಲ್ಲಿನ ಮೊದಲ ಕಾವ್ಯದಲ್ಲಿ ಶೇಷಶಾಯಿಯಾದ ಭಗವಾನ್ ವಿಷ್ಣುವನ್ನು ವರ್ಣಿಸಲಾಗಿದೆ. ಅಲ್ಲಿ ಛತ್ರ, ಆಸನ, ದೀಪ ಇತ್ಯಾದಿಗಳನ್ನು ಚಿತ್ರಿಸಲಾಗಿದೆ. ನೀಲಮೇಘಶ್ಯಾಮನಾದ ತಿರುಮಾಲನ ವಕ್ಷಸ್ಥಳವನ್ನು ಅಲಂ ಕರಿಸಿರುವ ರಮಾದೇವಿಯು ಸತ್ಯ ಸುಂದರತೆಗಳ ಸಮನ್ವಯಗಳಂತೆ ಸುಶೋಭಿತ ಳಾಗಿದ್ದಾಳೆ. ಆಕೆಯನ್ನು ರಮಣೀಯವಾಗಿ ಕವಿ ವರ್ಣಿಸಿದ್ದಾನೆ.

ತಿರುಮಾಲನಿಗೆ ಸಂಬಂಧಪಟ್ಟ ವಿವಿಧ ಆಭೂಷಣ, ಆಭರಣಗಳನ್ನು ಕೂಡ ಕವಿ ವರ್ಣಿಸಿದ್ದಾನೆ. ಆ ಆಭೂಷಣಗಳೆಲ್ಲವೂ ಪ್ರಕೃತಿಯಲ್ಲಿನ ವಿವಿಧ ವಸ್ತುಗಳೇ ! ಅಗ್ನಿಯಿಂದ ಸಮಾವೃತವಾದ ಪರ್ವತವೇ ಆ ತಿರುಮಾಲನಿಗೆ ಪೀತಾಂಬರವಂತೆ. ಇದೇ ರೀತಿಯಲ್ಲಿ ಇತರೇ ವಸ್ತುಗಳೂ ಕೂಡ. ಇವೆಲ್ಲವೂ ತಿರುಮಾಲನಿಗೆ ಅಲಂಕಾರಪ್ರಾಯವಾದ ಭೂಷಣ ಸಮುದಾಯವಾಗಿ ಈ ಕಾವ್ಯದಲ್ಲಿ ವರ್ಣಿಸಲಾಗಿದೆ.

ಇದರ ಕವಿಯು ತನ್ನ ಅಕಿಂಚಿನತ್ವವನ್ನು, ಶೇಷತ್ವ, ಪಾರತಂತ್ರ್ಯಗಳನ್ನು,

ಭಗವನ್ಮಾಹಾತ್ಮ್ಯವನ್ನು ವ್ಯಕ್ತಗೊಳಿಸುತ್ತಾ, "ವೇದವೇದ್ಯರಾದ ಮಹರ್ಷಿಗಳು, ವಿಜ್ಞಾನವೇತ್ತರಾದ ಮಹನೀಯರುಗಳು ತಿರುಮಾಲನ ಮಹಿಮೆಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳದಿರುವಾಗ ಅಕಿಂಚಿನನಾದ ನಾನು, ಆ ತಿರುಮಾಲನ ಎಷ್ಟೊಂದು ಮಹಿಮೆಗಳನ್ನು ತಾನೆ ಗ್ರಹಿಸಿ, ವರ್ಣಿಸಬಲ್ಲೆನು ? ಅವಾಙ್ಮನಸ ಗೋಚರವಾದ ಆ ದೇವದೇವನ ಮಹಾಪ್ರಭಾವವನ್ನು ವರ್ಣಿಸಲಾರದಾದೆನು. ಆತನ ಅಣುಮಾತ್ರ ಕೃಪಾಕಟಾಕ್ಷವಾದರೂ ನನ್ನ ಮೇಲೆ ಪಸರಿಸಿದರೆ ನಾನೇ ಧನ್ಯನು" ಎಂದು ತನ್ನ ಕಾವ್ಯದಲ್ಲಿ ಮತ್ತೊಂದೆಡೆ ಹೇಳಿಕೊಂಡಿದ್ದಾನೆ.

ಬ್ರಹ್ಮರುದ್ರೇಂದ್ರಾದಿಗಳೆಲ್ಲರನ್ನೂ ತಿರುಮಾಲನು ತನ್ನ ಸಂಕಲ್ಪದಿಂದ ಸೃಷ್ಟಿಸುವನು, ಉದ್ಭವಿಸುವಂತೆ ಮಾಡುವನು. ಫಳಫಳನೆ ಹೊಳೆದು, ಧಗಧಗನೆ ಉರಿಯುವ ಚಕ್ರಾಯುಧವನ್ನು ತನ್ನ ಕರಕಮಲದಲ್ಲಿ ಧರಿಸಿರುವ ಆ ತಿರುಮಾಲನೇ ಅಖಿಲ ಪ್ರಪಂಚಕ್ಕೂ ಅಧಿಕರಣನು ಆತನೇ ಶೃತಿ, ಸ್ಮೃತಿ ಇತಿಹಾಸಾದಿಗಳಲ್ಲಿ ಪರಬ್ರಹ್ಮ ಅಭಿದಾನನಂತೆ ಹೊಗಳಲ್ಪಟ್ಟಿದ್ದಾನೆ. ಅಂತಹ ಪರಮಾತ್ಮನನ್ನು ಶರಣು ಹೊಂದಿರುವವರು ಮುಕ್ತರಾಗುವುದು ನಿಶ್ಚಿತವು. ಹೀಗೆಂದು ಸಂಘ ಸಾಹಿತ್ಯದಲ್ಲಿ ಅನೇಕ ಕಡೆಗಳಲ್ಲಿ ವಿಶದೀಕರಿಸಲ್ಪಟ್ಟಿದೆ. ಈ ಕಾರಣವನ್ನು ಅನುಸರಿಸಿ, ಸಂಘ ಕಾಲದ ಅನೇಕ ಕವಿಗಳು ಶ್ರೀವೈಷ್ಣವ ಹೃದಯಾಭಿಮಾನವನ್ನು ಹೊಂದಿದ್ದರೆಂದು ಭಾವಿಸಬಹುದು.

ಮೇಲೆ ಹೆಸರಿಸಲ್ಪಟ್ಟಿರುವ 'ಪರಿಪಾಡಲ್' ಕಾವ್ಯದಲ್ಲಿಯೂ ಕೂಡ ತಿರುಮಾಲನು ಹೊಂದಿದ ಅವತಾರಗಳನ್ನು ವರ್ಣಿಸಲಾಗಿದೆ. ದಶಾವತಾರಗಳಲ್ಲಿ ಬಲರಾಮನೂ ಕೂಡ ಓರ್ವನಾದುದರಿಂದ ಸಂಘ ಕಾಲದಲ್ಲಿ ಕೃಷ್ಣನಂತೆ ಬಲರಾಮನಿಗೂ ಕೂಡ ದೇವಾಲಯಗಳನ್ನು ಭಕ್ತರು ನಿರ್ಮಿಸಿದರು. ಇವನನ್ನೂ ಕೂಡ ಜನರು ಪೂಜಿಸುತ್ತಿದ್ದರೆಂದು ಈ ಕಾವ್ಯವು ತಿಳಿಸುತ್ತದೆ.

ಈ 'ಪರಿಪಾಡಲ್'ನ ಕವಿಯಾದ 'ಕಡವನ ವೇಯನಾರ್'ನು ಮುಖ್ಯವಾಗಿ ಭಗವತ್ ಶಾಸ್ತ್ರದಲ್ಲಿಯೂ, ಪುರಾಣೇತಿಹಾಸಗಳಲ್ಲಿಯೂ ಆಳವಾದ ಜ್ಞಾನವನ್ನು ಹೊಂದಿದ್ದವನಾಗಿದ್ದು, ಅವುಗಳ ಬಗ್ಗೆ ತುಂಬಾ ಗೌರವವನ್ನು ಹೊಂದಿದ್ದನು. ಅಲ್ಲದೆ ಗಾಢವಾದ ಅಭಿನಿವೇಶನವನ್ನೂ ಹೊಂದಿದ್ದನು. ಇವುಗಳಲ್ಲಿ ಅಂತರ್ಗತವಾಗಿರುವ ತಾತ್ತ್ವಿಕ ವಿಷಯಗಳನೇಕವನ್ನು ಈ ಕವಿಯು

ತನ್ನ ಕಾವ್ಯದಲ್ಲಿ ಉಪಯೋಗಿಸಿಕೊಂಡಿದ್ದಾನೆ. ಇದಕ್ಕೊಂದು ಉದಾಹರಣೆಯನ್ನೂ ಕೊಡಬಹುದು. ಈಗಾಗಲೇ ಹೆಸರಿಸಿರುವ ಭಗವತ್ ಶಾಸ್ತ್ರಗಳಲ್ಲಿ ವರ್ಣಿತವಾಗಿರುವ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ–ಈ ನಾಲ್ಕೂ ವ್ಯೂಹಗಳನ್ನು ಈ ಕವಿಯು ತನ್ನ ಕಾವ್ಯದಲ್ಲಿ ಸಾಲಾಗಿ ವೆಂಕಣಕಾರೀ, ಕರೂಂಕಣ ವೆಳ್ಳೈ, ಪೊಂಕಣ ಪಚ್ಚೈ, ಪೈಂಕಣ್ಮಾಲ್–ಎನ್ನುವ ಹೆಸರುಗಳಿಂದ ಸಂಕೇತಿಸಿದ್ದು, ಈ ವ್ಯೂಹಗಳಿಗೆ ಸಂಬಂಧಪಟ್ಟ ವಿಶೇಷಾಂಕಗಳನ್ನು ಕೂಡ ಅವುಗಳಲ್ಲೆ ವಿಶದೀಕರಿಸಿದ್ದಾನೆ.

ಇಷ್ಟೇ ಅಲ್ಲದೆ ಈ ಕಾವ್ಯ ಸಂಪುಟದಲ್ಲಿ ಪೃಥ್ವಿಯನ್ನು ರಕ್ಷಿಸಿದ ವರಾಹವತಾರವನ್ನು, ಪ್ರಹ್ಲಾದನ ಭಕ್ತಿ, ಶ್ರದ್ಧೆಗಳನ್ನು ಸಾರ್ಥಕಗೊಳಿಸಿದ ನರಸಿಂಹಾವತಾರವನ್ನು, ಮೂರು ಹೆಜ್ಜೆಗಳಲ್ಲಿ ಮೂರು ಲೋಕಗಳನ್ನು ಅಳೆದ ವಾಮನಾವತಾರವನ್ನು ಬಹಳವಾಗಿ ಸ್ತುತಿಸಿದ್ದಾನೆ.

'ಪರಿಪಾಡಲ್'ನಲ್ಲಿ ಎರಡನೇ ಕಾವ್ಯಭಾಗವನ್ನು "ಕೀರ್ತಿನೈಯಾರ್" ಎನ್ನುವಾತನು ರಚಿಸಿದ್ದಾನೆ. ಈತನು ಬಲರಾಮ ಹಾಗೂ ಕೃಷ್ಣರಿಬ್ಬರನ್ನೂ ಒಂದೇ ರೂಪವೆಂದು ಭಾವಿಸಿದ್ದಾನೆ. ಅದರಲ್ಲೂ ಕೃಷ್ಣ (ಕಣ್ಣನ್) ನನ್ನು ವಿಶೇಷವಾಗಿ ಪರಿಪೂರ್ಣಾವತಾರಿಯೆಂದು ಸ್ತುತಿಸಿದ್ದಾನೆ. ಅಂತೆಯೇ ಆ ಕೃಷ್ಣ ಭಗವಾನನನ್ನು ಅನನ್ಯ ಭಕ್ತಿಭಾವದಿಂದ ಸ್ತೋತ್ರಗೈದಿದ್ದಾನೆ. ಆ ತಿರುಮಾಲನು ನಿರಂತರವಾಗಿ ತರುಣನಂತೆಯೇ ಕಾಣಿಸಿಕೊಂಡು, ಜ್ಞಾನಸ್ವರೂಪಿಯಾಗಿ ಗೋಚರಿಸುತ್ತಿರಬೇಕೆಂದು ಕವಿ ಬೇಡಿದ್ದಾನೆ. ಲೋಕ ರಕ್ಷಣಾರ್ಥವಾಗಿ ಭೂಮಿಯ ಮೇಲೆ ವಿವಿಧ ಅವತಾರಗಳನ್ನು ಎತ್ತಿದ ತಿರುಮಾಲನ ಕಲ್ಯಾಣ ಗುಣಗಳನ್ನು ತನ್ನ ಗೀತೆಗಳಲ್ಲಿ ವಿಶೇಷವಾಗಿ ಸಂಕೀರ್ತಿಸಿದ್ದಾನೆ.

ಈ ಕಾವ್ಯಕ್ಕೇ ಸಂಬಂಧಪಟ್ಟಂತಹ 'ನಲ್ಲೆಳುದಿಯಾರ್' ಎನ್ನುವ ಕವಿಯು ತಿರುಮಾಲನನ್ನು ಪರಬ್ರಹ್ಮನನ್ನಾಗಿ ಭಾವಿಸಿದ್ದಾನೆ. ಸರ್ವವ್ಯಾಪಕನಾದ ಅಂತಹ ದೇವದೇವನ ಮಹಿಮೆಗಳನ್ನು ಕವಿಯು ತನ್ನ ಕಾವ್ಯದಲ್ಲಿ ತುಂಬಾ ಮನೋಹರವಾಗಿ ವರ್ಣಿಸಿದ್ದಾನೆ.

ಇನ್ನೊಬ್ಬ ಕವಿಯಾದ 'ಇರುಂದೈಯೂರ್' ಎನ್ನುವಾತನು ತಿರುಮಾಲನು ಕ್ಷೇತ್ರವೊಂದರಲ್ಲಿ ನೆಲೆಸಿರುವಂತಹವನು ಎಂದು ಒಂದು ಗೀತೆಯಲ್ಲಿ ವರ್ಣಿಸಿದ್ದಾನೆ. ಈ ಕ್ಷೇತ್ರವು ವೇಗಾವತಿ ನದಿಯ ತೀರದಲ್ಲಿರುವ ಸುಪ್ರಸಿದ್ಧವಾದ

"ಅಳಗರ್ ಕೋಯಿಲ್" ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

"ಕಲಿತ್ತೊಕೈ" ಎನ್ನುವ ಇದರಲ್ಲಿನ ಮತ್ತೊಂದು ಕಾವ್ಯಭಾಗವನ್ನು "ನಲ್ಲಿನುತ್ತನಾರ್" ಎನ್ನುವ ಕವಿಯು ಶ್ರೀಕೃಷ್ಣನ ಬಾಲಲೀಲೆಗಳನ್ನು ವಿವರಿಸಿದ್ದಾನೆ. ಇದರಲ್ಲಿ ಕೃಷ್ಣನ ಪ್ರಾಣಾಪಹರಣಕ್ಕಾಗಿ ಕಂಸನಿಂದ ನಿಯುಕ್ತನಾದ "ಕೇಶಿ" ಎನ್ನುವ ಅಶ್ವರೂಪಿ ರಾಕ್ಷಸನಿಗೆ ಸಂಬಂಧಪಟ್ಟ ವೃತ್ತಾಂತವೆಲ್ಲವನ್ನೊ ಸವಿಸ್ತಾರವಾಗಿ ವರ್ಣಿಸಲಾಗಿದೆ. ಇಂತಹ ಕೇಶಿ ಸಂಹಾರ ಮಾಡಿದ ಕೃಷ್ಣನನ್ನು ಕವಿಯು ಬಹಳವಾಗಿ ಹೊಗಳಿದ್ದಾನೆ. (ಮುಲ್ಲೈಕಲೀ-103, 50-53). ಇಷ್ಟೇ ಅಲ್ಲದೆ ಹೃದಯಪೂರ್ವಕವಾಗಿ ತನ್ನನ್ನೇ ಶರಣು ಹೊಂದಿದ ದ್ರೌಪದಿಯನ್ನು ಕರುಣಿಸಿ, ಆಕೆಯ ಮಾನವನ್ನು ರಕ್ಷಿಸಿ, ದುರ್ಮಾರ್ಗಿಗಳಾದ ದುಶ್ಯಾಸನಾದಿಗಳ ಗರ್ವವನ್ನು ಅಡಗಿಸಿದ ಶ್ರೀಕೃಷ್ಣನ ಪ್ರಭಾವವನ್ನು ಕೂಡ ಇದರಲ್ಲಿ ಅನೇಕ ರೀತಿಗಳಲ್ಲಿ ಪ್ರಶಂಸಿಸಿದ್ದಾನೆ. (ಮುಲ್ಲೈಕಲೀ 1-81-120)

ಇಷ್ಟೇ ಅಲ್ಲದೆ ಸಮಸ್ತ ವಿಶ್ವವನ್ನೊ ಮೂರು ಹೆಜ್ಜೆಗಳಲ್ಲಿ ಆಕ್ರಮಿಸಿದ ತ್ರಿವಿಕ್ರಮಾವತಾರದ ವೃತ್ತಾಂತವನ್ನು ಕೂಡ ಇದರಲ್ಲಿ ವರ್ಣಿಸಲಾಗಿದೆ.

ಈ 'ಕಲಿತ್ತೊಕೈ' ಕಾವ್ಯದಲ್ಲಿಯೇ ಪರಿಶುದ್ಧವಾದ ಕಾಷಾಯ ವಸ್ತ್ರಗಳನ್ನು ಧರಿಸಿದ, ಪವಿತ್ರವಾದ ಅಂತಃಕರಣವನ್ನು ಹೊಂದಿರುವ, ಆದರ್ಶಪ್ರಾಯವಾದ ಪ್ರವೃತ್ತಿಯಿಂದ ಕೂಡಿ, ನಿವೃತ್ತಿ ಮಾರ್ಗವನ್ನು ಅನುಸರಿಸುತ್ತಾ, ವೈರಾಗ್ಯ ಜೀವನ ನಡೆಸುವ ಶ್ರೀವೈಷ್ಣವ ಸನ್ಯಾಸಿಗಳ ಮಹತ್ವವನ್ನು ಸವಿವರವಾಗಿ ವರ್ಣಿಸಲಾಗಿದೆ. ಇಂತಹ ಮಹನೀಯರನ್ನು ಸರ್ವೇ ಸಾಮಾನ್ಯವಾಗಿ 'ಭಗವರ್' ಎಂದು ಕರೆಯುತ್ತಾರಂತೆ. ಇವರನ್ನು 'ಮುಕ್ಕೋಲ್ ಭಗವರ್' ಎಂದೂ ಸಂಬೋಧಿಸುತ್ತಾರೆ. ತಮಿಳು ಭಾಷೆಯಲ್ಲಿ 'ಮುಕ್ಕೋಲ್' ಎಂದರೆ 'ತ್ರಿದಂಡ' ಎನ್ನುವ ಅರ್ಥವಾಗುವುದರಿಂದ, ಈ 'ಮುಕ್ಕೋಲ್' ಎನ್ನುವ ಪದವೇ ಕಾಲಾನುಕ್ರಮದಲ್ಲಿ 'ಮುಕ್ಕೋರ್' ಎನ್ನುವ ಪದವಾಗಿ ಮಾರ್ಪಟ್ಟಿರಬೇಕು ಎನ್ನಿಸುತ್ತದೆ. ಇದರನುಸಾರ ಅಂದಿನ ಶ್ರೀವೈಷ್ಣವ ಸನ್ಯಾಸಿಗಳು ಕೂಡ ಇಂದಿನ ಶ್ರೀವೈಷ್ಣವ ಸನ್ಯಾಸಿಗಳಂತೆ ತ್ರಿದಂಡವನ್ನು ಧರಿಸುತ್ತಿದ್ದರೆಂದು ಅರ್ಥವಾಗುತ್ತದೆ. ಇಂತಹ ಸನ್ಯಾಸಿಗಳನ್ನೇ ಇಂದು 'ಜೀಯರ್' ಎಂದು ವ್ಯವಹರಿಸುತ್ತಾರೆ.

ಇಂತಹ ಮಹನೀಯರ ಬಗ್ಗೆ ಪ್ರಭುಗಳಿಂದ ಹಿಡಿದು ಸಾಮಾನ್ಯ ಪ್ರಜೆ

ಗಳವರೆಗೆ ಎಲ್ಲರೂ ಅತ್ಯಂತ ಪೂಜ್ಯಭಾವನನ್ನು ಹೊಂದಿರುತ್ತಿದ್ದರು. ಧಾರ್ಮಿಕ ರಂಗದಲ್ಲಿ ಇಂತಹವರು ನೀಡುವ ಸಲಹೆಗಳನ್ನು ಶಿರಸಾ ವಹಿಸಿ ಪಾಲಿಸುತ್ತಿದ್ದ ರಂತೆ. ಆ ಕಾಲದಲ್ಲಿ ರಾಜಾಧಿರಾಜರು ಕೂಡ ತಿರುಮಾಲನ (ಶ್ರೀವೈಷ್ಣವ) ಧರ್ಮವನ್ನು ಆಶ್ರಯಿಸಿ, ಅಂತಹ ಸನಾತನ ಧರ್ಮವನ್ನು ಹರಡುವುದಕ್ಕಾಗಿ ಅನೇಕ ರೀತಿಗಳಲ್ಲಿ ಶ್ರಮಿಸುತ್ತಿದ್ದರೆಂದು 'ಕಲಿತ್ತೊಕೈ' ಕಾವ್ಯವು ತಿಳಿಸುತ್ತದೆ.

ಸಂಘಕಾಲದಲ್ಲಿ ಪ್ರಕಟಗೊಂಡ ಕಾವ್ಯ ಸಂಪುಟಗಳಲ್ಲಿ 'ಪದುಪಾಟ್ಟು' ಎನ್ನುವುದು ಎರಡನೆಯದು. ಹತ್ತು ಖಂಡ ಕಾವ್ಯಗಳ ಸಂಪುಟವಾಗಿದೆ. ಇದ ರಲ್ಲಿನ ಮೊದಲನೇ ಕಾವ್ಯವು ಓರ್ವ ಪ್ರಾಚೀನ ಕವಿಯಿಂದ ರಚಿಸಲ್ಪಟ್ಟಿದೆ ಎಂದು ತಿಳಿದುಬರುತ್ತದೆ. ಈ ಕಾವ್ಯ ಸಂಪುಟದಲ್ಲಿರುವ 'ಪ್ರಾಣಾಟ್ರು ಪಡೈ' ಎನ್ನುವ ಮತ್ತೊಂದು ಕಾವ್ಯವನ್ನು ರಚಿಸಿರುವ ಕವಿಯು ತನಗೆ ಆಶ್ರಯ ನೀಡಿದ ತಿರುಮಾಲನ ವಂಶದಲ್ಲಿಯೇ ತಾನು ಹುಟ್ಟಿರುವುದಾಗಿ ತಿಳಿಸಿದ್ದಾನೆ. ಈ ಕಾವ್ಯದಲ್ಲಿ ಕವಿಯು ಕಾಂಚೀಪುರವನ್ನು ವರ್ಣಿಸಿದ್ದಾನೆ. ಕಂಚಿ ಪಟ್ಟಣವು ಬ್ರಹ್ಮನನ್ನು ಹೊಂದಿರುವ ತಿರುಮಾಲನ ನಾಭಿಯಿಂದ ಹೊರಬಂದ ಕಮಲದಂತೆ ಅತಿ ಪುರಾತನವಾದುದೆಂದು ತಿಳಿಸಿದ್ದಾನೆ. ಈ ಕಾಂಚೀಪುರದ ಸಮೀಪದಲ್ಲಿ ರುವ 'ತಿರುವೇಹಾ' ಎನ್ನುವ ಸ್ಥಳದಲ್ಲಿ ತಿರುಮಾಲನಿಗಾಗಿ ನಿರ್ಮಿಸಿರುವ ದೇವಾಲಯವೊಂದು ಇದೆಯೆಂದೂ ಕವಿ ಉಲ್ಲೇಖಿಸಿದ್ದಾನೆ.

ಇದರಲ್ಲಿನ 'ಮುಲ್ಲೈಪಾಟ್ಟು' (ವನಗೀತೆ) ಎನ್ನುವ ಕಾವ್ಯವನ್ನು ರಚಿಸಿದ 'ನಂಪೂದನಾರ್' ಎನ್ನುವ ಕವಿಯು ವಾಮನಾವತಾರವನ್ನು ವರ್ಣಿಸುತ್ತಾ, ತಿರುಮಾಲನು ಭುವನ ಸುಂದರಮೂರ್ತಿಯೆಂದು ಹೊಗಳಿದ್ದಾನೆ. ಇದರೊಂದಿಗೆ ಆ ದೇವದೇವನ ಸರ್ವವ್ಯಾಪಕತ್ವವನ್ನೂ ಪ್ರಸ್ತಾಪಿಸಿದ್ದಾನೆ.

ಈ ಕಾವ್ಯವು "ಮುಲ್ಲೈ" ಪ್ರದೇಶದ ಅಧಿದೇವತೆ "ಮಾಯೋನ್" ಎನ್ನುವ ತಿರುಮಾಲನನ್ನು ಸ್ತುತಿಸುವುದರೊಂದಿಗೆ ಪ್ರಾರಂಭವಾಗುತ್ತದೆ. ಬಲಿಚಕ್ರವರ್ತಿ ಯನ್ನು ಮೂರು ಹೆಜ್ಜೆ ಜಾಗವನ್ನು ಕೇಳಿ, ಮೂರು ಲೋಕಗಳನ್ನು ಆಕ್ರಮಿ ಸಿದ ವಾಮನಮೂರ್ತಿಯ ವೃತ್ತಾಂತವು ಆ ಕಾಲದಲ್ಲಿ ಲೋಕಪ್ರಿಯವಾಗಿತ್ತೆಂದು ಈ ಕಾವ್ಯದ ಮುಖಾಂತರ ತಿಳಿದುಬರುತ್ತದೆ. ಬಲಿಚಕ್ರವರ್ತಿಯಲ್ಲಿದ್ದ ಗರ್ವ ವನ್ನು ಭಂಗಗೊಳಿಸಿದ ತಿರುಮಾಲನ ಮಹಿಮೆಯನ್ನು ಸಂಕೀರ್ತನೆ ಮಾಡುವುದ ಕ್ಕಾಗಿ ಮಧುರೆಯಲ್ಲಿ "ಓಣಂ" ಎನ್ನುವ ಹೆಸರಿನ ಒಂದು ಉತ್ಸವವು ಮಹಾ

ವೈಭವದಿಂದ ಜರುಗುತ್ತಿತ್ತೆಂದು, ಅದು ಪದ್ಧತಿಯಾಗಿತ್ತೆಂದೂ ಈ ಕಾವ್ಯವು ವಿವರಿಸುತ್ತವೆ.

ಸಂಘಕಾಲದಲ್ಲಿ ಹೊರಬಂದ ಮೂರನೇ ಕಾವ್ಯಸಂಪುಟವೆಂದರೆ 'ಪದಿನೇಣ ಕೀಳಕಣಕ್ಕು' ಎಂಬುದು. ಹದಿನೆಂಟು ಖಂಡ ಕಾವ್ಯಗಳಿರುವ ಈ ಸಂಪುಟದಲ್ಲಿ ವಿಶ್ವವಿಖ್ಯಾತವಾದ 'ತಿರುವಳ್ಳುವರ್' ಮಹಾಕವಿ ರಚಿಸಿರುವ "ತಿರುಕ್ಕುರಳ್" ಎನ್ನುವುದು ಪ್ರಮುಖ ಸ್ಥಾನ ಪಡೆದಿದೆ. ಈ ಕವಿಯು ಮೂಲತಃ ಯಾವ ಮತಕ್ಕೆ ಸೇರಿದ್ದನೋ ಅದು ಬೇರೆ ವಿಚಾರ. ಆದರೆ ಈ ಕಾವ್ಯವನ್ನು ರಚಿಸಿದ ಪ್ರಾರಂಭದಲ್ಲಿ ಮಾತ್ರ ತಿರುಮಾಲನನ್ನು ತನ್ನ ದೃಕ್ಪಥದಲ್ಲಿ ಇರಿಸಿಕೊಂಡಿದ್ದನೆಂಬುದು ಸುಸ್ಪಷ್ಟವಾಗಿದೆ. ತಿರುವಳ್ಳುವರ್ ತಿರುಮಾಲನಿಗೆ ಸಂಬಂಧಪಟ್ಟ ಕಲ್ಯಾಣಗುಣಗಳನ್ನು ವಿಶೇಷವಾಗಿ ಹೊಗಳಿದ್ದಾನೆ. ಇಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿನ ತಾತ್ತ್ವಿಕ ವಿಷಯಗಳೆಲ್ಲವನ್ನೂ ವಿವೇಚನಾಪೂರ್ವಕವಾಗಿ ಗ್ರಹಿಸಿ, ಅವುಗಳ ಸಾರಾಂಶವನ್ನೂ ಕೂಡ ತನ್ನ ಕಾವ್ಯದಲ್ಲಿ ಈತ ಹೊಂದಿಸಿಕೊಂಡಿದ್ದಾನೆ. ಇದರೊಂದಿಗೆ "ಅಡಿಯುಳಂದಾನ್" (ಲೋಕವನ್ನು ಪ್ರವರ್ತನಗೊಳಿಸುವ), "ತಾಮರೈ ಕಣ್ಣನ್" (ಕಮಲದಳ ಲೋಚನನಾದ ಕೃಷ್ಣನು) ಎಂದು ಎರಡು ಪ್ರಯೋಗಗಳನ್ನು ಕವಿಯು ತನ್ನ ಕಾವ್ಯದಲ್ಲಿ ಪ್ರಯೋಗಿಸಿರುವುದರ ಅನುಸಾರ ಆ ಸಮಯದಲ್ಲಿ ಪ್ರಪಂಚಾದ್ಯಂತ ಪ್ರಚಲಿತವಾಗಿದ್ದ "ತಿರುಮಾಲ ತತ್ತ್ವ"ವು ಈ ಮಹಾಕವಿಯನ್ನು ಕೂಡ ವಿಶೇಷತಃ ಆಕರ್ಷಿಸಿತ್ತೆಂದು ನಾವು ಸುಲಭವಾಗಿ ಗ್ರಹಿಸಬಹುದಾಗಿದೆ.

"ಪದಿನೇಣ ಕೀಳ ಕಣಕ್ಕು" ಎನ್ನುವ ಕಾವ್ಯ ಸಂಪುಟದಲ್ಲಿ "ತಿರುಕಡುಕ್ಕುವಕ್" ಎನ್ನುವ ಶೀರ್ಷಿಕೆಯ ಖಂಡ ಕಾವ್ಯವೊಂದಿದೆ. ಇದರಲ್ಲಿ ತಿರುಮಾಲನಿಗೆ ಸಂಬಂಧಪಟ್ಟ ವಿವಿಧ ಲೀಲೆಗಳಿಂದ ಪ್ರಾರಂಭವಾಗಿ, ವಾಮನ ವೃತ್ತಾಂತವನ್ನೂ ಸೇರಿಸಿಕೊಂಡು, ಶಕಟಾಸುರನನ್ನು ಸಂಹಾರ ಮಾಡಿದ ಕೃಷ್ಣಾವತಾರವರೆವಿಗಿನ ಅನೇಕ ಘಟ್ಟಗಳನ್ನು ಕವಿ ವಿವರಿಸಿದ್ದಾನೆ. ಇದರಲ್ಲಿನ ಮಂಗಳಾಚರಣಾನುಸಾರ ಇದರ ಕವಿಯಾದ "ನಲ್ಲಾದನಾರ್" ಎನ್ನುವಾತನು ಶ್ರೀವೈಷ್ಣವನೆಂದೇ ಅಂದಾಜು ಮಾಡಲಾಗಿದೆ.

ಈ ಸಂಪುಟದಲ್ಲಿ "ನಾನ್ಮಣಿ ಕಡಿಕ್ಕೈ" ಎನ್ನುವ ಖಂಡ ಕಾವ್ಯವೊಂದಿದೆ. ಇದರ ಕವಿ "ವಿಳಂಬಿ ನಾಗನಾರ್" ಎನ್ನುವಾತನು. ಈತನೂ ಕೂಡ

ಶ್ರೀವೈಷ್ಣವನೆಂಬ ಅನುಮಾನವಿದೆ. ಈ ಕಾವ್ಯದಲ್ಲಿನ ಮೊದಲೆರಡು ಪದ್ಯಗಳಲ್ಲಿನ ಮೊದಲನೆಯದರಲ್ಲಿ "ಮಾಯೋನ್" (ಕಣ್ಣನ್) ಎನ್ನುವ ಹೆಸರನ್ನು ಪ್ರಸ್ತಾಪಿಸಲಾಗಿದೆ. ಚಂದ್ರನು "ಮಾಯೋನ್"ನ ಮುಖಮಂಡಲದಂತೆ ಇದೆಯೆಂದೂ, ಕಿರಣಗಳಿಂದ ಕೂಡಿದ ಸೂರ್ಯನು ತಿರುಮಾಲನ ನಯನಗಳಂತೆ ಇರುವುದಾಗಿಯೂ, "ಪೂವೈ" ಎನ್ನುವ ಪುಷ್ಪವು ಆತನ ವೈಬಣ್ಣವನ್ನು ನೆನಪಿಸುವಂತೆ ಇತ್ತೆಂದೂ ಕವಿಯು ತಿಳಿಸುತ್ತಾನೆ. ಈ ರೀತಿಯಲ್ಲಿ ಉಪಮಾನ ವಸ್ತುಗಳು ಉಪಮೇಯ ವಸ್ತುಗಳಿಗಿಂತಲೂ ಶ್ರೇಷ್ಠವಾದವುಗಳೆಂದು ವರ್ಣಿಸಿದ್ದಾನೆ. ಇಂತಹ ವರ್ಣನೆಯನ್ನು ವ್ಯತಿರೇಕಾಲಂಕಾರವೆಂದು ಅಲಂಕಾರ ಶಾಸ್ತ್ರಜ್ಞರು ತಿಳಿಸಿದ್ದಾರೆ. ಮಂಗಳಾಚರಣದಲ್ಲಿ ಎರಡನೇ ಪದ್ಯದಲ್ಲಿ "ಕಣ್ಣನ್"ನ ಲೀಲೆಗಳಲ್ಲಿ ಕೆಲವನ್ನು ಕವಿ ವರ್ಣಿಸಿದ್ದಾನೆ.

ಸಂಘೋತ್ತರ ಕಾಲವಾದ ಕ್ರಿ.ಶ. 3, 4ನೇ ಶತಮಾನಗಳಲ್ಲಿ ಐದು ಉತ್ತಮ ಕಾವ್ಯಗಳು ಪ್ರಕಾಶಗೊಂಡಿವೆ. ಅವು ಯಾವುವೆಂದರೆ–ಶಿಲಪ್ಪದಿಕಾರಮ್, ಮಣಿ ಮೇಖಲೈ, ಜೀವಕ ಚಿಂತಾಮಣಿ, ವಳಯಾಪತಿ, ಕುಂಡಲಕೇಶಿ ಎನ್ನುವ ಹೆಸರುಗಳಿಂದ ಪ್ರಸಿದ್ಧವಾದವುಗಳು. ಇವಿಷ್ಟೂ ಮಹಾಕಾವ್ಯಗಳೆಂದೇ ಪರಿಗಣಿತವಾಗಿವೆ.

ಇವೇ ಅಲ್ಲದೆ ಈ ಕಾಲದಲ್ಲಿ ಐದು ಲಘುಕಾವ್ಯಗಳೂ ಕೂಡ ರಚಿತವಾಗಿದೆ. ಅವು ಯಾವುವೆಂದರೆ–ನೀಲಕೇಶಿ, ಚೂಡಾಮಣಿ, ಯಶೋಧರ ಕಾವ್ಯಮ್, ನಾಗಕುಮಾರ ಕಾವ್ಯಮ್, ಉದಯಣನ ಕಥೈ–ಎನ್ನುವವು.

"ಇಳಂಗೋ" ಕವಿಯಿಂದ ರಚಿತವಾದ "ಶಿಲಪ್ಪದಿಕಾರಮ್" ಒಂದು ಒಂದು "ನೂಪುರ ಕಾವ್ಯ"ವಾಗಿದೆ. ಈತನು ಬೌದ್ಧಮತೀಯನಾದರೂ ಆ ಸಮಯದಲ್ಲಿ ಪ್ರಚಾರದಲ್ಲಿದ್ದ ಪ್ರಸಿದ್ಧ ಮತ ಧರ್ಮಗಳನ್ನು ತನ್ನ ಕಾವ್ಯದಲ್ಲಿ ಪ್ರಸ್ತಾಪಿಸಿದ್ದಾನೆ. ಅಂತೆಯೇ ತಿರುಮಾಲ ಧರ್ಮವನ್ನೂ ಕೂಡ ಸವಿಸ್ತಾರವಾಗಿ ವಿವರಿಸಿ, ಅದನ್ನು ಪ್ರಶಂಸಿಸಿದ್ದಾನೆ. ಇದು ಈ ಕಾವ್ಯದಲ್ಲಿ ಗಮನಿಸಬೇಕಾದ ಅಂಶ.

"ಆಯರುರು" (ಗೊಲ್ಲರು) ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾ "ಕುರುವೈ" (ರಾಸಕ್ರೀಡೆ) ಎನ್ನುವ ನೃತ್ಯವನ್ನು ಮಾಡಿದಂತೆ ಈ ಕಾವ್ಯದಲ್ಲಿ ವರ್ಣಿಸಲಾಗಿದೆ. ಇಂತಹ ಸನ್ನಿವೇಶವನ್ನು ಸರ್ವೇಸಾಮಾನ್ಯವಾಗಿ "ಆಯಚಿಯರ್

ಕುರವೈ" ಎಂದು ಕರೆಯುತ್ತಾರೆ. ಈ ಶೀರ್ಷಿಕೆಯೊಂದಿಗೆ ವಿವಿಧ ನೃತ್ಯಗಳನ್ನು "ಶಿಲಪ್ಪದಿಕಾರಂ" ಕಾವ್ಯದಲ್ಲಿ ವಿಶೇಷವಾಗಿ ವರ್ಣಿಸಲಾಗಿದೆ. ಇವುಗಳಲ್ಲಿ "ಕುರವೈ ಕೂತ್ತು" ಎನ್ನುವ ನೃತ್ಯವೇ ಇನ್ನಿತರೇ ನೃತ್ಯಗಳಿಗಿಂತಲೂ ಮುಖ್ಯ ವಾದುದು. (ಇದೇ ನೃತ್ಯವನ್ನು ಭಾಗವತದಲ್ಲಿ ರಾಸಲೀಲೆಯಾಗಿ ವರ್ಣಿಸ ಲಾಗಿದೆ.)

ಈ ಎಲ್ಲ ನೃತ್ಯಗಳೂ ಆಯರ (ಗೊಲ್ಲ) ಕುಲದಲ್ಲಿಯೆ ಆಚರಣೆಯಲ್ಲಿದ್ದಂತೆ ಈ ಕಾವ್ಯದಿಂದ ವ್ಯಕ್ತವಾಗುತ್ತದೆ. ವಿಘ್ನಗಳು ಉಂಟಾಗದಂತೆ, ಕಷ್ಟಗಳು ದೂರವಾಗುವುದಕ್ಕೆ ಆಯರುರು (ಗೊಲ್ಲರು) ತಮ್ಮ ಇಷ್ಟದೈವವಾದ ಕೃಷ್ಣನನ್ನು ಪ್ರಾರ್ಥಿಸಿ, "ಕುರವೈಕೂತ್ತು" ನೃತ್ಯವನ್ನು ಮಾಡುತ್ತಿದ್ದರಂತೆ. ಒಮ್ಮೊಮ್ಮೆ ಕೃಷ್ಣನೂ ಕೂಡ "ನಪ್ಪಿನ್ನೈ* ಎನ್ನುವ ತನ್ನ ಪ್ರಿಯಳು ಹಾಗೂ ಅಣ್ಣ ಬಲರಾಮನನ್ನು ಕೂಡಿಕೊಂಡು ನೃತ್ಯವನ್ನು ಮಾಡುತ್ತಿದ್ದರೆಂದು ಈ ಕಾವ್ಯದ ಮುಖಾಂತರ ತಿಳಿದುಬರುವುದು.

ಇಲ್ಲಿ ನಾವು ಒಂದು ವಿಶೇಷವನ್ನು ಮುಖ್ಯವಾಗಿ ಗಮನಿಸಬೇಕು. ಕಣ್ಣನ್‌ನ ಪತ್ನಿಯರಲ್ಲಿ "ನಪ್ಪಿನ್ನೈ" ಎನ್ನುವ ಕಾಂತಾಮಣಿಗೆ ತಮಿಳ್ ಜಗತ್ತಿನಲ್ಲಿ ಬಹಳ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈಕೆಯು ಕೃಷ್ಣನ ಬಹಳ ಮುಖ್ಯಳಾದ ಪ್ರಿಯತಮೆ. ಆಯರ ಕುಲೋತ್ಪನ್ನಳಾದ ಈ ನಪ್ಪಿನ್ನೈಯನ್ನು ಕೆಲವು ಕಡೆ "ಪಿನ್ನೈ" ಎಂದೂ, ಇನ್ನು ಕೆಲವು ಸಂದರ್ಭಗಳಲ್ಲಿ "ನೀಳ" ಎಂದೂ ಕರೆಯಲಾಗಿದೆ. ಶ್ರೀಕೃಷ್ಣನನ್ನು ವಿಷ್ಣುವಿನ ಅವತಾರವೆಂದು ಅಭಿವರ್ಣಿಸಲಾಗಿದೆ. ಯಾವುದು ಹೇಗಿದ್ದರೂ ಆ ಕಾಲದಲ್ಲಿನ ತಮಿಳು ಜನರು "ಕಣ್ಣನ್" "ನಪ್ಪಿನ್ನೈ" ಎನ್ನುವ ಇವರಿಬ್ಬರನ್ನೂ ಆದರ್ಶಪ್ರಾಯರಾಗಿ ಭಾವಿಸಿ, ಅವರನ್ನು ಅನುಕರಣೆ ಮಾಡುತ್ತಿದ್ದರೆಂದು ತಿಳಿದುಬರುತ್ತದೆ.

---

*ರಾಧೆಗೆ ತಮಿಳು ಭಾಷೆಯಲ್ಲಿ 'ನಪ್ಪಿನ್ನೈ' ಎಂದು ಕರೆಯುತ್ತಾರೆ.

We venture to conjucture that 'Nappinnai' is the Tamil, name of Radha.

V.R.R. DIKSHITAR
'Krishna in Tamil Literature in
Indian Culture'. Vol. IV (1837-38) P. 269.

ಇದಕ್ಕೆ ಈ ಕೆಳಗಿನ ವೃತ್ತಾಂತವೇ ಒಂದು ಉದಾಹರಣೆ.

ಹಿಂದೆ ದ್ವಾಪರ ಯುಗದಲ್ಲಿ "ನಾಗ್ನಜಿತ್ತು" ಎಂಬ ಓರ್ವ ರಾಜನು ತನ್ನ ಪ್ರಿಯ ಪುತ್ರಿಯಾದ "ನಾಗ್ನಜಿತಿ" ಎನ್ನುವ ಕನ್ಯೆಯ ವಿವಾಹಕ್ಕೆ ಒಂದು ನಿಬಂಧನೆಯನ್ನು ಏರ್ಪಡಿಸಿದನು. ಅದೆಂದರೆ ತನ್ನ ಬಳಿ ಇರುವ ಏಳುಎತ್ತುಗಳನ್ನು ಒಮ್ಮೆಲೇ ವಶಪಡಿಸಿಕೊಳ್ಳುವ ವೀರಪುರುಷನಿಗೆ ತನ್ನ ಪುತ್ರಿಯನ್ನು ನೀಡಿ ಮದುವೆ ಮಾಡಿಕೊಡುವುದಾಗಿ ತಿಳಿಸಿದನು. ಈ ವಾರ್ತೆಯು ಶ್ರೀಕೃಷ್ಣನಿಗೆ ಗೊತ್ತಾಗಿ, ಅವನು ಬಂದು ಆ ಏಳೂ ವೃಷಭಗಳನ್ನು ತನ್ನ ವಶಪಡಿಸಿಕೊಂಡು, ನಾಗ್ನಜಿತಿಯನ್ನು ವಿವಾಹವಾದನು. ಈ ಕಥೆಯು ಭಾಗವತದಲ್ಲಿ ಉಲ್ಲೇಖಿಸ ಲಾಗಿದೆ. ಆದಾಗ್ಯೂ ಈ ಕೆಳಗೆ ತಿಳಿಸಿರುವ ಒಂದು ಶ್ಲೋಕವು ಮೇಲೆ ತಿಳಿ ಸಿರುವ ವೃತ್ತಾಂತವನ್ನು ಖಚಿತಪಡಿಸುತ್ತದೆ–

ತಸ್ಯ ಸತ್ಯಾಭವತ್ ಕನ್ಯಾದೇವೀ ನಾಗ್ನಜೀತೀ ನೃಪ
ನ ತಾಂ ಶೇಕರ್ ನೃಪಾ ವೋದುಮಜಿತ್ವಾ ಸಪ್ತ ಗೋವೃಷಾನ್ ||
(ಭಾಗವತ–10–58–31, 32)

ಈ ರೀತಿಯಲ್ಲಿ ತಮಿಳುನಾಡಿನಲ್ಲಿನ ಕನ್ಯೆಯರು ವೀರತ್ವದ ಯುವಕರನ್ನು ತಮ್ಮ ಪತಿಯರನ್ನಾಗಿ ವರಿಸುವುದು ರೂಢಿಯಲ್ಲಿತ್ತು. ಇಂತಹ ವಿಧಾನವನ್ನು "ಯೆರು ತಬುಲ್" ಎಂದೂ, "ವೃಷಭ ವಶೀಕರಣ"ವೆಂದೂ ಕರೆಯುತ್ತಿದ್ದರು. ಇಂತಹ ಸ್ವಯಂವರಕ್ಕೆ ತಮಿಳುನಾಡಿನಲ್ಲಿ ಒಂದು ವಿಶೇಷ ಪ್ರಕ್ರಿಯೆಯು ರೂಢಿ ಯಲ್ಲಿದ್ದಂತೆ, ಐತಿಹಾಸಿಕ ಸಂಶೋಧನೆಗಳಿಂದಲೂ ತಿಳಿದುಬಂದಿದೆ.

ಆವರಣವೊಂದರಲ್ಲಿ ಬಲಿಷ್ಠವಾದ ಗೂಳಿಗಳನ್ನು ಪ್ರವೇಶಿಸುವಂತೆ ಮಾಡು ತ್ತಿದ್ದರು. ಅವನ್ನು ಡಮರುಗ, ತಮಟೆ, ಡೋಲು ಇತ್ಯಾದಿ ಭಯಾನಕ ವಾದ್ಯ ಗಳನ್ನು ನುಡಿಸುವುದರ ಮುಖಾಂತರ ಭಯಗೊಳಿಸುತ್ತಿದ್ದರು. ಇಂತಹ ಭಯ ಗೊಂಡ ಗೂಳಿಗಳನ್ನು ಪ್ರವೇಶ ದ್ವಾರದ ಕಡೆಗೆ ಹೋಗುವಂತೆ ಮಾಡಲಾಗು ತ್ತಿತ್ತು. ಅಲ್ಲಿ ಒಂದು ಮರೆಯಲ್ಲಿ ನಿಂತಿರುತ್ತಿದ್ದ ವೀರ ಯುವಕರು, ಅವು ಗಳನ್ನು ಹೊರಗೆ ಹೋಗದಂತೆ ಬಿಡದೆ, ತಮ್ಮ ದೈಹಿಕ ಶಕ್ತಿಯನ್ನೆಲ್ಲ ವಿನಿಯೋ ಗಿಸಿ, ವಿವಿಧ ಪ್ರಯತ್ನಗಳಿಂದ ಆ ಗೂಳಿಗಳನ್ನು ವಶಪಡಿಸಿಕೊಳ್ಳಲು ಪ್ರಯ ತ್ನಿಸುತ್ತಿದ್ದರು. ಹೀಗೆ ಮಾಡುವಾಗ ಎಲ್ಲ ಯುವಕರೂ ಜಯಪ್ರದರಾಗುತ್ತಿರ ಲಿಲ್ಲ. ಎಲ್ಲೋ ಕೆಲವರು, ಸಾಹಸಿಗಳೂ, ಉಪಾಯವಂತರೂ ಆದವರು ಮಾತ್ರ

ವಿಜಯವಂತರಾಗುತ್ತಿದ್ದರು. ಅಂತಹವರ ಕೊರಳಿಗೆ ಅವಿವಾಹಿತ ಕನ್ಯೆಯರು ವಿಜಯಮಾಲೆಗಳನ್ನು ಹಾಕಿ, ಗೌರವ ಭಾವದಿಂದ ನೋಡಿ, ಅವರನ್ನು ತಮ್ಮ ಪತಿಯರನ್ನಾಗಿ ಸ್ವೀಕರಿಸುತ್ತಿದ್ದರು. ಹೀಗೆ ಮಾಡುವಾಗ, ಗಾಯಗೊಳ್ಳುವ, ಪ್ರಾಣ ಕಳೆದುಕೊಳ್ಳುವ ಸನ್ನಿವೇಶಗಳು ಇಲ್ಲದೆ ಇಲ್ಲ. ಇಂದಿಗೂ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಇಂತಹ ಗೂಳಿಯ ಪಂದ್ಯಗಳು ಸರ್ವೇ ಸಾಮಾನ್ಯವಾಗಿ ಕಾಣಸಿಗುತ್ತವೆ. ಇಂತಹ ಕಾರ್ಯಕ್ಕಾಗಿಯೇ ಕೆಲವರು ಗೂಳಿಗಳನ್ನು ಸಾಕುತ್ತಾರೆಂದೂ ವಿ.ಆರ್.ಆರ್. ದೀಕ್ಷಿತರ್‌ರವರು ತಮ್ಮ "ಇಂಡಿಯನ್ ಕಲ್ಚರ್"ನ ನಾಲ್ಕನೇ ಸಂಪುಟದಲ್ಲಿ ತಿಳಿಸಿರುತ್ತಾರೆ.

ಮೇಲೆ ತಿಳಿಸಿರುವ ಪಂಚ ಮಹಾಕಾವ್ಯಗಳಲ್ಲಿ "ಮಣಿಮೇಖಲೈ" ಎನ್ನುವುದು ಎರಡನೆಯದು. ಇದು "ಶೀತಲೈ ಚಾತ್ತನಾರ್" ಎನ್ನುವ ಕವಿಯಿಂದ ರಚಿತವಾದುದು. ಕವಿಗೆ ಈ ಕಾವ್ಯದಲ್ಲಿ ಬೌದ್ಧ ಧರ್ಮ ಸ್ವರೂಪದ ನಿರೂಪಣವೇ ಮುಖ್ಯ ಉದ್ದೇಶವಾಗಿದೆ. ಹಾಗೆ ಮಾಡುವಾಗ ಸಂದರ್ಭೋಚಿತವಾಗಿ ವೈಷ್ಣವ ಧರ್ಮದ ಮಹತ್ವವನ್ನೂ ಕೂಡ ಕವಿಯು ಪ್ರಶಂಸಿಸಿದ್ದಾನೆ. ಅಷ್ಟೇ ಅಲ್ಲದೆ ಕೃಷ್ಣನಿಗೆ ಸಂಬಂಧಪಟ್ಟ ವಿವಿಧ ಕಥಾನಕಗಳನ್ನು, ಕುರುವೈ ಕೂತ್ತು ನೃತ್ಯದ ವಿವರಗಳನ್ನೂ ಕವಿಯು ವಿವರಿಸಿದ್ದಾನೆ. (ಮಣಿಮೇಖಲೈ 19-65-66)

"ಚೂಡಾಮಣಿ" ಎನ್ನುವ ಮತ್ತೊಂದು ಕಾವ್ಯದಲ್ಲಿ ಅದರ ಕಥಾನಾಯಕನ ಗುಣಗಳ ವಿವರಗಳು, "ಕಣ್ಣನ್"ನ ಕಲ್ಯಾಣ ಗುಣಗಳೊಂದಿಗೆ ಕವಿ ಹೋಲಿಸಿದ್ದಾನೆ. ಆದುದರಿಂದ ಆ ಕಾಲದಲ್ಲಿ ತಿರುಮಾಲ ಧರ್ಮವು ಹೆಚ್ಚಿನ ಪ್ರಮಾಣದಲ್ಲಿ ಪ್ರಚಾರದಲ್ಲಿತ್ತು ಎಂದು ತಿಳಿದುಬರುತ್ತದೆ. ಅಲ್ಲದೆ ಆಗಿನ ತಮಿಳು ಪ್ರಜೆಗಳು ತಿರುಮಾಲನಿಗೆ ಸಂಬಂಧಪಟ್ಟ ಕಥೆಗಳನ್ನು ಓದುತ್ತಿದ್ದರೆಂದೂ, ಅವುಗಳನ್ನು ಆಲಿಸುವುದರಲ್ಲಿ ಆಸಕ್ತರಾಗಿದ್ದರೆಂದು ಈ ಕಾವ್ಯಗಳಿಂದ ತಿಳಿದುಬರುತ್ತದೆ.

ಕ್ರಿ.ಶ. 11ನೇ ಶತಮಾನದಲ್ಲಿದ್ದ ಕಂಬ ಮಹಾಕವಿಯು ರಾಮಾಯಣದ ಕಥಾನಕವನ್ನು ತಮಿಳು ಭಾಷೆಯಲ್ಲಿ ಮಹಾಕಾವ್ಯವಾಗಿ ರಚಿಸಿ, "ಕವಿ ಚಕ್ರವರ್ತಿ" ಎನ್ನುವ ಬಿರುದನ್ನು ಸಂಪಾದಿಸಿದನು. ಆದರೆ ಈ ಕಾಲಕ್ಕೆ ಎಷ್ಟೋ ಶತಮಾನಗಳ ಮುಂಚೆಯೇ ಸಂಘ ಕಾಲದ ಮತ್ತೊಬ್ಬ ಕವಿಯು "ವೆಣ್ಬಾ" ಎನ್ನುವ ವೃತ್ತದಲ್ಲಿ ರಾಮಾಯಣ ಮಹಾಕಾವ್ಯವನ್ನು ತಮಿಳಿನಲ್ಲಿ ರಚಿಸಿ,

ತಮಿಳು ವಾಙ್ಮಯ ಜಗತ್ತಿನಲ್ಲಿ ತುಂಬಾ ಪ್ರಸಿದ್ಧಿಯನ್ನು ಪಡೆದಿದ್ದನೇ ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಕೃತಿ ಮಾತ್ರ ದೊರೆಯದೆ, ರಚಿಸಿರಬಹುದು ಎನ್ನುವುದಕ್ಕೆ ಖಚಿತ ಆಧಾರಗಳಿವೆ ಎಂದು ಸ್ವಾಮಿ ಚಿದ್ನಾರ್‌ರವರು ತಮ್ಮ "ಕಂಬನ್ ಕಂಡ ತಮಿಳಹಮ್" ಎನ್ನುವ ಸಂಶೋಧ ಕೃತಿಯಲ್ಲಿ ತಿಳಿಸುತ್ತಾರೆ.

ಕ್ರಿ.ಶ. ಆರಂಭದಲ್ಲಿಯೇ ರಚಿಸಿರಬಹುದೆಂದು ಕಂಡುಬಂದಿರ "ಅಹನಾನೂರು" "ಪುರನಾನೂರು" ಎನ್ನುವ ಸಂಘಕಾಲದ ಕಾವ್ಯಗಳಲ್ಲಿ ರಾಮಾಯಣಕ್ಕೆ ಸಂಬಂಧಪಟ್ಟ ಕೆಲವು ಕಥಾನಕಗಳು ಅಲ್ಲಲ್ಲಿ ಕಂಡುಬಂದಿವೆ.

ಲಂಕಾ ನಗರಕ್ಕೆ ಹೋಗಿ ಬಂದ ಆಂಜನೇಯನು ಸೀತಾದೇವಿಯ ಇದ್ದ ತಹ ಸ್ಥಿತಿಗತಿಗಳನ್ನು ವಿವರಿಸಿದ. ಇದನ್ನು ಶ್ರೀರಾಮನು ಗ್ರಹಿಸಿದ. ಆ ನಂತ ದಲ್ಲಿ ಪಾಂಡ್ಯ ದೇಶದ ದಕ್ಷಿಣ ಭಾಗದಲ್ಲಿನ ಒಂದಾನೊಂದು ಸ್ಥಳದಲ್ಲಿದ್ದ ವಿಶಾ ವಟವೃಕ್ಷದ ಕೆಳಗಿದ್ದ ವಿಶಾಲ ಸ್ಥಳದಲ್ಲಿ ಶ್ರೀರಾಮನು ವಾನರ ವೀರರೊಂದಿ ಸಮಾಲೋಚನೆ ನಡೆಸುತ್ತಿದ್ದ. ಶ್ರೀರಾಮನು ತುಂಬಾ ವಿಷಣ್ಣವದನನಾಗಿದ್ದ ಸೀತಾಮಾತೆಯನ್ನು ಲಂಕಾದಿಂದ ಕರೆದು ತರುವುದು ಹೇಗೆ ಎಂಬ ವಿಷಯದ ಬಗ್ಗೆ ಚರ್ಚೆಗಳು ನಡೆಯುತ್ತಿದ್ದುವು. ಆಗ ಆ ವಟವೃಕ್ಷದ ಮೇಲೆ ವಿಹರಿಸು ತ್ತಿದ್ದ ಪಕ್ಷಿ ಸಂಕುಲಗಳು ಕಲಕಲರವವನ್ನು ಮಾಡಲಾರಂಭಿಸಿದುವು. ಅವುಗಳ ದನಿ ತುಂಬಾ ಹೆಚ್ಚಾಗಿತ್ತು. ಇದರಿಂದ ಸಮಾಲೋಚನಾ ಕಲಾಪವನ್ನು ಮುಂದುವರಿಸಲಾಗಲಿಲ್ಲ. ಸ್ವಲ್ಪ ಹೊತ್ತಿನ ನಂತರ ಪಕ್ಷಿಗಳ ಕಲರವ ಕಡಿಮೆ ಯಾಯಿತು. ಆಗ ಸಮಾಲೋಚನೆಯು ಮುಂದುವರಿಯಿತು. ಇದನ್ನು ಗಮ ನಿಸಿದ ಪಕ್ಷಿಸಂಕುಲವು ಶ್ರೀರಾಮನೊಂದಿಗೆ ಸಹಕರಿಸಲು ನಿಶ್ಶಬ್ದಗೊಂಡವು ಎಂದು "ಅಹನಾನೂರು" ಕಾವ್ಯ (70)ದಲ್ಲಿ ಒಂದೆಡೆ ತಿಳಿಸಲಾಗಿದೆ.

ಇದೇ ರೀತಿಯಲ್ಲಿ "ಪುರನಾನೂರು" ಕಾವ್ಯದಲ್ಲಿಯೂ ಕೆಲವು ಕಥಾನಕ ಗಳು ಕಾಣಿಸಿಕೊಂಡಿವೆ. ಒಮ್ಮೆ ಓರ್ವ ಕವಿಯನ್ನು ಓರ್ವ ರಾಜನು ಸನ್ಮಾ ನಿಸಿದನಂತೆ. ಆದರೆ ಆ ಕವಿಗೆ ಆ ಆಭರಣಗಳನ್ನು ಹೇಗೆ ಧರಿಸಬೇಕೆಂಬುದೇ ತಿಳಿಯಲಿಲ್ಲ. ಕವಿಯು ಈ ವಿಷಯವನ್ನು ತನ್ನ ಕಾವ್ಯದಲ್ಲಿ ತಿಳಿಸುತ್ತಾ ರಾಮಾ ಯಣದ ಒಂದು ಘಟನೆಯನ್ನು ಉದಾಹರಣೆಯನ್ನಾಗಿ ನೀಡಿದ್ದಾನೆ. ಅಪಹರಿಸ ಲ್ಪಟ್ಟ ಸೀತಾದೇವಿಯನ್ನು ರಾವಣನು ತನ್ನ ವಿಮಾನದಲ್ಲಿ ಕೊಂಡೊಯ್ಯು

ತ್ತಿದ್ದಾಗ, ಆಕೆಯು ತನ್ನ ಒಡವೆಗಳನ್ನೆಲ್ಲ ಸೆರಗಿನಲ್ಲಿ ಕಟ್ಟಿ, ಆ ಸೆರಗನ್ನು ಹರಿದು, ಗಂಟನ್ನು ಕೆಳಕ್ಕೆ ಹಾಕಿದಳು. ಆಕೆಯ ಊಹೆಯಂತೆ, ಆ ಒಡವೆಗಳ ಗಂಟು ವಾನರರಿಗೆ ದೊರಕಿತು. ಅವರು ಆ ಗಂಟನ್ನು ಬಿಚ್ಚಿ, ಒಳಗಡೆ ಇರುವ ಅಮೂಲ್ಯ ಆಭರಣಗಳನ್ನು ಕಂಡು, ಅವುಗಳನ್ನು ತಾವು ಧರಿಸಬೇಕೆಂದು ಪ್ರಯತ್ನಿಸಿದರು. ಆದರೆ ಹೇಗೆ ಧರಿಸಬೇಕೆಂಬುದು ಆವರಿಗೆ ತಿಳಿಯಲಿಲ್ಲ, ತಡಬಡಾಯಿಸಿದರು. ಅದೇ ರೀತಿಯಲ್ಲಿ ರಾಜನಿಂದ ಸನ್ಮಾನಿತನಾದ ಕವಿಯೂ ಕೂಡ ಒಡವೆಗಳನ್ನು ಧರಿಸಲು ತಬ್ಬಿಬ್ಬಾದನಂತೆ. ಇದನು "ಪುರನಾನೂರು" ಕಾವ್ಯದ 378ರಲ್ಲಿ ತಿಳಿಸಲಾಗಿದೆ.

ಈ ಎಲ್ಲ ಪ್ರಮಾಣಗಳ ಆಧಾರದ ಮೇಲೆ ತಮಿಳುನಾಡಿನಲ್ಲಿ ಸಂಘ ಕಾಲ ದಲ್ಲಿಯೇ ತಿರುಮಾಲನಿ (ವಿಷ್ಣುವಿ)ಗೆ ಸಂಬಂಧಿಸಿದ ಆತನ ಅವತಾರದ ಕಥೆಗಳು ಬಹಳ ಪ್ರಚಾರದಲ್ಲಿ ಇದ್ದುವೆಂದೂ, ತಮಿಳು ಜನರಲ್ಲಿ ವೈಷ್ಣವ ಧರ್ಮವು ಸಾಕಷ್ಟು ಹರಡಿತ್ತೆಂದೂ ತಿಳಿದುಬರುವುದು.

## ದೇವಾಲಯಗಳಲ್ಲಿ ತಿರುಮಾಲಾರ್ಚನೆ

ತಮಿಳುನಾಡಿನಲ್ಲಿನ ದೇವಾಲಯಗಳ ಇತಿಹಾಸವು ತುಂಬಾ ಪ್ರಾಚೀನ ವಾದುದು. ಇಲ್ಲಿನ ದೇವಾಲಯಗಳಲ್ಲಿನ ದೇವತಾ ವಿಗ್ರಹಗಳನ್ನು ಸುಂದರ ವಾಗಿ, ಸುಶೋಭಿತವನ್ನಾಗಿ ಮಾಡಿ, ನಯನಾಂದಕರವನ್ನಾಗಿ, ಭಕ್ತರನ್ನು ಆಕರ್ಷಿಸುವಂತಿರುತ್ತವೆ. ವೈಜ್ಞಾನಿಕವಾಗಿ ಶಾಸ್ತ್ರಾಧಾರವಾಗಿ ಈ ವಿಗ್ರಹ ಗಳನ್ನು ನಿರ್ಮಿಸುವುದಲ್ಲದೆ, ಶಾಸ್ತ್ರೋಕ್ತವಾಗಿ ಅವುಗಳ ಆರಾಧನೆಯನ್ನು ಮಾಡಲಾಗುತ್ತಿತ್ತೆಂದು ಸಂಘ ಸಾಹಿತ್ಯವು ಸ್ಪಷ್ಟೀಕರಣ ನೀಡುತ್ತದೆ.

ಇವುಗಳಲ್ಲಿ ಹೆಚ್ಚು ಪ್ರಖ್ಯಾತಿಯನ್ನು ಪಡೆದ ದೇವಾಲಯಗಳೆಂದರೆ– ತಿರುವರಂಗಂ (ಶ್ರೀರಂಗಂ), ತಿರುವೇಂಗಡನ್ (ತಿರುಮಲೆ), ತಿರುಪತಿ, ತಿರುಮಾಲಿರುಂ ಶೋಲೈ, ತಿರುಕ್ಕುರುಹುರ್ ತಿರುಕ್ಕುರುಂಗುಡಿ, ತಿರುಕ್ಕಣ್ಣ ಪುರವ್–ಇತ್ಯಾದಿ ದಿವ್ಯಕ್ಷೇತ್ರಗಳಲ್ಲಿನ ತಿರುಮಾಲ ದೇವರುಗಳು. ಇಲ್ಲಿನ ಅರ್ಚಾಮೂರ್ತಿಗಳನ್ನು ಕುರಿತಾದ ವಿವರಗಳನ್ನು, ವೃತ್ತಾಂತಗಳನ್ನು ವಿಸ್ತಾರ ವಾಗಿ ಆ ಕಾಲದ ಸಾಹಿತ್ಯದಲ್ಲಿ ವಿವರಿಸಲಾಗಿದೆ. ಇಷ್ಟೇ ಅಲ್ಲದೆ ಆಯಾಯಾ ಕ್ಷೇತ್ರಗಳಲ್ಲಿ ವಿವಿಧ ರೂಪಗಳಲ್ಲಿ ವಿರಾಜಮಾನನಾಗಿರುವ ತಿರುಮಾಲನಿಗೆ ನಡೆ ಯುವ ನಿತ್ಯಪೂಜೆಗಳು, ಉತ್ಸವಗಳು ಮಹಾ ವೈಭವದಿಂದ ಜರುಗುತ್ತಿದ್ದು

ವೆಂದು, ಅವು ಭಕ್ತರ ಕಣ್ಣುಗಳನ್ನು ತಣಿಸುತ್ತಿದ್ದುವೆಂದು ವಿವರಿಸಲಾಗಿದೆ.

ತಿರುವರಂಗ (ಶ್ರೀರಂಗ) ಕ್ಷೇತ್ರದ ದೇವಾಲಯದಲ್ಲಿರುವ ತಿರುಮಾಲ (ಶ್ರೀರಂಗನಾಯಕ ಸ್ವಾಮಿ) ಆದಿಶೇಷನ ಮೇಲೆ ಪವಡಿಸಿ, ನೀಲಮೇಘ ವರ್ಣದಂತೆ ವಿರಾಜಿಸುತ್ತಿದ್ದಾನೆ ಎಂದು 'ಶಿಲಪ್ಪದಿಕಾರಂ' (2, 35-40) ನಲ್ಲಿ ವರ್ಣಿಸಲಾಗಿದೆ. ಈ ಗ್ರಂಥದಲ್ಲೆ ಮತ್ತೊಂದು ಕಡೆ ತಿರುವೇಂಗಡ (ತಿರುಮಲೈನಲ್ಲಿ) ದಲ್ಲಿ ಅರ್ಚಾ ರೂಪದಲ್ಲಿ ದರ್ಶನವೀಯುತ್ತಿರುವ ತಿರುಮಾಲ (ಶ್ರೀ ವೇಂಕಟೇಶ್ವರ ಸ್ವಾಮಿ)ನ ಕರಕಮಲಗಳಲ್ಲಿ ಶಂಖ, ಚಕ್ರಗಳಿವೆಯೆಂದು (2, 41-45) ಅದರಲ್ಲೆ ವರ್ಣಿಸಲಾಗಿದೆ.

"ಪರಿಪಾಡಲ್" ಎನ್ನುವ ಕಾವ್ಯದಲ್ಲಿ "ತಿರುಮಾಲಿರುಂ ಶೋಲೈ" ಕ್ಷೇತ್ರದಲ್ಲಿನ ದೇವಾಲಯದಲ್ಲಿನ ದೇವದೇವನು ಕಮಲದಳಲೋಚನನಾಗಿಯೂ, ಶ್ಯಾಮಸುಂದರ ವಿಗ್ರಹಾಕಾರನಾಗಿಯೂ ಇರುವ ತಿರುಮಾಲನು ಮಾನವರ ದುಃಖವನ್ನು ದೂರ ಮಾಡುವಷ್ಟು ಕರುಣಾಕರನಾಗಿದ್ದಾನೆ (15) ಎಂದು ವಿವರಿಸಲಾಗಿದೆ.

"ಪೆರುಂ ಪಾಣಾಟ್ಟುರುಪಡೈ" ಎನ್ನುವ ಕಾವ್ಯದಲ್ಲಿ ಕಾಂಚೀಪುರದ ಸಮೀಪದಲ್ಲಿರುವ "ತಿರುವೇಹಾ" ಎನ್ನುವ ಕ್ಷೇತ್ರದ ತಿರುಮಾಲ (ವಿಷ್ಣುವಿ)ನ ದೇವಾಲಯದ ವರ್ಣನೆಯನ್ನು (371-374) ನೀಡಲಾಗಿದೆ.

ಇವೆಲ್ಲದರಿಂದ ಒಂದು ಅಂಶ ತಿಳಿದುಬರುವುದು, ಅದೇನೆಂದರೆ ಸಂಘ ಕಾಲದಲ್ಲಿ ನಪ್ಪಿನ್ನೈ ಸಹಿತನಾದ ಕಣ್ಣನ್ ಹಾಗೂ ವೀರತ್ವದ ಪ್ರತೀಕವಾದ ಸಾಹಸಿ ಬಲರಾಮನನ್ನು ತಮಿಳರು ವಿಶೇಷವಾಗಿ ಪೂಜಿಸುತ್ತಿದ್ದರೆಂದು ತಿಳಿದುಬರುತ್ತದೆ. ಅಲ್ಲದೆ ಈ ಮೂವರೂ ಇರುವ ದೇವಾಲಯವೊಂದು ಮಧುರೈನಲ್ಲಿ ಇತ್ತೆಂದೂ, ಅದನ್ನು "ಪಿಳ್ಳೈನಗರ ಕೋಟ್ಟಮ್" ಎಂಬ ಹೆಸರಿನಿಂದ ಕರೆಯುತ್ತಿದ್ದರೆಂದು "ಶಿಲಪ್ಪದಿಕಾರಂ" (5, 171-172)ನಲ್ಲಿ ತಿಳಿಸಲಾಗಿದೆ.

ಸಂಘ ಕಾಲದ ಉತ್ತರಾರ್ಧದಲ್ಲಿ, ಸಂಘೋತ್ತರ ಕಾಲದಲ್ಲಿ ತಮಿಳುನಾಡಿನಲ್ಲಿದ್ದ ಕೆಲವು ತಿರುಮಾಲ (ವಿಷ್ಣುವಿ)ನ ದೇವಾಲಯಗಳಲ್ಲಿ ಶ್ರೀ ಪಾಂಚರಾತ್ರಾಗಮ ಶಾಸ್ತ್ರವನ್ನು ಅನುಸರಿಸಿ, ಮತ್ತೆ ಕೆಲವು ದೇವಾಲಯಗಳಲ್ಲಿ ವೈಖಾನಸಾಗಮ ಶಾಸ್ತ್ರವನ್ನು ಅನುಸರಿಸಿ, ಅರ್ಚನಾದಿಗಳು ಜರುಗುತ್ತಿದ್ದುವೆಂದು "ಶಿಲಪ್ಪದಿಕಾರಂ" ಹಾಗೂ "ಪರಿಪಾಡಲ್" ಕಾವ್ಯಗಳ ಮುಖಾಂತರವೇ ತಿಳಿದು

ಬರುತ್ತದೆ.

ಆ ಕಾಲದಲ್ಲಿ ತಿರುಮಾಲನ ದೇವಾಲಯದ ಪ್ರಾಂಗಣದಲ್ಲಿ ಅಭಿಮುಖ ವಾಗಿದ್ದ ಧ್ವಜಸ್ತಂಭದಲ್ಲಿ "ಪೆರಿಯ ತಿರುಮುಡಿ" (ಗರುಡಾಳ್ವಾರ್) ರವರು ದಯಮಾಡಿಸಿರುತ್ತಿದ್ದರೆಂದು ಸಂಘ ಸಾಹಿತ್ಯದಲ್ಲಿ ವಿವರಿಸಲ್ಪಟ್ಟಿದೆ.

ಆದುದರಿಂದ ಸಂಘ ಕಾಲದಲ್ಲಿ ತಮಿಳುನಾಡಿನಲ್ಲಿನ ವಿಷ್ಣು ದೇವಾಲಯ ಗಳಲ್ಲಿ ಅರ್ಚನಾದಿ ಕಾರ್ಯಕಲಾಪಗಳು ಯಥಾವಿಧಿಯಾಗಿ ಜರುಗುತ್ತಿದ್ದು ವೆಂದೂ, ವಿಶೇಷೋತ್ಸವಗಳನ್ನು ತಮಿಳರು ಅಮಿತ ಉತ್ಸಾಹದಿಂದಲೂ, ಭಕ್ತಿ ವಿಶ್ವಾಸಗಳಿಂದಲೂ ನಡೆಸುತ್ತಿದ್ದರೆಂದು ಈ ಸಾಹಿತ್ಯ ಕೃತಿಗಳಿಂದ ತಿಳಿದು ಬರುತ್ತದೆ.

## 5. ಆಳ್ವಾರರ ಭಕ್ತಿಯುಗ

ದಕ್ಷಿಣ ಭಾರತದ ವಿವಿಧ ಪ್ರದೇಶಗಳಲ್ಲಿ ವಿವಿಧ ಸಮಯಗಳಲ್ಲಿ ಹನ್ನೆರಡು ಆಳ್ವಾರರು ಅವತರಿಸಿದರು. ಇವರು ಕ್ರಿ.ಶ. ಎರಡನೇ ಶತಮಾನದಿಂದ ಎಂಟನೇ ಶತಮಾನದವರೆಗಿದ್ದವರಾದರೂ ಸಾಂಪ್ರದಾಯಿಕವಾಗಿ ಇವರನ್ನು ಇನ್ನೂ ಹಿಂದಿನ ಕಾಲಕ್ಕೆ ಕರೆದೊಯ್ಯುತ್ತಾರೆ. ಇವರು ದೈವಾಂಶ ಸಂಭೂತರು. ಎಲ್ಲ ವೇದಗಳ ಸಾರವನ್ನು ತಮ್ಮ ದ್ರಾವಿಡ ದಿವ್ಯಪ್ರಬಂಧಗಳ ಮುಖಾಂತರ ಜನ ಸಾಮಾನ್ಯರಿಗೂ ತಲುಪುವಂತೆ ಪ್ರಸರಿಸಿದರು. ಇವರು ಮಹಾವಿಷ್ಣುವಿನ ಭಕ್ತಿ ವೈಶಿಷ್ಟ್ಯವನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸಿ, ಭಕ್ತಿ ಪದವಿಯನ್ನು ಅಧಿಷ್ಠಿಸುವು ದಕ್ಕೆ ಎಲ್ಲರೂ ಸಮಾನ ಅಧಿಕಾರಿಗಳೇ ಎಂದು ಅನೇಕ ರೀತಿಗಳಲ್ಲಿ ನಿರೂಪಿಸಿ, ಭಕ್ತಿ ಸಿದ್ಧಾಂತ ಸ್ಥಾಪನೆಯಲ್ಲಿ ಅಗ್ರಗಣ್ಯರಾಗಿ ವಿಖ್ಯಾತಿಯನ್ನು ಪಡೆದರು.

'Alwars are the first people, who gave a new shape to Bhakti school, making simple, designed not for serving the purpose of worship of God by the elite, but subserve the similar ends for the quite ordinary folk·'*

---

*(History of Tirupati Vol. I PP 73–74 by Dr. S. Krishnaswamy Ayyangar)

ಇವರುಗಳು ತಾವು ರಚಿಸಿದ ದಿವ್ಯ ಪ್ರಬಂಧಗಳ ಮುಖಾಂತರ ತಮಿಳು ಭಾಷೆಗೆ ಪಾವಿತ್ರ್ಯತೆಯನ್ನು ತಂದರು. ತಮಿಳುನಾಡಿಗೇ ಏನು ಭರತಖಂಡಕ್ಕೇ ಭಕ್ತಿ ಸಂಥ ಸ್ವರೂಪದ ಪರಿಚಯ ಮಾಡಿಸಿ, ಅದರ ಶೋಭೆಯನ್ನು ಅಧಿಕ ಗೊಳಿಸಿದರು.

ಇವರು ತಮ್ಮ ಈ ಯುಗದಲ್ಲಿ ತಮಿಳಿನಲ್ಲಿದ್ದ ಪ್ರೇಮಭಾವವನ್ನು ಭಗವಂತನ ಕಡೆಗೆ ಮರಳಿಸಿ, ಅವರನ್ನು ಭಕ್ತಿ ತತ್ಪರರನ್ನಾಗಿ ಮಾಡಿ, ಭಗವಂತನಿಗೂ-ಭಕ್ತರಿಗೂ ನಡುವೆ ತಾವು ಪುರುಷಾಕಾರರಾಗಿ ವಿರಾಜಮಾನರಾದರು.

ಇಷ್ಟೇ ಅಲ್ಲದೆ ಈ ಆಳ್ವಾರರು ತಾವಿದ್ದ ಯುಗದಲ್ಲಿನ ಪರಿಸ್ಥಿತಿಗಳನ್ನು ಸರಿಯಾಗಿ ಗಮನದಲ್ಲಿ ಇಟ್ಟುಕೊಂಡಿದ್ದರು. ಆ ಕಾಲದಲ್ಲಿ ಭಾರತಾದ್ಯಂತ ಆವರಿಸಿರುವ ಜೈನ ಬೌದ್ಧಾದಿ ಅವೈದಿಕ ಮತಗಳ ಪ್ರಲೋಭನೆಯಿಂದ ಪ್ರಜೆಗಳನ್ನು ರಕ್ಷಿಸಿ, ದೇಶವೆಲ್ಲ ವಿಷ್ಣುಭಕ್ತಿಮಯದ ವಾತಾವರಣವನ್ನು ಸೃಷ್ಟಿಸಿ ಸನಾತನ ಧರ್ಮವನ್ನು ಪುನರುಜ್ಜೀವನಗೊಳಿಸಿದರು.

ಈ ಮಹನೀಯರಿಂದ ರಚಿಸಲ್ಪಟ್ಟ ಪಾಶುರಗಳು ತುಂಬಾ ಭಕ್ತಿರಸದಿಂದ ಕೂಡಿದ್ದುದರಿಂದ, ಅವು ಪತಿತರನ್ನು, ದಲಿತರನ್ನು, ಶ್ರೋತ್ರಿಯರನ್ನು ಸಮಾನವಾಗಿ ಆಕರ್ಷಿಸಿದ್ದೇ ಅಲ್ಲದೆ ತಮಿಳು ವಾಙ್ಮಯ ಮಹೋದಧಿಯಿಂದ ಹೊರ ಬಂದ ಮಧುರ ಗೀತೆಗಳಾಗಿ ಭಾರತೀಯರ ಹೃದಯಗಳನ್ನು ಪರಿಪ್ಲಾವಿತಗೊಳಿಸಿದುವು. ಭಕ್ತರೆಲ್ಲ ಬ್ರಹ್ಮಾನಂದದಲ್ಲಿ ಓಲಾಡುವಂತೆ ಮಾಡಿದುವು. ಆಳ್ವಾರರ ಈ ದ್ರಾವಿಡ ಪ್ರಬಂಧಗಳಲ್ಲಿ ಅಡಗಿರುವ ಬೋಧನೆಗಳ ಆಕರ್ಷಣೆಗೆ ಒಳಗಾಗಿ, ಸ್ವತಃ ಉದ್ಧಾರವಾಗುವುದರೊಂದಿಗೆ, ಪ್ರಯೋಜನವನ್ನೂ ಪಡೆದರು.

ಇಂತಹ ಈ ಆಳ್ವಾರರು ಶ್ರೀಹರಿಯನ್ನಾಶ್ರಯಿಸಿ, ಆತನನ್ನು ಅನನ್ಯ ಭಕ್ತಿಯಿಂದ ಆರಾಧಿಸಿ, ಪ್ರಪನ್ನರಾಗಿ ವಿರಾಜಿಸಿದರು. ಇವರು ಬ್ರಹ್ಮಾದಿಗಳಿಗೆ ಕೂಡ ಅಲಭ್ಯವಾದ ಪರಮಪದವನ್ನು ಪಡೆದವರಾದರು ಎಂದು ವಿಷ್ಣುಪುರಾಣವು ತಿಳಿಸುತ್ತದೆ. ಶ್ರೀಮನ್ನಾರಾಯಣನ ಪಾದಾರವಿಂದಗಳನ್ನು ಆಶ್ರಯಿಸಿ ಮೋಕ್ಷ ಪಡೆದವರಲ್ಲಿ ಈ ಆಳ್ವಾರರು ಮುಖ್ಯರು. ಇವರ ಭಕ್ತಿ ವಾಙ್ಮಯವು ಭಾರತದಲ್ಲಿ ಪರಂಪರಾಗತವಾಗಿದ್ದ ಶ್ರೀವೈಷ್ಣವ ಸಂಪ್ರದಾಯವನ್ನು ಸಮುಲ್ಲಸಿತಗೊಳಿಸಿತು. ಈ ಸಂಪ್ರದಾಯವು ನಂತರದ ಶತಮಾನಗಳಲ್ಲಿ ಅವತರಿಸಿದ ಆಚಾರ್ಯ ಪರಂಪರೆಗೆ ಆಶ್ರಯದಾತವಾಗಿ, ಅವರ ಪವಿತ್ರಾಶಯಗಳಿಗೆ

ಬಹಳಷ್ಟು ಆಧಾರವನ್ನು ನೀಡಿದುವು.

ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀ ಭಕ್ತಿಸಾರ ಕುಲಶೇಖರ ಯೋಗಿವಾಹಾನ್ |
ಭಕ್ತಾಂಘ್ರಿರೇಣು ಪರಕಾಲ ಯತೀಂದ್ರ ಮಿಶ್ರಾನ್
ಶ್ರೀಮತ್ ಪರಾಂಕುಶ ಮುನಿಂ ಪ್ರಣತೋಸ್ಮಿ ನಿತ್ಯಂ ||

ಎಂದು ಪರಾಶರಭಟ್ಟರು ಒಟ್ಟು ಆಳ್ವಾರರನ್ನು ಕುರಿತು ರಚಿಸಿರುವ ಸ್ತೋತ್ರ ಶ್ಲೋಕವು ಅವರ ಸಂಖ್ಯೆಯನ್ನು ತಿಳಿಸುತ್ತದೆ ಇದರಲ್ಲಿ–ಪೂದತ್ತಾಳ್ವಾರ್, ಪೊಯ್ಗೈ ಆಳ್ವಾರ್, ಪೇಯಾಳ್ವಾರ್, ಪೆರಿಯಾಳ್ವಾರ್, ತಿರುಮಳಿಶೈ ಆಳ್ವಾರ್, ಕುಲಶೇಖರಾಳ್ವಾರ್, ತಿರುಪ್ಪಾಣಾಳ್ವಾರ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಮಂಗೈಯಾಳ್ವಾರ್, ನಮ್ಮಾಳ್ವಾರ್–ಎನ್ನುವ ಹತ್ತು ಮಂದಿ ಆಳ್ವಾರರ ಹೆಸರುಗಳಿವೆಯೆಂದು ಹೇಳಲಾಗುತ್ತದೆ.

ಎರಡು ಪಾಠಾಂತರಗಳಿವೆ. ಅಂತೆಯೇ ಎರಡು ಪಕ್ಷಗಳೂ ಇವೆ.

ಒಂದು ಪಕ್ಷ (ಪಾಠಾಂತರ) ಹೀಗೆ ಹೇಳುತ್ತದೆ. ಮೇಲಿನ ಶ್ಲೋಕದಲ್ಲಿನ ಯತೀಂದ್ರರೆಂದರೆ ಶ್ರೀಮದ್ರಾಮಾನುಜರು ಎಂದು, ಇವರನ್ನು ಹತ್ತು ಮಂದಿ ಆಳ್ವಾರರೊಂದಿಗೆ ಸೇರಿಸುವುದು, ಅವರಿಗೊಂದು ಗೌರವ ಸ್ಥಾನ ನೀಡಿದಂತೆ ಎಂಬುದು ಇವರ ವಾದ.

ಮತ್ತೊಂದು ಪಕ್ಷವು ರಾಮಾನುಜರಿಗೆ ಈ ಗೋಷ್ಠಿಯ ಅನ್ವಯ ಸಾಧ್ಯವಿಲ್ಲ. ಈ ಶ್ಲೋಕದಲ್ಲಿರುವುದು ಹನ್ನೆರಡು ಆಳ್ವಾರರುಗಳ ಹೆಸರುಗಳೇ ಎಂದು ತಿಳಿಸುತ್ತದೆ. ಇವರು ತಿಳಿಸುವುದೇನೆಂದರೆ ಮೇಲೆ ತಿಳಿಸಿದ ಹತ್ತು ಆಳ್ವಾರರುಗಳ ಹೆಸರುಗಳಲ್ಲದೆ 'ಶ್ರೀ ಭಕ್ತಿಸಾರ' ಎನ್ನುವ ಕಡೆಯಲ್ಲಿನ 'ಶ್ರೀ' ಶಬ್ದಕ್ಕೆ 'ಆಂಡಾಳ್' ಎನ್ನುವ ಅರ್ಥವನ್ನು ಹೇಳಿ, 'ಶ್ರೀಮತ್ಪರಾಂಕುಶ' ಎನ್ನುವ ಕಡೆಯಲ್ಲಿನ 'ಶ್ರೀಮತ್' ಎನ್ನುವ ಪದವು 'ಮಧುರ ಕವಿ'ಗಳಿಗೆ ಅನ್ವಯಿಸುತ್ತದೆಯೆಂದೂ, 'ಯತೀಂದ್ರ ಮಿಶ್ರಾನ್' ಎನ್ನುವ ಪ್ರಯೋಗದಲ್ಲಿನ 'ಮಿಶ್ರ' ಪದವು 'ಶ್ರೀರಾಮ ಮಿಶ್ರ'ರಿಗೆ ಅನ್ವಯಿಸುತ್ತದೆ ಎಂದೆನ್ನುತ್ತಾರೆ.

ದಿವ್ಯ ಪ್ರಬಂಧಗಳಿಗೆ ಪ್ರಥಮಾಶ್ರಯವಾಗಿರುವ "ಪೆರಿಯ ಕೋಯಿಲ್"ನ (ಶ್ರೀರಂಗನ)ಲ್ಲಿ "ಅರೈಯರ್"ರವರುಗಳು ಶ್ರೀರಂಗನಾಥನಿಗೆ "ಕಟ್ಟಿಯಂ" ಅನ್ನು ಹೇಳುವಾಗ "ಪದಿನ್ಮರ್ ಪಾಡುಂ ಪೆರುಮಾಳ್" (ಹತ್ತು ಮಂದಿ ಆಳ್ವಾರರಿಂದ

ಸ್ತುತಿಸಲ್ಪಟ್ಟ, ಪಾಡಲ್ಪಟ್ಟಿರುವ ದೇವರು) ಎಂಬುದಾಗಿ ಆ ದೇವರನ್ನು ಕುರಿತು ಅನುಸಂಧಾನ ಮಾಡುವುದು ಮೊದಲ ಪಕ್ಷಕ್ಕೆ ಗಮನಕವಾಗಿದೆ.

ನಾಲಾಯಿರ ದಿವ್ಯ ಪ್ರಬಂಧದ ನಿರ್ಮಾತೃರರುಗಳಲ್ಲಿ "ಆಂಡಾಳ್", "ಮಧುರ ಕವಿ"– ಈ ಇಬ್ಬರನ್ನೂ ಸೇರಿಸುವುದು ಎರಡನೇ ಪಕ್ಷಕ್ಕೆ ಸಾಧಕವಾಗಿದೆ. ಇದೇ ಲೋಕವ್ಯವಹಾರದಲ್ಲಿ ಪ್ರಸಿದ್ಧಿ ಪಡೆದಿದೆ.

ಮೇಲೆ ತಿಳಿಸಿದ ಹನ್ನೆರಡು ಮಂದಿ ಬೇರೆ ಬೇರೆಯಾಗಿ ನಿರ್ಮಿಸಿದ, ಬೇರೆ ಬೇರೆ ಪ್ರಬಂಧಗಳನ್ನು ಸಂಕಲಿಸಿ, ಔಚಿತ್ಯವನ್ನು ಅನುಸರಿಸಿ, ಪೌರ್ವಾಪರವನ್ನು ಕಲ್ಪಿಸಿದ ಪ್ರಾಚೀನ ವಿದ್ವಾಂಸರು ಈ ಗ್ರಂಥ ಸಮುದಾಯವನ್ನು "ನಾಲಾಯಿರ (ನಾಲ್ಕು ಸಾವಿರ) ದಿವ್ಯ ಪ್ರಬಂಧ" ಎಂದು ರೂಢಿಯಲ್ಲಿ ತಂದರು. ಶ್ರೀ ರಾಮಾನುಜರ ಶಿಷ್ಯರಾದ ಕೂರತ್ತಾಳ್ವಾನ್‌ರವರ ಶಿಷ್ಯರಾದ "ತಿರುವರಂಗತ್ತ ಮುದನಾರ್"ರವರು ರಚಿಸಿದ "ಶ್ರೀ ರಾಮಾನುಜ ನೂತ್ತಂದಾದಿ"ಯನ್ನು ಒಂದು ಪ್ರಬಂಧವೆಂದು ಪರಿಗಣಿಸಿ, ಇದನ್ನು ಕೂಡ ನಾಲಾಯಿರ ದಿವ್ಯ ಪ್ರಬಂಧದಲ್ಲಿ ಸೇರಿಸುವ ಪ್ರಕ್ರಿಯೆಯೂ ಉಂಟು.

## ದಿವ್ಯಪ್ರಬಂಧಗಳ ವಿವರಣೆ

ನಾಲ್ಕು ಸಾವಿರ ಪಾಶುರಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಹೇಳುವ ಪರಿ ದಿವ್ಯಪ್ರಬಂಧಗಳಿಗೆ ಅನ್ವಯಿಸಲಾಗುತ್ತದೆ– ಮೊದಲಾಯಿರಂ, ಇರಂಡಾಂ ಆಯಿರಂ (ಪೆರಿಯ ತಿರುಮೊಷಿ), ಇಯರ್ಪಾ, ತಿರುವಾಯ್ ಮೊಷಿ ಎಂದು.

(1) ಮೊದಲಾಯಿರದ ಭಾಗದಲ್ಲಿ ಏಳು ಆಳ್ವಾರರು ರಚಿಸಿರುವ ಹತ್ತು ಪ್ರಬಂಧಗಳ ಸಂಗ್ರಹವಿದೆ. ಇದರ ವಿವರ ಈ ರೀತಿ ಇದೆ–

| | | | |
|---|---|---|---|
| 1. ತಿರುಪ್ಪಲ್ಲಾಂಡು–ಪೆರಿಯಾಳ್ವಾರ್ | — | 12 | ಪಾಶರಗಳು |
| 2. ಪೆರಿಯಾಳ್ವಾರ್ ತಿರುಮೊಷಿ " | — | 401 | " |
| 3. ತಿರುಪ್ಪಾವೈ– ಆಂಡಾಳ್ | — | 30 | " |
| 4. ನಾಚ್ಚಿಯಾರ್ ತಿರುಮೊಷಿ " | — | 143 | " |
| 5. ಪೆರುಮಾಳ್ ತಿರುಮೊಷಿ–ಕುಲಶೇಖರಾಳ್ವಾರ್ | — | 105 | " |
| 6. ತಿರುಚ್ಚಂದ ವಿರುತ್ತಮ್–ತಿರುಮಳಿಶೈ ಆಳ್ವಾರ್ | — | 120 | " |
| 7. ತಿರುಮಾಲೈ –ತೊಂಡರಡಿಪ್ಪೊಡಿ ಆಳ್ವಾರ್ | — | 45 | " |

8. ತಿರುಪ್ಪಳ್ಳಿ ಎಷುಚ್ಚಿ–ತೊಂಡರಡಿಪ್ಪೊಡಿ ಆಳ್ವಾರ್ — 10 ಪಾಶರಗಳು
9. ಅಮಲನಾದಿ ಪಿರಾನ್–ತಿರುಪ್ಪಾಣಾಳ್ವಾರ್ — 10 ”
10. ಕಣ್ಣಿನುಣ್ ಶಿರುತ್ತಾಂಬು- ಮಧುರ ಕವಿ ಆಳ್ವಾರ್— 11 ”

(2) ಎರಡನೇ ಸಾವಿರದ ವಿಭಾಗದಲ್ಲಿ ಮೂರು ಪ್ರಬಂಧಗಳಿವೆ. ಒಟ್ಟು 1134 ಪಾಶುರಗಳಿವೆ. ಇವೆಲ್ಲವೂ ತಿರುಮಂಗೈ ಆಳ್ವಾರರ ರಚನೆಗಳೇ ಆಗಿವೆ.

1. ಪೆರಿಯ ತಿರುಮೊಷಿ–ತಿರುಮಂಗೈ ಆಳ್ವಾರ್ — 1084 ಪಾಶುರಗಳು
2. ತಿರುಕ್ಕುರುಂದಾಂಡಕಮ್ ” — 20 ”
3. ತಿರುನೆಡುಂಡಾಂಡಕಮ್ ” — 30 ”

(3) ಮೂರನೇ ಸಾವಿರದ ಭಾಗವನ್ನು "ಇಯರ್ಪಾ" ಎಂದು ಕರೆಯಲಾಗುವುದು. ಇದರಲ್ಲಿ ಆರು ಆಳ್ವಾರರುಗಳು ರಚಿಸಿರುವ ಒಟ್ಟು ಹತ್ತು ರಚನೆಗಳಿವೆ. ಅದರ ವಿವರ ಹೀಗಿದೆ–

1. ಮೊದಲ್ ತಿರುವಂದಾದಿ–ಪೊಯ್‌ಗೈ ಆಳ್ವಾರ್— 100 ಪಾಶುರಗಳು
2. ಇರಂಡಾಂ ತಿರುವಂದಾದಿ–ಪೂದತ್ತಾಳ್ವಾರ್ — 100 ”
3. ಮೂನ್ರಾಂ ತಿರುವಂದಾದಿ–ಪೇಯಾಳ್ವಾರ್ — 100 ”
4. ನಾನ್ಮುಹನ್ ತಿರುವಂದಾದಿ–ತಿರುಮಳಿಶೈ ಆಳ್ವಾರ್— 96 ”
5. ತಿರುವಿರುತ್ತಮ್ –ನಮ್ಮಾಳ್ವಾರ್ — 180 ”
6. ತಿರುವಾಶಿರಿಯಮ್ – ” — 7 ”
7. ಪೆರಿಯ ತಿರುವಂದಾದಿ – ” — 87 ”
8. ತಿರುವೆಷುಕ್ಕೂತ್ತಿರುಕ್ಕೈ – ” — 1 ”
9. ಶಿರಿಯ ತಿರುಮಡಲ್ – ” — $77\frac{1}{2}$ ”
10. ಪೆರಿಯ ತಿರುಮಡಲ್ – ” — $148\frac{1}{2}$ ”

(ರಾಮಾನುಜ ನೂತ್ತಂದಾದಿ 108 ಪಾಶುರಗಳು)

(4) ನಾಲ್ಕನೆಯದು 'ತಿರುವಾಯ್‌ಮೊಷಿ' ಎನ್ನುವ 1102 ಪಾಶುರಗಳಿಂದ ಕೂಡಿರುವ ನಮ್ಮಾಳ್ವಾರರ ರಚನೆಯಾಗಿದೆ. ಇದು 'ಭಗವದ್ವಿಷಯ' ಎಂದು ಖ್ಯಾತಿಗೊಂಡಿದೆ.

ಇದುವರೆವಿಗಿನ ಲೆಕ್ಕದ ಪ್ರಕಾರ ನಾಲಾಯಿರದಲ್ಲಿರುವ ಪ್ರಬಂಧಗಳ ಸಂಖ್ಯೆ ಒಟ್ಟು 24 ಎಂಬುದು ಸಂಪ್ರದಾಯಬದ್ಧವಾದುದು. ನಾಥಮುನಿಗಳು

ಇಷ್ಟನ್ನೆ ನಾಲಾಯಿರ ದಿವ್ಯಪ್ರಬಂಧ ಎಂದು ಪರಿಗಣಿಸಿ, ಅವಕ್ಕೆ ಸಂಗೀತ ಮತ್ತಿತರ ಕಲಾತ್ಮಕ ಅಂಶಗಳ ಹಿನ್ನೆಲೆಯಲ್ಲಿ ದೇವಾಲಯಗಳಲ್ಲಿ ಪಠಿಸುವ ವ್ಯವಸ್ಥೆಯನ್ನು ರೂಢಿಗೆ ತಂದರು. ಆದರೆ ಶ್ರೀ ರಾಮಾನುಜರು ಹಾಗೂ ಆನಂತರದ ಶಿಷ್ಯ ಪರಂಪರೆಯವರು ನಾಲಾಯಿರ ದಿವ್ಯಪ್ರಬಂಧಗಳಿಗೆ ತಮ್ಮದೇ ಆದ ಸ್ವರೂಪವನ್ನು ನೀಡಲು ಪ್ರಯತ್ನಿಸಿದರು.

ಆದರೆ ಶ್ರೀ ವೇದಾಂತ ದೇಶಿಕರ ನಂತರದ ಕಾಲದಿಂದ ವಡಗಲೈ ಸಂಪ್ರದಾಯದವರು ರಾಮಾನುಜ ನೂತ್ತಂದಾದಿಯನ್ನು ಈ 24 ಪ್ರಬಂಧಗಳಲ್ಲಿ ಒಂದೆಂದು ಪರಿಗಣಿಸಿದರು. ಇದರಂತೆ ಮೊದಲಾಯಿರದಲ್ಲಿ ತಿರುಪಲ್ಲಾಂಡನ್ನು ಪೆರಿಯಾಳ್ವಾರ್ ತಿರುಮೊಳಿಯೊಂದಿಗೆ ಸೇರಿಸಿ, ಇವೆರಡನ್ನೂ ಒಂದೇ ಪ್ರಬಂಧವೆಂದು ಲೆಕ್ಕ ಹಾಕಿ, 24 ಪ್ರಬಂಧಗಳ ಒಟ್ಟಾರೆ ಸಂಖ್ಯೆಯನ್ನು ಲೆಕ್ಕಕ್ಕೆ ತೆಗೆದುಕೊಂಡರು. ಇದಕ್ಕೆ ಶ್ರೀ ವೇದಾಂತ ದೇಶಿಕರು ಹೇಳಿರುವ ಈ ಸಂಗ್ರಹ ವಿವರಣೆಯೇ ಆಧಾರ–

| | | |
|---|---|---|
| 'ಎಣ್ಣಿಲ್ ಮೊದಲಾಳ್ವಾರ್‌ಹಳ್ ಮೂನ್ರುನೂರುಂ | — | 300 |
| ಎಳಿಲ್ ಮಳಿಶೈಪ್ಪಿರಾನಿರು ನೂತ್ತೊರು ಪತ್ತಾರುಂ | — | 216 |
| ಉಣ್ಣೈವಿಹುಮಾರನ್ ಮರ್ರೈಯಾಯಿರುತ್ತೋಡು | | |
| ಉತ್ತವಿರು ನೂತ್ತು ತೊಣ್ಣೂರು ಮಾರುಂ | — | 1296 |
| ಪಣ್ತ್ರೈಯುದ್ದೈ ಮದುರಕವಿ ಪತ್ತುಮೊನ್ರುಂ | — | 11 |
| ವಂಜಿಯರ್ ಕೋನ್ ನೂತ್ತ್ರೈಂದುಂ ಪಟ್ಟನಾಥನ್ | — | 105 |
| ಪಣ್ಣಿಯಿಲ್ ನಾನೂತ್ತೆಳುಪತ್ತು ಮೂನ್ರುಂ | — | 473 |
| ಬತ್ತರಡಿಪ್ಪೊಡಿ ಪಾಡಲೈಂಬತ್ತೈದುಂ | — | 55 |
| ಪಾಣರ್ ಪುಗಳ್ ಪತ್ತುದನೇ ಪರಕಾಲನ್ ಶೊಲ್ | — | 10 |
| ಅತ್ತನುಯರ್ ವೇಂಗಡ ಮಾಕರಾಯಿ ರತ್ತೋಡಾನ | | |
| ಇರುನೂತ್ತೋರೈಂಬತ್ತು ಮೂನ್ರುಂ | — | 1253 |
| ಮತ್ತಿತರು ಮೆತಿರಾಶರ್ ಪೊನ್ನಡಿಕ್ಕೇ | | |
| ಮೊಳಿಂದರ ಮುದರ್ ಪಾಡಲ್ ನೂರುಮೆಟ್ಟುಂ | — | 108 |
| ಎತ್ತಿಶೈಯುಂ ವಾಳವಿವರ ಪಾಡಿವೈತ್ತ | | |
| ಇವ್ವೈ ನಾಲಾಯಿರ ಮುಮುಡಿಯೋಂಗಳ್ ವಾಳ್ವೇ' | | 4000 |

ಆದರೆ ತೆಂಗಲೈನವರು ಇರಾಮಾನುಜ ನೂತ್ತಂದಾದಿಯನ್ನು ಈ 24 ಪ್ರಬಂಧಗಳಲ್ಲಿ ಸೇರಿಸುವುದಿಲ್ಲ. 'ನಾದನುಕ್ಕು ನಾಲಾಯಿರ ಮರುಳಿನಾನ್' ಎನ್ನುವ ನಮ್ಮಾಳ್ವಾರರ ಬಿರುದನ್ನು ಅನುಸರಿಸಿ, ನಾಥಮುನಿಗಳ ಸಮಯದಲ್ಲಿ ಉಂಟಾದ ನಾಲಾಯಿರ ದಿವ್ಯಪ್ರಬಂಧಗಳ ವ್ಯವಸ್ಥೆಯೇ ಅನುಸರಿಸಲು ಸರಿಯಾದುದು ಎಂಬುದು ಅವರ ಅಭಿಪ್ರಾಯ. 'ಇರಾಮಾನುಜ ನೂತ್ತಂದಾದಿ'ಯು ನಾಥಮುನಿಗಳ ನಂತರದ ಕಾಲದಲ್ಲಿ ರಚಿತವಾದುದರಿಂದ ನಾಲಾಯಿರ ದಿವ್ಯ ಪ್ರಬಂಧಗಳಲ್ಲಿ ಸೇರಿಸುವುದು ಯುಕ್ತವಲ್ಲ ಎನ್ನುವುದು ಅವರ ಅಭಿಮತ. ಇದಕ್ಕೆ ಆಧಾರವಾಗಿ "ಕೃತ್ವಾ ವಿಶ್ವಹಿತಂ ಪ್ರಬಂಧ ಯುಗಳಂ ಶ್ರೀ ಭಟ್ಟನಾಥಸ್ಸುಧೀಃ' ಎನ್ನುವ ದಿವ್ಯ ಸೂರಿ ಚರಿತ್ರೆಯ ಪ್ರಮಾಣವನ್ನು ಇವರು ಹೇಳುವರು.

ಇದೇ ರೀತಿಯಲ್ಲಿ ನಾಲಾಯಿರ ದಿವ್ಯಪ್ರಬಂಧಗಳ ಪಾಶುರ ಸಂಖ್ಯೆಯ ಬಗ್ಗೆ ಅಭಿಪ್ರಾಯ ಭೇದ ಕಂಡುಬರುತ್ತದೆ.

'ಇಯಪ್ಪಾ'ದಲ್ಲಿರುವ 'ಶಿರಿಯ ತಿರುಮಡಲ್', 'ಪೆರಿಯ ತಿರುಮಡಲ್' ಎನ್ನುವ ಎರಡು ಪ್ರಬಂಧಗಳನ್ನು ದ್ರಾವಿಡ ಲಕ್ಷಣವೇತ್ತರು ಒಂದೊಂದು ಗ್ರಂಥವನ್ನಾಗಿ ಲೆಕ್ಕ ಮಾಡುತ್ತಾರೆ. ಅವರ ಅಭಿಪ್ರಾಯದಂತೆ ನಾಲಾಯಿರ ದಿವ್ಯ ಪ್ರಬಂಧದ ಗ್ರಂಥ (ಪಾಶುರ) ಸಂಖ್ಯೆ 3776 ಮಾತ್ರವೇ ಆಗಿರುತ್ತದೆ. ನಾಲಾಯಿರ ಎನ್ನುವುದು ಒಂದು ಪ್ರಯೋಗಾರ್ಥವಾದುದೇ ಹೊರತು ಕರಾರುವಾಕ್ಕಾದ ಲೆಕ್ಕವಲ್ಲ ಎಂಬುದು ಅವರ ಅಭಿಮತ.

ವಡಗಲೈರವರು ಮೇಲಿನ ಎರಡು ಪ್ರಬಂಧಗಳಲ್ಲಿ 'ಶಿರಿಯ ತಿರುಮಡಲ್' ಅನ್ನು 40 ಗ್ರಂಥ (ಪಾಶುರ) ಗಳಾಗಿಯೂ, 'ಪೆರಿಯ ತಿರುಮಡಲ್' ಅನ್ನು 80 ಗ್ರಂಥ (ಪಾಶುರ) ಗಳಾಗಿಯೂ ಬೇರೆ ಮಾಡಿ, 'ಇರಾಮಾನುಜ ನೂತ್ತಂದಾದಿ'ಯನ್ನು ಅವುಗಳೊಂದಿಗೆ ಸೇರಿಸಿ, ಒಟ್ಟು ಗ್ರಂಥ (ಪಾಶುರ) ಸಂಖ್ಯೆಯನ್ನು 4002 ಕ್ಕೆ ಸರಿಹೊಂದಿಸಿದ್ದಾರೆ.

ಆದರೆ ತೆಂಗಲೈರವರು 'ಶಿರಿಯ ತಿರುಮಡಲ್' ಅನ್ನು $77\frac{1}{2}$ ಗ್ರಂಥ (ಪಾಶುರ) ಗಳಾಗಿಯೂ, 'ಪೆರಿಯ ತಿರುಮಡಲ್' ಅನ್ನು $148\frac{1}{2}$ ಗ್ರಂಥ (ಪಾಶುರ) ಗಳಾಗಿಯೂ ವಿಭಾಗಿಸಿ, ಒಟ್ಟು 4000 ವೆಂದರೆ ನಾಲಾಯಿರ ಎಂದು ಹೇಳುವರು.

ಕೃತಿನಃ ಕಮಲಾವಾಸ ಕಾರುಣ್ಯೈ ಕಾಂತಿನೋ ಭಜೇ |
ಧತ್ತೇ ಯತ್ಸೂಕ್ತಿ ರೂಪೇಣ ತ್ರಿವೇದೀ ಸರ್ವಯೋಗ್ಯತಾಮ್ ||
(ದಯಾಶತಕಮ್–3)

ಎಂಬುದಾಗಿ ಪ್ರಶಂಸಿಸಲ್ಪಟ್ಟಿರುವ ಆಳ್ವಾರರು ವಿಷ್ಣು ಭಗವಾನನ ಮೇಲಿರುವ ಪ್ರಪತ್ತಿಯನ್ನು ಜಗತ್ತಿಗೆಲ್ಲ ವ್ಯಾಪಿಸುವಂತೆ ಮಾಡುವುದಕ್ಕಾಗಿ

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತ ಮೇವ ವಾ
ತತ್ತದೇವಾವ ಗಚ್ಛತ್ವಂ ಮಮತೇಜೋಽಂಶ ಸಂಭವಮ್ ||
(ಭಗವದ್ಗೀತೆ–10–41)

ಎನ್ನುವಂತೆ ಆಗಾಗ್ಗೆ ಭಗವದಂಶದಿಂದ ಇವರುಗಳು ಅವತರಿಸುತ್ತಾ ಬಂದರು.

ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ |
ಕಾವೇರೀ ಚ ಮಹಾಭಾಗಾ ಪ್ರತೀಚೀ ಚ ಸರಸ್ವತೀ ||
ಕಲೌ ಖಲು ಭವಿಷ್ಯಂತಿ ನಾರಾಯಣ ಪರಾಯಣಾಃ |
ಕ್ವಚಿತ್ಕ್ವಚಿನ್ ಮಹಾಭಾಗಾ ದ್ರಾವಿಡೇಷು ಚ ಭೂರಿಶಃ ||
(ಭಾಗವತ–11–5–38, 39)

ಇವೆಲ್ಲ ವಚನಗಳ ಗುರಿ ಈ ಆಳ್ವಾರರೇ ಎನ್ನುವ ಪ್ರತೀತಿ.

ಶ್ರೀವೈಖಾನಸ, ಪಾಂಚರಾತ್ರ ಭಗವತ್ ಶಾಸ್ತ್ರಗಳನ್ನು ಅನುಸರಿಸಿ, ಪ್ರತಿಷ್ಠಾಪಿಸಿ, ಆರಾಧಿಸಲ್ಪಡುವ ಭಗವದಾಲಯಗಳಲ್ಲಿನ ಅರ್ಚಾ ಮೂರ್ತಿಗಳನ್ನು ಪುಣ್ಯಕ್ಷೇತ್ರಗಳೆಂದೇ ಆಳ್ವಾರರು ಭಾವಿಸಿ, ಪ್ರಪತ್ತಿ ಮಾಡಿ, ತಾವೂ ಧನ್ಯರಾಗಿ, ಇತರರನ್ನೂ ಪುನೀತರನ್ನಾಗಿ ಮಾಡಿದರು. ಇವರು ಭಗವದ್ವೈಭವವನ್ನು ರಸವತ್ತರವಾದ ರೀತಿಯಲ್ಲಿ, ಗಂಭೀರಾರ್ಥಗಳಿಂದ ಕೂಡಿರುವಂತಹ ಗೀತೆಗಳನ್ನು ದ್ರಾವಿಡ ಭಾಷೆಯಲ್ಲಿ ಗಾನ ಮಾಡಿದರು. ಇಂತಹ ಗಾನ ಮಾಡಿದ ಹನ್ನೆರಡು ಆಳ್ವಾರರ ಪವಿತ್ರ ಗೀತೆಗಳಿಂದ ಕೂಡಿದ ನಾಲಾಯಿರ ದಿವ್ಯಪ್ರಬಂಧವು ಈ ರೀತಿಯಲ್ಲಿ ರೂಪುಗೊಂಡವು.

| ಗ್ರಂಥಕರ್ತ | ಪ್ರಬಂಧ ಸಂಖ್ಯೆ | ಗ್ರಂಥ ಸಂಖ್ಯೆ | ಗ್ರಂಥದ ಹೆಸರು |
|---|---|---|---|
| 1. ಪೂದತ್ತಾಳ್ವಾರ್ | 1 | 100 | ಇಯಪ್ಪಾ ಭಾಗ |
| 2. ಪೊಯ್‌ಹೈ ಆಳ್ವಾರ್ | 1 | 100 | " |
| 3. ಪೇಯಾಳ್ವಾರ್ | 1 | 100 | " |
| 4. ಪೆರಿಯಾಳ್ವಾರ್ | 1 ಅಥವಾ 2 | (12+461) =473 | " |
| 5. ತಿರುಮಳಿಶೈ ಆಳ್ವಾರ್ | 2 | 216 | ಇಯಪ್ಪಾ+ಮೊದಲಾಯಿರ ಭಾಗ |
| 6. ಕುಲಶೇಖರಾಳ್ವಾರ್ | 1 | 105 | ಮೊದಲಾಯಿರ ಭಾಗ |
| 7. ತಿರುಪ್ಪಾಣಾಳ್ವಾರ್ | 1 | 10 | " |
| 8. ತೊಂಡರಡಿಪ್ಪೊಡಿ ಆಳ್ವಾರ್ | 2 | 55 | " |
| 9. ತಿರುಮಂಗೈ ಆಳ್ವಾರ್ | 6 | 1361 | ತಿರುಮೊಳಿ, ಇಯಪ್ಪಾ ಭಾಗ |
| 10. ನಮ್ಮಾಳ್ವಾರ್ | 4 | 1296 | ತಿರುವಾಯ್ ಮೊಷಿ, ಇಯಪ್ಪಾ ಭಾಗ |
| 11. ಆಂಡಾಳ್ | 4 | 173 | ನೊದಲಾಯಿರದ ಭಾಗ |
| 12. ಮಧುರ ಕವಿ | 1 | 11 | ಮೊದಲಾಯಿರ ಭಾಗ |
| ತಿರುವರಂಗತ್ತ-ಮುದನಾರ್ | 1 | 108 | ಇರಾಮಾನುಜ ನೂತ್ತಂದಾದಿ |

## ನಾಲಾಯಿರ ವ್ಯಾಖ್ಯಾನಗಳು

ಈ ನಾಲಾಯಿರ ದಿವ್ಯಪ್ರಬಂದಗಳಿಗೆ ಪರಿಪೂರ್ಣವಾದ ವ್ಯಾಖ್ಯಾನಗಳು ಕೆಲವು ಮಾತ್ರವೇ ಇವೆ. ಅಂತಹವುಗಳಲ್ಲಿ 'ಪೆರಿಯವಾಚ್ಚಾನ್ ಪಿಳ್ಳೈ'ರವರು ಬರೆದಿರುವ ವ್ಯಾಖ್ಯಾನವು ವಿಶೇಷ ಪ್ರಚಾರದಲ್ಲಿದೆ. ಆದರೆ ಇವರು ರಚಿಸಿದ

ದಿವ್ಯಪ್ರಬಂಧಗಳ ವ್ಯಾಖ್ಯಾನಗಳಲ್ಲಿ ಪೆರಿಯಾಳ್ವಾರ್ ತಿರುಮೊಳಿಯ ವ್ಯಾಖ್ಯಾನವು ಮಾತ್ರ ಲುಪ್ತವಾಗಿ ಹೋಯಿತು. ಆದುದರಿಂದ ಮಣವಾಳ ಮಾಮುನಿಗಳು ಅದಕ್ಕೆ ಮಾತ್ರ ವ್ಯಾಖ್ಯಾನವನ್ನು ಬರೆದರು.

ಪೆರಿಯ ವಾಚ್ಚಾನ್ ಪಿಳ್ಳೈರವರ ವ್ಯಾಖ್ಯಾನವನ್ನು ತೆಂಗಲೈ ಹಾಗೂ ವಡಗಲೈ-ಎರಡೂ ಸಂಪ್ರದಾಯದವರು ಗೌರವಿಸಿ, ಆದರಿಸುತ್ತಾರೆ.

ಇದೇ ಅಲ್ಲದೆ 'ಪೆರಿಯ ಪರಕಾಲ ಜೀಯರ್' ಎನ್ನುವ ವಡಗಲೈ ಜೀಯರ್‌ರವರೊಬ್ಬರು ಬರೆದಿರುವ ದಿವ್ಯಪ್ರಬಂಧಗಳಿಗೆ ಇರುವ ಸಂಪೂರ್ಣವಾದ ಸುತ್ತೊಂದು ವ್ಯಾಖ್ಯಾನವೂ ಉಂಟು.

ಈ ಎರಡೂ ವ್ಯಾಖ್ಯಾನಗಳೂ ಮಣಿಪ್ರವಾಳ ಭಾಷೆಯಲ್ಲಿವೆ.

ಆಧುನಿಕವಾಗಿ ಬರೆದಿರುವ ವ್ಯಾಖ್ಯಾನಗಳೂ ಉಂಟು.

ತೆಂಗಲೈ ಸಂಪ್ರದಾಯದ ಪ್ರತಿವಾದಿ ಭಯಂಕರ ಶ್ರೀ ಅಣ್ಣಂಗರಾಚಾರ್ಯರವರು ಹಾಗೂ ವಡಗಲೈ ಸಂಪ್ರದಾಯದವರಾದ ಉತ್ತಮೂರು ವೀರರಾಘವಾಚಾರ್ಯರವರುಗಳು ತುಂಬಾ ಸೊಗಸಾಗಿದೆ. ಇವೆರಡೂ ಸಂಪ್ರದಾಯಬದ್ಧ ಮಣಿಪ್ರವಾಳ ಭಾಷೆಯಲ್ಲಿವೆ.

ಆಳ್ವಾರರಲ್ಲಿ 'ಪ್ರಸನ್ನಜನ ಕೂಟಸ್ಥ'ರೆಂಬ ಗೌರವಕ್ಕೆ ಪಾತ್ರರಾದ ನಮ್ಮಾಳ್ವಾರರ ಪ್ರಬಂಧಗಳಲ್ಲಿ 'ಭಗವದ್ವಿಷಯ' ಎನ್ನುವ ಗೌರವ ಸ್ಥಾನಕ್ಕೆ ಪಾತ್ರವಾಗಿರುವ 'ತಿರುವಾಯ್ಮೊಳಿ'ಯನ್ನು ಸಂಪ್ರದಾಯಜ್ಞರು ವಿಶೇಷವಾಗಿ ಹೊಗಳಿದ್ದಾರೆ. ಇದರಿಂದಲೇ ಈ ಮಹತ್ಕೃತಿಗೆ ವಿಸ್ತಾರವಾಗಿ ಹಾಗೂ ಸಂಗ್ರಹವಾಗಿ ಅನೇಕ ವ್ಯಾಖ್ಯಾನಗಳು ರಚಿತವಾಗಿವೆ. ಇವುಗಳಲ್ಲಿ 'ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್' (ಕುರುಕೇಶಚಂದ್ರ ಜಲಧಿ) ಎನ್ನುವವರು ಶ್ರೀಮದ್ರಾಮಾನುಜರ ಆಜ್ಞಾನುಸಾರ ತಿರುವಾಯ್ ಮೊಳಿಯ ಮೊಟ್ಟಮೊದಲನೇ ವ್ಯಾಖ್ಯಾನ 'ಆರಾಯಿರಪ್ಪಡಿ' ಎನ್ನುವುದನ್ನು ರಚಿಸಿದರು. ಇವರು ರಾಮಾನುಜರ ನೇರ ಶಿಷ್ಯರು. ಇದು ರಾಮಾನುಜರ ವ್ಯಾಖ್ಯಾನವೆಂದರೂ ತಪ್ಪಲ್ಲ. ಇದು ವಿಷ್ಣುಪುರಾಣ ಪ್ರಕ್ರಿಯೆಯನ್ನು ಅನುಸರಿಸಿ, ಅದರ ಹಿನ್ನೆಲೆಯಲ್ಲಿ ರಚಿತವಾಗಿರುವುದರಿಂದ ಇದರ ಶ್ರೇಷ್ಠತೆ ಹೆಚ್ಚು. ನಂತರದಲ್ಲಿ 'ವೇದಾಂತ ಮುನಿ' ಎಂದು ಕರೆಯಿಸಿಕೊಂಡಿರುವ 'ನಂಜೀಯರ್'ರವರು ಶ್ರೀಭಾಷ್ಯದ ಹಿನ್ನೆಲೆಯನ್ನು ಅನುಸರಿಸಿ, ತಿರುವಾಯ್ಮೊಳಿಗೆ 'ಒಂಬದಿರಾಯಿರಪ್ಪಡಿ' ಎನ್ನುವ

ವ್ಯಾಖ್ಯಾನವನ್ನೂ, 'ಕಣ್ಣಿನುಣ್ ಶಿರುತ್ತಾಂಬು'ವಿಗೂ ವ್ಯಾಖ್ಯಾನವನ್ನು ಬರೆದರು.

ಇವರ ನಂತರ 'ಕಲಿವೈರಿಹಾಸನ್' ಎನ್ನುವ 'ನಂಬಿಳ್ಳೈ'ರವರು ತಮ್ಮ ಆನೇಕ ಶಿಷ್ಯರಿಗೆ ಪ್ರವಚನ ಮಾಡಲು, ಅವರ ಕಾಲಕ್ಷೇಪವನ್ನು ಶ್ರವಣಗೋಚರ ವನ್ನಾಗಿಸಿಕೊಂಡ 'ನಡುವಿಲ್ ತಿರುವೀದಿ ಪಿಳ್ಳೈ'ರವರು ಸಪಾದಲಕ್ಷವಾಗಿಯೂ, ‹ಪೆರಿಯ ವಾಚ್ಚಾಂಪಿಳ್ಳೈ'ರವರು, ಶ್ರೀ ರಾಮಾಯಣದ ಹಿನ್ನೆಲೆ (ಪ್ರಕ್ರಿಯೆ) ಯಲ್ಲಿ 'ಇರವತ್ತು ನಾಲಾಯಿರಪ್ಪಡಿ' ಎನ್ನುವ ವ್ಯಾಖ್ಯಾನವನ್ನು, 'ವಡಕ್ಕು ತ್ತಿರುವೀಧಿ ಪಿಳ್ಳೈ'ರವರು ಶ್ರುತಿ ಪ್ರಕಾಶಿಕಾ ಪ್ರಕ್ರಿಯೆಯಲ್ಲಿ 'ಮುಪ್ಪತ್ತಾರಾಯಿ ರಪ್ಪಡಿ' ವ್ಯಾಖ್ಯಾನವನ್ನು ಬರೆದರು.

ನಂಬಿಳ್ಳೈ ವ್ಯಾಖ್ಯಾನವು 'ತಿರುವಿರುತ್ತಮ್' ಎನ್ನುವ ಕೃತಿಗೆ ಮಾತ್ರ ಲಭ್ಯವಿದೆ.

ಪೆರಿಯ ವಾಚ್ಚಾನ್ ಪಿಳ್ಳೈರವರ ಕುಮಾರರನ್ನು ಆಶ್ರಯಿಸಿದ ಅಳಹಿಯ ಮಣವಾಳ ಜೀಯರು ಎನ್ನುವವರು 'ಪನ್ನಿರಾಯಿರಪ್ಪಡಿ' ಎನ್ನುವ ವ್ಯಾಖ್ಯಾನ ವನ್ನೂ, ಶ್ರೀಮದ್ಭಾಗವತ ಪ್ರಕ್ರಿಯೆಯನ್ನು ಅನುಸರಿಸಿ ಬರೆದರು. ಇವರು ತಿರುವಿರತ್ತಕ್ಕೆ ಕೂಡ ವ್ಯಾಖ್ಯಾನವನ್ನು ಬರೆದರು.

## ದಿವ್ಯಪ್ರಬಂಧಗಳ ವಿಶೇಷತೆಗಳು

ದಿವ್ಯಪ್ರಬಂಧಗಳನ್ನು 'ಆಳ್ವಾರ್ ಪಾಡಲ್' ಎಂದೂ ಕರೆಯುತ್ತಾರೆ. ಇದು ಭಗವಂತನ ಬಗ್ಗೆ ದಿವ್ಯಜ್ಞಾನ ಕಂಡುಕೊಳ್ಳುವ ಸಾಹಿತ್ಯವಾಗಿದೆ. ಅಲ್ಲದೆ ಸರ್ವಾಕರ್ಷಕ ರೀತಿಯ ಶಬ್ದಗಳ ಸೇರ್ಪಡೆಯೇ ಈ ದಿವ್ಯಪ್ರಬಂಧಗಳು. ಈ ದಿವ್ಯಪ್ರಬಂಧಗಳಲ್ಲಿ ಬರುವ ವಿಷ್ಣುಕ್ಷೇತ್ರಗಳು ಈ ಕಾರಣದಿಂದ 'ದಿವ್ಯಕ್ಷೇತ್ರ ಗಳು' ಎನಿಸಿಕೊಂಡಿವೆ. ಆದುದರಿಂದಲೇ ಈ ಕ್ಷೇತ್ರಗಳು 'ಆಳ್ವಾರ್ ಪಾಡಲ್ ಕ್ಷೇತ್ರ'ವೆಂದು ಹೆಸರು ಪಡೆದಿವೆ.

ಆಳ್ವಾರ್ ವಾಣಿಯ ಭಕ್ತಿಯ ಸೆಲೆಯಿಂದಲೇ ತಮಿಳು ಭಾಷೆಗೆ ಪಾವಿತ್ರ್ಯತೆ ಬಂದಿದೆ. ಕಾರಣ ಭಗವಂತನ ಸಂಕಲ್ಪದಿಂದ ಆಳ್ವಾರರು ಹಾಗೂ ದಿವ್ಯಪ್ರಬಂಧಗಳ ಅವತಾರವಾಯಿತು.

ಹಿಂದೊಮ್ಮೆ ವಿಶ್ವಕರ್ಮನು ಯಾವುದೋ ಕಾರಣದಿಂದ ಅಗಸ್ತ್ಯನನ್ನು ಕುರಿತು 'ನಿನ್ನ ತಮಿಳು ಭಾಷೆ ಪೈಶಾಚಿಕ ಭಾಷೆಗೆ ಸಮನಾಗಲಿ' ಎಂದು

ಶಪಿಸಿದನಂತೆ. ಇದರ ನಿವಾರಣೆಗಾಗಿ ಅಗಸ್ತ್ಯನು ಮಹಾವಿಷ್ಣುವನ್ನು ಕುರಿತು ತಪಸ್ಸು ಮಾಡಲಾರಂಭಿಸಿದನಂತೆ. ಆಗ ವಿಷ್ಣುವು ಪ್ರತ್ಯಕ್ಷನಾಗಿ, "ನಿನ್ನ ಅಭೀಷ್ಟದಂತೆ ನನ್ನ ಅಂಶದಿಂದ ಆಳ್ವಾರರುಗಳು ಅವತರಿಸಿ, ತಮ್ಮ ದಿವ್ಯ ಪ್ರಬಂಧಗಳಿಂದ ತಮಿಳು ಭಾಷೆಯನ್ನು ಸಂಸ್ಕೃತ ಭಾಷೆಗೆ ಸಮನಾಗಿ ಮಾಡಿ, ಅದಕ್ಕೆ ಪೂಜ್ಯತೆಯನ್ನು ತರುವರು" ಎಂದು ವರವಿತ್ತನಂತೆ.

ಈ ರೀತಿಯಲ್ಲಿ ಆಳ್ವಾರರುಗಳ ಹಾಗೂ ದಿವ್ಯಪ್ರಬಂಧಗಳ ಅವತಾರದಿಂದ ವೇದಗಳು ಹಾಗೂ ಉಪನಿಷತ್ತುಗಳ ಸಾರಸರ್ವಸ್ವವು ತಮಿಳು ಭಾಷೆಗೆ ಲಭಿಸಿ, ಸಾಮಾನ್ಯ ಜನರಿಗೆ ಜ್ಞಾನಜ್ಯೋತಿಯನ್ನು ನೀಡಿದುವು. ಉತ್ತರ ಭಾರತದಲ್ಲಿ ಪ್ರಾಚೀನವಾಗಿ ನಡೆದುಬಂದಿದ್ದ ಭಾಗವತ ಪಂಥವು ಇದರ ಪರಿಣಾಮವಾಗಿ ದಕ್ಷಿಣ ಭಾರತದಲ್ಲೂ ಹರಡಿ ವಿಷ್ಣುವೇ ನಾರಾಯಣ, ವಾಸುದೇವ, ಶ್ರೀಕೃಷ್ಣ ಎನ್ನುವ ವಿಷ್ಣುಭಕ್ತಿಯು ಹರಡಿತು.

ಜನಸಾಮಾನ್ಯರಿಗೆ ಹಾಗೂ ಸಂಸ್ಕೃತ ಭಾಷೆಯ ಅರಿವಿಲ್ಲದವರಿಗೆ ಭಕ್ತಿ ಮತ್ತು ಪ್ರಾರ್ಥನೆಗಳ ಸತ್ವವನ್ನು ದಿವ್ಯಪ್ರಬಂಧಗಳು ತಿಳಿಸುತ್ತವೆ. ಉಭಯ ವೇದಗಳಲ್ಲಿ ಅನೇಕ ರೀತಿಯ ಸಾಮ್ಯಗಳಿವೆ. ಪ್ರಬಂಧಗಳು ವೇದಾಂತವನ್ನು ಬೋಧಿಸುತ್ತವೆ. ಉತ್ಸವಗಳಲ್ಲಿ ದೇವರು ಪ್ರಬಂಧ ಗೋಷ್ಠಿಯನ್ನು ಅನುಸರಿಸುತ್ತಾನೆ. ಈ ಪ್ರಬಂಧಗಳು ಸತ್ವಗುಣ ವರ್ಧಕವಾಗಿ, ಸಾತ್ವಿಕರಿಗೆ ಭಗವತ್ ಸ್ವರೂಪ ಹಾಗೂ ವಿಭೂತ್ಯಾದಿಗಳನ್ನು ಬೋಧಿಸಿ, ಅವರ ಇಷ್ಟಾರ್ಥಗಳನ್ನು ಈಡೇರಿಸಿ, ಮೋಕ್ಷಸಾಧನೆಗೆ ಸಹಾಯಕವಾಗುತ್ತದೆ.

ತಿರುಪತಿ, ಶ್ರೀರಂಗ ಇತ್ಯಾದಿ 108 ದಿವ್ಯದೇಶಗಳು ದಿವ್ಯಪ್ರಬಂಧಗಳ ಪ್ರಭಾವದಿಂದ ಪವಿತ್ರತೆಯನ್ನು ಪಡೆದುವು.

ಆಳ್ವಾರರ ಪ್ರಭಾವದಿಂದ ತಮಿಳು ಭಾಷೆಯಲ್ಲಿ 'ಶೆಂಗತ್ತಮಿಳ್ ಮಾಲೈ' ಎಂದಾಗಿದೆ. ಇದರಲ್ಲಿ ಅನೇಕ ಅಪರೂಪ ಪದಪ್ರಯೋಗಗಳಿವೆ ಅಂದಾದಿ ಶೈಲಿಯಲ್ಲಿ ಈ ಪ್ರಬಂಧಗಳ ರಚನೆಯಾಗಿದೆ. ಭಗವಂತನನ್ನು ಮಗನಂತೆ ಲಾಲಿಸುವ ಪೆರಿಯಾಳ್ವಾರ್‌ರವರ ಲಾಲಿ ಹಾಡುಗಳು ಭಕ್ತಿ ಸಾಹಿತ್ಯದಲ್ಲಿ ಹೊಸ ಬಗೆಯ ಪ್ರಯೋಗ. ಇದು ಮೊಟ್ಟಮೊದಲ ಪ್ರಯೋಗವೂ ಹೌದು. ಮುಂದಿನ ಕೆಲವು ಭಕ್ತಿ ಸಾಹಿತಿಗಳಿಗೆ ಈ ರೀತಿಯ ಸಾಹಿತ್ಯ ನಿರ್ಮಾಣಕ್ಕೆ ಮಾರ್ಗದರ್ಶಿಯಾಯಿತು. ತಮಿಳು ಭಾಷೆಯಲ್ಲಿನ ಇಂತಹ 'ತಾಲೇಲೋ' ಹಾಡುಗಳು

'ತಾಲಾಟ್ಟು ಪಾಡುಹಳ್' ಎಂದು ಜನಪ್ರಿಯವಾಗಿವೆ. 'ಪೊಚ್ಚುಡವಾರಾಯ್– ನೀವಾರಾಯ್' ಎನ್ನುವ ಪದ್ಯಗಳನ್ನು ಭಗವದಾರಾಧನೆಯ ಸಮಯದ ಅಭಿಷೇಕದ ಸಮಯದಲ್ಲಿ ಅನುಸಂಧಾನ ಮಾಡುವ ಸಂಪ್ರದಾಯವನ್ನು ದೇವಾಲಯಗಳೇ ಅಲ್ಲದೆ ಮನೆಗಳಲ್ಲಿಯೂ ಅನುಸರಿಸಲಾಗುತ್ತದೆ.

ನಮ್ಮಾಳ್ವಾರರ ಹಾಗೂ ತಿರುಮಂಗೈ ಆಳ್ವಾರರ ಕೃತಿಗಳಲ್ಲಿ ಪ್ರಾಸಬದ್ಧವಾದ ಅನೇಕ ಪಾಶುರಗಳಿವೆ—ತಾಳುಮ್, ನಾಳುಮ್, ಪಡ್ಡೈಯಾರ್, ನಡ್ಡೈಯರ್ ಇತ್ಯಾದಿ. ತಿರುಮಂಗೈ ಆಳ್ವಾರರ 'ತಿರುವೆಳಕ್ಕುತ್ತಿರುಕ್ಕೈ' ಎನ್ನುವ ಗೀತಾತ್ಮಕ ಕೃತಿಯನ್ನು ರಥದಂತೆ ಜೋಡಿಸುವರು. ಕುಂಭಕೋಣದ ಸಾರಂಗ ಪಾಣಿಯನ್ನು ಕುರಿತಾದ ಕವನವಿದಾಗಿರುವುದರಿಂದ, ಈ ಕವಿಯನ್ನು 'ನಾರ್ಕವಿ ಪೆರುಮಾಳ್' ಎಂದು ಕರೆಯುತ್ತಾರೆ.

ಇಲ್ಲಿ ಭಕ್ತಿಯೊಂದಿಗೆ ವಿವಿಧ ಹೊಸ ಭಾವನೆಗಳೂ ಕೂಡಿಕೊಂಡಿವೆ. ನಮ್ಮಾಳ್ವಾರ್‌ರವರು ತಾವು ಪರಾಂಕುಶ ನಾಯಕಿಯಾಗಿರುವಂತೆಯೂ, ತಿರುಮಂಗೈ ಆಳ್ವಾರರು ತಾವು ಪರಕಾಲ ನಾಯಕಿಯಾಗಿರುವಂತೆ ವಿರಹಾವಸ್ಥೆಯನ್ನು ಅನುಭವಿಸುವವರಂತೆ, ನಾಯಿಕಾಭಾವವನ್ನು ಪ್ರದರ್ಶಿಸಿದ್ದಾರೆ. ಪೆರಿಯಾಳ್ವಾರ್‌ರವರು ತಾವು ಬಾಲಕೃಷ್ಣನ ತಾಯಿ ಯಶೋದೆಯೆಂದು ಭಾವಿಸಿ, ಪರಮಾತ್ಮನ ಬಾಲಲೀಲೆಗಳ ಸವಿಯನ್ನು ಓದುಗರಿಗೆ ಉಣಬಡಿಸಿದ್ದಾರೆ. ಸ್ತ್ರೀ ಸಹಜ ಭಾವನೆಗಳನ್ನು ಆಂಡಾಳ್ ವಿವರಿಸಿದ್ದಾಳೆ. ಗುರುಗಳನ್ನು ಮೀರಿಸಿದ ದೇವರಿಲ್ಲ ಎಂದು ಮಧುರಕವಿಗಳು ತಮ್ಮ ಗುರುಗಳಾದ ನಮ್ಮಾಳ್ವಾರರ ಹಿರಿಮೆಯನ್ನು ಕೊಂಡಾಡಿದ್ದಾರೆ. ಶ್ರೀಮನ್ನಾರಾಯಣನಾದ ರಂಗನಾಥನೇ ತಮ್ಮ ಸರ್ವಸ್ವ ಎಂದು ವಿಪ್ರನಾರಾಯಣರು ಸ್ತುತಿಸಿದ್ದಾರೆ. ಇವರ ಕೃತಿಗಳು 'ದಂಡಕ'ಗಳಂತಿವೆ.

ಪ್ರತಿಯೊಂದು ಪ್ರಬಂಧಕ್ಕೂ 'ತನಿಯನ್' ಎನ್ನುವ ಶ್ಲೋಕಗಳಿವೆ.

ಇಷ್ಟೇ ಅಲ್ಲದೆ ಆಳ್ವಾರರುಗಳಲ್ಲಿ ಸೃಷ್ಟಿ, ಸ್ಥಿತಿ, ಲಯ ಮುಂತಾದ ಪರಮಾತ್ಮನ ಲೀಲಾವಿನೋದಗಳ ಬಗ್ಗೆಯೂ ವಿವರಗಳಿವೆ. ಇವಲ್ಲದೆ ವ್ಯೂಹಾದಿಗಳ ದೇವತೆಗಳು, ಪುರಾಣೇತಿಹಾಸಗಳು, ಮತ ಸಂಬಂಧದ ವಿಷಯಗಳನ್ನೂ ಇವರು ಪ್ರಸ್ತಾಪಿಸಿದ್ದಾರೆ. ಶ್ರುತಿ, ಸ್ಮೃತಿಗಳಲ್ಲಿ ಬರುವ ಆಕಾಶ, ಪ್ರಕೃತಿ, ವ್ಯೋಮಗಳ ಬಗ್ಗೆಯೂ ವಿವರಗಳಿವೆ. ಗಜೇಂದ್ರ ಮೋಕ್ಷ, ಗೋವರ್ಧ

ನೋದ್ಧರಣ, ದಶಾವತಾರಗಳ ಬಗ್ಗೆಯಂತೂ ಹೇರಳವಾದ ವಿವರಗಳಿವೆ.

108 ವಿವಿಧ ದಿವ್ಯದೇಶಗಳ ವಿವರಗಳಂತೂ, ಅವುಗಳಲ್ಲಿನ ದೈವಗಳ ಹಿರಿಮೆಯನ್ನಂತೂ ಆಳ್ವಾರರು ಮನತುಂಬಿ ಹಾಡಿದ್ದಾರೆ. ಯಾವ ಕ್ಷೇತ್ರ ವನ್ನೂ ಬಿಟ್ಟಿಲ್ಲ. ಹಾಗೆ ವಿವರಿಸುವಾಗ ಪರಿಸರದ ವರ್ಣನೆಯಂತೂ ತುಂಬಾ ಸೊಗಸಾಗಿ ಮೂಡಿಬಂದಿದೆ.

ಇವುಗಳೊಂದಿಗೆ ಐತಿಹಾಸಿಕ ಸಂಬಂಧವಿರುವ ರಾಜರುಗಳ ವಿವರಗಳೂ ಅಲ್ಲಲ್ಲಿವೆ. ಮಾರುಲ್ಲೈ (ಪಲ್ಲವರಾಯ ಮಾಮಲ್ಲ ವರ್ಮ), ಪರಮೇಚ್ಚುರ ವಿಣ್ಣಹರಮ್ (ಪರಮೇಶ್ವರ ವರ್ಮ), ನೆಡುಮಾರನ್ (ಪಾಂಡ್ಯರಾಜ ವಲ್ಲಭ ದೇವ)–ಎನ್ನುವವರ ವಿವರಗಳು ಇದಕ್ಕೆ ಪುಷ್ಟಿ ನೀಡಿವೆ.

ದಿವ್ಯಪ್ರಬಂಧಗಳು ಶ್ರೀವೈಷ್ಣವ ಸಿದ್ಧಾಂತಕ್ಕೆ ಗಟ್ಟಿ ಅಡಿಪಾಯ ಹಾಕಿವೆ. ತಿರುವಾಯ್ಮೊಳಿಯು ವಿಶಿಷ್ಟಾದ್ವೈತ ಸಿದ್ಧಾಂತದ ರೂಪರೇಷೆಗಳನ್ನು ನೀಡಿ, ಅದರ ಸಾರವನ್ನು ಸ್ಪಷ್ಟಪಡಿಸಿದೆ. ತಿರುವಾಶಿರಿಯಂನ 7 ಪಾಶುರಗಳಲ್ಲಿ ತತ್ತ್ವ, ಹಿತ, ಪುರುಷಾರ್ಥ, ಭಗವಂತನ ದಿವ್ಯಮಂಗಳ ವಿಗ್ರಹ ಹಾಗೂ ಆತನ ರಕ್ಷಕತ್ವ ವನ್ನು ವಿವರಿಸುತ್ತವೆ. 'ತಿರುಪ್ಪಾವೈ'ನಲ್ಲಿ ಭಗವದನುಭವಕ್ಕೆ ಬೇಕಾದ ಉಪ ಕರಣಗಳು, ಅರ್ಥ ಪಂಚಕಗಳು, ಶರಣಾಗತಿ, ಭಗವಂತನನ್ನು ಪಡೆಯುವ ಮಾರ್ಗ ಹಾಗೂ ಭಗವನ್ ಮಹಿಮೆಯ ವಿವರಗಳಿವೆ. ತಿರುಮಂಗೈ ಆಳ್ವಾರರು ತಮ್ಮ 'ಪೆರಿಯ ತಿರುಮೊಳಿ' (4–1–2)

> ಯಾವರುಮಾಯ್ ಯಾವೈಯುಮಾಯ್
> ಎಳಿಲ್ ವೇದಪ್ಪೊರುಳ್‌ಹಳು ಮಾಯ್ |
> ಮೂವರುಮಾಯ್ ಮೊದಲಾಯ ಮೂರ್ತಿ–
> ಯಮರ್ನ್ದ್ ಉರೈಯುಮಿಡಮ್ ||

ಎನ್ನುವ ಪಾಶುರದಲ್ಲಿ ಭಗವಂತನು ಚೇತನಾಚೇತನಗಳನ್ನು ಶರೀರವನ್ನಾಗಿ ಹೊಂದಿರುವನೆಂದೂ, ಸುಂದರವಾದ ವೇದಗಳ ಅರ್ಥವೂ ಅವನೇ ಆಗಿದ್ದಾ ನೆಂದೂ–ಆ ರೀತಿಯಲ್ಲಿ ತ್ರಿಮೂರ್ತಿರೂಪವನ್ನು ಅವನೇ ಹೊಂದಿ, ಆದಿದೇವನೂ ಅವನೇ ಆಗಿದ್ದಾನೆಂದೂ ತಿಳಿಸಿದ್ದಾರೆ.

ಈ ರೀತಿಯಲ್ಲಿ ಆಳ್ವಾರರುಗಳು ತಮ್ಮ (ಸಂಘೋತ್ತರ ತಮಿಳು ಸಾಹಿತ್ಯದ) ಕಾಲದಲ್ಲಿ ರೂಢಿಯಲ್ಲಿದ್ದ ಶ್ರೀವೈಷ್ಣವ ಧರ್ಮದ ಸ್ವರೂಪವನ್ನು ತಾತ್ತ್ವಿಕವಾಗಿ

ತಮ್ಮ ಕೃತಿಗಳಲ್ಲಿ ವಿವರಿಸಿರುತ್ತಾರೆ.

ಇದು ಮುಂದೆ ಬಂದ ದರ್ಶನ ಸ್ಥಾಪನಾಚಾರ್ಯರುಗಳಿಗೆ ಶ್ರೀವೈಷ್ಣವ ಸಿದ್ಧಾಂತದ ರೂಪರೇಷೆಗಳನ್ನು ನಿರ್ಮಿಸಿ, ಹರಡಲು, ಪ್ರಚಾರ ಕೈಗೊಳ್ಳಲು ಸ್ಫೂರ್ತಿ ನೀಡಿತು.

ಈ ರೀತಿಯಲ್ಲಿ ಪ್ರಬಂಧಗಳಿಗೆ ವೇದದ ಸ್ವರೂಪವನ್ನು ನೀಡಿದವರು ನಮ್ಮಾಳ್ವಾರರು ಮತ್ತು ಇದನ್ನು ತಾತ್ತ್ವಿಕ ರೂಪದ ಭವ್ಯಮಂದಿರವನ್ನಾಗಿ ಪರಿವರ್ತನೆ ಮಾಡಿದವರು ಶ್ರೀ ರಾಮಾನುಜರು.

ಜೈನ, ಬೌದ್ಧ, ಚಾರ್ವಾಕ, ವೈಶೇಷಿಕ–ಇತ್ಯಾದಿ ಅವೈದಿಕ ಮತಗಳನ್ನು ಪ್ರಬಂಧಗಳು ಅಲ್ಲಲ್ಲಿ ನಿರಾಕರಿಸಿರುವುದನ್ನು ಕಾಣಬಹುದು. ಇದನ್ನೇ ಯಾಮುನ, ರಾಮಾನುಜರು ತಮ್ಮ ಸಿದ್ಧಾಂತದ ಸ್ಥಾಪನೆಗಾಗಿ ಮುಂದೆ ಉಪಯೋಗಿಸಿಕೊಂಡರು.

ಭಗವಂತನು ವೇದ ಪ್ರತಿಪಾದ್ಯನು ಎಂದು ತಿರುಮಂಗೈ ಆಳ್ವಾರರು ತಿಳಿಸಿರುತ್ತಾರೆ. ಮಧುರ ಕವಿಗಳು ತಮ್ಮ ಗುರುಗಳಾದ ನಮ್ಮಾಳ್ವಾರರ ತಿರುವಾಯ್ಮೊಳಿಯಲ್ಲಿ ವೇದದ ರಹಸ್ಯಾರ್ಥಗಳನ್ನು ವಿವರಿಸಿದ್ದಾರೆ ಎಂದು ತಿಳಿಸಿದ್ದಾರೆ. ಶ್ರೀ ವೇದಾಂತ ದೇಶಿಕರು ನಮ್ಮಾಳ್ವಾರರ ಕೃತಿಗಳನ್ನು 'ಸಂಹಿತೆ' ಎಂದು ಕರೆದಿದ್ದಾರೆ.

ತಿರುಪ್ಪಾಣಿ ಆಳ್ವಾರರ 'ಎನ್ನಮುದನೈ ಕಂಡ ಕಣ್ಗಳ್ ಮತ್ತೊನ್ನಿನೈ ಕಾಣಾವೆ' ಎಂಬ ಪಾಶುರದಲ್ಲಿ ಏಕದೇವೋಪಾಸನೆಯನ್ನು ಪ್ರತಿಪಾದಿಸಿದ್ದಾರೆ. ಮಧುರ ಕವಿಗಳು ತಮ್ಮ ಗುರುವಿನ ಸಮಾನ ದೇವರಿಲ್ಲ ಎಂದು ಆಚಾರ್ಯ ಭಕ್ತಿಯನ್ನು ಪ್ರತಿಪಾದಿಸಿದ್ದಾರೆ. ಕುಲಶೇಖರಾಳ್ವಾರ್‌ರವರು ಸದಾ ಭಗವಂತ-ಭಾಗವತರ ಸೇವೆ ತಮಗೆ ಲಭಿಸಲಿ ಎಂದು ಭಗವಂತನನ್ನು ಬೇಡುತ್ತಾರೆ. ದೇವಾಲಯದ ಎಲ್ಲ ಭಕ್ತರೂ ತುಳಿಯುವ, ಅವರ ಪಾದಸ್ಪರ್ಶದಿಂದ ಪವಿತ್ರರಾಗುವ 'ಪಡಿಯಾಯ್ ಕಿಡಂದು ಉನ್ ಪವಳ ವಾಯ್ ಕಾಣ್ಬೇನೇ' ಎಂದು ಹಾಡು ಹಾಡಿ, 'ಕುಲಶೇಖರ ಪಡಿ' ಆಗುವ ಆಸೆಯನ್ನು ಪ್ರಕಟಿಸಿದ್ದಾರೆ. ತಿರುಮಂಗೈ ಆಳ್ವಾರರು ನಿಂದಾಸ್ತುತಿ ಮಾಡಿ ತಮ್ಮ ಭಕ್ತಿಯನ್ನು ಪ್ರಕಟಿಸಿದ್ದಾರೆ. ನಮ್ಮಾಳ್ವಾರರು ವಾಮಾಚಾರವನ್ನು ಬಲವಾಗಿ ಖಂಡಿಸಿ, ಅದರ ನಿವಾರಣೆಗಾಗಿ ಸೂಕ್ತ ಸಲಹೆ ನೀಡಿ, ಮಹಾವಿಷ್ಣುವನ್ನು ಇದಕ್ಕಾಗಿ ಶರಣು

ಹೊಂದಿ ಎಂದು ಹೇಳಿದ್ದಾರೆ. ಎಲ್ಲ ಆಳ್ವಾರರೂ ಮಹಾವಿಷ್ಣುವನ್ನು ವಿನಾಯಿಸಿ, ಬೇರೆ ದೇವರನ್ನು ಪೂಜೆ ಮಾಡುವುದನ್ನು ನಿರಾಕರಿಸಿದ್ದಾರೆ.

ಹೀಗೆ ನಾಲಾಯಿರ ದಿವ್ಯಪ್ರಬಂಧಗಳು ಮಾನವ ಜೀವನಕ್ಕೆ ಅತ್ಯಗತ್ಯವಾದ ಶಿಸ್ತು, ಸಂಯಮ ಆದರ್ಶಗಳನ್ನು ನೀಡಿ, ಶ್ರೀವೈಷ್ಣವತ್ವದ ದರ್ಶನ ಮಾಡಿಸುತ್ತವೆ.

ದಿನನಿತ್ಯದ ಆಚರಣೆಗಳಲ್ಲೂ ದಿವ್ಯಪ್ರಬಂಧಗಳು ಪ್ರಮುಖಸ್ಥಾನ ಪಡೆದಿವೆ. ನಾಲಾಯಿರದ ಸಂಕ್ಷಿಪ್ತರೂಪವಾದ ನಿತ್ಯಾನುಸಂಧಾನದ ಭಾಗಗಳನ್ನು ದೇವರ ಪೂಜೆಯ ಸಂದರ್ಭದಲ್ಲಿ ಪಠಿಸಲಾಗುವುದು. ಹಬ್ಬ ಹರಿದಿನಗಳು ಹಾಗೂ ಉತ್ಸವಾದಿಗಳಲ್ಲಿಯೂ ದಿವ್ಯಪ್ರಬಂಧವನ್ನು ಪಠಿಸುವ ರೂಢಿ ಇದೆ. ರಾಮನವಮಿ, ನರಸಿಂಹ ಜಯಂತಿ, ಕೃಷ್ಣ ಜಯಂತಿ, ಗರುಡೋತ್ಸವ, ಅಧ್ಯಯನೋತ್ಸವಗಳ ಪಹಲ್‌ಪತ್, ರಾಪತ್‌ಗಳ ಸಮಯದಲ್ಲಿ ದಿವ್ಯಪ್ರಬಂಧಗಳ ಗೊತ್ತಾದ ಭಾಗಗಳನ್ನು ಪಠಿಸುವ ರೂಢಿ ಇದೆ. ಮದುವೆಗಳಲ್ಲಿ ವಾರಣ ಮಾಯಿರಂ ಅನ್ನು ಪಠಿಸುವರು. ಅಶುಭ ಸಂದರ್ಭಗಳಲ್ಲಿಯೂ ನಾಲಾಯಿರ ಪಠಣ ರೂಢಿಯುಂಟು. ಹೀಗೆ ಈ ದಿವ್ಯಸೂಕ್ತಿಗಳು ವೇದಗಳೋಪಾದಿಯಲ್ಲಿ ಶ್ರೀವೈಷ್ಣವ ಧರ್ಮಾಚರಣೆಗೆ ಸಹಕಾರಿಯಾಗಿದೆ.

## ಆಳ್ವಾರರ ಭಕ್ತಿತತ್ತ್ವ

ಯದ್ದುಷ್ಕರಂ ಯದ್ದುರಾಪಂ ಯದುರ್ಗಂ ಯಚ್ಚ ದುಸ್ತರವಮ್ |
ತತ್ಸರ್ವಂ ತಪಸಾ ಪ್ರಾಪ್ತಂ ತಪೋ ಹಿ ತುರತಿಕ್ರಮಃ ||

ಯಾವುದನ್ನು ಹೊಂದುವುದು ಕಷ್ಟವೋ, ಪಡೆಯುವುದು ಅಸಾಧ್ಯವೋ ಅದನ್ನು ತಪಶ್ಶಕ್ತಿಯಿಂದ ಪಡೆಯಬಹುದು. ತಪಶ್ಶಕ್ತಿಯಿಂದ ಯಾವುದನ್ನು ಬೇಕಾದರೂ ಪಡೆಯಬಹುದು ಎಂದು ಮನುಸ್ಮೃತಿ ತಿಳಿಸುತ್ತದೆ.

ಆದರೆ ಈ ರೀತಿಯ ಸಾಧನೆಯಿಂದ ಆತ್ಮಜ್ಞಾನವನ್ನು ಪಡೆಯಬಹುದು. ಇದಕ್ಕಿಂತ ಮಿಗಿಲಾದುದನ್ನು ಪಡೆಯಬೇಕಾದರೆ, ಅದಕ್ಕೆ ಬೇರೆಯೇ ಆದ ಮಾರ್ಗವಿದೆ. ಅದೇ ಯೋಗಜ್ಞಾನ.

ಪ್ರತಿಫಲಾಪೇಕ್ಷೆಯಿಂದ ಕರ್ಮಗಳನ್ನು ಆಚರಿಸುವವನಿಗಿಂತಲೂ ಯೋಗಿ ದೊಡ್ಡವನು. ಅಂತಹ ಯೋಗಿಗಳೆಲ್ಲರಲ್ಲಿಯೂ ಭಗವಂತನನ್ನು ಶ್ರದ್ಧೆಯಿಂದ ಭಜಿಸುವವನು ಯೋಗ್ಯನೆಂದು ಭಗವದ್ಗೀತೆಯ ಆರನೇ ಅಧ್ಯಾಯದ ಈ

ಶ್ಲೋಕಗಳು ತಿಳಿಸುತ್ತವೆ-

ತಪಸ್ವಿಭ್ಯೋऽಧಿಕೋ ಯೋಗೀ, ಜ್ಞಾನಿಭ್ಯೋऽಪಿ ಮತೋऽಧಿಕಃ |
ಕರ್ಮಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ||46||

ಉಪವಾಸ ಇತ್ಯಾದಿಗಳನ್ನು ಮಾಡುವ ತಪಸ್ವಿಗಿಂತಲೂ ಧ್ಯಾನ ಯೋಗಿಯೂ ಹೆಚ್ಚಿನವನು. ಇಂತಹ ಯೋಗಿಯು ಬರೀ ಶಾಸ್ತ್ರಾರ್ಥವನ್ನು ತಿಳಿದವನಿಗಿಂತ, ಬರೀ ಕರ್ಮಠನಿಗಿಂತ ಹೆಚ್ಚಿನವನು. ಆದ್ದರಿಂದ ಅರ್ಜುನ ಅಂತಹ ಧ್ಯಾನಯೋಗವನ್ನು ಅನುಸರಿಸು.

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ |
ಶ್ರದ್ಧಾವಾನ್ ಭಜತೇ ಯೋ ಮಾಂ ಸಮೇ ಯುಕ್ತತಮೋ ಮತಃ ||47||

ಯೋಗಿಗಳಲ್ಲಿ ಅನೇಕರು ಇರಬಹುದು. ಆದರೆ ಅವರಲ್ಲಿ ಯಾರು ನನ್ನನ್ನೇ ಶ್ರದ್ಧೆಯಿಂದ ಧ್ಯಾನ ಮಾಡುವರೋ ಅವರೇ ನನಗೆ ಹೆಚ್ಚಿನವರು, ಪ್ರಿಯರು. ಇದು ನನ್ನ ಅಭಿಮತ.

ಇದರನುಗುಣ, ಆಳ್ವಾರರು ಪರಮಯೋಗಿಗಳಾದರು. ಇವರು ಭಗವಂತನ ಧ್ಯಾನದಲ್ಲಿ, ಭಗವದ್ಭಕ್ತಿಯಲ್ಲಿ ಪರಾಕಾಷ್ಠತೆಯನ್ನು ಹೊಂದಿದರು. ಈ ಕಾರಣ ದಿಂದಲೇ ಇವರು ಪರಮ ಭಕ್ತಾಗ್ರೇಸರಾದರು. ಅಲ್ಲದೆ ಇವರುಗಳು ಯಾರಿಗೂ ಸರಿಸಾಟಿಯಲ್ಲ. ಆದುದರಿಂದ ಇವರಿಗೆ ಆಳ್ವಾರರು ಎನ್ನುವ ಅನ್ವರ್ಥನಾಮ ಉಂಟಾಯಿತು.

ಆಳ್ವಾರರ ಭಕ್ತಿತತ್ತ್ವವು ಅನನ್ಯಾದೃಶವಾದುದು. ಇವರ ಭಕ್ತಿ ಪ್ರಭಾವ ವನ್ನು ಇವರ ನಂತರದ ಅನೇಕರು ಕೊಂಡಾಡಿದ್ದಾರೆ. ಇವರು ಭಕ್ತಿ ಸಿದ್ಧಾಂತದ ಬಗ್ಗೆ ತಿಳಿಸಿರುವ ಅಭಿಪ್ರಾಯಗಳೆಲ್ಲವೂ ಇವರ ದಿವ್ಯಪ್ರಬಂಧಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ. ಇಂತಹ ಬಹುಮುಖ್ಯವಾದ ಯೋಗ, ತಪಸ್ಸುಗಳ ಬಗ್ಗೆಯೂ ಇವರು ತಮ್ಮದೇ ಆದ ಅಭಿಪ್ರಾಯಗಳನ್ನು ನೀಡಿ, ಇವಕ್ಕಿಂತಲೂ ಮಿಗಿಲಾದುದು ಎಂದರೆ ಆ ಪರಮಾತ್ಮನಲ್ಲಿಯೇ ಸದಾ ಮನಸ್ಸನ್ನು ಕೇಂದ್ರೀಕರಿಸಿ, ಭಗವಧ್ಯಾನದಲ್ಲಿ ಸದಾ ನಿರತರಾಗುವಿಕೆಯೇ ಮೋಕ್ಷಸಾಧನೆ ಎಂದು ತಿಳಿಸಿದ್ದಾರೆ.

ಯೋಗ, ತಪಸ್ಸುಗಳೆಲ್ಲವೂ ವ್ಯರ್ಥ (ಪೆರಿಯ ತಿರುಮೊಳಿ-3.2.2)
ಈ ಸಾಂಸಾರಿಕ ವ್ಯಥೆಗಳಿಂದ ದೂರವಾಗಬೇಕೆಂದರೂ, ಶಾಶ್ವತವಾದ ಆನಂದ ವನ್ನು ಪಡೆಯಬೇಕೆಂದುಕೊಂಡರೂ ಯೋಗ, ತಪಸ್ಸುಗಳು ಯಾವುವೂ ನಿಮಗೆ

ಉಪಕರಿಸಲಾರವು. ಪರಮಪದ ಪ್ರಾಪ್ತಿಗೆ ಕೇವಲ ಭಕ್ತಿಮಾರ್ಗವೊಂದೇ ಸುಲಭನಾದುದು. (ನಾನ್ಮುಗನ್ ತಿರುವಂದಾದಿ-79). ಭಕ್ತಿಯಿಂದ ಲಭಿಸು ವಂತಹ ಸುಖವು ಸ್ವರ್ಗಸುಖಕ್ಕಿಂತಲೂ ಮಿಗಿಲಾದುದು. (ತಿರುವಾಯ್‌ಮೊಳಿ-5-2-10). ಕಲಿಕಲ್ಮಷಮಯವಾದ ಭಾವ ಪರಂಪರೆಗಳನ್ನು ದೂರಮಾಡಲು ಭಕ್ತಿಯೊಂದೇ ಸೂಕ್ತವಾದ ಮಾರ್ಗ (ತಿರುಮಾಲೈ-2). ಭಕ್ತಿಮಾರ್ಗದಲ್ಲಿ ಪ್ರಯಾಣ ಮಾಡುವವನು ಎಂದಿಗೂ ನರಕವನ್ನು ಹೊಂದುವುದಿಲ್ಲ. (ಇರಂಡಾಂ ತಿರುವಂದಾದಿ-21). ಭಕ್ತಿಹೀನನಾದವನು ತನ್ನ ತಾಯಿಯ ಗರ್ಭಕ್ಕೆ ಕಳಂಕ ವನ್ನು ತರುವವನಾಗಿರುತ್ತಾನೆ. (ಪೆರಿಯಾಳ್ವಾರ್ ತಿರುಮೊಷಿ-4-4-2). ಹರಿಭಕ್ತನಲ್ಲದವನು ಮಾನವನೇ ಅಲ್ಲ. ಮಾನವತ್ವವಿಲ್ಲದ ಅಂತಹ ಅಧಮನು ಭೂಮಿಗೆ ಭಾರವಾಗುವನು. ಅವನ ಜೀವನವೇ ಅವನಿಗೆ ನರಕವನುಭವಿಸುವಂತೆ ಮಾಡುತ್ತದೆ. ಭಗವಂತನು ಭಕ್ತಸುಲಭನು. ಬೇರೆಯವರಿಗೆ ಅವನು ದುರ್ಲಭನು. (ತಿರುವಾಯ್‌ಮೊಷಿ-1-3-1) ಈ ರೀತಿಯಲ್ಲಿ ಬೇರೆ ಬೇರೆ ಆಳ್ವಾರರು ಭಕ್ತಿಯ ಪ್ರಾಮುಖ್ಯತೆಯನ್ನು ಲೋಕಕ್ಕೆಲ್ಲ ಸಾರಿದರು.

ಆಳ್ವಾರರ ನವವಿಧ ಭಕ್ತಿ

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದ ಸೇವನಮ್ |
ಅರ್ಚನಂ ವಂದನಂ ದಾಸ್ಯಂ ಸಖ್ಯಮ್ ಆತ್ಮನಿವೇದನಮ್ |
ಇತಿ ಪುಂಸಾರ್ಪಿತಾ ವಿಷ್ಣೋ ಭಕ್ತಿಶ್ಚೇನ್ನವ ಲಕ್ಷಣ |
ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇಧೀತ ಮುತ್ತಮಮ್ ||

(ಶ್ರೀಮದ್ಭಾಗವತ-7-6-23,24)

ಎನ್ನುವಂತೆ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನೆ, ದಾಸ್ಯ, ಸಖ್ಯ, ಆತ್ಮನಿವೇದನೆ-ಎನ್ನುವ ಒಂಭತ್ತು ವಿಧದ ಭಕ್ತಿಮಾರ್ಗಗಳಿವೆ. ಈ ಮಾರ್ಗಗಳ ಅಂತರ್ಯವನ್ನು ಸಂಪೂರ್ಣವಾಗಿ ಗ್ರಹಿಸಿ, ಆಯಾ ಮಾರ್ಗ ಗಳಲ್ಲಿ ಆಳ್ವಾರರು ಪ್ರಯಾಣ ಮಾಡಿದ್ದರೆಂದು ಅವರು ರಚಿಸಿರುವ ದಿವ್ಯಪ್ರಬಂಧ ಗಳಿಂದ ಸ್ಪಷ್ಟವಾಗುತ್ತದೆ.

**1. ಶ್ರವಣ** : ಭಗವಂತನ ಹೆಸರುಗಳು, ಯಶಸ್ಸುಗಳು, ಮಹಿಮೆಗಳು, ಕಲ್ಯಾಣಗುಣಗಳು, ಲೀಲಾವಿನೋದಗಳು ಎನ್ನುವವು ಶ್ರದ್ಧೆಯಿಂದ ಆಲಿಸು ವುದು ಇಲ್ಲವೆ ಕೇಳಿಸುವಂತೆ ಮಾಡುವ ಕ್ರಿಯೆಯೇ 'ಶ್ರವಣಭಕ್ತಿ'. ಭಗವದ್ಗುಣ

ವೈಭವಗಳನ್ನು, ಚರಿತೆಗಳನ್ನು ಆಲಿಸಿ, ಭಕ್ತನು ಆ ಅನುಭೂತಿಗೆ ಒಳಗಾಗು ವುದೇ ಈ ಶ್ರವಣ ಭಕ್ತಿಗೆ ಚರಮಾಷ್ಠೆ. ಆಳ್ವಾರರ ಕೃತಿಗಳೆಲ್ಲವೂ ಭಗವಂತನ ಹೆಸರುಗಳು, ಲೀಲೆಗಳನ್ನು ಆಲಿಸುವುದು, ಕೇಳಿಸುವುದು-ಎನ್ನುವ ಕ್ರಿಯೆಗ ಳೊಂದಿಗೇ ಒಟ್ಟುಗೂಡಿವೆ. ಅವರು ಭಗವಂತನ ಲೀಲೆಗಳನ್ನು ವರ್ಣಿಸುತ್ತಾ, ಆತನನ್ನೇ ಪರಿಪೂರ್ಣನೆಂದು ಭಾವಿಸಿದಾಗ-ಅವನ್ನು ಆಲಿಸಿದಾಗ, ಕೇಳಿಸಿದಾಗ ಉಂಟಾಗುವ ಫಲಿತಗಳನ್ನು ಹಲವು ರೀತಿಗಳಲ್ಲಿ ವಿಶದೀಕರಿಸಿದ್ದಾರೆ.

ಗೋವಿಂದನನ್ನು ವರ್ಣಿಸುವ ಗೀತೆಗಳನ್ನು ಹಾಡುವವರಿಗೆ ಭಗವದನು ಗ್ರಹವು ತನಗೆ ತಾನೇ ಉಂಟಾಗುತ್ತದೆ. (ಪೆರಿಯಾಳ್ವಾರ್ ತಿರುಮೊಷಿ 2-9-11). ಭಗವಂತನ ಲೀಲೆಗಳಿಂದೊಡಗೂಡಿದ ಈ ಪಾಶುರಗಳನ್ನು ಆಲಿಸುವವರು ವೈಕುಂಠವನ್ನು ಸೇರುವರು. (ಪೆರಿಯಾಳ್ವಾರ್ ತಿರುಮೊಷಿ 2-1-10) ಹೀಗೆಂದು ಪೆರಿಯಾಳ್ವಾರ್‌ರವರು ಒತ್ತಿ ಹೇಳಿದ್ದಾರೆ.

ಈ ದ್ರಾವಿಡ ಪಾಶುರಗಳನ್ನು ಆಲಿಸಿದವರಿಗೆ (ಶ್ರವಣ ಮಾಡಿದವರಿಗೆ) ಕಷ್ಟಗಳು ದೂರವಾಗುತ್ತವೆ ಎಂದು ಕುಲಶೇಖರರು ತಮ್ಮ ಪೆರುಮಾಳ್ ತಿರುಮೊಶಿ (3-9) ಯಲ್ಲಿ ತಿಳಿಸಿದ್ದಾರೆ.

ಈ ಪಾಶುರಗಳನ್ನು ಹಾಡುವವರಿಗೆ ಅವರ ಪಾಪಗಳು ಚೂರುಚೂರಾ ಗುತ್ತವೆ ಎಂದು ತಿರುಮಂಗೈ ಆಳ್ವಾರರು ವಿಶದೀಕರಿಸಿದ್ದಾರೆ. ಭಗವಂತನ ಪವಿತ್ರ ಹೆಸರುಗಳನ್ನು ಆಲಿಸುವವರು ನರಕವನ್ನು ಹೊಂದುವುದಿಲ್ಲವೆಂದು ಪೊಯ್‌ಹೈ ಆಳ್ವಾರರು (ಮೊದಲ್ ತಿರುವಂದಾದಿ-87); ಭಗವನ್ನಾಮವನ್ನು ಶ್ರವಣ ಮಾಡುವವರಿಗೆ ಪರಮಪದವು ಲಭಿಸುತ್ತದೆ ಎಂದು ತೊಂಡರಡಿಪ್ಪೊಡಿ ಯಾಳ್ವಾರರು (ತಿರುಮಾಲೈ-2) ಭಗವನ್ನಾಮ ಶ್ರವಣ ಫಲವನ್ನು ವಿಶೇಷವಾಗಿ ಪ್ರಶಂಸಿಸಿದ್ದಾರೆ.

ನಮ್ಮಾಳ್ವಾರರು ತಮ್ಮ ಒಂದು ಪ್ರಬಂದದಲ್ಲಿ ಒಂದು ಕಡೆ ಈ ಶ್ರವಣ ಭಕ್ತಿಯನ್ನು ಅನೇಕ ರೀತಿಗಳಲ್ಲಿ ಕೊಂಡಾಡಿದ್ದಾರೆ. 'ನನ್ನ ಕಿವಿಗಳು ಸದಾ ಕಾಲದಲ್ಲೂ ಆನಂದದಾಯಕವಾದ ಭಗವಂತನ ಲೀಲೆಗಳನ್ನೇ ಆಲಿಸಲು ಇಚ್ಛಿ ಸುತ್ತವೆ' ಎಂದು (ತಿರುವಾಯ್ ಮೊಷಿ 3-9-6) ಅವರು ತಿಳಿಸಿದ್ದಾರೆ.

ಇದರಿಂದ ಆಳ್ವಾರರು ಶ್ರವಣ ಭಕ್ತಿಗೆ ಎಷ್ಟೊಂದು ಪ್ರಾಮುಖ್ಯತೆ ನೀಡಿದ್ದರೆಂಬುದು ಇದರಿಂದ ಅರ್ಥವಾಗುತ್ತದೆ.

2. ಕೀರ್ತನೆ: ಭಗವಂತನ ಹೆಸರುಗಳನ್ನು, ಗುಣಗಳನ್ನು, ಮಾಹಾತ್ಮ್ಯೆಗಳನ್ನು, ಲೀಲೆಗಳನ್ನು ವರ್ಣಿಸುವುದು, ಹಾಡುವುದು—ಎನ್ನುವುದೇ 'ಕೀರ್ತನ ಭಕ್ತಿ' ಎನ್ನುವುದು. ಇಂತಹ ಕೀರ್ತನ ಭಕ್ತಿಯನ್ನು ಎಲ್ಲ ಭಗವದ್ ಭಕ್ತರುಗಳೂ ಸಾಮಾನ್ಯವಾಗಿ ಪ್ರಶಂಸಿಯೇ ಇರುತ್ತಾರೆ. ಹಾಗಿದ್ದಮೇಲೆ ಆಳ್ವಾರರು ಇದರ ಬಗ್ಗೆ ಏನೂ ಹೇಳದೇ ಇರುತ್ತಾರೇನು ?

ಆಳ್ವಾರರ ಪಾಶುರಗಳೆಲ್ಲವೂ ಸಹಜವಾಗಿ ಸ್ತುತಿಪರವಾದ ಕೀರ್ತನೆಗಳೇನೇ ! ಆದರಿಂದಲೇ ಈ ಪಾಶುರಗಳನ್ನು ದೇವಸ್ಥಾನಗಳಲ್ಲಿ ಪ್ರತಿದಿನವೂ ಅನುಸಂಧಾನ ಮಾಡುವರು. ಶ್ರೀವೈಷ್ಣವ ಸಂಪ್ರದಾಯಸ್ಥರೆಲ್ಲರೂ ಸ್ತುತಿಪರವಾದ ಈ ಪಾಶುರಗಳನ್ನು ಹಾಡುತ್ತಾ ಆನಂದಿಸುವರು.

ಭಗವಂತನ ಕಲ್ಯಾಣಗುಣಗಳನ್ನು ಹಾಡುವುದರಲ್ಲೆ ಮಹದಾನಂದವನ್ನು ಭಕ್ತರು ಅನುಭವಿಸುವರು. ಆದರೆ, ಕರ್ಮಬದ್ಧರಾದ ಮಾನವರ ಗುಣಗಳನ್ನು ಗಾನ ಮಾಡುವುದರಲ್ಲಿ ಅಂತಹ ಆನಂದ ದೊರೆಯಲಾರದು. ಆದುದರಿಂದಲೇ ಸಾಮಾನ್ಯ ಮಾನವರನ್ನು ಹೊಗಳುವ ನಮ್ಮಾಳ್ವಾರರು ಮೊದಲಿಸಿ, ಎಲಾ ಕವಿಯೆ ! ಅಶಾಶ್ವತವಾದವುಗಳಾದ, ಅಸಂಪೂರ್ಣವಾದ ಮಾನವರ ಗುಣಗಳನ್ನು ನಾನು ಹೇಗೆಂದು ಶ್ಲಾಘಿಸಲಿ ? ಆನಂದ ನಾಯಕನಾದ ಭಗವಂತನನ್ನು ಸಂಕೀರ್ತನೆ ಮಾಡುವುದರಿಂದ ತುಂಬು ಪ್ರಯೋಜನವಿದೆಯೆಂದು ಪೂರ್ವಾಚಾರ್ಯರು ಪ್ರಬೋಧಿಸಿರುವರು.' (ತಿರುವಾಯ್ ಮೊಷಿ 3-9-5).

ಭಗವಂತನನ್ನು ಸ್ತುತಿಸದ ಮಾನವರು ಕುಡಿಯುವ ನೀರು, ಧರಿಸುವ ವಸ್ತ್ರಗಳು ಕೇವಲ ದೌರ್ಭಾಗ್ಯದ ವಸ್ತುಗಳು. (ಪೆರಿಯಾಳ್ವಾರ್ ತಿರುಮೊಷಿ-4-4-1). ಭಗವಂತನ ಕಲ್ಯಾಣಗುಣಗಳನ್ನು ಸಂಕೀರ್ತನೆ ಮಾಡುವ ಭಕ್ತರ ಪಾದಸ್ಪರ್ಶದಿಂದಲೇ ಈ ಭೂಮಿಯು ಪವಿತ್ರತೆಯನ್ನು ಹೊಂದಿದೆ ಎಂದು ಪೆರಿಯಾಳ್ವಾರ್ (ಪೆರಿಯಾಳ್ವಾರ್ ತಿರುಮೊಷಿ 4-4-6) ರವರು ಸ್ಪಷ್ಟೀಕರಿಸುತ್ತಾ, 'ನನ್ನ ನಾಲಿಗೆಯು ಭಗವಂತನನ್ನು ಮಾತ್ರವೇ ಸ್ತುತಿಸುತ್ತದೆಯೇ ಹೊರತು ಬೇರೆ ಯಾರನ್ನೂ ಸ್ತುತಿಸುವುದಿಲ್ಲ' ಎಂದು ತಿಳಿಸಿದ್ದಾರೆ. (ಪೆ. ತಿ. 5-1-1)

ಭಗವಂತನನ್ನು ಸ್ತುತಿಸುವುದು ತಪಸ್ಸಿಗೆ ಸಮಾನವಾದುದು ಎಂದು ಪೂದತ್ತಾಳ್ವಾರರು (ಇರಂಡಾಂ ತಿರುವಂದಾದಿ–77) ಹಾಗೂ ಭಗವನ್ನಾಮ

ಸಂಕೀರ್ತನೆಯಲ್ಲಿಯೇ ಎಲ್ಲ ರೀತಿಯ ಪರಮಾನಂದವೂ ಅಡಗಿದೆ ಎಂದು ಕುಲಶೇಖರಾಳ್ವಾರ್‌ರವರು (ಪೆರುಮಾಳ್ ತಿರುಮೊಷಿ-24) ಎತ್ತರಿಸಿದ ದನಿಯಲ್ಲಿ ಸಾರಿದ್ದಾರೆ.

ಗಾನಯೋಗ್ಯವಾದ ಆಳ್ವಾರರ ಪಾಶುರಗಳೆಲ್ಲವೂ ಭಗವಂತನ ಸ್ತುತಿಪರವಾದವುಗಳಾದುದರಿಂದ, ಅಂತಹ ಭಕ್ತಿಗೀತೆಗಳನ್ನು ಭಕ್ತರುಗಳಾದವರು ಹಾಡುತ್ತಾ, ವಿವಿಧ ರಾಗ ತಾಳಗಳೊಂದಿಗೆ ಅವುಗಳನ್ನು ಪ್ರಚಾರ ಮಾಡುತ್ತಾ, ಪ್ರಜೆಗಳನ್ನು ಪ್ರಭಾವಗೊಳಿಸುವಂತೆ ಮಾಡಿರುತ್ತಾರೆ.

**3. ಸ್ಮರಣೆ :** ಭಗವಂತನ ಹೆಸರುಗಳು, ಗುಣಗಳು, ಮಾಹಾತ್ಮ್ಯಗಳು, ಲೀಲೆಗಳು, ಅವನ ಸರ್ವವ್ಯಾಪಕತ್ವ-ಇತ್ಯಾದಿಗಳನ್ನು ಸದಾಕಾಲದಲ್ಲಿಯೂ ಸ್ಮರಿಸುತ್ತಿರುವುದೇ 'ಸ್ಮರಣ ಭಕ್ತಿ'. ಈ ಭಕ್ತಿಯ ಸಾಧನೆಯಲ್ಲಿ ಭಗವನ್ನಾಮ ಜಪಕ್ಕೆ ಬಹಳಷ್ಟು ಪ್ರಾಮುಖ್ಯತೆ ಇದೆ. ತಿರುಗಾಡುತ್ತಿರುವಾಗ, ಊಟ ಮಾಡುವಾಗ, ಯಾವುದೇ ಕೆಲಸ ಮಾಡುತ್ತಿರುವಾಗ ಸಾಧಕನ ಚಿತ್ತವೃತ್ತಿ ಭಗವನ್ನಾಮ ಸ್ಮರಣೆಯಲ್ಲೆ ಸಂಲಗ್ನವಾಗಿರಬೇಕು.

'ಪ್ರಕೃತಿಯಲ್ಲಿರುವ ಜಲ, ಆಹಾರ ಮೊದಲಾದವುಗಳೆಲ್ಲವೂ ಭಗವನ್ಮಯಗಳಾಗಿ ಕಾಣಿಸುತ್ತಿವೆ. ಯಾವ ಪದಾರ್ಥವನ್ನು ನೋಡಿದರೂನೂ ಭಗವಂತನೇ ಸ್ಮರಣೆಗೆ ಬರುತ್ತಿರುತ್ತಾನೆ' (ತಿರುವಾಯ್ ಮೊಷಿ 6-7-1) ಎಂದು ನಮ್ಮಾಳ್ವರರು ತಿಳಿಸುತ್ತಾರೆ.

'ಭಗವಂತನ ಹೆಸರನ್ನು ಸ್ಮರಿಸದವರು ಮಹಾಪಾಪಿಗಳು. ಭಗವಂತನಲ್ಲಿ ಮನಸ್ಸನ್ನು ಕೇಂದ್ರೀಕರಿಸದವನು ಭೂಮಿಗೆ ಭಾರವಾಗಿರುವವರು' ಎಂದು ಪೆರಿಯಾಳ್ವಾರ್‌ರವರು (ಪೆ. ತಿ. 4-4-5) ತಿಳಿಸುತ್ತಾರೆ.

'ಉತ್ತಮ ಭಕ್ತನಾದವನು ನಿರಂತರವೂ ಭಗವನ್ನಾಮವನ್ನು ಸ್ಮರಿಸುತ್ತಲೇ ಇರುವರು' ಎಂದು ಪೊಯಾಹ್ಯೆ ಆಳ್ವಾರರು (ಮೊದಲ್ ತಿರುವಂದಾದಿ-88) ತಿಳಿಸುತ್ತಾರೆ.

'ಭಗವನ್ನಾಮವನ್ನು ಒಂದು ಸಲ ಸ್ಮರಿಸಿದರೇನೇ ಸಾಕು, ಭಗವಂತನು ಆ ಭಕ್ತನ ಮನಸ್ಸಿನಲ್ಲಿ ನೆಲೆಸಿಬಿಡುತ್ತಾನೆ' ಎಂದು ಪೇಯಾಳ್ವಾರರು (ಮೂನ್ರಾಂ ತಿರುವಂದಾದಿ-81) ತಿಳಿಸುತ್ತಾರೆ.

'ಭಗವನ್ನಾಮ ಸ್ಮರಣೆಯನ್ನು ಮಾಡುವವರು ನರಕವನ್ನು ಪಡೆಯುವುದಿಲ್ಲ'

ಎಂದು ತೊಂಡರಡಿಪ್ಪೊಡಿ ಆಳ್ವಾರರು (ತಿರುಮಾಲೈ-12) ಸ್ಮರಣ ಭಕ್ತಿಯನ್ನು ಬಹಳವಾಗಿ ಕೊಂಡಾಡಿದ್ದಾರೆ.

**4.** ಪಾದ ಸೇವನೆ : ಭಗವಂತನ ಪಾದಸೇವೆಯಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದೇ 'ಪಾದಸೇವನ ಭಕ್ತಿ'. ಇದರಲ್ಲಿ ಬಾಹ್ಯ, ಮಾನಸಿಕ ಎನ್ನುವ ಎರಡು ರೀತಿಯ ಭಕ್ತಿಗಳಿವೆ. ಭಗವದ್ ವಿಗ್ರಹ ಪೂಜೆಯ ಕಾರಣದಿಂದ, ಗುರುಪೂಜೆಯಿಂದ 'ಪಾದಸೇವನ ಭಕ್ತಿ'ಯಲ್ಲಿ ಏಕಾಗ್ರತೆ ಲಭಿಸುತ್ತದೆ. ಅಂತಹ ಏಕಾಗ್ರತೆಯಿಂದ ತನ್ನ ಮಾನಸಿಕ ಜಗತ್ತಿನಲ್ಲಿ ಭಕ್ತನು ಅಪ್ರಾಕೃತವಾದ ಭಗವತ್ ಚರಣಾರವಿಂದಗಳನ್ನು ಸೇವಿಸುವನು.

ಈ ರೀತಿಯಲ್ಲಿ ಬಾಹ್ಯವಾಗಿ-ಮಾನಸಿಕವಾಗಿ ಭಗವತ್ ಪಾದಸೇವೆ ಮಾಡುವುದರಿಂದ ಲೋಕಾಶ್ರಯವಾದ ಭಾವವು ತೊಲಗಿಹೋಗುವುದು. ಭಗವತ್ ಸೇವೆಯಲ್ಲೆ ಅಂತಹ ಭಕ್ತನ ಮನಸ್ಸು ಸಂಲಗ್ನವಾಗಿರುವುದರಿಂದ, ಲೋಕವೃತ್ತಿಗಳ ಬಗ್ಗೆ ಅವನು ಉದಾಸೀನ ಭಾವವನ್ನು ಹೊಂದಿದವನಾಗುತ್ತಾನೆ.

ವಿವಿಧ ದಿವ್ಯದೇಶಗಳಲ್ಲಿರುವ ಶ್ರೀವೈಷ್ಣವಾಲಯಗಳಲ್ಲಿ ವಿರಾಜಮಾನರಾಗಿರುವ ಭಗವತ್ ಅರ್ಚಾಮೂರ್ತಿಗಳನ್ನು ಆಳ್ವಾರರು ಸೇವಿಸಿದರು. ಮಧುರಕವಿ ಆಳ್ವಾರರಿಂದ ರಚಿಸಲ್ಪಟ್ಟಿರುವ 'ಕಣ್ಣಿನುಣ್ ಶಿರುತ್ತಾಂಬು' ಎನ್ನುವ ಪ್ರಬಂಧದಲ್ಲಿನ ಪಾಶುರಗಳು ಕೇವಲ ಗುರುಪಾದ ಸೇವೆಯ ಭಕ್ತಿಯನ್ನು ಪ್ರಬೋಧಿಸುತ್ತದೆ.

ಭಕ್ತರಾದವರು ಪರಮ ಭಾಗವತೋತ್ತಮರನ್ನು ಸೇವಿಸುವುದು ಸಹಜವಾದುದು. ಆದುದರಿಂದ ಇಂತಹ ಪರಮ ಭಾಗವತೋತ್ತಮರು ಭಗವಂತನಿಗೆ ಸಮಾನರು ಎಂದು ಕುಲಶೇಖರಾಳ್ವರರು ತಮ್ಮ ಪೆರುಮಾಳ್ ತಿರುಮೊಳಿ (1-3) ಹಾಗೂ ಮುಕುಂದಮಾಲಾ (5-20) ದಲ್ಲಿನ 'ನಸ್ಥಾ ಧರ್ಮೇ ನ ವಸು ನಿಚಯೇ........ಸತತಂ ಸಂಪದ್ಯತಾಂ ಜೀವಿತಮ್' ಎನ್ನುವ ಸ್ತೋತ್ರ ಭಾಗದಲ್ಲಿ ಸ್ಪಷ್ಟಪಡಿಸಿದ್ದಾರೆ.

ಮಾನಸಿಕವಾದ ಭಗವತ್ ಪಾದಸೇವೆಯು ಭಕ್ತಿಯನ್ನು ಸಾಧಿಸುವುದರಲ್ಲಿ ತುಂಬಾ ಮಹತ್ತರ ಪಾತ್ರವನ್ನು ವಹಿಸುತ್ತದೆ. ಆದುದರಿಂದ ಭಕ್ತರು ಭಗವಂತನ ಚರಣಾರವಿಂದಗಳನ್ನು ತಮ್ಮ ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡು

ಅವರನ್ನು ಭಕ್ತಿ ಶ್ರದ್ಧೆಗಳಿಂದ ಪೂಜಿಸುವರು. ಆದುದರಿಂದ 'ಹೇ ಭಗವಂತಾ! ನಾನು ನಿನ್ನ ಚರಣ ಸೇವೆಯ ಅಭಿಲಾಷೆಯನ್ನು ಉಳ್ಳವನಾಗಿದ್ದೇನೆ. ನಿನ್ನ ಚರಣಾರವಿಂದಗಳನ್ನು ನನ್ನ ಶಿರಸ್ಸಿನ ಮೇಲೆ ಧರಿಸಿಕೊಂಡು ಧನ್ಯನಾಗುವೆನು' ಎಂದು ಪೊಯ್‌ಹೈ ಆಳ್ವಾರರು (ಮೊದಲ್ ತಿರುವಂದಾದಿ-88) ತಿಳಿಸಿದ್ದಾರೆ.

'ಭಗವಂತನ ಚರಣಾರವಿಂದಗಳನ್ನು ಸ್ತುತಿಸಲಾರದವರು ಜನನ ಮರಣ ಗಳಿಗೆ, ರೋಗರುಜಿನಾದಿ ದುಃಖಗಳಿಗೆ, ಇನ್ನೂ ಎಷ್ಟೋ ಕಷ್ಟಪರಂಪರೆಗಳಿಗೆ ಗುರಿ ಆಗಬಲ್ಲರು.' (ಪೆರಿಯ ತಿರುವಂದಾದಿ-80). 'ಹೇ ಭಗವನ್! ನಿನ್ನ ಚರಣಾರವಿಂದಗಳನ್ನಲ್ಲದೆ ಮತ್ತೆ ಯಾವುದೂ ಶರಣ್ಯಗಳಾಗಿ ಕಾಣಲಾರವು. ನನ್ನ ಪ್ರಾಣಗಳೆಲ್ಲವೂ ನಿನ್ನದೇ ಎಂದೂ, ಭಕ್ತರಿಗೆ ನಿನ್ನ ಪಾದಸೇವನೆಯೇ ಅವರ ಭಕ್ತಿವಿಧಾನವಾಗಿದೆ' ಎಂದು ನಮ್ಮಾಳ್ವಾರರು (ತಿರುವಾಯ್ ಮೊಷಿ-5-7-10) ಪ್ರಬೋಧಿಸುವರು.

'ಓ ಮನಸ್ಸೇ! ನೀನು ವೇಂಕಟಾಚಲ ನಿವಾಸಿಯಾದ ಶ್ರೀನಿವಾಸ ಚರಣ ಕಮಲಗಳಲ್ಲಿ ಕೇಂದ್ರೀಕರಿಸುವಂತೆ ಮಾಡಿಕೊ! (ಇರಂಡಾಂ ತಿರುವಂದಾದಿ-72). ಪುರುಷೋತ್ತಮನ ಪಾದಪದ್ಮಗಳೇ ನಿನಗೆ ಶರಣ್ಯಗಳಾದುದರಿಂದ, ನೀನು ನಿರಂತರವಾಗಿ ಆ ಪಾದಪದ್ಮಗಳನ್ನೇ ಸ್ಮರಿಸುತ್ತಾ, ಸಂಸೇವಿಸುತ್ತಿರು!' (ಇರಂಡಾಂ ತಿರುವಂದಾದಿ-77) ಎಂದು ಪೂದತ್ತಾಳ್ವಾರರು ತಮ್ಮ ಮನಸ್ಸನ್ನು ಎಚ್ಚರಿಸುತ್ತಾ, ಹಿತವನ್ನು ಉಪದೇಶಿಸುವರು.

'ಹೇ ಪರಮಾತ್ಮಾ! ನಿನ್ನನ್ನೇ ಸ್ತುತಿಸುತ್ತಾ ರಚಿಸಿದ ಈ ಪಾಶುರ ಗಳನ್ನು ನಿನ್ನ ಚರಣಾರವಿಂದಗಳಲ್ಲಿ ಸಮರ್ಪಿಸಿ ನಿರಂತರವೂ ನಿನ್ನನ್ನೇ ಸ್ಮರಿಸುತ್ತಾ, ನಿನಗೇ ಶರಣು ಹೊಂದಿದ್ದೇನೆ' (ಪೆರಿಯ ತಿರುಮೊಷಿ 1-6-8) ಎಂದು ತಿರುಮಂಗೈ ಆಳ್ವಾರರು ಪಾದಸೇವನೆಯ ಭಕ್ತಿಯನ್ನು ಅನೇಕ ರೀತಿ ಗಳಲ್ಲಿ ಪ್ರಶಂಸಿಸಿದ್ದಾರೆ.

**5.** ಅರ್ಚನೆ : ಭಗವತ್ ಸ್ವರೂಪವನ್ನು ಶ್ರದ್ಧಾ ಭಕ್ತಿಗಳಿಂದ ಪೂಜಿ ಸುವುದೇ 'ಅರ್ಚನ ಭಕ್ತಿ'. ಭಗವಂತನು ದೇವಾಲಯಗಳಲ್ಲಿ ಅರ್ಚಾಸ್ವರೂಪದ ಮುಖಾಂತರ ದರ್ಶನವೀಯುವುದೇ ಅಲ್ಲದೆ, ಸದಾಚಾರ್ಯನ ಹೃದಯದಲ್ಲಿ, ಭಕ್ತನ ಆತ್ಮದಲ್ಲಿಯೂ ಕೂಡ ವಿರಾಜಮಾನನಾಗಿರುತ್ತಾನೆ.

ಈ ಮೂರು ರೀತಿಗಳಲ್ಲಿರುವ ಭಗವತ್ ಸ್ವರೂಪವನ್ನು ಭಕ್ತನು ಗುರ್ತಿಸಿ,

ತನಗೆ ಇಷ್ಟವಾದ ದೈವವನ್ನು ಭಕ್ತಿ, ಪ್ರಪತ್ತಿಗಳೊಂದಿಗೆ ಪ್ರತಿನಿತ್ಯವೂ ಪೂಜಿಸುವನು. ಭಕ್ತನು ಭಗವಂತನಿಗೆ ಮಾಡುವ ಎಲ್ಲ ರೀತಿಯ ಸೇವೆಗಳಲ್ಲಿಯೂ ಸ್ವಾರ್ಥದ ಸೋಂಕು ಇಲ್ಲದೆ, ತ್ಯಾಗವನ್ನು ಪ್ರದರ್ಶಿಸುವಂತಿರಬೇಕು.

ಮಾನಸಿಕವಾದ ಅರ್ಚನೆಯಲ್ಲಿ ಭಗವಂತನನ್ನು ಪೂಜಿಸುವಿಕೆ ಹಾಗೂ ಭಗವಂತನಿಗೆ ಆತ್ಮಸಮರ್ಪಣೆ ಮಾಡಿಕೊಳ್ಳುವುದು–ಎನ್ನುವ ಎರಡು ವಿಧಾನಗಳು ಅತಿ ಮುಖ್ಯವಾದವುಗಳು.

ಇಂತಹ ಮಾನಸಿಕವಾದ ಅರ್ಚನೆಯಲ್ಲಿ ಬಾಹ್ಯವಾದ ಉಪಚಾರಗಳು ಅವಶ್ಯಕವಲ್ಲ. ಆದರೆ ಸ್ಥೂಲರೂಪವಾದ ಅರ್ಚನೆಯಲ್ಲಿ ಅನೇಕ ಉಪಚಾರಗಳು ಆವಶ್ಯಕವಾದವುಗಳಾಗಿರುತ್ತವೆ. ಅರ್ಘ್ಯ, ಪಾದ್ಯ, ಆಚಮನೀಯ ಸಹಿತದ ಸ್ನಾನ, ಊರ್ಧ್ವ ಪುಂಡ್ರಧಾರಣೆ, ಚಂದನ, ಪುಷ್ಪ, ಧೂಪ, ದೀಪ, ನೈವೇದ್ಯ ತಾಂಬೂಲಾದಿ ಷೋಡಷೋಪಚಾರಗಳೊಂದಿಗೆ ಅರ್ಚನ ಭಕ್ತಿಯನ್ನು ನಿರ್ವರ್ತಿಸಲ್ಪಡುವುದು. ಅಂತಹ ಅರ್ಚನ ಭಕ್ತಿಗೆ ಸಂಬಂಧಿಸಿದ ಅನೇಕ ಅಂಶಗಳ ಬಗ್ಗೆ ಆಳ್ವಾರರ ದಿವ್ಯಪ್ರಬಂಧಗಳಲ್ಲಿ ವಿವರಣೆಗಳು ಕಂಡುಬರುತ್ತವೆ.

'ಓ ಭಕ್ತರೆ ! ಕೇವಲ ಪುಷ್ಪ, ಫಲ, ಜಲ, ಧೂಪಾದಿಗಳನ್ನು ಅರ್ಪಿಸುವುದೇ ಭಗವದರ್ಚನವೇನು ? ಭಕ್ತನಿಂದ ಹೃದಯಪೂರ್ವಕವಾಗಿ ಸಮರ್ಪಿಸಲ್ಪಡುವ ಜಲ, ಚಂದನ, ಧೂಪ, ದೀಪಾದಿಗಳಿಂದಲೇ ನಿಜ ಅರ್ಥದ ಭಗವದರ್ಚನೆಯು ಪರಿಪೂರ್ಣವಾಗಬಲ್ಲದು' ಎಂದು ನಮ್ಮಾಳ್ವಾರರು (ತಿರುವಾಯ್ಮೊಷಿ 1–6–1 ಮತ್ತು 2) ತಿಳಿಸುತ್ತಾರೆ.

ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾಪ್ರಯಚ್ಛತಿ |
ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ || 9–26 ||

ಎಂದು ಭಗವದ್ಗೀತೆಯಲ್ಲಿ ಹೇಳಿರುವ ಹಾಗೆ ಎಲೆ, ಹೂ, ಹಣ್ಣು, ನೀರು–ಇವುಗಳಲ್ಲಿ ಯಾವುದಾದರೊಂದನ್ನಾದರೂ ಭಕ್ತನು ಪ್ರೇಮದಿಂದ ನನಗೆ ನೀಡುವನೊ, ಅಂತಹ ಪರಿಶುದ್ಧ ಮನಸ್ಸಿನಿಂದ ಭಕ್ತಿಭಾವದಿಂದ ನೀಡಲ್ಪಡುವ ಆ ಪದಾರ್ಥವನ್ನು ನಾನು ತೆಗೆದುಕೊಳ್ಳುತ್ತೇನೆ'. ತಿಳಿಸಿರುವಂತೆ, ಈ ಭಗವದ್ವಚನಾನುಸಾರ ನಮ್ಮಾಳ್ವಾರರು ತಿಳಿಯಪಡಿಸಿರುವ ಮೇಲಿನ ಭಾವನೆಗಳನ್ನು ಪ್ರಭಾವಿತಗೊಳಿಸಿವೆ ಎಂದು ಭಾವಿಸಬಹುದು.

'ಚಂದನ, ಆಭರಣ, ವಸ್ತ್ರ, ಪುಷ್ಪ–ಇತ್ಯಾದಿಗಳನ್ನು ಸಮರ್ಪಿಸಿ, ಭಗ

ವಂತನ ಪಾದಪದ್ಮಗಳಿಗೆ ನಮಸ್ಕರಿಸಬೇಕು' ಎಂದು ಪೂದತ್ತಾಳ್ವಾರ್‌ರವರು ಭಕ್ತಲೋಕಕ್ಕೆ (ಇರಂಡಾಂ ತಿರುವಂದಾದಿ-76) ಪ್ರಬೋಧಿಸಿದ್ದಾರೆ.

'ಶ್ರೀ ವೇಂಕಟಾಚಲದಲ್ಲಿ ಮಂತ್ರಗಳನ್ನು ಪಠಿಸುತ್ತಾ, ವಿಪ್ರೋತ್ತಮರು ಧೂಪ, ದೀಪ, ಪುಷ್ಪ, ಜಲಾದಿಗಳನ್ನು ಸಮರ್ಪಿಸುತ್ತಿರಲು, ಈ ಮೂಲಕ ವಿವಿಧ ದಿಕ್ಕುಗಳಲ್ಲಿರುವ ಅರ್ಚಾಮೂರ್ತಿಗಳನ್ನು ಪೂಜಿಸಲಾಗುತ್ತಿದೆ' (ಮೊದಲ್ ತಿರುವಂದಾದಿ-37) ಎಂದು ಪೊದತ್ತಾಳ್ವಾರರು ತಿಳಿಸಿರುತ್ತಾರೆ. ಹೀಗೆ ಎಲ್ಲ ಆಳ್ವಾರರೂ ಅರ್ಚನಾಭಕ್ತಿಯನ್ನು ವಿಶೇಷವಾಗಿ ಪ್ರಶಂಸಿಸಿದ್ದಾರೆ.

**6.** ವಂದನೆ : ಭಗವಂತನ ಮಹಿಮೆಗಳನ್ನು ಮನಸ್ಸಿನಲ್ಲಿ ಧಾರಣೆ ಮಾಡಿಕೊಂಡು, ಆವನನ್ನು ಸ್ತುತಿಸುತ್ತಾ, ವಿನಮ್ರನಾಗಿ, ಆ ಸ್ವಾಮಿಗೆ ಪ್ರಣಾಮವನ್ನು ಮಾಡುವುದೇ 'ವಂದನ ಭಕ್ತಿ'.

ಭಗವಂತನಿಗೆ ಅರ್ಚನೆ ಮಾಡುವ ಸಮಯದಲ್ಲಿ ವಂದನೆಯನ್ನು ಆಚರಿಸುವುದು ಭಕ್ತರು ನಡೆದುಕೊಳ್ಳುವ ರೀತಿಯಾಗಿರುತ್ತದೆ. ಭಗವನ್ನಾಮವನ್ನು ಸಂಕೀರ್ತನೆ ಮಾಡುವ ಸಮಯದಲ್ಲಿ, ಭಕ್ತನ ಹೃದಯದಿಂದ, ಭಕ್ತಿಪ್ರವಾಹವು ಉಕ್ಕಿ ಹರಿಯುವುದು ಸಹಜವೇ ಆಗಿದೆ. ಆಗ ಭಕ್ತನು ಆ ಭಾವಾವೇಶಕ್ಕೆ ಒಳಗಾಗಿ, ತನ್ಮಯತ್ವವನ್ನು ಹೊಂದಿ, ನೃತ್ಯವನ್ನು ಮಾಡುವನು.

ಆಳ್ವಾರರು ಭಗವನ್ನಾಮ ಸಂಕೀರ್ತನೆ ಮಾಡುತ್ತಾ, ಆತನಿಗೆ ನಮಸ್ಕರಿಸಿ, ನೃತ್ಯವನ್ನು ಮಾಡುತ್ತಾ, ಉನ್ಮತ್ತರಂತೆ, ಭಗವಂತನನ್ನು ಕುರಿತು ವಿಲಪಿಸುತ್ತಾ ಇರುತ್ತಾರೆಂದೂ, ಮತ್ತೊಂದು ಸಲ ಈ ರೀತಿಯಲ್ಲೆ ಬ್ರಹ್ಮಾನಂದವನ್ನು ಪಡೆಯುತ್ತಿದ್ದರೆಂದೂ ಅವರ ದಿವ್ಯಪ್ರಬಂಧಗಳಿಂದ ನಮಗೆ ತಿಳಿದು ಬರುತ್ತದೆ.

ಇಂತಹ ವಿಚಿತ್ರ ಸ್ಥಿತಿಯನ್ನು ತಲುಪುವ ಈ ಪರಮಯೋಗಿಗಳ ಪರಿಸ್ಥಿತಿಗಳನ್ನು ಗಮನಿಸುವ ಸಾಮಾನ್ಯ ಜನರು ಇವರನ್ನು ಹುಚ್ಚರೆಂದೇ ಭ್ರಮಿಸುವರು.

ಆದರೆ ಇಂತಹ ಉನ್ಮಾದ ಸ್ಥಿತಿಯನ್ನು ಕುಲಶೇಖರಾಳ್ವಾರರು ಹೊಂದಿದ್ದರೆಂಬುದನ್ನು ಅವರ ಕೃತಿಗಳಿಂದ ನಾವು ತಿಳಿದುಕೊಳ್ಳಬಹುದು. (ಪೆರುಮಾಳ್ ತಿರುಮೊಳಿ 2-2) 'ಶ್ರೀರಂಗದಲ್ಲಿನ ದೇವಾಲಯದಲ್ಲಿ ವಿರಾಜಮಾನನಾಗಿರುವ ಶ್ರೀರಂಗನಾಥನನ್ನು ನನ್ನ ನಾಲಿಗೆ ಆಯಾಸಗೊಳ್ಳುವವರೆಗೂ ಸ್ತುತಿಸಿ, ಹೂಗಳನ್ನು ಅರ್ಪಿಸಿ, ಆತನ ಚರಣಾರವಿಂದಗಳಲ್ಲಿ ಸಾಷ್ಟಾಂಗ ಪ್ರಣಾಮವನ್ನು

ಅರ್ಪಿಸಬೇಕು' (ಪೆರುಮಾಳ್ ತಿರುಮೊಷಿ 1-4) ಎಂಬ ಪಾಶುರದ ಮುಖಾಂತರ ಕುಲಶೇಖರಾಳ್ವಾರರಿಗೆ ವಂದನ ಭಕ್ತಿಯ ಮೇಲೆ ತಮಗಿರುವ ಗಾಢವಾದ ಭಕ್ತಿಯನ್ನು ಪ್ರದರ್ಶಿಸಿದ್ದಾರೆ.

'ಅಹರ್ನಿಶಿಗಳಲ್ಲಿಯೂ ಭಗವಂತನನ್ನು ಧ್ಯಾನಿಸುತ್ತಾ, ನತಮಸ್ತಕನಾಗಿ, ಕೈಗಳನ್ನು ಜೋಡಿಸಿ, ಆ ಸ್ವಾಮಿಗೆ ನಮಸ್ಕಾರವನ್ನು ಅರ್ಪಿಸುವ ಭಕ್ತರು ನಿವಸಿಸುವ ಪ್ರದೇಶಗಳಲ್ಲಿನ ಜನರು ಎಷ್ಟೊಂದು ಅದೃಷ್ಟವಂತರೊ !' ಎಂದು ಪೆರಿಯಾಳ್ವಾರರು (ಪೆರಿಯಾಳ್ವಾರ್ ತಿರುಮೊಷಿ 4-4-7) ವಂದನಾಭಕ್ತಿಯ ಹಿರಿಮೆಯನ್ನು ಪ್ರಶಂಸಿಸಿದ್ದಾರೆ.

'ಓ ಮನಸ್ಸೆ ! ನರಸಿಂಹಾವತಾರಿಯಾಗಿ ತನ್ನ ಭಕ್ತನ ಮೇಲೆ ವಾತ್ಸಲ್ಯ ಭಾವವನ್ನು ತೋರಿದ ವಿಷ್ಣು ಭಗವಾನನಿಗೆ ಪ್ರಣಾಮ ಮಾಡು ! ಆ ದೇವ ದೇವನನ್ನು ಸ್ತುತಿಸು !' ಎಂದು ಪೇಯಾಳ್ವಾರರು (ಮೂನ್ರಾಂ ತಿರುವಂದಾದಿ-95) ತಿಳಿಸುತ್ತಾರೆ.

'ಭಗವಂತನನ್ನು ಸಹಸ್ರನಾಮದೊಂದಿಗೆ ಸ್ಮರಿಸಿ, ಕೈಗಳನ್ನು ಜೋಡಿಸಿ, ಆ ಸ್ವಾಮಿಗೆ ವಂದನೆಯನ್ನು ಅರ್ಪಿಸುವ ಭಕ್ತರಿಗೆ ಎಂದಿಗೂ ನರಕವು ಪ್ರಾಪ್ತವಾಗುವುದಿಲ್ಲ. ಅಂತಹವರಿಗೆ ಯಾವ ವಿಧವಾದ ಕಷ್ಟವೂ, ಕ್ಲೇಶವೂ ಉಂಟಾಗಲಾರದು. ಅಂತಹ ಭಕ್ತರು ಭಕ್ತಿಮಾರ್ಗದ ವಿನಹ ಬೇರೆ ಮಾರ್ಗವನ್ನು ಅನುಸರಿಸಲೊಲ್ಲರು !' ಎಂದು ಪೊಯ್‌ಹೈ ಆಳ್ವಾರರು ವಂದನ ಭಕ್ತಿಯನ್ನು ಅನೇಕ ರೀತಿಗಳಲ್ಲಿ (ಮೊದಲ್ ತಿರುವಂದಾದಿ–65) ಕೊಂಡಾಡಿದ್ದಾರೆ.

**7.** ದಾಸ್ಯ : ಭಕ್ತರು ಭಗವದಾಜ್ಞೆಯನ್ನು, ಶಿಷ್ಯರು ಗುರುವಿನ ಆಣತಿಯನ್ನು ಸಕ್ರಮವಾಗಿ ಪಾಲಿಸುವುದೇ 'ದಾಸ್ಯ ಭಕ್ತಿ'. ದಯಾಸಮುದ್ರನಾದ ಭಗವಂತನನ್ನು ತನ್ನ ಸ್ವಾಮಿಯಾಗಿ, ತಂದೆಯಾಗಿ, ಗುರುವಾಗಿ ಭಾವಿಸುವ ಭಕ್ತರು ತಮ್ಮ ಅಜ್ಞಾತ, ದೈನ್ಯ, ದುರ್ಗುಣಗಳು, ದೋಷಗಳನ್ನು ಆ ಪರಮಾತ್ಮನಲ್ಲಿ ನಿವೇದಿಸಿಕೊಂಡು, ತಮ್ಮನ್ನು ರಕ್ಷಿಸಬೇಕೆಂದು ಅನೇಕ ರೀತಿಗಳಲ್ಲಿ ಪ್ರಾರ್ಥಿಸುವರು. ಭಗವನ್ನಾಮಗಳನ್ನು ಪರಿಪೂರ್ಣವಾಗಿ ಗ್ರಹಿಸಿ, ಆ ಸ್ವಾಮಿಯ ಸಾನ್ನಿಧ್ಯದಲ್ಲಿ ತಮ್ಮ ಅನನ್ಯಾಶ್ರಯ ಪ್ರವೃತ್ತಿಯನ್ನು ಪ್ರಕಟಿಸಿ, ಅನೇಕ ರೀತಿಗಳಲ್ಲಿ ಆತನ ಕಲ್ಯಾಣಗುಣಗಳನ್ನು ಸ್ಮರಿಸುತ್ತಾ, ಆ ಪರಾತ್ಪರನ ಕೃಪಾಕಟಾಕ್ಷವನ್ನು ಹೊಂದುವುದಕ್ಕೆ ನಿರಂತರವಾಗಿ ಪರಿತಪಿಸುವರು.

ಆಳ್ವಾರರಲ್ಲಿ ಕೆಲವರು ಇಂತಹ ದಾಸ್ಯಭಕ್ತಿಯನ್ನು ವಿಶೇಷವಾಗಿ ಕೊಂಡಾಡಿದ್ದಾರೆ. ಅವರ ಪಾಶುರಗಳಲ್ಲಿ ಸ್ವಯಂಕೃತ ಅಪರಾಧಗಳ ಪ್ರಕಟಣೆ, ವಿನಯ, ಯಾಚನೆ, ದೈನ್ಯ, ಆತ್ಮ ಸಮರ್ಪಣ, ಭಗವದನುಭೂತಿ ಇತ್ಯಾದಿ ಭಾವನೆಗಳು ದಾಸ್ಯ ಭಕ್ತಿಗೆ ಅಂಗಗಳಾಗಿ ಹೆಸರಿಸಲಾಗಿದೆ.

'ಓ ಮನಸ್ಸೇ ! ಮೂರ್ಖರ ಮಾತುಗಳನ್ನು ಕೇಳಬೇಡ. ಗೋಪಾಲ ಕೃಷ್ಣನ ದಾಸ್ಯವನ್ನು (ಸೇವಕತ್ವವನ್ನು) ಕೈಗೊಂಡು, ಧನ್ಯತೆಯನ್ನು ಪಡೆ. ಪ್ರಾರಂಭದಲ್ಲಿ ಪ್ರಾಕೃತ ಸಾಂಗತ್ಯವನ್ನು ಹೊಂದಿ, ಅಪ್ರಾಕೃತನಾದ ಭಗವಂತನಿಗೆ ವಿಮುಖವಾದ ಓ ಮನಸ್ಸೇ, ಇಂದು ನೀನು ಯಾವ ಪರಮಾತ್ಮನ ದಾಸ್ಯವನ್ನು ಸ್ವೀಕಾರ ಮಾಡಿದೆಯೋ, ಅಂತಹ ಪರಮಾತ್ಮನಿಗೆ ಬ್ರಹ್ಮರುದ್ರೇಂದ್ರಾದುರುಗಳು, ಭಕ್ತರುಗಳು ಪ್ರತಿನಿತ್ಯವೂ ದಾಸ್ಯವನ್ನೇ ಮಾಡುತ್ತಿದ್ದಾರಪ್ಪಾ !' ಎಂದು ತಿರುಮಂಗೈ ಆಳ್ವಾರರು (ಪೆರಿಯ ತಿರುಮೊಳಿ 2-1-8 ಮತ್ತು 9) ತಮಗೆ ಭಗವದ್ಧ್ಯಾನದಲ್ಲಿ ತಮಗಿರುವ ಪ್ರಗಾಢವಾದ ಆಕಾಂಕ್ಷೆಯನ್ನು ತೋಡಿಕೊಳ್ಳುತ್ತಾರೆ.

ಇದೇ ರೀತಿಯಲ್ಲಿ ತಿರುಮಳಿಶೈ ಆಳ್ವಾರರೂ ಕೂಡ, 'ಓ ಭಗವಂತಾ ! ನೀನು ನನಗೆ ಪ್ರೇಮಸ್ವರೂಪನೆಂದೂ, ಅಮೃತಸ್ವರೂಪನೆಂದೂ, ಅದೂ, ಇದೂ ಎಂದೇಕೆ ಕರೆಯುವುದು ? ನೀನೇ ನನ್ನ ಸರ್ವಸ್ವವಾಗಿ ಕಾಣಿಸುತ್ತಿರುವೆ. ಓ ಕೇಶವಾ ! ನಾನು ನಿನ್ನ ಆಜ್ಞೆಯನ್ನು ಪಾಲಿಸಲು ಸಿದ್ಧನಾಗಿಯೇ ಇದ್ದೇನೆ. ಆದುದರಿಂದ ನೀನು ನನ್ನನ್ನು ಪರಿಗ್ರಹಿಸು. ಈಗಲೇ ಅಲ್ಲ; ಸರ್ವಕಾಲದಲ್ಲಿ ಸರ್ವಾವಸ್ಥೆಗಳಲ್ಲಿಯೂ ನೀನೇ ನನಗೆ ಶರಣ್ಯನು. ನೀನಿಲ್ಲದೆ, ನೀನಲ್ಲದೆ ನನಗೆ ಬೇರೆ ಯಾರೂ, ಯಾವುದೂ ಗತಿ ಇಲ್ಲ-ಎಂಬ ಸತ್ಯವನ್ನು ತಿಳಿದುಕೊಂಡಿದ್ದೇನೆ.' ಎಂದು (ನಾನ್ಮುಗನ್ ತಿರುವಂದಾದಿ-59) ಭಗವಂತನ ಮೇಲೆ ತಮಗಿರುವ ಅಚಂಚಲವಾದ ದಾಸ್ಯಭಕ್ತಿ ಭಾವವನ್ನು ಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ.

ಇದೇ ರೀತಿಯಲ್ಲಿ ನಮ್ಮಾಳ್ವಾರರೂ ಕೂಡ ಭಗವಂತನಲ್ಲಿ ನಿವೇದಿಸಿಕೊಂಡಿದ್ದಾರೆ. 'ನಾವೆಲ್ಲರೂ ಭಗವಂತನಿಗೆ ಚಿರಕಾಲದ ದಾಸರು. ತಲೆತಲಾಂತರಗಳಿಂದಲೂ ಭಗವಂತನಿಗೆ ದಾಸರಾಗಿಯೇ ಇದ್ದೇವೆ. ಆ ಪರಮಾತ್ಮನಿಗೆ ಸೇವೆ ಮಾಡಿದ ಕಾರಣದಿಂದಲೇನೆ ನಾವೆಲ್ಲರೂ ಧನ್ಯರಾದೆವು' (ತಿರುವಾಯ್ಮೊಳಿ 3-3-1) ಎಂದು, ದಾಸ್ಯಭಕ್ತಿಗೆ ಇರುವ ಪ್ರಾಮುಖ್ಯತೆಯನ್ನು, ಅದರಿಂದ

ಉಂಟಾಗುವ ಮಹಾಫಲವನ್ನು ಅವರು ವಿವರಿಸಿದ್ದಾರೆ.

ಅವರು ಮುಂದುವರೆದು, 'ಓ ಪರಮಾತ್ಮನೆ ! ನೀನೇ ನನ್ನ ತಂದೆ, ನನ್ನ ತಾಯಿ ! ನನ್ನ ಸರ್ವಸ್ವವೂ ನೀನೇ ಆಗಿರುವೆ.' (ಪೆರಿಯ ತಿರುವಂದಾದಿ-4) ಎಂದು ಭಗವಂತನನ್ನೇ ತಮ್ಮ ಸರ್ವಸ್ವವೆಂದು ಭಾವಿಸಿ, ಆ ಸ್ವಾಮಿಯ ಪಾದಾರ ವಿಂದಗಳನ್ನು ಸೇವಿಸುವುದರಲ್ಲೆ ವಿಶೇಷವಾದ ಆಸಕ್ತಿಯನ್ನು ಹೊಂದಿದ್ದರೆಂದು ತಿಳಿಸಿದ್ದಾರೆ.

ತೊಂಡರಡಿಪ್ಪೊಡಿಯಾಳ್ವಾರರು ತಿಳಿಸಿರುವ ದಾಸ್ಯಭಕ್ತಿ ಭಾವನೆಗಳಂತೂ ಎಲ್ಲರೂ ತಪ್ಪದೆ ಗಮನಿಸಲೇಬೇಕಾದ ಅಂಶಗಳಾಗಿವೆ.

'ಓ ಭಗವಂತಾ ! ನನಗೆ ಗೃಹ, ಆರಾಮಕ್ಷೇತ-ಇತ್ಯಾದಿಗಳು ಯಾವುವೂ ಇಲ್ಲವು. ಬಂಧುಗಳಂತೂ ಯಾರೂ ಇಲ್ಲ. (ಪುರಂದರ ದಾಸರು ತಮ್ಮ 'ಕಂಡು ಕಂಡು ನೀ ಎನ್ನ ಕೈಬಿಡುವರೆ ರಂಗಾ !' ಎನ್ನುವ ಕೀರ್ತನೆಯಲ್ಲಿ ಇದೇ ಭಾವ ವನ್ನು ತೋಡಿಕೊಂಡಿದ್ದಾರೆ.) ಆದರೆ ಕರುಣಾಚಿತ್ತನಾದ ನೀನು ಒಬ್ಬನು ಮಾತ್ರವೇ ನನಗೆ ಆತ್ಮಬಂಧುವಾಗಿ ನಿಂತಿರುವೆ. ಅಶಾಶ್ವತವಾದ ನನ್ನ ಜೀವನ ದಲ್ಲಿ ಇಷ್ಟರವರೆಗೆ ನಿನ್ನ ಚರಣಾರವಿಂದಗಳಿಗೆ ಶರಣಾಗಿದ್ದಿರಲಿಲ್ಲವೆಂದು ಈಗ ನಾನು ತುಂಬಾ ಚಿಂತೆಗೀಡಾಗಿದ್ದೇನೆ. ನನಗೆ ಆಧಾರಭೂತನಾಗಿರುವವನು ನೀನೇ ಹೊರತು, ಬೇರೆ ಇನ್ಯಾರಿದ್ದಾರೆ ?" (ತಿರುಮಾಲೈ-29)

'ನನ್ನ ಮನಸ್ಸಿನಲ್ಲಿ ಅಣುಮಾತ್ರವೂ ಪವಿತ್ರತೆ ಎನ್ನುವುದು ಇಲ್ಲ. ನನ್ನ ನಾಲಿಗೆಯಿಂದ ಒಂದಾದರೂ ಒಳ್ಳೆಯ ಮಾತು ಬಂದುದಿಲ್ಲ. ಕೋಪಿಷ್ಟನಾದುದ ರಿಂದಲೇ ನನ್ನಲ್ಲಿನ ದ್ವೇಷಬುದ್ಧಿಯು ಹದ್ದು ಮೀರಿ ಹೋಗಿದೆ. ಇತರರನ್ನು ಕೆಟ್ಟ ನೋಟದಿಂದ ನೋಡುವುದು, ಆಡಬಾರದ ಮಾತುಗಳನ್ನು ಆಡುವ ನಡವಳಿಕೆ ಯನ್ನು ಅನುಸರಿಸಿದ್ದೇನೆ. ಇಂತಹ ನನಗೆ ಎಂತಹ ಗತಿ ಉಂಟಾಗುವುದೋ ಯಾರಿಗೆ ಗೊತ್ತು? ನನ್ನ ಮೇಲೆ ಸರ್ವಾಧಿಪತ್ಯವನ್ನು ಹೊಂದಿರುವ ಸ್ವಾಮಿಯೆ! ನೀನೇ ಹೇಳು....! (ತಿರುಮಾಲೈ-30)........ಓ ಪರಮಾತ್ಮಾ ! ನಿನ್ನ ದರ್ಶನ ಭಾಗ್ಯವನ್ನು ಹೊಂದುವುದಕ್ಕಾಗಿ ಸೂಕ್ತಮಾರ್ಗಕ್ಕೆ ವಿಮುಖನಾಗಿರುವವರ ಸ್ನೇಹವನ್ನು ಮಾಡಿರುವೆನು ! ಮೂರ್ಖನಾಗಿರುವೆ ! ಮೂರ್ಖರಲ್ಲಿಯೂ ಅಧಮನು ! ನಿನ್ನಲ್ಲೀಗ ಶರಣು ಹೊಂದುತ್ತಿದ್ದೇನೆ.' (ತಿರುಮಾಲೈ-32) ಎಂದು ತೊಂಡರಡಿಪ್ಪೊಡಿ ಆಳ್ವಾರರು ತಮ್ಮಲ್ಲಿದ್ದ ದೋಷಗಳ ಬಗ್ಗೆ ಹೇಳಿ

ಕೊಳ್ಳುತ್ತಾ, ದೈನ್ಯ ಭಾವದೊಂದಿಗೆ ಭಗವಂತನಲ್ಲಿ ಶರಣಾಗತಿಯನ್ನು ಯಾಚಿಸುತ್ತಾರೆ.

ಇಂತಹ ನೋವಿನಿಂದ ಕೂಡಿದ ಭಕ್ತನ ಹೃದಯದಲ್ಲಿ ಭಗವತ್ ಸೇವೆಗಾಗಿ ಹಾತೊರೆಯುವ ಆಳ್ವಾರರ ಪಾಶುರಗಳಲ್ಲಿ ಆ ತನಕ ಸ್ಪಷ್ಟವಾಗಿ ಕಾಣಿಸುತ್ತಲೇ ಇದೆ.

ಆಂಡಾಳ್ ಕೂಡ ತಾನು ಗೋವಿಂದನ ದಾಸಿಯೆಂದು ಹೇಳಿಕೊಂಡಿದ್ದಾಳೆ. (ನಾಚ್ಚಿಯಾರ್ ತಿರುವೊಳಿ 1–9).

ಆದುದರಿಂದ ಆಳ್ವಾರರು ವಂದನ ಭಕ್ತಿಗೆ ಎಷ್ಟೊಂದು ಪ್ರಾಮುಖ್ಯತೆಯನ್ನು ನೀಡಿದ್ದರು ಎಂಬುದು ಸುಲಭವಾಗಿ ಅರ್ಥವಾಗುತ್ತದೆ.

**8. ಸಖ್ಯ :** ಲೌಕಿಕ ವ್ಯವಹಾರದಲ್ಲಿ ನಾವು ತೋರುವ ಆದರ್ಶ ಮೈತ್ರಿಯನ್ನು ತೋರಿಸುವುದಕ್ಕೆ 'ಸಖ್ಯ ಭಕ್ತಿ' ಎಂದು ಹೆಸರು. ಮೈತ್ರಿಯಲ್ಲಿಯ ಉನ್ನತಾಶಯಗಳನ್ನು ಅನುಸರಿಸಿ ನಡೆದುಕೊಳ್ಳುವ ಮಿತ್ರರ ನಡುವೆ ಯಾವುದೇ ರೀತಿಯ ಸ್ವಾರ್ಥವೂ ಇರಲಾರದು. ಸಖ್ಯ ಭಾವದಿಂದ ನಿಸ್ವಾರ್ಥ ಭಕ್ತಿಗೆ ಪರಿಪುಷ್ಟಿ ಏರ್ಪಡುತ್ತದೆ. ವಾತ್ಸಲ್ಯ ಭಾವವನ್ನು ಹೊಂದಿರುವ ಭಕ್ತರುಗಳು ಭಗವಂತನ ಬಗ್ಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಪ್ರದರ್ಶಿಸುವಂತೆಯೆ; ಸಖ್ಯಭಾವವನ್ನು ಹೊಂದಿರುವ ಭಕ್ತರು ಭಗವಂತನ ಸನ್ನಿಧಾನದಲ್ಲಿ, ತಮ್ಮ ತಮ್ಮ ಮನಸ್ಸುಗಳಲ್ಲಿರುವ ಸತ್ಸಂಕಲ್ಪಗಳನ್ನು ಹೊರಸೂಸುವ ಸಂದರ್ಭಗಳಲ್ಲಿ ಸಂಕೋಚವಾಗಲಿ, ಭಯವಾಗಲಿ ತೋರುವುದಿಲ್ಲ. ಅಂತೆಯೇ ಚಿಕ್ಕವರು–ದೊಡ್ಡವರು ಎನ್ನುವ ಭೇದಭಾವವನ್ನು ಕೂಡ ಹೊಂದಿರುವುದಿಲ್ಲ. ಈ ಕಾರಣದಿಂದ ಭಕ್ತ–ಭಗವಂತರುಗಳ ನಡುವೆ ಸಮಾನಭಾವವಿರುತ್ತದೆ. ಈ ಸಮಾನ ಭಾವವೆ 'ಸಖ್ಯ ಭಾವ'ದಲ್ಲಿರುವ ವಿಶೇಷತೆ.

ನಾರದ ಭಕ್ತಿ ಸೂತ್ರಗಳಲ್ಲಿ ಇಂತಹ ಪ್ರೇಮಾಸಕ್ತಿ ಹನ್ನೊಂದು ರೀತಿಗಳಲ್ಲಿ ಇರುತ್ತದೆಯೆಂದು ತಿಳಿಸಿ, ಅವುಗಳಲ್ಲಿ 'ಸಖ್ಯಾಸಕ್ತಿ'ಯೂ ಒಂದೆಂದು ತಿಳಿಸಲಾಗಿದೆ.

ಕೃಷ್ಣನ ಬಾಲಲೀಲೆಗಳು, ಗೋವುಗಳನ್ನು ಮೇಯಿಸುವ ಸಮಯದಲ್ಲಿ ಗೋಪಬಾಲರೊಂದಿಗೆ ಸ್ನೇಹದಿಂದ ಇದ್ದು, ವಿವಿಧ ಪ್ರಸಂಗಗಳಲ್ಲಿ ನಗಿಸುವ ಸನ್ನಿವೇಶಗಳು, ಪಂಕ್ತಿ ಭೋಜನ ಮಾಡುವಿಕೆ ಇತ್ಯಾದಿ ಸನ್ನಿವೇಶಗಳನ್ನು

ಭಕ್ತಕವಿಗಳು ವರ್ಣಿಸುವಾಗ, ಆಳ್ವಾರರ ದಿವ್ಯಪ್ರಬಂಧಗಳಲ್ಲಿನ ಸಖ್ಯ ಭಕ್ತಿ ಭಾವವು ಅತ್ಯಂತ ಮನೋಜ್ಞವಾಗಿ ಅಭಿವ್ಯಕ್ತಗೊಳಿಸಲಾಗಿದೆ.

ಕೃಷ್ಣನು ತನ್ನ ಸ್ನೇಹಿತರೊಂದಿಗೆ ಕಲೆತು, ಮೆಲೆತು ಅವರೊಂದಿಗೆ ಕೂಡಿ ಸಂಚರಿಸುತ್ತಲೆ ತನ್ನ ಲೀಲೆಗಳನ್ನು ತೋರಿಸುವನು. ಬೆಣ್ಣೆಯನ್ನು ಕದಿಯು ವಾಗ ತನ್ನ ಸ್ನೇಹಿತರ ಸಹಾಯವನ್ನು ಪಡೆಯುವನು. (ಪೆರಿಯ ತಿರುಮೊಳಿ- 2-9) ಗೋವುಗಳನ್ನು ಮೇಯಿಸುವ ಸಮಯದಲ್ಲಿ ತನ್ನ ಸ್ನೇಹಿತರ ಮೇಲೆ ವಿಶೇಷ ಪ್ರೇಮವನ್ನು ತೋರಿಸುತ್ತಿದ್ದನು. ಸಖ್ಯಪ್ರೇಮಕ್ಕೆ ವಶನಾದ ಕೃಷ್ಣನು ತನ್ನ ಸಹಚರರಿಂದಲೇ ಗೋವುಗಳನ್ನು ಮೇಯಿಸುತ್ತಿದ್ದನು. ಅವರುಗಳ ತೃಪ್ತಿಗಾಗಿ, ಸಂತೋಷಾತಿರೇಕದಿಂದ ಅವರೊಂದಿಗೆ ಆಟವಾಡುತ್ತಿದ್ದನು, ಹಾಡು ಗಳನ್ನು ಹಾಡುತ್ತಿದ್ದನು, ನಾಟ್ಯವಾಡುತ್ತಿದ್ದನು, ಪ್ರಸಾದ ಸ್ವೀಕರಿಸುತ್ತಿದ್ದನು. (ಪೆರಿಯಾಳ್ವಾರ್ ತಿರುಮೊಳಿ 3-4-1).

ಒಂದು ದಿನ ಕೃಷ್ಣನು ಗೋಪಾಲರೊಡಗೂಡಿ, ಅರಣ್ಯದಿಂದ ಗೋವು ಗಳನ್ನು ಮೇಯಿಸಿಕೊಂಡು ಬಂದು, ಮುರುಳೀಗಾನವನ್ನು ಮಾಡುವನು. ಆ ಗಾನಮಾಧುರ್ಯವು ಆ ಪರಿಸರ ಪ್ರದೇಶಗಳಲ್ಲಿನ ಎಲ್ಲರನ್ನೂ ಮುಗ್ಧರಾಗಿಸುತ್ತಿತ್ತು. ವಿವಿಧ ವಾದ್ಯಗಳನ್ನು ನುಡಿಸುತ್ತಾ ಬರುವ ಗೋಪಬಾಲರೊಂದಿಗೆ ಕೃಷ್ಣನೂ ಕೂಡ ಕಲೆತು ಬರುವ ದೃಶ್ಯ ಆಕರ್ಷಕ. (ಪೆರಿಯಾಳ್ವಾರ್ ತಿರುಮೊಳಿ 34-2)

ಕೃಷ್ಣನ ಸಹಾಯಕರಾದ ಗೋಪಬಾಲರು ಚಿಕ್ಕಚಿಕ್ಕ ಬಿಲ್ಲುಬಾಣಗಳು, ಧನಸ್ಸುಗಳು, ಪಾದರಕ್ಷೆಗಳು, ಉತ್ತರೀಯಗಳು-ಇತ್ಯಾದಿಗಳನ್ನು ಕೃಷ್ಣನಿಗೆ ಬೇಕೆನಿಸಿದಾಗ ನೀಡುವುದಕ್ಕಾಗಿ ತಮ್ಮ ಕೈಗಳಲ್ಲಿ ಹಿಡಿದುಕೊಂಡು, ಆ ಕೃಷ್ಣನ ಹಿಂದೆ ಹಿಂದೆಯೇ ಬರುತ್ತಿದ್ದರು.

ಕೃಷ್ಣನು ಬಂದು ಕೈಯನ್ನು ತನ್ನ ಪ್ರಾಣಮಿತ್ರರ ಕೈಗಳಲ್ಲಿ ಇರಿಸಿ ಕೊಂಡು, ಇನ್ನೊಂದು ಕೈನಲ್ಲಿ ಗೋವುಗಳನ್ನು ಕರೆಯುವುದಕ್ಕಾಗಿ ಉಪಯೋಗಿ ಸುವ ಶಂಖವನ್ನು ಹಿಡಿದುಕೊಂಡು, ಗೋಕುಲಕ್ಕೆ ಹಿಂತಿರುಗಿ ಬರುವ ದೃಶ್ಯ ನಯನ ಮನೋಹರ.

ನವಿಲಿನ ಪಿಂಛದಿಂದ ಶೋಭಿಸುವ ಕೇಶಪಾಶದೊಂದಿಗೆ ಮನೋಹರ ಗೊಂಡಿರುವ ಕೃಷ್ಣನು ತನ್ನ ಸಹಚರರೆಲ್ಲರಿಗಿಂತ ಮುಂದುಗಡೆ ನಿಂತು, ವೇಣು ನಾದದೊಂದಿಗೆ ನೃತ್ಯ ಮಾಡುತ್ತಾ ಬರುತ್ತಿರುವ ದೃಶ್ಯ ವರ್ಣಿಸಲಸದಳ,

(ಪೆರಿಯಾಳ್ವಾರ್ ತಿರುಮೊಳಿ 3-4-3.)

ಈ ರೀತಿಯಲ್ಲಿ ಕೃಷ್ಣ ಹಾಗೂ ಅವನ ಗೋಪಬಾಲರ ಸ್ನೇಹವನ್ನು ಪೆರಿಯಾಳ್ವಾರರು ಬಹು ರಮ್ಯವಾಗಿ ತಮ್ಮ ಕೃತಿಯಲ್ಲಿ ವರ್ಣಿಸಿದ್ದಾರೆ.

**9. ಆತ್ಮನಿವೇದನೆ :** 'ಪ್ರಪತ್ತಿ'ಯೇ ಆತ್ಮನಿವೇದನೆ. ಇದನ್ನು 'ಶರಣಾಗತಿ' ಎಂದೂ ಕರೆಯಬಹುದು. ಅನನ್ಯ ಸಾಧ್ಯವಾದ ಭಗವತ್ ಪ್ರಪತ್ತಿಯಲ್ಲಿ ವಿಶ್ವಾಸಪೂರ್ವಕವಾಗಿ ಭಗವಂತನೊಬ್ಬನನ್ನೇ 'ಉಪಾಯ'ವಾಗಿ ಭಾವಿಸಿ, ಪ್ರಾರ್ಥಿಸುವ ನಿಶ್ಚಯಾತ್ಮಕ ಬುದ್ಧಿಯೇ 'ಆತ್ಮನಿವೇದನೆ' ಎಂದು ಹೇಳಲಾಗುವುದು. ಇಂತಹ ಆತ್ಮನಿವೇದನಕ್ಕೆ ಸಂಬಂಧಪಟ್ಟ ಅಂಶಗಳು ಆಳ್ವಾರರ ದಿವ್ಯಪ್ರಬಂಧಗಳಲ್ಲಿ ಅನೇಕವಿವೆ.

'ಮಾನವನು ಒಂದು ಕೆರೆಯನ್ನು ನಿರ್ಮಿಸಬಲ್ಲನೆ ಹೊರತು, ಭಗವದನುಗ್ರಹ ರೂಪವಾದ ಗಾಳಿ ಸುರಿದಾಗಲೇ ಆ ಕೆರೆಯು ನೀರಿನಿಂದ ತುಂಬಬಲ್ಲದಲ್ಲವೆ? ಆದುದರಿಂದ, ಭಗವಂತನ ಅನುಗ್ರಹದ ಮೇಲೆಯೇ ಮಾನವ ಪ್ರಯತ್ನಗಳೆಲ್ಲವೂ ಆಧಾರಪಟ್ಟಿರುತ್ತದೆ' ಎಂದು ಪೂದತ್ತಾಳ್ವಾರ್‌ರವರು (ಇರಂಡಾಂ ತಿರುವಂದಾದಿ-16) ತಿಳಿಸುವರು.

"ಓ ಪರಮಾತ್ಮಾ! ಸಮಸ್ತ ವಿಶ್ವವೂ ನೀನೇ ಆಗಿರುವೆ. ವಿಶ್ವವೆಲ್ಲವೂ ನಿನ್ನ ಮೇಲೆಯೇ ಆಧಾರಪಟ್ಟಿದೆ. ದಯಾನಿಧಿಯಾದ ನೀನೇ ಭಕ್ತರ ಹೃದಯಗಳಲ್ಲಿ ಭಕ್ತಿ ಬೀಜವನ್ನು ನೆಡುತ್ತಿರುವೆ' ಎಂದು ತಿರುಮಂಗೈ ಆಳ್ವಾರರು (ನಾನ್ಮುಗನ್ ತಿರುವಂದಾದಿ-14) ತಿಳಿಸುತ್ತಾರೆ.

'ಓ ಭಗವಂತನೆ! ನಾನು ಎಷ್ಟೋ ಕಷ್ಟಗಳನ್ನು ಅನುಭವಿಸುತ್ತಿದ್ದೇನೆ. ಶರಣಾಗತ ರಕ್ಷಕನಾದ ನಿನ್ನಲ್ಲಿ ಶರಣು ಹೋಗುವುದರ ವಿನಹ ಬೇರೆ ಯಾವ ರೀತಿಯಲ್ಲೂ ನನ್ನ ಕಷ್ಟಗಳು ದೂರವಾಗಲಾರವು. ತಾಯಿಯ ಕೋಪಕ್ಕೆ ಗುರಿಯಾಗಿ ದೂರ ಹೋಗಿದ್ದ ಮಗನು ಮತ್ತೆ ತಾಯಿಯ ಲಾಲನೆಯನ್ನು ಕೋರಿ, ಹೆತ್ತ ತಾಯಿಯನ್ನು ಸಮೀಪಿಸಲಿಚ್ಛಿಸುವ ರೀತಿಯಲ್ಲಿ ನಾನು ನಿನ್ನ ಚರಣಾರವಿಂದಗಳ ಸನ್ನಿಧಿಯಲ್ಲಿ ಶರಣು ಹೊಂದುತ್ತಿದ್ದೇನೆ' ಎಂದು ಶೇಖರಾಳ್ವಾರರು (ಪೆರುಮಾಳ್ ತಿರುಮೊಳಿ 5-1) ಭಗವಂತನನ್ನು ಬಿನ್ನವಿಸಿಕೊಳ್ಳುತ್ತಾರೆ.

ಈ ರೀತಿಯಲ್ಲಿ ತಾವು ಶರಣು ಕೋರುವ ಸರ್ವೇಶ್ವರನು ಪರಮಾತ್ಮನೊಬ್ಬನೇ. ಅವನನ್ನೇ ನಾವೆಲ್ಲರೂ ಆಶ್ರಯಿಸಬೇಕು ಎಂದು ಎಲ್ಲ ಆಳ್ವಾರರೂ

ಪ್ರಬೋಧಿಸುತ್ತಾರೆ.

ಈ ರೀತಿಯಲ್ಲಿ ನವವಿಧ ಭಕ್ತಿಗಳಲ್ಲಿ ಆಳ್ವಾರರು ತಮ್ಮ ತೆರೆದ ಹೃದಯವನ್ನು ತಮ್ಮ ರಚನೆಗಳಲ್ಲಿ ಅಂತರಾಳದಿಂದ ತೆರೆದು ತೋರಿಸಿ, ತಮ್ಮ ವಿನೀತ ಪೂರ್ವಕ ಭಕ್ತಿಯನ್ನು ತೋರ್ಪಡಿಸಿರುವುದು ಅಸದೃಸವಾಗಿದೆ.

## ಆಳ್ವಾರರ ತತ್ವದೃಷ್ಟಿ

ಪ್ರಪಂಚದಲ್ಲೆಲ್ಲ ಭಾರತವು ಅಧ್ಯಾತ್ಮ ವಿದ್ಯೆಯಲ್ಲಿ ಬಹಳಷ್ಟು ಪ್ರಖ್ಯಾತಿಯನ್ನು ಪಡೆದಿದೆ. ಪ್ರತಿಯೊಂದು ಯುಗದಲ್ಲಿಯೂ ಇಲ್ಲಿ ಬ್ರಹ್ಮಜ್ಞಾನವು ವಿಶೇಷ ರೀತಿಯಲ್ಲಿ ಪ್ರಕಾಶಿಸುತ್ತಿರುತ್ತದೆ. ಈ ರೀತಿಯ ಜ್ಞಾನಪ್ರಕಾಶದಿಂದಲೇ ಭಾರತೀಯ ಋಷಿಗಳು, ಮುನಿಗಳು, ಧರ್ಮಪ್ರವರ್ತಕರು, ದಾರ್ಶನಿಕವೇತ್ತರು ಶಾಂತಿಯನ್ನು, ಆನಂದವನ್ನು ಹೊಂದಬಲ್ಲವರಾದರು.

'ಲೋಕೋ ಭಿನ್ನ ರುಚಿಃ' ಎನ್ನುವಂತೆ ಬ್ರಹ್ಮಜ್ಞಾನ ಪ್ರಾಪ್ತಿಗಾಗಿ, ಅವರವರ ಅಭಿರುಚಿಗಳನ್ನು ಅನುಸರಿಸಿ, ಬಹಳಷ್ಟು ಜನರು ಬೇರೆ ಬೇರೆಯಾದ ಅವರವರದ್ದೇ ಮಾರ್ಗವನ್ನು ಅನುಸರಿಸಿದರು. ಅವರವರ ಅನುಭವಗಳ ಆಧಾರದ ಮೇಲೆ ದರ್ಶನ ಶಾಸ್ತ್ರಗಳ ರಚನೆಯಾದವು. ಅದೇ ರೀತಿಯಲ್ಲಿ ಬೇರೆ ಬೇರೆ ಸಂಪ್ರದಾಯಗಳು ರೂಢಿಗೆ ಬಂದು, ಈ ನಾಡಿನಲ್ಲಿ ಸಂಸ್ಥಾಪಿತವಾದವು. ವಿವಿಧ ಸಿದ್ಧಾಂತಕ್ಕೆ ಸೇರಿದ ಆಚಾರ್ಯರುಗಳಲ್ಲಿ ಕೆಲವರು ಉಪನಿಷತ್ ಸೂತ್ರಗಳು, ಗೀತಾದಿಗಳನ್ನು ಅನುಸರಿಸಿ, ಪ್ರಸ್ಥಾನತ್ರಯಗಳನ್ನು ಹಾಗೂ ಭಾಷ್ಯಗಳನ್ನು ರಚಿಸಿದರು. ಇದರ ಮುಖಾಂತರ ತಮ್ಮ ತಮ್ಮ ಸಂಪ್ರದಾಯಗಳನ್ನು ಇವರು ಪರಿಪುಷ್ಟಿಗೊಳಿಸಿದರು ಈಶ್ವರ, ಜೀವ, ಜಗತ್ತು, ಮಾಯೆ–ಇತ್ಯಾದಿ ವಿಷಯಗಳನ್ನು ಕುರಿತು ತಮ್ಮ ತಮ್ಮ ಸಿದ್ಧಾಂತಗಳನ್ನು ವ್ಯಕ್ತಗೊಳಿಸುತ್ತಾ, ಅನೇಕ ಗ್ರಂಥಗಳನ್ನು ರಚಿಸಿದರು.

ಭಕ್ತನಾದವನು ತತ್ತ್ವಶಾಸ್ತ್ರಗಳನ್ನು ಪರಿಶೀಲಿಸಬೇಕಾದ ಅಗತ್ಯವಿಲ್ಲ. ಆ ಜ್ಞಾನದ ಅವಶ್ಯಕತೆಯೂ ಇರಬೇಕಾಗಿಲ್ಲ. ಅವನು ಭಕ್ತಿಯಲ್ಲಿ ಪರಾಕಾಷ್ಠತೆಯನ್ನು ಹೊಂದುತ್ತಿರುವಂತೆಯೇ ಈಶ್ವರ, ಜೀವ, ಜಗತ್ತು, ಮಾಯೆ ಇತ್ಯಾದಿ

ವಿಷಯಗಳಿಗೆ ಸಂಬಂಧಿಸಿದ ವಿಶೇಷಗಳನ್ನು ಅಪ್ರಯತ್ನವಾಗಿಯೇ ಗ್ರಹಿಸ ತೊಡಗುತ್ತಾನೆ. ಆದರೆ ಆತನ ಮನಸ್ಸು ಮಾತ್ರ ತಾತ್ತ್ವಿಕ ಶಾಸ್ತ್ರಗಳ ಕಡೆಗೆ ಹರಿಯುವುದಿಲ್ಲ. ಇದೇ ಭಕ್ತನಿಗೂ, ದಾರ್ಶನಿಕನಿಗೂ ಇರುವ ಭೇದ.

ಆಳ್ವಾರರುಗಳು ಸಹಜವಾಗಿ ದಾರ್ಶನಿಕರಲ್ಲ. ಆವರು ಕೇವಲ ಭಗವದ್ಭಕ್ತರು. ಆವರು ರಸಸಿದ್ಧಿ ಪಡೆದ ಮಹಾಕವಿಗಳು. ಅವರ ಲಕ್ಷ್ಯ, ಗುರಿ, ದಾರ್ಶನಿಕ ಸಿದ್ಧಾಂತ ವಿವೇಚನೆಯಲ್ಲ. ಭಕ್ತಿ, ಪ್ರಪತ್ತಿಗಳೊಂದಿಗೆ ನಿರಂತರವಾಗಿ ಭಗವಂತನ ಕಲ್ಯಾಣಗುಣಗಳನ್ನು ಪ್ರಸ್ತುತಿಗೊಳಿಸುತ್ತಾ, ಬ್ರಹ್ಮಾನಂದವನ್ನು ಹೊಂದುವುದೇ ಆವರ ಜೀವನದ ಪರಮಾರ್ಥವು.

ಭಗವಂತನ ಭಕ್ತಿಯಲ್ಲಿ ತನ್ಮಯರಾದ ಈ ಮಹನೀಯರ ಹೃದಯ ತಂತುಗಳಿಂದ ಸ್ಪಂದಿಸಿದ ಗೀತೆಗಳ ಸಮುದಾಯವೇ 'ನಾಲಾಯಿರ ದಿವ್ಯ ಪ್ರಬಂಧಗಳು.'

ಈ ದಿವ್ಯಪ್ರಬಂಧಗಳಲ್ಲಿ ಬ್ರಹ್ಮ, ಜೀವನ, ಜಗತ್ತು ಮೊದಲಾದ ವಿಷಯಗಳನ್ನು ಕುರಿತು ಸಿದ್ಧಾಂತ ಪರವಾದ ಚರ್ಚೆಗಳಂತೂ ಕಂಡುಬರುವುದೇ ಇಲ್ಲ. ಆದರೆ ಆಳ್ವಾರರ ದಿವ್ಯಪ್ರಬಂಧಗಳಲ್ಲಿ ಆನುಷಂಗಿಕವಾಗಿ ತನ್ನಷ್ಟಕ್ಕೆ ತಾನೇ ತಾತ್ತ್ವಿಕ ವಿವೇಚನೆಯು ಸ್ಥಳ ಮಾಡಿಕೊಂಡಿರುವಂತೆ ಕಂಡುಬರುತ್ತದೆ.

ಈ ದಿವ್ಯಪ್ರಬಂಧಗಳು ಕೇವಲ ಭಕ್ತಿಭಾವವನ್ನು ಪ್ರಚೋದಕಗಳಾದವುಗಳಾಗಿವೆ. ಆದುದರಿಂದಲೇ, ಈ ಪ್ರಬಂಧಗಳ ಪಾಶುರಗಳಲ್ಲಿ ಪರಮಾತ್ಮನನ್ನು ಕುರಿತ ಭಾವನೆಗಳು, ವಿಷಯಗಳು ನಿರೂಪಿಸಲ್ಪಟ್ಟಿವೆ. ಈ ಭಾವ ಇದರಿಂದ ಸ್ಪಷ್ಟವಾಗುತ್ತದೆ–

The Alvars provided soil out of which Ramanuja's teachings naturally sprang and to which later it could bear fruit. He is not really (as erroneously asserted) the 'morning star' of Bhakti movement; that is a name far more fitly given in Alwars; but in him Bhakti shines in the full splendour of a great philosophical exposition–'The Hymns of Alwars–P.P. 7 & 8, by JSM Hooper.

ಆಳ್ವಾರರು ಈಶ್ವರನನ್ನು ಪರಬ್ರಹ್ಮನೆಂದು ಭಾವಿಸಿದರು. ಅವರ ತಾತ್ವಿಕ ದೃಷ್ಟಿ ಸುವಿಶಾಲವಾದುದು. ಈ ಭಾವನೆಯು ಅವರ ದಿವ್ಯಪ್ರಬಂಧಗಳಲ್ಲಿ ಸುಸ್ಪಷ್ಟವಾಗಿದೆ.

ಆಳ್ವಾರರ ಯುಗದ ನಂತರ ಆಚಾರ್ಯರ ಯುಗ ಪ್ರಾರಂಭವಾಯಿತು. ಆಚಾರ್ಯರಲ್ಲಿ ನಾಥ, ಯಮುನ, ರಾಮಾನುಜಾದಿಗಳು ಮುಖ್ಯರು. ಅಂತಹ ಆಚಾರ್ಯರ ಮೇಲೆ ಆಳ್ವಾರರ ತಾತ್ತ್ವಿಕ ದೃಷ್ಟಿ ಪ್ರಭಾವವು ವಿಶೇಷವಾಗಿ ಪ್ರಸರಿಸಿತ್ತೆಂದು ನಾವು ಖಂಡಿತವಾಗಿ ಭಾವಿಸಬಹುದು. ಕಾರಣವೆಂದರೆ, ಆಳ್ವಾರರ ಭಕ್ತಿಸಿದ್ಧಾಂತವೆಲ್ಲವೂ ಆಚಾರ್ಯರ ವಾಙ್ಮಯದಲ್ಲಿ ಕಂಡುಬರುತ್ತದೆ.

ಆದುದರಿಂದ ಆಚಾರ್ಯರಿಂದ ಪ್ರಯೋಗಿಸಲ್ಪಟ್ಟ ಪ್ರಚಾರ ಪ್ರಬೋಧನೆಗಳು ಆಳ್ವಾರರ ದಿವ್ಯಪ್ರಬಂಧಗಳಿಂದ ತೆಗೆದುಕೊಂಡಂತಹ ಸಿದ್ಧಾಂತಗಳೇ ಎಂಬುದು ನಿರ್ವಿವಾದವಾದುದು. ಈ ದಿವ್ಯಪ್ರಬಂಧಗಳಲ್ಲಿನ ಆಳ್ವಾರರ ತಾತ್ವಿಕ ದೃಕ್ಪಥವನ್ನು ಆಳವಾಗಿ ಪರೀಕ್ಷಿಸಿದಾಗ, ಅಪೂರ್ವವಾದ ರಹಸ್ಯ ವಿಷಯಗಳನೇಕವು ನಮಗೆ ತಿಳಿದುಬರುತ್ತವೆ.

**1. ಪರಬ್ರಹ್ಮ :**

ಆಳ್ವಾರುಗಳೆಲ್ಲರೂ ಪರಬ್ರಹ್ಮ ಸ್ವರೂಪವನ್ನು, ಗುಣಗಳನ್ನು ವರ್ಣಿಸಿದ್ದಾರೆ. ಆದರೆ ನಮ್ಮಾಳ್ವಾರರು, ತಿರುಮಂಗೈಯಾಳ್ವಾರರಷ್ಟು ವಿಸ್ತಾರವಾಗಿ ವಿವರಿಸಿರುವಷ್ಟು ಉಳಿದ ಯಾವ ಆಳ್ವಾರರೂ ಆ ಪರಬ್ರಹ್ಮನನ್ನು ಕುರಿತು ವಿವರಿಸಿದವರಲ್ಲ.

ಆಳ್ವಾರರೆಲ್ಲರೂ ಸಹಜವಾಗಿ ವಿಷ್ಣುಭಕ್ತರೇನೇ! ಇದರಿಂದ ಅವರಿಗೆ ಮಹಾವಿಷ್ಣುವೇ ಆರಾಧ್ಯದೈವನೆಂಬುದನ್ನು ಬೇರೆಯಾಗಿ ಹೇಳಬೇಕಾದ ಅಗತ್ಯವಿಲ್ಲ. ಕೃಷ್ಣನನ್ನು ವಿಷ್ಣುವಿನ ಅವತಾರವೆಂದೇ ಅವರು ಭಾವಿಸಿದರು. ಧರ್ಮಸಂರಕ್ಷಣೆಗಾಗಿ ಅವತಾರ ಮಾಡುವ ಆ ವಿಷ್ಣುಭಗವಾನನೇ ಪುರುಷೋತ್ತಮನೆಂದು, ಸರ್ವಾಂತರ್ಯಾಮಿಯೆಂದು ಆಳ್ವಾರರು ತಿಳಿಸಿದ್ದರು. ಆ ಕೃಷ್ಣನೇ ಭಗವಂತನ ಅಂಶರೂಪಿಯೆಂದೂ, ಕಳಾರೂಪವನ್ನಷ್ಟೇ ಅಲ್ಲದೆ ಇತರೇ ಕೆಲವು ರೂಪಗಳನ್ನು ಕೂಡ ಧರಿಸುವಂತಹವನೆಂದೂ, ಸ್ವತಃ ತಾನೇ ಬ್ರಹ್ಮನಾದರೂ ಭಕ್ತರನ್ನು ಉದ್ಧಾರ ಮಾಡುವುದಕ್ಕಾಗಿ ಮಾನವ ದೇಹವನ್ನು ಧರಿಸಿದ್ದನೆಂದೂ, ಆತನೇ ನಿಜ ಅರ್ಥದಲ್ಲಿನ ಪರಬ್ರಹ್ಮನೆಂದೂ ಆಳ್ವಾರರು ತಿಳಿದುಕೊಂಡಿದ್ದರು.

ಅಷ್ಟೇ ಅಲ್ಲದೆ ಆತನು ಬ್ರಹ್ಮಸ್ವರೂಪಿಯೆಂದೂ, ಭುವನಸುಂದರ ಮೂರ್ತಿಯೆಂದೂ, ಮಹಾಮಹಿಮನೆಂದೂ ವರ್ಣಿಸಲ್ಪಟ್ಟಿದ್ದಾನೆ. ಅಂತೆಯೇ ಆ ಪರಬ್ರಹ್ಮನನ್ನು ಸಗುಣ, ನಿರ್ಗುಣನೆಂಬ ಎರಡು ರೀತಿಗಳಲ್ಲಿರುವವನೆಂದೂ ಅವರು ತಿಳಿಸಿದ್ದರು.

ಆಳ್ವಾರರ ದೃಷ್ಟಿಯಲ್ಲಿ ಈ ಪರಬ್ರಹ್ಮನು ಸರ್ವಶಕ್ತಿವಂತನು, ಅದ್ವಿತೀಯನು, ದೇವತೆಗಳೆಲ್ಲರಿಗೂ ಅಧಿಕನು (ಶ್ರೇಷ್ಠನು). ಈ ಭಾವವನ್ನು ವಿಶದೀಕರಿಸಿರುವ ನಮ್ಮಾಳ್ವಾರರು, 'ನನ್ನ ಆ ಸ್ವಾಮಿಯೇ ಸರ್ವಲೋಕ ರಕ್ಷಕನು; ಆತನೇ ಶ್ರೇಷ್ಠನು. ಅಂತಹ ಭಗವಂತನೊಂದಿಗೆ ಇತರರನ್ನು ಹೋಲಿಸಬೇಕೆನ್ನುವುದು ಸರಿಯಲ್ಲ. ಬ್ರಹ್ಮರುದ್ರಾದಿಗಳೆಲ್ಲರಿಗೂ ಅತನೇ ಪ್ರಭುವಾಗಿದ್ದಾನೆ. ಆತನು ಪರಂಜ್ಯೋತಿ; ಜಗತ್ ಕಾರಣಭೂತನು; ಗೋವಿಂದನು. ಆತನ ಗುಣಗಳನ್ನು ನನ್ನಿಂದ ವರ್ಣಿಸಲಾಗದು. (ತಿರುವಾಯ್‌ಮೊಳಿ-3-1-3). ಆತನು ಮಹತ್ತರಲ್ಲಿ ಮಹತ್ತರನು; ಪರಬ್ರಹ್ಮ, ಸಕಲಕಲ್ಯಾಣ ಗುಣಕಾರನು; ದಯಾಸಮುದ್ರನು. ಆತನನ್ನು ವೇದಗಳು ಬಹಳವಾಗಿ ಕೀರ್ತಿಸಿವೆ. ಆತನೇ ಸರ್ವಜ್ಞನು. (ತಿರುವಾಯ್ ಮೊಳಿ 3-4-10). ಆತನೇ ಚಿದಚಿತ್ತುಗಳಿಗೆ (ತಿರುವಾಯ್‌ಮೊಳಿ 1-10-2) ಆಧಾರಭೂತನಾಗಿರುವನು. (The idea of Brahman as the adhara of cit-acit is the life blood of Visistadvaita The philosophy of Visistadvaita-P. 121. P.N. Srinivasachari). ಆತನೇ ದೇವದೇವನು. ಆತನು ಮೂರೂ ಲೋಕಗಳಲ್ಲಿ ಸೃಷ್ಟಿ-ಸ್ಥಿತಿ-ಲಯಗಳ ಕಾರ್ಯವನ್ನು ಮಾಡುತ್ತಿದ್ದಾನೆ. (ತಿರುವಾಯ್ ಮೊಳಿ 8-4-3) ಎಂದು ಬ್ರಹ್ಮನೇ ಸರ್ವ ಕಾರ್ಯಗಳಿಗೂ ಮೂಲಕಾರಣವೆಂದು ತಿಳಿಸಿದ್ದಾರೆ.

ಇದೇ ರೀತಿಯಲ್ಲಿ ತಿರುಮಳಿಶೈ ಆಳ್ವಾರರೂ ಕೂಡ ಪರಬ್ರಹ್ಮನನ್ನು ಕುರಿತು ಪ್ರಸ್ತಾಪಿಸುತ್ತಾ, 'ಪರಬ್ರಹ್ಮನೆನ್ನುವನು ಒಬ್ಬನಿದ್ದಾನೆ. ಆತನು ಸರ್ವಭೂತಗಳಿಗೂ ಆಧಾರಭೂತನು. ಆತನ ಮಹಿಮೆಯು ವರ್ಣನಾತೀತವಾದುದು. (ನಾನ್ಮುಹನ್ ತಿರುವಂದಾದಿ-2). ಆ ಭಗವಾನನೆ ಆದಿಪುರುಷನು. ಆತನೊಬ್ಬನೇ ಅಂತ್ಯದವರೆಗೂ ಉಳಿದಿರುವನು. (ತಿರುಚ್ಚನ್ದ ವಿರುತ್ತಮ್-8) ಎಂದು ತಿಳಿಸಿರುತ್ತಾರೆ.

ತಿರುಮಂಗೈ ಆಳ್ವಾರ್‌ರವರು ಬ್ರಹ್ಮನನ್ನು ಕುರಿತು ವಿವರಿಸುತ್ತಾ, 'ವೇದಗಳ ಸಾರವೇ ಭಗವಾನನು. (ಪೆರಿಯ ತಿರುಮೊಳಿ 3–1–2) ಎಲ್ಲರಿಗಿಂತಲೂ ಆತನು ಆದ್ಯನು. (ಪೆರಿಯ ತಿರುಮೊಷಿ 3–5–9). ಆತನೇ ಅಂತ್ಯದಲ್ಲಿ ಉಳಿಯುವವನು. ಆತನು ಸರ್ವಲೋಕ ರಕ್ಷಕನು. (ಪೆರಿಯ ತಿರುಮೊಷಿ 4-6-9)' ಎಂದು ಬ್ರಹ್ಮನನ್ನು ಅನೇಕ ರೀತಿಗಳಲ್ಲಿ ವರ್ಣಿಸಿದ್ದಾರೆ.

ಪೆರಿಯಾಳ್ವಾರರ ಇಷ್ಟದೈವ ಕೇಶವನು ಇಂತಹ ಕೇಶವನು ಅವರಿಗೆ ಪುರುಷೋತ್ತಮನಾದ ಭಗವಂತನು; ಪರಂಜ್ಯೋತಿ ಸ್ವರೂಪನು. (ಪೆರಿಯಾಳ್ವಾರ್ ತಿರುಮೊಷಿ 4–4–10). ಆತನು ಸರ್ವಾಧಿಕನು; ದೇವದೇವನು; ಸರ್ವಲೋಕ ರಕ್ಷಕನು. (ಪೆರಿಯಾಳ್ವಾರ್ ತಿರುಮೊಷಿ 4–10–7). ಆತನೇ ಕ್ಷೀರಸಾಗರದಲ್ಲಿ ಪವಡಿಸಿರುವ ಪರಬ್ರಹ್ಮನು. ಆತನೇ ಜಗತ್ತುಗಳನ್ನು ಸೃಷ್ಟಿಸುವುದಕ್ಕೆ ಬ್ರಹ್ಮನನ್ನು ಸೃಷ್ಟಿಸಿದನು. (ಪೆರಿಯಾಳ್ವಾರ್ ತಿರುಮೊಷಿ 4-10-5). ಸಂಹಾರಕಾರ್ಯ ಮಾಡುವುದಕ್ಕೆ ಯಮನನ್ನು ಸೃಷ್ಟಿಸಿದನು. ಆ ಪರಬ್ರಹ್ಮನೇ ಜಗತ್ಕಾರಣನು; ಅವಿನಾಶಿ; ಪರಮ ಪುರುಷನು. ಪೆರಿಯಾಳ್ವಾರ್ ತಿರುಮೊಷಿ 5–1–9). ನಾಲ್ಕು ವೇದಗಳಲ್ಲಿಯೂ ಭಗವಂತನನ್ನೇ ವರ್ಣಿಸಲಾಗಿದೆ. ಆತನು ದೇವಾಧಿದೇವನು. (ನಾಚ್ಚಿಯಾರ್ ತಿರುಮೊಷಿ 4–10). ಚೇತನಾಚೇತನಗಳೆಲ್ಲಕ್ಕೂ ಆತನೇ ಕಾರಣಭೂತನು. ಆತನ ದಿವ್ಯಶಕ್ತಿಗಳನ್ನು ಪರಿಪೂರ್ಣವಾಗಿ ತಿಳಿದುಕೊಳ್ಳುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಆತನು ಸತ್ಯಸ್ವರೂಪನು' (ನಾಚ್ಚಿಯಾರ್ ತಿರುಮೊಷಿ 4–10) ಎಂದು ಬ್ರಹ್ಮನನ್ನು ಆಂಡಾಳ್ ವರ್ಣಿಸಿದ್ದಾಳೆ

ದೇವತೆಗಳು, ರಾಕ್ಷಸರನ್ನು ಸೃಷ್ಟಿಸಿದವನು ಆ ಭಗವಾನನೆ. ಆತನು ಎಲ್ಲರಿಂದಲೂ ಸ್ತುತಿಸಲ್ಪಡುವವನು (ಪೆರುಮಾಳ್ ತಿರುಮೊಷಿ 8–10). ಆತನು ಇಂತಹ ಶಕ್ತಿಸಂಪನ್ನನಾದುದರಿಂದಲೇನೇ ಬ್ರಹ್ಮರುದ್ರೇಂದ್ರಾದಿಗಳು ಆತನನ್ನು ಸ್ತುತಿಸುತ್ತಿದ್ದಾರೆ. ವೇದಗಳೆಲ್ಲವೂ ಆತನ ಮಹಿಮೆಗಳನ್ನೇ ಸ್ತುತಿಸುತ್ತಿರುವುವು. (ಪೆರುಮಾಳ್ ತಿರುಮೊಷಿ 4–8) ಎಂದು ಕುಲಶೇಖರಾಳ್ವಾರರು ಬ್ರಹ್ಮನ ಪ್ರಭಾವವನ್ನು ವರ್ಣಿಸಿದರು.

ಬ್ರಹ್ಮನಿಗೆ ಸಗುಣ, ನಿರ್ಗುಣ ರೂಪಗಳೆರಡೂ ಇವೆಯೆಂದು ಆಳ್ವಾರರುಗಳ ನಿಶ್ಚಿತ ಅಭಿಪ್ರಾಯ. ಆ ಬ್ರಹ್ಮನಿಗಿರುವ ವಿಶುದ್ಧ ಧರ್ಮಾಶ್ರಯತ್ವವೆ

ಇದಕ್ಕೆ ಕಾರಣವೆಂದು ಆಳ್ವಾರರು ಭಾವಿಸಿರುವಂತೆ ಕಂಡುಬರುತ್ತದೆ.

'ನನ್ನ ಸ್ವಾಮಿಯು ಅಂತರ್ಯಾಮಿಯಾಗಿ, ಎಲ್ಲವನ್ನೂ ವ್ಯಾಪಿಸಿದ್ದಾನೆ. ದೇವಲೋಕಕ್ಕೆ, ಮಾನವಲೋಕಕ್ಕೆ ಆತನೇ ಅಧಿಪತಿ. ಮಿತ್ರರು, ಶತ್ರುಗಳಿಬ್ಬರಿಗೂ ಆತನು ಅತೀತನು; ಅಮೃತಸ್ವರೂಪನು ನನ್ನ ರಕ್ಷಕನು. ತನ್ನ ಸಗುಣ ರೂಪವನ್ನು ಆತನು ತಿರುನಗರಿಯಲ್ಲಿ ಪ್ರಕಾಶಗೊಳಿಸಿದ್ದಾನೆ.' (ತಿರುವಾಯ್ಮೊಳಿ 6-3-1) ಎಂದು ನಮ್ಮಾಳ್ವಾರರು ತಿಳಿಸುತ್ತಾರೆ.

'ಭಗವಂತನ ನಿಜಸ್ವರೂಪವನ್ನು ಯಾರು ತಾನೆ ಅರಿಯಬಲ್ಲರು ? (ಮೂನ್ರಾಮ್ ತಿರುವಂದಾದಿ-56) ಆತನೇ ಈಶ್ವರನು. ಪೃಥ್ವಿ, ಆಕಾಶ, ದಿಕ್ಕುಗಳು, ವೇದಗಳು, ವೇದಾಂಗಗಳು-ಇವೆಲ್ಲವೂ ಆತನಲ್ಲಿಯೇ ಅಂತರ್ಗತವಾಗಿವೆ. ಆದರೂ ಆಶ್ಚರ್ಯವೇನೆಂದರೆ-ಅಂತಹ ಭಗವಂತನೇ ನನ್ನ ಹೃದಯಾಂತರಾಳದಲ್ಲಿ ನೆಲೆಸಿಬಿಟ್ಟಿದ್ದಾನೆ' (ಮೂನ್ರಾಂ ತಿರುವಂದಾದಿ-39) ಎಂದು ಪೇಯಾಳ್ವಾರರು ತಿಳಿಸುತ್ತಾರೆ.

'ಭಗವಂತನು ಅಂತರ್ಯಾಮಿಯಾಗಿಯೇ ಇದ್ದಾನೆ. ಆತನನ್ನು ನಾವು ಹೇಗೆ ಸ್ಮರಿಸುತ್ತೇವೆಯೋ, ಅದೇ ರೀತಿಯಲ್ಲಿ ಭಕ್ತನ ಮನಸ್ಸಿನಲ್ಲಿಯೇ ಆತನು ನಿವಾಸ ಮಾಡುತ್ತಾನೆ. (ಮೊದಲ್ ತಿರುವಂದಾದಿ-99). ಭಕ್ತನು ಯಾವ ರೂಪದಲ್ಲಿ ಆತನನ್ನು ಉಪಾಸಿಸುವನೋ, ಆ ರೂಪದಲ್ಲೇ ಆ ಭಗವಂತನು ಸಾಕ್ಷಾತ್ಕರಿಸುತ್ತಾನೆ' (ಮೊದಲ್ ತಿರುವಂದಾದಿ-14) ಎಂದು ಪೊಯ್‌ಹೈ ಆಳ್ವಾರರೂ ಕೂಡ ಪರಮಾತ್ಮನ ಸಗುಣ ಬ್ರಹ್ಮತ್ವವನ್ನು ಅನೇಕ ರೀತಿಗಳಲ್ಲಿ ವರ್ಣಿಸಿದ್ದಾರೆ.

**2. ಆನಂದ ಸ್ವರೂಪ :**

ಆಳ್ವಾರರು ಪರಬ್ರಹ್ಮನನ್ನು ಆನಂದ ಸ್ವರೂಪನನ್ನಾಗಿ, ರಸಸ್ವರೂಪನನ್ನಾಗಿ ಭಾವಿಸುತ್ತಾರೆ. (Visistadvaita is thus the only philosophy of religion that recognises the eternal value of beauty and defines Brahman as the beautiful and blessful—The Philosophy of Visistadvaita-P. 219-by Prof. P.N. Srinivasachari)

ತಮ್ಮ ಇಷ್ಟದೈವವಾದ ಶ್ರೀಕೃಷ್ಣ ಭಗವಾನನು ಭುವನಸುಂದರ ಮೂರ್ತಿ ಎಂದು ಪೆರಿಯಾಳ್ವಾರರು (ಪೆರಿಯಾಳ್ವಾರ್ ತಿರುಮೊಳಿ 2-4-6) ವರ್ಣಿಸಿದ್ದಾರೆ.

ಅಮೃತ ತುಲ್ಯನಾಗಿರುವ, ರಸಸ್ವರೂಪಿಯಾಗಿರುವ ಭಗವಂತನನ್ನು ದರ್ಶಿಂಚಿನ್ ತಮ್ಮ ನೇತ್ರಗಳು ಬೇರೆ ವಸ್ತುವನ್ನು ನೋಡಲೊಲ್ಲವು ಎಂದು ತಿರುಪ್ಪಾಣಾಳ್ವಾರ್‌ರವರು (ಅಮಲನಾದಿ ಪಿರಾನ್-10) ತಿಳಿಸುತ್ತಾರೆ.

**3. ಅವತಾರ ರಹಸ್ಯ :**

ಪರಬ್ರಹ್ಮನಾದ ವಿಷ್ಣು ಭಗವಾನನು ಲೋಕೋದ್ಧಾರಕ್ಕಾಗಿ ಪ್ರತಿ ಯುಗದಲ್ಲೂ ವಿವಿಧ ರೂಪಗಳಲ್ಲಿ ಅವತಾರಗಳನ್ನು ಮಾಡುತ್ತಾನೆಂದು ಆಳ್ವಾರರು ಸ್ಪಷ್ಟೀಕರಿಸಿದ್ದಾರೆ.

ಭೂಮಂಡಲದಲ್ಲಿ ಅಧರ್ಮವು ಹೆಚ್ಚಾಗಿ, ವ್ಯಾಪಿಸಿದಾಗ, ಅಜ್ಞಾನಾಂಧಕಾರವು ಧರಾತಲವನ್ನು ಆಕ್ರಮಿಸಿದಾಗ, ಕೃಪಾಸಿಂಧುವಾದ ಭಗವಂತನು ಅವತಾರ ಮಾಡುತ್ತಾನೆ. ಆದುದರಿಂದ ದ್ವಾಪರ ಯುಗದಲ್ಲಿ ಮಹಾವಿಷ್ಣುವು ಕೃಷ್ಣನಾಗಿ ಅವತರಿಸಬೇಕಾಗಿ ಬಂದಿತು. ಅಂತಹ ಕೃಷ್ಣನ ಭುವನ ಮೋಹನ ಸೌಂದರ್ಯ ಆತನ ವಿಚಿತ್ರ ಲೀಲೆಗಳನ್ನು ಆಳ್ವಾರರು ವಿಶೇಷ ರೀತಿಯಲ್ಲಿ ವರ್ಣಿಸಿದ್ದಾರೆ ಕಾರಣ ಅವರಿಗೆ ಭಗವಂತನು ವೈಶಿಷ್ಟ್ಯಪೂರ್ಣ ರೀತಿಯಲ್ಲಿ ಆಕರ್ಷಿಸಿದ್ದಾನೆ. ಇದರಿಂದ ಕೃಷ್ಣಾವತಾರವು ಆಳ್ವಾರರಿಗೆ ಆಕರ್ಷಣೆಗೊಂಡು, ಕೃಷ್ಣನು ಅವರ ಇಷ್ಟದೈವವಾದನು. ಇಂತಹ ಇಷ್ಟದೈವವಾದ ಶ್ರೀಕೃಷ್ಣನ ಅವತಾರದ ಕಾರಣವನ್ನು ಆಳ್ವಾರರು ಹೀಗೆ ವಿವರಿಸುತ್ತಾರೆ–

'ಸ್ವರ್ಗಲೋಕದಲ್ಲಿರುವ ದೇವತೆಗಳಿಗೆ ಉಂಟಾದ ನೋವುಗಳನ್ನು ನಿವಾರಿಸುವುದಕ್ಕಾಗಿ (ಪೆರಿಯಾಳ್ವಾರ್ ತಿರುಮೊಳಿ 4-9-3), ಭೂಮಿ ಹಾಗೂ ಭೂಮಿಯ ಮೇಲಿನ ಮಾನವರನ್ನು ಉದ್ಧಾರ ಮಾಡುವುದಕ್ಕಾಗಿ, (ಪೆರುಮಾಳ್ ತಿರುಮೊಳಿ 1-10), ಭೂ ಭಾರವನ್ನು ಕಡಿಮೆ ಮಾಡುವುದಕ್ಕಾಗಿ (ಪೆರಿಯ ತಿರುಮೊಳಿ 2-10-8), ಭೂದೇವಿಯ ಕಷ್ಟಪರಂಪರೆಗಳನ್ನು ದೂರ ಮಾಡುವುದಕ್ಕಾಗಿ (ಪೆರಿಯ ತಿರುಮೊಳಿ 8-8-9), ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ–ಬಂಧುಗಳನ್ನು ಹಿಂಸಿಸುತ್ತಿದ್ದ ಕಂಸನನ್ನು ವಧಿಸುವುದಕ್ಕಾಗಿ (ತಿರುವಾಯ್ ಮೊಳಿ 6-4-6 ಹಾಗೂ 3-5-5) ಕ್ಷೀರಸಾಗರ ನಿವಾಸಿಯಾದ

ವಿಷ್ಣು ಭಗವಾನನು ಕೃಷ್ಣನ ರೂಪದಲ್ಲಿ ಅವತರಿಸಿದನು'-ಎಂದು ಕೃಷ್ಣನ ಧರ್ಮ ಸಂರಕ್ಷಣತ್ವವನ್ನು ಆಳ್ವಾರರು ವಿವರಿಸಿದ್ದಾರೆ.

**4. ಪಂಚಾವತಾರಗಳು :**

ಆಳ್ವಾರರ ಭಕ್ತಿ ವಾಙ್ಮಯವನ್ನು ಚೆನ್ನಾಗಿ ಪರಿಶೀಲಿಸಿದಲ್ಲಿ ಪಂಚಾವತಾರಗಳ ಬಗ್ಗೆ ವಿವರಗಳು ತಿಳಿದುಬರುತ್ತವೆ. ಭಕ್ತರು ಉಪಾಸಿಸಲು ಅನುಕೂಲವಾಗುವಂತೆ ಭಗವಂತನು ಐದು ರೂಪಗಳನ್ನು ಧರಿಸುತ್ತಾನೆ. ಅದೇ–ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾವತಾರ ಎಂಬುದು.

ಅ) ಪರಬ್ರಹ್ಮರೂಪ : ಪರಬ್ರಹ್ಮನು ಅಮರನು; ಆದಿಪುರುಷನು. (ಅಮಲನಾದಿ ಪಿರಾನ್) ಆತನು ದೇವತೆಗಳಲ್ಲೆಲ್ಲ ಅಗ್ರಗಣ್ಯನು (ತಿರುಕ್ಕುರುಂದಾಂಡಕಮ್-6). ಮುನಿಗಳು, ಮಹರ್ಷಿಗಳು ಆತನನ್ನು ಸ್ತುತಿಸುತ್ತಾರೆ. (ಪೆರಿಯ ತಿರುಮೊಷಿ 2–3–2). ಆತನು ಪವಿತ್ರನು; ಮಹಾ ಮೇಧಾವಿ; ಪರಮಾತ್ಮನು (ತಿರುಪಲ್ಲಾಂಡು-13). ಆತ ಸಕಲ ಕಲ್ಯಾಣ ಗುಣಗಳಿಂದ ಕೂಡಿದ ಮಹನೀಯನು ಹಾಗೂ ಸ್ತುತಿಪಾತ್ರನು (ತಿರುಚ್ಛಂದ ವಿರುತ್ತಮ್ 9-2) ಎಂದು ಆಳ್ವಾರರು ಪರಬ್ರಹ್ಮ ರೂಪವನ್ನು ವ್ಯಕ್ತೀಕರಿಸಿದ್ದಾರೆ.

ಆ) ವ್ಯೂಹರೂಪ : ಪರಮಾತ್ಮನು ತ್ರಿವಿಧ ವ್ಯೂಹಗಳನ್ನು ಧರಿಸಿರುವಂತೆ, ಆ ಪರಬ್ರಹ್ಮನು ವೇದಗಳಿಂದ ಸ್ತುತಿಸಲ್ಪಡುವವನು ಎಂದು ಕುಲಶೇಖರಾಳ್ವಾರರು ಬ್ರಹ್ಮನ ವ್ಯೂಹರೂಪವನ್ನು ತಮ್ಮ ಪೆರಿಯ ತಿರುಮೊಷಿ (2-2-8) ಯಲ್ಲಿ ವರ್ಣಿಸಿದ್ದಾರೆ.

ಇದೇ ರೀತಿಯಲ್ಲಿ ನಮ್ಮಾಳ್ವಾರರೂ ಕೂಡ ಆರಂಭದಲ್ಲಿ ಬ್ರಹ್ಮನ ದಿವ್ಯ ರೂಪವನ್ನು ತ್ರಿವಿಧಗಳಾಗಿರುವಂತೆ ತಿಳಿಸಿದ್ದಾರೆ. (ಪೆರಿಯ ತಿರುವಂದಾದಿ-72).

ಇ) ವಿಭವ ರೂಪ : ಇದು ಭಗವಂತನ ವಿವಿಧ ಅವತಾರಗಳಿಗೆ ಸಂಬಂಧಪಟ್ಟಿದ್ದಾಗಿದೆ. ಇಂತಹ ಅವತಾರಗಳನ್ನು ಆಳ್ವಾರರು ತಮ್ಮ ದಿವ್ಯ ಪ್ರಬಂಧಗಳಲ್ಲಿ ವರ್ಣಿಸಿದ್ದಾರೆ.

ಈ) ಅಂತರ್ಯಾಮಿ ರೂಪ : ಈ ಕೆಳಗೆ ತಿಳಿಸಿರುವ ಆಳ್ವಾರರ ಶ್ರೀ ಸೂಕ್ತಿಗಳಲ್ಲಿ ಪರಮಾತ್ಮನ ಅಂತರ್ಯಾಮಿ ರೂಪವನ್ನು ವ್ಯಕ್ತಪಡಿಸಲಾಗಿದೆ.

'ಶರೀರವನ್ನು ಪ್ರಾಣತುಲ್ಯವಾಗಿ ಕಾಣುವ, ಅದೇ ಪ್ರಾಣಕ್ಕೆ ಸಮಾನವಾಗಿರುವ ಭಗವಂತನನು.' (ತಿರುವಾಯ್ ಮೊಷಿ 1.7-7)

'ಆ ಭಗವಂತನನ್ನು ಸ್ಮರಿಸುವವರ ಹೃದಯದಲ್ಲೆ ಆತನು ನಿವಸಿಸುತ್ತಿರುವನು.' (ಪೆರಿಯ ತಿರುಮೊಷಿ 4.9-9).

'ನನ್ನ ರೂಪದಂತಹ ರೂಪವನ್ನೇ ತಾನೂನು ಧರಿಸಿರುವ ನನ್ನ ತಂದೆಯೆ, ಹೇ ಭಗವಂತನೆ !' (ತಿರುನೆಡುಂದಾಂಡಕವುಲ್-1).

ಉ) ಅರ್ಚಾ ರೂಪ : ಈ ರೂಪದಲ್ಲಿ ಭಗವಾನನು ಪ್ರತಿಮೆಗಳಲ್ಲಿ, ವಿಗ್ರಹಗಳಲ್ಲಿ ನಿವಸಿಸುವನು. ಆದುದರಿಂದಲೇ ಆಳ್ವಾರರು ವಿವಿಧ ಕ್ಷೇತ್ರಗಳಲ್ಲಿನ ದೇವಾಲಯುಗಳಲ್ಲಿನ ಬಗವದ್ವಿಗ್ರಹಗಳನ್ನು ಪರಬ್ರಹ್ಮನ ಅರ್ಚಾರೂಪವೆಂದೇ ಭಾವಿಸಿದರು.

'The Visistadvaita equates the Brahman and the antaryamin of the Upanishads with Vasudeva of the Pancharatra, the Bhagavan of the Puranas, the Avataras of the Ithihasas and the archa of the Alvars·' The Philosophy of Visistadvaita-P· 162 P· N. Srinivasachari·

'ವೇದಗಳು ಯಾರನ್ನು ವರ್ಣಿಸುತ್ತಿವೆಯೋ, ದೇವತೆಗಳು ಯಾರನ್ನು ಸ್ತುತಿಸುತ್ತಿರುವರೋ, ಮತ್ಸ್ಯ, ಕೂರ್ಮಾದಿ ಅವತಾರಗಳನ್ನು ಯಾರು ಧರಿಸಿದ್ದರೋ ಅಂತಹ ಪರಮಾತ್ಮನು 'ಅಟ್ಟಿ ಪುಯಕರಮ್'' ಎನ್ನುವ ದಿವ್ಯಕ್ಷೇತ್ರದಲ್ಲಿನ ದೇವಾಲಯುಗಳಲ್ಲಿ ನಿವಸಿಸುತ್ತಿದ್ದಾನೆ. (ಪೆರಿಯ ತಿರುಮೊಷಿ 2-8.2)·

ವರಾಹಾವತಾರವನ್ನು ಧರಿಸಿರುವವನೂ, ಮೂರು ಲೋಕಗಳನ್ನೂ ಆಕ್ರಮಿಸಿರುವವನೂ ಆದ ಆ ಭಗವಾನನು 'ಚೀರಾಮ ವಿಣ್ಣಗರ್' ಎನ್ನುವ ದಿವ್ಯಕ್ಷೇತ್ರದಲ್ಲಿ ವಿರಾಜಮಾನನಾಗಿದ್ದಾನೆ. (ಪೆರಿಯ ತಿರುಮೊಷಿ 3-4-8) ಎಂದು ತಿರುಮಂಗೈ ಆಳ್ವಾರರು ಸ್ತುತಿಸಿದ್ದಾರೆ.

'ವೇದಗಳಿಂದ ವರ್ಣಿಸಲ್ಪಟ್ಟಿರುವ ಆ ಪರಬ್ರಹ್ಮನು ತಿರುಮಾಲಿರುಂಶೋಲೈ ಎನ್ನುವ ದಿವ್ಯಕ್ಷೇತ್ರದಲ್ಲಿರುವ ದೇವಾಲಯದಲ್ಲಿ ವಿರಾಜಮಾನನಾಗಿದ್ದಾನೆ' ತಿರುವಾಯ್‌ಮೊಷಿ (2-10-10) ಎಂದು ನಮ್ಮಾಳ್ವಾರರು ಪರಬ್ರಹ್ಮನ

ಅರ್ಚನಾವತಾರವನ್ನು ಪ್ರಶಂಸಿಸಿದ್ದಾರೆ.

**5. ವಿರಾಟ್ ರೂಪ :**

'ಬ್ರಹ್ಮ' ಎನ್ನುವ ಶಬ್ದದ ಧಾತ್ವರ್ಥದ (ಬೃಹಿ ವೃದ್ಧೌ) ಕಾರಣ, ಆ ಪರಬ್ರಹ್ಮನ ಹಿರಿಮೆಯು ಅಭಿವ್ಯಕ್ತಗೊಳ್ಳುತ್ತದೆ. ಅಂತಹ ಹಿರಿಮೆಯನ್ನು ಪಡೆದಿರುವುದರಿಂದಲೇ ಆತನನ್ನು ಋಗ್ವೇದಾಂತರ್ಗತವಾದ ಪುರುಷ ಸೂಕ್ತದಲ್ಲಿ, ಉಪನಿಷತ್ತುಗಳಲ್ಲಿ, ಗೀತಾ ಶಾಸ್ತ್ರಗಳಲ್ಲಿ ವಿರಾಟ್ ಪುರುಷನನ್ನಾಗಿ ವರ್ಣಿಸಲಾಗಿದೆ.

ಕೃಷ್ಣನು ಮಣ್ಣನ್ನು ತಿಂದಾಗ ಯಶೋದಾ ಕೋಪಿಸಿಕೊಂಡಳು. ಆದರೆ ಕೃಷ್ಣನು ಅದನ್ನು ತಿನ್ನಲಿಲ್ಲವೆನ್ನುತ್ತಾನೆ. ಬಾಯಿ ತೆಗೆದು ತೋರಿಸುವಂತೆ ತಾಯಿ ಗದರಿಸುತ್ತಾಳೆ. ಗತ್ಯಂತರವಿಲ್ಲದೆ ಕೃಷ್ಣನು ಬಾಯಿ ತೆರೆದು ತೋರಿಸಿದ. ಈ ಸನ್ನಿವೇಶವನ್ನು ಪೆರಿಯಾಳ್ವಾರರು ತಮ್ಮ ದಿವ್ಯಪ್ರಬಂಧದಲ್ಲಿ ರಸವತ್ತಾಗಿ ವರ್ಣಿಸುತ್ತಾ, ಶ್ರೀಕೃಷ್ಣನ ಬಾಯಿಯಲ್ಲಿ ಸಕಲ ಲೋಕಗಳನ್ನೂ ದರ್ಶಿಸುವಂತೆ ಮಾಡಿದರು (ಪೆರಿಯಾಳ್ವಾರ್ ತಿರುಮೊಳಿ 1-1-6).

ಪೊಯ್‌ಹೈ ಆಳ್ವಾರರು ಕೃಷ್ಣನ ಪ್ರಭಾವಕ್ಕೆ ಆಶ್ಚರ್ಯಚಕಿತರಾಗಿ, 'ಓ ಭಗವಂತನೆ ! ಪೃಥ್ವಿ, ಆಕಾಶ, ವಾಯು, ಪರ್ವತಗಳು, ಸಮುದ್ರಗಳು– ಮುಂತಾದುವೆಲ್ಲವನ್ನೂ ನುಂಗಿಹಾಕಿದೆಯಲ್ಲ ! ಅಂದು ನಿನ್ನ ಬಾಯಿಯು ಅಷ್ಟೊಂದು ದೊಡ್ಡದಾಯಿತೆ, ಹೇಗೆ ?' (ಮೊದಲ್ ತಿರುವಂದಾದಿ–10) ಎಂದು ಭಗವಂತನ ವಿಶ್ವರೂಪವನ್ನು ವಿಶೇಷವಾಗಿ ಸಂಕೀರ್ತಿಸಿದ್ದಾರೆ.

**6. ಜೀವನು :**

ಆಳ್ವಾರರು ಪರಮಾತ್ಮನನ್ನು ವರ್ಣಿಸಿರುವಷ್ಟು ವಿಸ್ತಾರವಾಗಿ ಜೀವನನ್ನು ಕುರಿತು ಚರ್ಚಿಸಲು ಹೋಗಿಲ್ಲ. ಆದರೆ ಅವರ ಕೃತಿಗಳಲ್ಲಿ ಆತ್ಮ-ಪರಮಾತ್ಮ ಸಂಬಂಧವನ್ನು, ಅವರ ಅಂಶಾಂಶಿ ಸಂಬಂಧಗಳನ್ನು ಶೇಷ-ಶೇಷಿ ಸಂಬಂಧವೆಂದು ಭಾವಿಸಿದರು. ಇಂತಹ ಭಾವನಾ ವಿಶೇಷವೇ ವಿಶಿಷ್ಟಾದ್ವೈತ ದರ್ಶನವಷ್ಟನ್ನೂ ಆವರಿಸಿಕೊಂಡು, ಅದರಲ್ಲಿ ಕಂಡುಬರುತ್ತದೆ.

ಜೀವರುಗಳೆಲ್ಲರೂ ಭಗವಂತನಿಂದಲೇ ಸೃಷ್ಟಿಸಲ್ಪಟ್ಟವುಗಳು ಎಂದು ನಮ್ಮಾಳ್ವಾರರು ವಿವರಿಸಿದ್ದಾರೆ. ಈ ಜೀವರುಗಳಿಗೆಲ್ಲ ಆತನೇ ಸ್ವಾಮಿ. ಆದುದರಿಂದ ಈ ಜೀವ ಸಮುದಾಯವೆಲ್ಲವೂ ಆ ಭಗವಂತನ ಮೇಲೆ ಆಧಾರ

ಪಟ್ಟಿರಬೇಕಾಗುತ್ತದೆ. ಈ ಕಾರಣದಿಂದ ಆ ಭಗವಂತನು ಈ ಜೀವರುಗಳೆಲ್ಲ ರಲ್ಲೂ ನೆಲೆಸಿದ್ದಾನೆ. (ತಿರುವಾಯ್ ಮೊಳಿ 6-9-5). ಜೀವರುಗಳು ಕುಡಿಯುವ ನೀರಿನಲ್ಲಿ, ತಿನ್ನುವ ಅನ್ನದಲ್ಲೂ ಆತನು ವ್ಯಾಪಿಸಿದ್ದಾನೆ. ಜಗತ್ತೆಲ್ಲವೂ ಭಗವಂತ ಮಯವಾಗಿದೆ ಎಂದು ಆಳ್ವಾರರು ತಿಳಿಸುತ್ತಾರೆ. (ತಿರುವಾಯ್‌ಮೊಳಿ 6-9-1).

ತಿರುಮಂಗೈ ಆಳ್ವಾರರು 'ಜೀವರು ಹಾಗೂ ಬ್ರಹ್ಮರುಗಳ ಅಂಶಾಂಶಿ ಸಂಬಂಧಗಳನ್ನು ವ್ಯಕ್ತಪಡಿಸುತ್ತಾ 'ಸಮುದ್ರದಲ್ಲಿ ತರಂಗಗಳು ಮೇಲೇರಿ, ಅದರಲ್ಲೆ ಮತ್ತೆ ಕಲೆತುಹೋಗುವುದರಿಂದ, ಸಮುದ್ರವಿಲ್ಲದೆ ತರಂಗಗಳಿಗೆ ಅಸ್ತಿತ್ವವಿಲ್ಲ. ಆದುದರಿಂದ ಜೀವರುಗಳು ಭಗವಂತನ ಅಂಶರೂಪಗಳು' (ತಿರುಚ್ಚಂದ ವಿರುತ್ತಮ್-16) ಎಂದು ವಿವರಿಸಿದ್ದಾರೆ.

ಇದೇ ರೀತಿಯಲ್ಲಿ ಪೊಯ್‌ಹೈ ಆಳ್ವಾರರೂ ಕೂಡ, 'ಅಂಶರೂಪದಲ್ಲಿರುವ ಜೀವರುಗಳು, ಅಂಶಿ ರೂಪದಲ್ಲಿರುವ ಬ್ರಹ್ಮನಲ್ಲಿ ಲೀನವಾಗಿ ಹೋಗುತ್ತವೆ' ಎಂದು ಸೂಚಿಸುತ್ತಾ, 'ನದಿಯು ಸಮುದ್ರದ ಕಡೆಗೆ ಪ್ರವಹಿಸುವಂತೆ ಜೀವರು ಗಳು ಭಗವಂತನಲ್ಲಿ ಲೀನವಾಗಲು ಸಿದ್ಧವಾಗಿರುತ್ತಾರೆಂದು' (ಮೊದಲ್ ತಿರುವಂದಾದಿ-67) ತಿಳಿಸುತ್ತಾರೆ.

ಈ ಅಂಶವನ್ನೇ ತಿರುಮಂಗೈ ಆಳ್ವಾರರು ದೃಢೀಕರಿಸುತ್ತಾ ತಪ್ತಗೊಂಡ ಲೋಹದ ಮೇಲೆ ಜಲಬಿಂದುವನ್ನು ಹಾಕಿದಾಗ, ಆ ಜಲಬಿಂದುವು ಅಲ್ಲೇ, ಅದರಲ್ಲೇ ಲೀನವಾಗಿ ಹೋಗುತ್ತದೆ. ಅದೇ ರೀತಿಯಲ್ಲಿ ಜೀವನಾದ ನಾನು ಭಗವಂತನಲ್ಲೇ ಲೀನವಾಗಿಬಿಡುವೆನು' (ತಿರುಕ್ಕುರುಂದಾಂಡಕಮ್-5) ಎಂಬ ಒಕ್ಕಣೆಯನ್ನು ಸೇರಿಸಿದ್ದಾರೆ.

ಈ ಅಂಶದ ಬಗ್ಗೆ ನಮ್ಮಾಳ್ವಾರರು ತಿಳಿಯಪಡಿಸಿರುವ ಅಭಿಪ್ರಾಯವು ಗಮನಾರ್ಹವಾದುದಾಗಿದೆ-'ಪರಬ್ರಹ್ಮನ ಅಂಶವಾಗಿರುವ ಜೀವನು ಸಾಂಸಾರಿಕ ಮಾಯೆಯಲ್ಲಿ ಬಿದ್ದು, ತನ್ನ ನಿಜರೂಪ ತಿಳಿಯದವನಾಗಿದ್ದಾನೆ. ಅಷ್ಟೇ ಅಲ್ಲ-ತಾನು ಪರಬ್ರಹ್ಮನ ಅಂಶವೆನ್ನುವುದನ್ನು ಕೂಡ ತಿಳಿಯದವನಾಗಿದ್ದಾನೆ. ಇಂತಹ ಅಜ್ಞಾನವು ಜೀವನಿಗೆ ಉಂಟಾಗಿರುವುದು ಚಿಂತಿಸಬೇಕಾದ ವಿಚಾರ ವಾಗಿದೆ' (ಪೆರಿಯ ತಿರುವಂದಾದಿ-3) ಎಂದು ನಮ್ಮಾಳ್ವಾರರು ಜೀವನ ಅಜ್ಞಾನ ದೆಸೆಯನ್ನು ಕುರಿತು ತಮ್ಮ ಚಿತೆಯನ್ನು ವ್ಯಕ್ತಪಡಿಸುತ್ತಾರೆ.

ಆಳ್ವಾರರು ತಿಳಿಸಿರುವ ಇಂತಹ ವಿಚಾರ ಪರಂಪರೆಗಳನ್ನು ಅನುಸರಿಸಿ,

ಜೀವನು ಭಗವಂತನು ಭಾವಿಸಿರುವ ರೀತಿಯಲ್ಲಿರಲು ಇಚ್ಛಿಸುತ್ತಾನೆ. ಆತನ ಕೃಪಾಕಟಾಕ್ಷದಿಂದಲೇ ಸಾಂಸಾರಿಕವಾದ ಮಾಯಾ ಪರದೆಯನ್ನು ಸರಿಸಿ, ಆನಂದವನ್ನು ಜೀವನು ಅನುಭವಿಸುವನೆಂದು ಇದರಿಂದ ಸ್ಪಷ್ಟವಾಗುತ್ತದೆ.

**7. ಜಗತ್ತು :**

ಜೀವನು ಹಾಗೂ ಜಗತ್ತು-ಈ ಎರಡೂ ಪರಮಾತ್ಮನ ಅಂಶಗಳೆಂದೇ ಆಳ್ವಾರರ ಭಾವನೆ. ಈ ಭಾವನೆಯನ್ನು ವ್ಯಕ್ತಪಡಿಸುತ್ತಾ, ಅವರು ತಮ್ಮ ರಚನೆಗಳಲ್ಲಿ ಜಗತ್ತಿನ ಸೃಷ್ಟಿಯನ್ನು ಕುರಿತು ವಿಶೇಷ ರೀತಿಯಲ್ಲಿ ವರ್ಣಿಸಿದ್ದಾರೆ.

ಸರ್ವದೇವತೆಗಳನ್ನು, ಸಮಸ್ತ ಜೀವಿಗಳನ್ನು, ಸಕಲ ಜಗತ್ತನ್ನು, ವಾಯುರಾಕಾಶಗಳನ್ನು-ಎಲ್ಲವನ್ನೂ ತನ್ನ ಅಂಶವನ್ನಾಗಿ ಸೃಷ್ಟಿಸುವ ಪರಬ್ರಹ್ಮ ನಿಗಿಂತ ಉನ್ನತವಾದವರು ಯಾರಿದ್ದಾರೆ ? (ತಿರುವಾಶಿರಿಯಮ್-7) ಎಂದು ನಮ್ಮಾಳ್ವಾರರು ತಮ್ಮ ದಿವ್ಯಪ್ರಬಂಧದಲ್ಲಿ ಒಂದು ಕಡೆ ಪರಬ್ರಹ್ಮನ ಸರ್ವಾಧಿಕ್ಯ ವನ್ನು ಸ್ಪಷ್ಟೀಕರಿಸಿದ್ದಾರೆ.

ಅವರೇ ಮತ್ತೊಂದು ಕಡೆ, 'ಓ ಭಗವಂತಾ ! ಜಗತ್ತು, ವಾಯು ಇತ್ಯಾದಿಗಳನ್ನು ನಿನ್ನ ಅಂಶಗಳಾಗಿ ಸೃಷ್ಟಿಸುವಂತಹ ಪ್ರತಿಭಾವಂತನು ನೀನು ! ನನ್ನ ಅಂತಃಕರಣದಲ್ಲಿ ಹೇಗೆ ತಾನೆ ನಿವಸಿಸಬಲ್ಲೆ?' (ಪೆರಿಯ ತಿರುವಂದಾದಿ-75) ಎಂದು ಅವರು ತಮ್ಮ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾರೆ.

ಅವರೇ ಮತ್ತೊಂದು ಕಡೆ, ಪರಮಾತ್ಮನೇ ಈ ಜಗತ್ತನ್ನು ಉಪಾದಾನ ಕಾರಣವೆಂದು ಉದ್ಘೋಷಿಸುತ್ತಾ, 'ಮೊಟ್ಟಮೊದಲು, ಪರನು ಆದಿಯಲ್ಲಿ ಯಾವ ಜಗತ್ತೂ ಇರಲಿಲ್ಲ; ಯಾವ ಜೀವನೂ ಇರಲಿಲ್ಲ; ಕೇವಲ ಪರಬ್ರಹ್ಮನು ಮಾತ್ರವೇ ಇದ್ದನು. ಆಗ ಆತನು ತನ್ನ ಲೀಲಾ ವಿನೋದಗಳನ್ನು ಪ್ರದರ್ಶಿಸ ಬೇಕೆಂದು ಇಚ್ಛಿಸಿ, ಬ್ರಹ್ಮನನ್ನು ಸೃಷ್ಟಿಸಿದನು. (ವಿಷ್ಣುವಿನ ನಾಭಿ ಕಮಲದಿಂದ ಬ್ರಹ್ಮನು ಉದ್ಭವಿಸಿದನೆಂಬ ಪ್ರತೀತಿ ಇರುವುದಲ್ಲವೆ ?). ತದನಂತರದಲ್ಲಿ ಇತರೇ ದೇವತೆಗಳನ್ನು, ಮೂರು ಲೋಕಗಳನ್ನು, ಅದರೊಂದಿಗೆ ಉಳಿದ ಸಮಸ್ತವನ್ನೂ ಸೃಷ್ಟಿಸಿದನು' (ತಿರುವಾ ಶಿರಿಯಮ್-4) ಎಂದು ತಿಳಿಸಿದರು.

ಇದೇ ರೀತಿಯಲ್ಲಿ ತಿರುಮಳಿಶೈ ಆಳ್ವಾರರೂ ಕೂಡ ಜಗತ್ತಿನ ಉತ್ಪತ್ತಿ ಯನ್ನು ಕುರಿತು ಚರ್ಚಿಸುತ್ತಾ, 'ಹೇ ಭಗವನ್ ! ನೀನೇ ಸ್ವಯಂ ಜಗತ್ತಾ ಗಿರುವೆ ! ಜಗತ್ತೆಲ್ಲವೂ ನಿನ್ನಲ್ಲಿಯೇ ಇದೆ ! ಸಕಲ ದೇವತೆಗಳಿಗೂ ನೀನೇ

ಅಧಿಪತಿಯು !' (ನಾನ್ಮುಗನ್ ತಿರುವಂದಾದಿ–20) ಎಂದು ಭಗವಂತನ ಮಹಿಮೆಯನ್ನು ಕೊಂಡಾಡಿದ್ದಾರೆ.

ಜಗತ್ತು ಸತ್ಯವಾಗಿ, ನಿತ್ಯವಾಗಿರುವುದು ಎಂದು ಆಳ್ವಾರರು ತಿಳಿದಿದ್ದರು ಎಂಬುದು ಅವರ ದಿವ್ಯಪ್ರಬಂಧಗಳಿಂದ ತಿಳಿದುಬರುತ್ತದೆ. (ದಿ ಫಿಲಾಸಫಿ ಆಫ್ ಶಠಗೋಪ–ಆರ್. ರಾಮಾನುಜಾಚಾರಿ). ಹೀಗೆ ತಿಳಿದುಕೊಳ್ಳುವುದಕ್ಕೆ ಕಾರಣ ವೇನೆಂದರೆ ಪರಬ್ರಹ್ಮನು ಸತ್ಯನು, ನಿತ್ಯನು ಆಗಿರುವನು ಎಂಬುದರಿಂದ. ಅಂತಹ ಪರಬ್ರಹ್ಮನ ಅಂಶರೂಪವಾದ ಜಗತ್ತು ಕೂಡ ಸತ್ಯ, ನಿತ್ಯ ಎಂಬಂತಾಗುತ್ತದೆ. (ಆದರೆ ಆಳ್ವಾರರ ನಂತರ ಅವತರಿಸಿದ ನಾಥ, ಯಾಮುನ, ರಾಮಾನುಜಾದಿ ಆಚಾರ್ಯರುಗಳೆಲ್ಲರೂ 'ಜಗತ್ತು ಮಿಥ್ಯೆ' ಎನ್ನುವ ಮಾಯಾವಾದವನ್ನು ಖಂಡಿಸುತ್ತಾ, ಆಳ್ವಾರರು ಪ್ರತಿಪಾದಿಸಿರುವ 'ಜಗತ್ತು ಸತ್ಯ, ನಿತ್ಯ' ಎನ್ನುವ ಸಿದ್ಧಾಂತವನ್ನು ಸಮರ್ಥಿಸಿದರು.)

ಮಾಯೆಯಿಂದ ಕೂಡಿದ ಸಂಸಾರವನ್ನು ಮಾತ್ರವೇ ನಿತ್ಯವಲ್ಲದ್ದು ಎಂದು ಆಳ್ವಾರರು ಪ್ರತಿಪಾದಿಸಿದರೇ ಹೊರತು, ಜಗತ್ತು ನಿತ್ಯವಲ್ಲದ್ದು ಎಂದು ಅವರು ಹೇಳಲಿಲ್ಲ. ದುಃಖಭೂಯಿಷ್ಟವಾದ ಸಂಸಾರ (ಭವ) ಸಾಗರವನ್ನು ದಾಟುವುದು, ಅದರ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳದಿರುವುದು ಜೀವನಿಗೆ ಅವಶ್ಯಕವೆಂದೂ, ಪ್ರಕೃತಿ ಸಂಬಂಧವಾದ ವಾಂಛೆಗಳು, ದುರಾಸೆಗಳನ್ನು ದೂರ ಮಾಡಬೇಕೆಂದೂ, ಸಕಲ ಜಗತ್ ಕಾರಣಕರ್ತನಾದ ಪರಮಾತ್ಮನನ್ನು ಉಪಾಸಿಸುವುದು ಸರ್ವಥಾ ಶ್ರೇಯಸ್ಕರ' ಎಂದು ಪ್ರಬೋಧಿಸಿದರು.

'ಈ ಸಂಸಾರದ ಸ್ಥಿತಿ-ಗತಿಗಳಿಗೆ ಕಾರಣಭೂತನಾದ ಪರಮಾತ್ಮನನ್ನು ಸ್ಮರಿಸದೆ, ಚೇತನರುಗಳನೇಕರುಗಳು ಅಜ್ಞಾನದೊಂದಿಗೆ ಕ್ರೂರ ಕೃತ್ಯಗಳನ್ನು ಮಾಡುವರು. ಇದರಿಂದ ಅವರು ದುಃಖವನ್ನು ಅನುಭವಿಸುವರು. ಪರಿಣಾಮ ವಾಗಿ ಅವರು ಮಾಯಾ ಮೋಹಿತರುಗಳಾಗುವರು. ಆಹಾ ! ಇಂತಹ ವಿಚಿತ್ರಕ್ಕೆ ನಾನೇನು ಹೇಳಲಿ !' (ತಿರುವಾಶಿರಿಯಮ್–8) ಎಂದು ನಮ್ಮಾಳ್ವಾರರು ತಮ್ಮ ಹೃದಯ ವೇದನೆಯನ್ನು ತೋಡಿಕೊಂಡಿದ್ದಾರೆ.

**8. ಮಾಯೆ :**

ಮಾಯೆಯನ್ನು ಆಳ್ವಾರರು ಎರಡು ರೀತಿಗಳಲ್ಲಿ ವಿಭಜಿಸಿದ್ದಾರೆ–ಒಂದು ಭಗವಂತನ ಶಕ್ತಿಸ್ವರೂಪವಾದ ಮಾಯೆ; ಎರಡನೆಯದು ಪ್ರಕೃತಿಗೆ

ಸಂಬಂಧಿಸಿದ ಮಾಯೆ.

ಮೊದಲನೇ ಮಾಯೆಯು ಸೃಷ್ಟಿಗೆ ಕಾರಣವಾಗಿದೆ. ಎರಡನೇ ಮಾಯೆಯಲ್ಲಿ ಜೀವರುಗಳು ಮಾಯೆಯ ವಶವಾಗಿರುವರು. ಈ ಮಾಯೆಯಿಂದಲೇನೇ ಜೀವರುಗಳು ಸಂಸಾರ ಬಂಧನಕ್ಕೆ ಒಳಗಾಗಿರುತ್ತಾರೆ. ಇದು ಭಗವಂತನ ಮಾಯೆಗಿಂತಲೂ ಭಿನ್ನವಾದುದು.

ಈ ಎರಡೂ ರೀತಿಯ ಮಾಯೆಗಳಿಗೂ ಆಳ್ವಾರರು ಎರಡು ಬೇರೆ ಬೇರೆ ಹೆಸರುಗಳನ್ನು ಇಟ್ಟರು.

ಮೊದಲನೆಯದನ್ನು 'ಭಗವನ್ಮಾಯೆ' ಎಂದು ಕರೆದರು. ಇದನ್ನು ತಮ್ಮ ದಿವ್ಯಪ್ರಬಂಧಗಳಲ್ಲಿ ವಿಶೇಷ ರೀತಿಯಲ್ಲಿ ವರ್ಣಿಸಿದ್ದಾರೆ. ತಮಿಳಿನಲ್ಲಿ ಈ ದೇವನನ್ನು 'ಮಾಯನ್' ಎಂದು ಕರೆದಿದ್ದಾರೆ. ಹೀಗೆಂದರೆ ಮಾಯಾಮಯನಾದ ಭಗವಂತನು ಎಂಬುದು ಈ ಪದದ ಅರ್ಥ. ತಮ್ಮನ್ನು ರಕ್ಷಿಸಬೇಕೆಂದು ಅವರು ಭಗವಂತನನ್ನು ಪ್ರಾರ್ಥಿಸುವರು.

'ಪರಬ್ರಹ್ಮನು ತನ್ನ ಶಕ್ತಿಸ್ವರೂಪವಾದ ಮಾಯೆಯಿಂದ ಪ್ರೇರೇಪಿಸಲ್ಪಟ್ಟು, ಸೃಷ್ಟಿ ವಿಕಾಸ ಹೇತುವಾಗಿ ಮೊದಲು ಬ್ರಹ್ಮನನ್ನು ಸೃಷ್ಟಿಸಿದನು. ಅವನು ಪರಬ್ರಹ್ಮನ ಉಪದೇಶಾನುಸಾರ ಸಕಲ ಜಗತ್ತುಗಳನ್ನು, ಜೀವರುಗಳನ್ನು ಸೃಷ್ಟಿಸಿದನು. ಮಾಯಾಮಯನಾದ ಆ ಭಗವಾನನೇ ನನ್ನ ಸ್ವಾಮಿ !' (ತಿರುವಾಶಿರಿಯಮ್-4).

'ಹೇ ಭಗವನ್ ! ವಿಚಿತ್ರವಾದ ನಿನ್ನ ಮಾಯೆಯ ಫಲವಾಗಿ ಉದ್ಭವಿಸಿದ ನಾನು, ನನ್ನ ಪಾಪ ಪರಿಹಾರಾರ್ಥವಾಗಿ ನಿನ್ನನ್ನೇ ಶರಣು ಹೊಂದಿದ್ದೇನೆ' (ತಿರುವಾಯ್ ಮೊಳಿ 3-2-2) ಎಂದು ನಮ್ಮಾಳ್ವಾರರು ಆ ಪರಬ್ರಹ್ಮನನ್ನು ಸ್ತುತಿಸುವರು.

'ಓ ಭಗವಂತಾ ! ನೀನು ಆದಿದೈವನು. ನೀನು ತೇಜೋರೂಪನು, ಆಕಾಶದೊಂದಿಗೆ ಕೂಡಿದ ಪೃಥ್ವೀರೂಪಿಯಾಗಿರುವೆ. ಅಂತೆಯೇ ಗೋಪಾಲಕನ ರೂಪದಲ್ಲಿಯೂ ನನಗೆ ಕಾಣಿಸುತ್ತಿರುವೆ. ಅಂತೆಯೇ ನಿನ್ನ ಮಹಿಮೆಯನ್ನು ನಾನು ಅರಿಯಲಾರದವನಾಗಿದ್ದೇನೆ. ಎಷ್ಟೊಂದು ಶಕ್ತಿಯುತವಾದುದು ನಿನ್ನ ಮಹಿಮೆ !' (ತಿರುಚ್ಚನ್ದವಿರುತ್ತಮ್-34) ಎಂದು ತಿರುಮಳಿಶೈ ಆಳ್ವಾರರು ಭಗವಂತನ ಮಾಯಾಶಕ್ತಿಯನ್ನು ಅನೇಕ ರೀತಿಗಳಲ್ಲಿ ವರ್ಣಿಸಿದ್ದಾರೆ.

ಎರಡನೆಯದಾದ ಪ್ರಕೃತಿ ಸಂಬಂಧವಾದ ಮಾಯೆಯನ್ನೂ ಕೂಡ

ಆಳ್ವಾರರು ವರ್ಣಿಸಿದ್ದಾರೆ. ಈ ಮಾಯೆಯೇ ಜೀವರುಗಳ ಲೌಕಿಕ ವಿಷಯ ಗಳಲ್ಲಿ ಬಿಕ್ಕಟ್ಟನ್ನು ಸೃಷ್ಟಿಸುತ್ತಿತ್ತು. ಅಂತೆಯೇ ಅವರನ್ನು ಅಜ್ಞಾನಾಂಧ ಕಾರದಲ್ಲಿ ತಳ್ಳುತ್ತಿತ್ತು.

ಈ ಕಾರಣದಿಂದ ಆ ಜೀವರುಗಳು ಶೋಕಮೋಹಗಳಿಂದ, ಸುಖದುಃಖ ಗಳಿಂದ, ರಾಗದ್ವೇಷಗಳಿಂದ ಆಕ್ರಮಿಸಲ್ಪಟ್ಟಿರುತ್ತಾರೆ. ಇಂತಹ ಅತಿಕ್ರಮಣ ಗಳಿಗೆ ಕಾರಣಭೂತವಾದ ಮಾಯೆಯನ್ನು ಆಳ್ವಾರರು 'ಅವಿದ್ಯ'ಎಂದು ಕರೆದರು

ಅವಿದ್ಯಾರೂಪವನ್ನು ಹೊಂದಿರುವ ಈ ಮಾಯೆಯು ಸತ್ಯವನ್ನು ಮರೆಯು ವಂತೆ ಮಾಡಿ, ಮಮಕಾರವನ್ನು, ಕಾಮಕ್ರೋಧಾದಿಗಳನ್ನು ಜೀವರುಗಳಲ್ಲಿ ಹುಟ್ಟುವಂತೆ ಮಾಡುವುದು. ಇಂತಹ ಮಾಯೆಯಿಂದ ಬಿಡುಗಡೆ ಪಡೆಯ ಬೇಕಾದರೆ ಭಗವದನುಗ್ರಹದಿಂದಲೇ ಸಾಧ್ಯ. ಭಕ್ತಿ, ವೈರಾಗ್ಯಗಳನ್ನು ಹೊಂದಿರುವವರು ಮಾತ್ರವೇ ಭಗವದನುಗ್ರಹಕ್ಕೆ ಪಾತ್ರರಾಗಲು ಸಾಧ್ಯ ಎಂದು ಆಳ್ವಾರರು ತಿಳಿಸಿದರು.

'ಸರ್ವ ಜಗತ್ತುಗಳನ್ನೂ ಸೃಷ್ಟಿಸಿ, ಅವುಗಳನ್ನು ಪಾಲಿಸುವ ಸರ್ವಶಕ್ತಿ ಮಯನಾದ ಭಗವಂತನನ್ನು ಸ್ಮರಿಸದೆ, ಜೀವರುಗಳು ಅಜ್ಞಾನವಶದಿಂದ ದುಷ್ಕೃತ್ಯಗಳನ್ನು ಮಾಡುವರು.' ಅವರುಗಳು ಮಾಯಾ ಮೋಹಿತರಾಗಿ, ವ್ಯರ್ಥ ವಾಗಿ ಜೀವನವನ್ನು ಕಳೆಯುವರು. (ತಿರುವಾಶಿರಿಯಮ್-68).

'ಮಾಯೆಯಿಂದ ತುಂಬಿದ ಈ ಪ್ರಪಂಚವು ಅತಿ ವಿಚಿತ್ರವಾಗಿದೆ. ದುರ್ಮಾರ್ಗಿಗಳು ಸುಖಲೋಲುಪ್ತರಾಗಿದ್ದಾರೆ. ಸಜ್ಜನರಿಗೆ ಈ ಪ್ರಪಂಚವು ಅನೇಕ ಕಷ್ಟಗಳನ್ನು ನೀಡುತ್ತದೆ' (ತಿರುವಾಯ್ ಮೊಳಿ 4-9-1) ಎಂದು ನಮ್ಮಾಳ್ವಾರರು ಪ್ರಕೃತಿ ಸಂಬಂಧವಾದ ಮಾಯೆಯಿಂದ ಬಂಧಿಸಲ್ಪಟ್ಟಿರುವ ಚೇತನರನ್ನು ಅನೇಕ ರೀತಿಗಳಲ್ಲಿ ತಮ್ಮ ಚಿಂತನೆಯನ್ನು, ಅನುಕಂಪವನ್ನು ವ್ಯಕ್ತಪಡಿಸಿದ್ದಾರೆ. ಅಂತಹ ಮಾಯಾಬಂಧನದಿಂದ ಚೇತನರು ವಿಮೋಚನೆ ಹೊಂದಬೇಕೆಂದು ಪ್ರಾಕೃತರನ್ನು ಅವರು ಪ್ರಚೋದಿಸುತ್ತಾರೆ.

ಮುಂದೆ ಬಂದ ಶ್ರೀ ರಾಮಾನುಜರು ಇದನ್ನೇ 'ಮಾಯಾ ಸಿದ್ಧಾಂತ' ವೆಂದು ಕರೆದು ಅದನ್ನು ಖಂಡಿಸಿದ್ದಾರೆ. ಆದರೆ ಆಳ್ವಾರರ ಭಾವನೆಗಳನ್ನು ಗೌರವಿಸಿದ್ದಾರೆ.

ಮೋಕ್ಷ :

ಪ್ರಕೃತಿ ಬಂಧನದಿಂದ ಮುಕ್ತಿಯನ್ನು ಪಡೆದು, ಆನಂದ ಪ್ರಾಪ್ತಿಗಾಗಿ ಮಾನವನು ಸೂಕ್ತ ಪ್ರಯತ್ನ ಮಾಡಬೇಕೆನ್ನುವ ನಿಯಮವು ಸರ್ವೇಸಾಮಾನ್ಯವಾಗಿ ಎಲ್ಲ ದರ್ಶನಗಳಲ್ಲೂ ಕಂಡುಬರುತ್ತದೆ. ಆದರೆ ಅಂತಹ ಆನಂದ ಪ್ರಾಪ್ತಿಗಾಗಿ ಒಂದೊಂದು ಮತವು ಒಂದೊಂದು ಮಾರ್ಗವನ್ನು ಸೂಚಿಸುತ್ತದೆ. ಆದರೆ ಆಳ್ವಾರರು ಮಾತ್ರ ಭಕ್ತಿಯೇ ಮುಕ್ತಿಗೆ ಮಾರ್ಗವೆಂದು, ಅಂತಹ ಅಮೃತ ಫಲವನ್ನು ಹೊಂದಬಲ್ಲವನು ಸಾಧಕನು ಆಗಬಲ್ಲನೆಂದು, ಧನ್ಯನಾಗಬಲ್ಲನೆಂದು ತಿಳಿಸಿದ್ದಾರೆ. (ನಾನ್ಮುಗನ್ ತಿರುವಂದಾದಿ-79).

ಭಕ್ತಿ ಸಿದ್ಧಾಂತ ಪ್ರತಿಪಾದಕಗಳಾದ ಅಧಿಕಾರಿಕ ಗ್ರಂಥಗಳಲ್ಲಿ 'ಶ್ರೀಮದ್ಭಾಗವತ'ವು ಅಗ್ರಗಣ್ಯವಾದುದು. ಅದರಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ-ಎನ್ನುವ ನಾಲ್ಕು ವಿಧವಾದ ಮುಕ್ತಿ ಮಾರ್ಗಗಳನ್ನು ವರ್ಣಿಸಲಾಗಿದೆ.

ಸಾಲೋಕ್ಯ ಸಾರ್ಷ್ಟಿ ಸಾಮೀಪ್ಯ ಸಾರೂಪ್ಯೈಕತ್ವ ಮಿತ್ಯುತ |
ದೀಯಮಾನಂ ನ ಗೃಹ್ಣಂತಿ ಜನಾ ಮತ್ಸೇವನಂ ವಿನಾ ||
ಶ್ರೀಮದ್ಭಾಗವತ-3-29-14)

ಈ ನಾಲ್ಕೂ ಮುಕ್ತಿ ಮಾರ್ಗಗಳನ್ನು ಆಳ್ವಾರರು ತಮ್ಮ ದಿವ್ಯಪ್ರಬಂಧಗಳಲ್ಲಿ ಬೇರೆ ಬೇರೆಯಾಗಿ ವರ್ಣಿಸಿಲ್ಲವಾದರೂ, ಆ ಮಹನೀಯರು ಈ ಚತುರ್ವಿಧ ಮುಕ್ತಿಗಳನ್ನು ಪರಿಪೂರ್ಣವಾಗಿ ಅನುಭವಿಸಿದರೆಂದೇ ನಾವು ಭಾವಿಸಬಹುದು.

ಮೋಕ್ಷ ಸುಖವು ಎರಡು ವಿಧವಾಗಿರುತ್ತವೆಂದು ತತ್ತ್ವಶಾಸ್ತ್ರಜ್ಞರು ತಿಳಿಸುತ್ತಾರೆ. ಅದರಲ್ಲಿ ಒಂದು ಜೀವನ್‌ಮುಕ್ತಾವಸ್ಥೆ. ಅಂದರೆ ಈ ಭೌತಿಕ ಶರೀರವಿರುವಾಗಲೇ ಮೋಕ್ಷ ಸುಖವನ್ನು ಅನುಭವಿಸುವುದು. ಎರಡನೆಯದು-ದೇಹ ಪತನಾನಂತರ ಭಗವತ್ ಕೃಪಾ ವಿಶೇಷದಿಂದ ಲಭಿಸುವ ಮುಕ್ತ್ಯವಸ್ಥೆ. ಈ ರೀತಿಯ ಮುಕ್ತರನ್ನು ಆಳ್ವಾರರು ತಮ್ಮ ದಿವ್ಯಪ್ರಬಂಧಗಳಲ್ಲಿ ವರ್ಣಿಸಿದ್ದಾರೆ.

ಜೀವನ್ ಮುಕ್ತಾವಸ್ಥೆಯಲ್ಲಿ ಲಭಿಸುವ ಸುಖವು, ದೇಹ ಪತನಾನಂತರ ದೊರೆಯುವ ಮೋಕ್ಷಸುಖಕ್ಕಿಂತಲೂ ಹೆಚ್ಚು ಶ್ರೇಷ್ಠವಾದುದು. ಅಂತಹ ಜೀವನ್ ಮುಕ್ತಾವಸ್ಥೆಯನ್ನು ಹೊಂದುವುದಕ್ಕೆ ತಕ್ಕ ನಿಧಾನಗಳನ್ನು ಆಳ್ವಾರರು ತಮ್ಮ ದಿವ್ಯಪ್ರಬಂಧಗಳಲ್ಲಿ ನಿರ್ದೇಶಿಸಿದ್ದಾರೆ. ಅಲ್ಲದೆ ಅವರು ತಾವುಗಳೂನೂ

ತಾದೃಶ್ಯವಾದ ಜೀವನ್ ಮುಕ್ತಾವಸ್ಥೆಯನ್ನು ಇಷ್ಟಪಟ್ಟು, ಅದನ್ನು ಪಡೆದು, ಬೇರೆಯದಾದ ಮೋಕ್ಷಸುಖದ ಬಗ್ಗೆ ಉಪೇಕ್ಷೆ ತೋರಿದರೆಂದು ಅಪರ ದಿವ್ಯ ಪ್ರಬಂಧಗಳಿಂದ ಸಾಕ್ಷ್ಯಾಧಾರಗಳು ದೊರೆಯುತ್ತವೆ.

ಈ ಸನ್ನಿವೇಶಕ್ಕೆ ತಕ್ಕಂತಹ ಉದಾಹರಣೆಯನ್ನು ಕೊಡಬಹುದು. ನಮ್ಮಾಳ್ವಾರರು ತಿಳಿಸಿರುವ ಅಭಿಪ್ರಾಯಗಳು ಅವಶ್ಯವಾಗಿ ಗಮನಿಸ ಬೇಕಾದುದೇ !

> ಒನ್‌ರುಣ್ಡು ಶಙ್ಗಣ್ಣಾಲ್ ! ಯಾನ್ ಉರೈಪ್ಪದು, ಉನ್ನಡಿಯಾರ್ಕ್ಕ್
> ಎನ್ ಶೆಯ್‌ವನ್ ಎನ್‌ರೇ ಇರುತ್ತಿನೀ, ನಿನ್ ಪುಹಷಿಲ್
> ವೈಹುಮ್ ತನ್ ಶಿನ್ದೈಯಿಲುಮ್ ಮತ್ತಿನಿದೋ, ನೀ ಅವರ್ಕ್ಕ್
> ವೈಕುನ್ದಮ್ ಎನ್‌ರರುಳಮ್ ವಾನ್ ?

'ಓ ಭಗವಂತಾ ! ನಿನ್ನ ಭಕ್ತರಿಗೆ ನೀನು ಮೋಕ್ಷ ಸುಖವನ್ನು ಪ್ರಸಾದಿಸ ಬಲ್ಲೆಯಾ ? ಹಾಗಿದ್ದಲ್ಲಿ ಅದು ನಿನ್ನ ನಾಮಸ್ಮರಣೆಯಿಂದ ಮಾತ್ರವೇ ನಾನು ಹೊಂದುವ ಆನಂದಕ್ಕಿಂತಲೂ ಘನವಾದುದು ಏನು ? ಕೆಲವು ಮುಮುಕ್ಷರು ಗಳು ಅಲ್ಪ ಉಪಯೋಗಗಳನ್ನು ಅಪೇಕ್ಷಿಸಿ, ಅದಕ್ಕಾಗಿ ಬಹಳವಾಗಿ ಶ್ರಮಿಸಿ, ವ್ಯರ್ಥ ಭ್ರಮೆಯಲ್ಲಿರುವರು. ಇನ್ನು ಕೆಲವರು ಮೋಕ್ಷ ಪದವಿ ಬೇಕೆನ್ನುವ ಆಕಾಂಕ್ಷೆಯನ್ನು ಹೊಂದಿರುವರು. ಆದರೆ ಉತ್ತಮ ಭಕ್ತರು ಇವೆರಡರಲ್ಲಿ ಯಾವುದೊಂದನ್ನೂ ಇಚ್ಛಿಸುವುದಿಲ್ಲ. ಅವರು ಕೇವಲ ಭಗವದ್ ಭಕ್ತಿಯಿಂದ ಮಾತ್ರವೇ ಪರಮಾನಂದವನ್ನು ಹೊಂದುವರು.' (ತಿರುವಾಶಿರಿಯಮ್–3)

ನಮ್ಮಾಳ್ವಾರ್‌ರವರು ಹೊರಗೆಡಹಿರುವ ಇಂತಹ ಅಭಿಪ್ರಾಯಗಳಿಂದಲೇ ಇತರೇ ಆಳ್ವಾರರೂ ಕೂಡ ತಮ್ಮ ತಮ್ಮ ಅಭಿಪ್ರಾಯಗಳನ್ನು ತಮ್ಮ ತಮ್ಮ ದಿವ್ಯಪ್ರಬಂಧಗಳಲ್ಲಿ ಅಭಿವ್ಯಕ್ತಗೊಳಿಸಿದರು.

> ಪಚ್ಚೈಮಾಮಾಲೈ ಪೋಲ್‌ಮೇನಿ ಪ್ಪವಳಮಾಯ್ ಕದುಂಚ್ಚೆಙ್ಗಣ್,
> ಅಚ್ಯುತಾ ಅಮರರೇರೇ ಆಯರ್‌ತಮ್ ಕೊಷುಂದೇಯೆನ್ನುಮ್,
> ಇಚ್ಚುವೈ ತವಿರಯಾನ್ ಪೋಯ್ ಇಂದಿರಲೋಕ ಮಾಳುಮ್,
> ಅಚ್ಚುವೈ ಪೆರಿನುಮ್ ವೇಂಡೇನ್ ಅರಂಗಮಾನಹರುಳಾನೇ ||
>
> (ತಿರುಮಾಲೆ–2)

'ಹೇ ಅಚ್ಯುತಾ ! ದೇವಾದಿದೇವಾ ! ಎಂದು ಸಂಬೋಧಿಸುತ್ತಾ, ಭುವನ

ಮೋಹನನಾದ ಭಗವಂತನ ಕಲ್ಯಾಣಗುಣಗಳನ್ನು ಹಾಡುವುದರಲ್ಲಿ ನನಗೆ ಆನಂದವು ಲಭಿಸುತ್ತಿದೆ. ಆದುದರಿಂದ, ನನಗೆ ಸ್ವರ್ಗಸುಖವಾಗಲಿ, ಮೋಕ್ಷ ಸುಖವಾಗಲಿ ಬೇಕಾಗಿಲ್ಲ. ಅದರ ಸಾಮಾನ್ಯ ಅಪೇಕ್ಷೆಯೂ ನನಗಿಲ್ಲ' ಎಂದು ತೊಂಡರಡಿಪ್ಪೊಡಿ ಆಳ್ವಾರರು ತಿಳಿಸುತ್ತಾರೆ.

ವೀಡದಾನಗಪೋಗವೆ ಮೆಯಿದಿ ವೀತ್ತಿರುನ್ದ ಪೋದಿಲುಮ್
ಕೂಡುಮಾಳೈಯಲ್ಲದೊನ್ದು ಕೊಳ್ವನೋಕುರಿಪ್ಪಿಲೇ

ತಿರುಚ್ಚನ್ದವಿರುತ್ತಮ್-108.

'ಭಗವಂತನ ಸಂದರ್ಶನ ಭಾಗ್ಯವನ್ನು ಹೊಂದಬೇಕೆನ್ನುವ ಆಕಾಂಕ್ಷೆ ಗಿಂತಲೂ ನನಗೆ ಇತರೇ ಯಾವ ರೀತಿಯ ಮೋಕ್ಷಸುಖದಲ್ಲಿಯೂ ಅಪೇಕ್ಷೆ ಇಲ್ಲ' ಎನ್ನುವ ತಿರುಮಷಿಶೈ ಆಳ್ವಾರರು ಮೋಕ್ಷಸುಖಕ್ಕಿಂತಲೂ ಭಗವನ್ನಾಮ ಸ್ಮರಣೆ ಯಿಂದಾಗುವ ಆನಂದವೇ ಮಿಗಿಲಾದುದು ಎಂದು ಸ್ಪಷ್ಟಪಡಿಸಿದ್ದಾರೆ.

ಮೋಕ್ಷವೆನ್ನುವುದು ಒಂದು ಪ್ರತ್ಯೇಕವಾದ ಸ್ಥಾನವಿಶೇಷವೇನೂ ಅಲ್ಲ. ಅದು ಕೇವಲ ಅನುಭೂತಿ ಮಾತ್ರವೇನೇ ! ಎಂದು ನಮ್ಮಾಳ್ವಾರರು ವಿಶದೀ ಕರಿಸಿದ್ದಾರೆ.

ನನ್ರಾಯ್ ಜ್ಞಾನಮ್ ಕಡನ್ದುಪೋಯ್
ನಲ್ ಇಂದಿರಿಯಮ್ ಎಲ್ಲಾಮ್ ಈರ್ತ್ತು,
ಒನ್ರಾಯ್‌ಕ್ಕಿಡನ್ದ ಅರಮ್ ಪೆರುಮ್ ಪಾಷ್
ಉಲಪ್ಪಿಲದನೈ ಉಣರ್ದ್ದುಣರ್ನ್ದು
ಶೆನ್‌ರಾಂಗಿನ್ಬತ್ತುನ್ಬಂಗಳ್ ಶೆತ್ತುಕಳೈನ್ದು ಪಶೈಯತ್ತಾಲ್,
ಅನ್ರೇ ಅಪ್ಪೋದೇ ವೀಡು ಅದುವೇ ವೀಡು ವೀಡಾಮೇ

(ತಿರುವಾಯ್‌ಮೊಷಿ 8-8-6)

ಜ್ಞಾನವು ಲಭಿಸಿದ ಅನಂತರ ಪಂಚೇಂದ್ರಿಯಗಳನ್ನು ವಶಮಾಡಿಕೊಳ್ಳ ಬೇಕು. ಸುಖದುಃಖ ವಿಚಾರಗಳನ್ನು ಮರೆಯಬೇಕು. ಮೋಹವನ್ನು ಪರಿತ್ಯಜಿಸಬೇಕು. ತದನಂತರವೇ ಮೋಕ್ಷಾನಂದವು ಲಭಿಸುವುದು. ಅದೇ ಮೋಕ್ಷ.

'ಮೋಕ್ಷ ಎನ್ನುವುದು ಇನ್ನೆಲ್ಲಿದೆ ? ಸುಖ ಎನ್ನುವುದು ಇನ್ನೆಲ್ಲಿದೆ ? ಸೃಷ್ಟಿ ರಹಸ್ಯಗಳನ್ನು ಚೆನ್ನಾಗಿ ಅರಿತು, ಮೋಹವನ್ನು ತ್ಯಜಿಸುವುದೇ ಮೋಕ್ಷ

ಸುಖ ಎನ್ನುವುದು' (ತಿರುವಾಯ್ ಮೊಳಿ 8-8-7) ಎಂದು ನಮ್ಮಾಳ್ವಾರರು ಮೋಕ್ಷಸ್ವರೂಪದ ದರ್ಶನವನ್ನು ಸ್ಪಷ್ಟವಾಗಿ ತಿಳಿಸುವರು.

ವಿರಹಾಸಕ್ತಿಯನ್ನು ಹೊಂದಿರುವ ನಾಯಕಿಯು ನಾಯಕನಾದ ಶ್ರೀಕೃಷ್ಣನ ಸಾನ್ನಿಧ್ಯವನ್ನು ಅಪೇಕ್ಷಿಸಿ, ಅನುಭವಿಸುವ ಪರಿತಾಪವನ್ನು ಆಳ್ವಾರರು ತಮ್ಮ ದಿವ್ಯಪ್ರಬಂಧಗಳಲ್ಲಿ ರಮಣೀಯವಾಗಿ ವರ್ಣಿಸಿದ್ದಾರೆ. ಹಾಗೆ ವರ್ಣಿಸುವಾಗ ನಾಯಕಿಯ ವಿರಹಾವಸ್ಥೆಯನ್ನು ವಿವರಿಸುವರು. ಅಂತಹ ವಿರಹಾವಸ್ಥೆಯಲ್ಲಿ ತನ್ಮಯತ್ವವಿರುತ್ತದೆ. ಅಂತೆಯೇ ಮೋಕ್ಷಾನಂದವನ್ನು ಹೊಂದುವಾಗ ಪಡೆಯುವ ತನ್ಮಯತ್ವಕ್ಕೂ ಇದಕ್ಕೂ ಯಾವುದೇ ವ್ಯತ್ಯಾಸವೂ ಇಲ್ಲವೆಂದು, ಮೂಲ ವಿರಹಾವಸ್ಥೆಯಲ್ಲೇ ಅನಿರ್ವಚನೀಯವಾದ ಆನಂದವು ಲಭಿಸುತ್ತದೆಯೆಂದೂ ವಿಶದೀಕರಿಸಿದರು.

ಕುಲಶೇಖರಾಳ್ವಾರರು ಸಾಮೀಪ್ಯ ಮುಕ್ತಿಯಲ್ಲಿ ಅಭಿಲಾಷೆಯನ್ನು ಉಳ್ಳವರಾಗಿದ್ದರು. ಭಗವಂತನ ಸಾಮೀಪ್ಯವೇ ಅವರಿಗೆ ಇಷ್ಟವಾದ ವಿಷಯ ವಾಗಿತ್ತು –

ಊನೇರು ಶೆಲ್ವತ್ತು ಉಡಲ್ ಪಿರವಿಯಾರ್ ವೇಣ್ಡೇನ್
ಆನೇರೇಷ್‌ವೆನ್‌ರಾನ್ ಅಡಿವೈತ್ತಿರಮುಲ್ಲಾ ಲ್,
ಕೋನೇರು ಶಜ್ಞವಿಡತ್ತಾನ್‌ತನ್ ವೇಜ್ಞಡತ್ತು,
ಕೋನೇರಿ ವಾಷುಮ್ ಕುರುಹಾಯ್ ಪಿರಪ್ಪೇನೇ.
(ಪೆರುಮಾಳ್ ತಿರುಮೊಷಿ 4–1)

'ನಾನು ಮತ್ತೊಮ್ಮೆ ಮಾನವ ಜನ್ಮವನ್ನು ಎತ್ತುವೆನೆಂದು ಭಾವಿಸುವುದಿಲ್ಲ. ಹಾಗೇನಾದರೂ ಆದರೂ, ಮುಂದಿನ ಜನ್ಮದಲ್ಲಿ ನಾನು ವೇಂಕಟಾಚಲದಲ್ಲಿ ಶ್ರೀನಿವಾಸ ಭಗವಾನನ ದಿವ್ಯ ಸನ್ನಿಧಿಯಲ್ಲಿ ಯಾವುದಾದರೊಂದು ಮರದ ಕೊಂಬೆಯಾಗಿ ಜನಿಸಿದರೂ, ಧನ್ಯನಾಗುವೆನು. ಅಂತಹ ಮಹಾಭಾಗ್ಯವು ನನಗೆ ಲಭಿಸಲಿ.' ಎಂದು ಅವರು ಪ್ರಾರ್ಥಿಸಿ, ಮುಂದುವರೆದು,

ಒಣ್‌ಪವಳಮೇಲ್ಯೆಯುಲವು ತಣ್‌ಪಾರ್ಕಡಲುಳ್,
ಕಣ್ತುಯಿಲುಮ್ ಮಾಯೋನ್ ಕಷಲಿಣೈಹಳ್ ಕಾಣ್ಬದರ್ಕು,
ಪಣ್‌ಪಹರುಮ್ ವಣ್ಡಿನಜ್ಞಳ್ ಪಣ್ಪಾಡುಮ್ ವೇಜ್ಞಡತ್ತು
ಚೆಣ್ ಬಹಮಾಯ್ ನಿರ್ಕುಮ್ ತಿರುವುಡೈಯೇ ನಾವೇನೇ.
(ಪೆರುಮಾಳ್ ತಿರುಮೊಷಿ 4–4)

'ಕ್ಷೀರಸಾಗರದಲ್ಲಿನ ಧವಳ ತರಂಗಗಳನ್ನು ಪರಿಪೂರ್ತಗೊಳಿಸುತ್ತಾ, ವಿರಾಜಮಾನನಾಗಿರುವ ಶೇಷಶಾಯಿ ಭಗವಂತನ ದಿವ್ಯ ಚರಣಾರವಿಂದಗಳನ್ನು ದರ್ಶಿಸುವುದಕ್ಕಾಗಿ, ಗಾನರಸ ಲಹರಿಗಳಲ್ಲಿ ಮುಳುಗಿ ತೇಲುತ್ತಾ ಇರುವ ಭ್ರಮರಗಳು ಮಾಡುವ ಝೇಂಕಾರಗಳಿಂದ ಪ್ರತಿಧ್ವನಿಸುತ್ತಿರುವ ವೇಂಕಟಾಚಲ ದಲ್ಲಿನ ಹೂ ತೋಟಗಳಲ್ಲಿ ನಾನೊಂದು ಚಂಪಕ ಪುಷ್ಪವಾಗಿದ್ದರೆ, ಎಷ್ಟೊಂದು ಸೊಗಸು, ಎಷ್ಟೊಂದು ಪುಣ್ಯ !' ಎಂದು ಆಳ್ವಾರರು ತಮ್ಮ ಹೃದಯಾಂತರಾಳ ದಲ್ಲಿನ ಕೋರಿಕೆಯನ್ನು ಹೊರಚೆಲ್ಲುವರು.

ಈ ರೀತಿಯಲ್ಲಿ ಭಗವಂತನ ಸಾಮೀಪ್ಯ ಸಾನ್ನಿಧ್ಯವೇ ಪರಮಾನಂದ ಸಂಧಾಯಕವೆಂದು ಭಾವಿಸಿರುವ ಕುಲಶೇಖರಾಳ್ವಾರರು ಭಗವತ್ ಸಂದರ್ಶನ ಭಾಗ್ಯವನ್ನು ಕೂಡ ಅನುಪಮ ಅಭಿಲಾಷೆಯೆಂದು ಭಾವಿಸಿದ್ದರೆಂಬುದಕ್ಕೆ ಈ ಕೆಳಗಡೆಯ ಸಾಲುಗಳೇ ಪ್ರಬಲವಾದ ಪ್ರಮಾಣಗಳಾಗಿವೆ–

ತಿರುವರಙ್ಗತ್ತರವಣೈಯಿಲ್ ಪಳ್ಳಿಕೊಳ್ಳುಮ್,
ಮಾಲೋನ್ಗೆ ಕ್ಕಣ್ಡು ಇನ್ಬಕ್ಕಲವಿಯೆಯ್‌ದಿ
ವಲ್ವಿನೈಯೇನ್ ಎನ್‌ರು ಕೊಲೋ ವಾಷುಂ ನಾಳೇ.

(ಪೆರುಮಾಳ್ ತಿರುಮೊಷಿ 1-8)

'ಶ್ರೀರಂಗದಲ್ಲಿ ನಿತ್ಯನಿವಾಸಿಯಾಗಿರುವ ಭಗವಂತನನ್ನು ದರ್ಶನ ಮಾಡಿ, ನನ್ನ ಕಂಗಳು ಎಂದು ಆನಂದಾನುಭವದಿಂದ ತೃಪ್ತಿ ಹೊಂದಬಲ್ಲುವೋ, ಅಂದೇ ನಾನೂ ಧನ್ಯನಾಗುವೆ.'

ಘುಷ್ಯತೇ ಯಸ್ಯ ನಗರೇ ರಂಗಯಾತ್ರಾ ದಿನೇದಿನೇ ಎಂಬ ಸ್ತೋತ್ರಾನು ಸಾರ ಶ್ರೀರಂಗದ ರಂಗನಾಥನ ದರ್ಶನಾರ್ಥವಾಗಿ ಉದ್ವೇಗಗೊಂಡಿರುವ ಕುಲಶೇಖರರು ಭಗವಂತನ ದರ್ಶನೋನ್ಮಾದದಲ್ಲಿ ಮೈಮರೆತಿರುವರು–

ತಿರುವರಙ್ಗತ್ತರವಣೈಯಿಲ್ ಪಳ್ಳಿಕೊಳ್ಳುಮ್,
ಪೋರಾಷಿಯಮ್ಮಾನೈ ಕ್ಕಣ್ಡು ತುಳ್ಳಿ,
ಪೂದತ್ತಿಲ್ ಎನ್ರು ಕೋಲೋ ಪುರಳುವರ್ ನಾಳೇ. (ಪೆ.ತಿ. 1-9)

'ಶ್ರೀರಂಗದಲ್ಲಿರುವ ಪರಮಾತ್ಮನನ್ನು ಆನಂದೋದ್ವೇಗದಿಂದ ನೃತ್ಯ ಸಹಿತ ವಾಗಿ ಸಂಕೀರ್ತನೆ ಮಾಡಿ, ತನ್ಮಯನಾಗಿ, ಎಂದು ಉನ್ಮತ್ತನಾಗುವೆನೋ ? ಅಂತಹ ಶುಭದಿನವೆಂದು ಬರುವುದೋ ?'

ಅಣಿಯರಙ್ಗನ್ ತಿರುಮುತ್ತುತ್ತು, ಅಡಿಯಾರ್ ತಙ್ಗಳ್
ಇನ್ನಮಿಹು ಪೆರುಙ್ಗುಷುವು ಕಣ್ಡು ಯಾನುಮ್
ಇಶೈನ್ದುಡನೇ ಎನ್‌ರು ಕೋಲೋ ಇರುಕ್ಕುಮ್ ನಾಳೇ.

(ಪೆರುಮಾಳ್ ತಿರುಮೊಷಿ 1-10)

'ಶ್ರೀರಂಗದಲ್ಲಿರುವ ಆಲಯ ಪ್ರಾಂಗಣದಲ್ಲಿ ಭಗವಂತನನ್ನು ಸ್ತುತಿಸುತ್ತಾ, ಆನಂದಮಗ್ನರಾಗಿರುವ ಭಕ್ತರೊಂದಿಗೆ ಕಲೆತು, ಮೆಲುತು, ಅಂತ್ಯವಿಲ್ಲದ ಆನಂದದೊಂದಿಗೆ, ಅವನ ಸಂಗವನ್ನು ಯಾವಾಗ ಪಡೆಯುವೆನೋ ?'

ಹೀಗೆಂದು ಕುಲಶೇಖರಾಳ್ವಾರರು ಭಗವಂತನ ಸಂದರ್ಶನ ಭಾಗ್ಯವನ್ನು ಪಡೆಯುವುದಕ್ಕೆ ಹಾತೊರೆಯುತ್ತಾ, ಭಗವಂತನ ಭಕ್ತರೊಂದಿಗೆ ಕಲೆತು, ಭಗವನ್ನಾಮ ಸಂಕೀರ್ತನೆಯನ್ನು ಮಾಡುತ್ತಾ ಬ್ರಹ್ಮಾನಂದವನ್ನು ಹೊಂದುವುದಕ್ಕೆ ಅಭಿಲಾಷೆ ಉಳ್ಳವರಾಗಿದ್ದಾರೆಂಬುದನ್ನು ಅವರ ದಿವ್ಯಪ್ರಬಂಧಗಳಿಂದಲೇ ಅಭಿವ್ಯಕ್ತಗೊಳ್ಳುತ್ತದೆ.

ಆದುದರಿಂದ ಭಗವದನುಗ್ರಹವೇ ಮೋಕ್ಷ ಪ್ರಾಪ್ತಿಗೆ ಕಾರಣವೆಂದೂ, ಅಂತಹ ಭಗವದನುಗ್ರಹವನ್ನು ಸಂಪಾದಿಸುವುದೇ ಮುಮುಕ್ಷುಗಳಿಗೆ ಅತ್ಯಂತ ಆವಶ್ಯಕವೆಂದು ಆಳ್ವಾರರು ಈ ಮೂಲಕ ತಿಳಿಸಿರುತ್ತಾರೆ.

ಯೇ ಮಾನವಾ ವಿಗತರಾಗ ಪರಾವರಜ್ಞಾಃ
ನಾರಾಯಣಂ ಸುರಗುರುಂ ಸತತಂ ಸ್ಮರಂತಿ ।
ಧ್ಯಾನೇನ ತೇನ ಹತ ಕಿಲ್ಬಿಷ ಚೇತನಾ ಸ್ತೆ
ಮಾತುಃ ಪಯೋಧರ ರಸಂ ನ ಪುನಃ ಪಿಬಂತಿ ||

## ಆಳ್ವಾರರ ಕೃತಿಗಳಲ್ಲಿನ ವೈಶಿಷ್ಟ್ಯತೆ

ಸಂಘ ಸಾಹಿತ್ಯದ ನಂತರ ಕಾಣಿಸಿಕೊಂಡ ಆಳ್ವಾರರುಗಳು ಒಟ್ಟು ಹನ್ನೆರಡು. ಇವರಲ್ಲಿ ಮೊದಲ ಮೂವರು ಆಳ್ವಾರರುಗಳು ಭಗವದನುಭವಕ್ಕೆ ಅಡಿಪಾಯ ಹಾಕಿದವರು.

1. ಮೊದಲಾಳ್ವಾರರು :

ಈ ಮೂವರಲ್ಲಿ ಮೊದಲಿಗರು ಪೊಯ್‌ಹೈ ಆಳ್ವಾರರು. ಕಂಚಿಯ ಯಥೋಕ್ತಕಾರಿ ಸನ್ನಿಧಿಯ ಪದ್ಮ ಸರೋವರದಲ್ಲಿ ಪಾಂಚಜನ್ಯಾಂಶದಲ್ಲಿ ಅವತರಿಸಿದವರಾದ ಕಾರಣ ಇವರಿಗೆ (ಪೊಯ್‌ಹೈ=ತಟಾಕ) ಈ ಅನ್ವರ್ಥ ನಾಮ. ಇತರೇ ಇಬ್ಬರಂತೆ ಇವರು ಪಡೆದ ಭಗವದನುಭವವನ್ನು 'ವೈಯಮ್ ತಹಳಿಯಾಹ' ಎಂದು ಆರಂಭಿಸಿ ನೂರು ಪಾಶುರಗಳನ್ನು ಹಾಡಿದರು. ಇದೇ 'ಮೊದಲ್ ತಿರುವಂದಾದಿ.' ಭೂಮಿಯೇ ಹಣತೆಯಾಗಿ, ತುಂಬುಗಡಲೇ ತುಪ್ಪವಾಗಿ, ಸೂರ್ಯನೇ ಬೆಳಕಾಗಲು ಎಡರುಗಳೆಲ್ಲ ನೀಗಲಿ ಎಂದು ಚಕ್ರಪಾಣಿಯ ಪಾದಕ್ಕೆ ಈ ನುಡಿಮಾಲೆಯನ್ನು ಅರ್ಪಿಸಿದ್ದೇನೆ' ಎಂದು ಇವರು ತಮ್ಮ ಹೃದಯವನ್ನು ತೋಡಿಕೊಂಡರು.

ಮೊದಲ್ ತಿರುವಂದಾದಿಯನ್ನು 'ಇಯಪ್ಪಾ' ವಿಭಾಗದಲ್ಲಿ ಸೇರಿಸ ಲಾಗಿದೆ. ಇದರಲ್ಲಿನ ಪಾಶುರಗಳನ್ನು 'ಅಂದಾದಿ' ಎನ್ನುವ ಛಂದಸ್ಸಿನಲ್ಲಿ ರಚಿಸ ಲಾಗಿದೆ. 'ಅನ್ದಾದಿ' ಅಂದರೆ ಮೊದಲ ಪಾಶುರದ ಕಡೆಯ ಪದವು ನಂತರದ ಪಾಶುರದ ಮೊದಲ ಪದವಾಗಿ ಪ್ರಯೋಗಿಸುವ ಒಂದು ಕವಿತಾ ವಿಶೇಷ. 'ತಿರು' ಎನ್ನುವ ಪದಕ್ಕೆ ಲಕ್ಷ್ಮಿ, ಕಾಂತಿ, ಸುಂದರ, ಪೂಜ್ಯತೆ ಎನ್ನುವ ಐದು ಅರ್ಥ ಗಳಿವೆ. 'ಮೊದಲ್' ಎಂದರೆ ಮೊದಲನೆಯದಾದ ಎನ್ನುವ ಅರ್ಥ. ಒಟ್ಟಿನಲ್ಲಿ 'ಮೊದಲ್ ತಿರುವಂದಾದಿ' ಎನ್ನುವುದರ ಅರ್ಥ ಮೇಲಿನ ವಿವರಣೆಯಿಂದ ಸುಸ್ಪಷ್ಟ.

ಇದರಲ್ಲಿ ಮುಖ್ಯವಾಗಿ ಭಕ್ತಿ, ತತ್ತ್ವ, ತಾತ್ತ್ವಿಕ ರಹಸ್ಯಗಳು–ಇತ್ಯಾದಿ ಗಳನ್ನು ವಿಶದೀಕರಿಸಲಾಗಿದೆ. ಮುಕ್ತಿಗೆ ಭಕ್ತಿಮಾರ್ಗವೊಂದೇ ಸುಲಭವಾದ ಮಾರ್ಗ ಎಂಬುದನ್ನು ಇದರಲ್ಲಿ ಸ್ಪಷ್ಟೀಕರಿಸಲಾಗಿದೆ.

ಶ್ರೀಕೃಷ್ಣನ ಬಾಲಲೀಲೆಗಳಲ್ಲಿ ಈ ಕವಿಯ ಹೃದಯವು ಲೀನವಾದಂತೆ– ಈ ಪ್ರಬಂಧದಲ್ಲಿನ ಕೆಲವೊಂದು ಪಾಶುರಗಳ ಮುಖಾಂತರ ತಿಳಿದುಬರುತ್ತದೆ.

ಇನ್ನೂ ಕೆಲವು ಪಾಶುರಗಳಲ್ಲಿ ತಿರುವರಂಗಮ್ (ಶ್ರೀರಂಗಂ), ತಿರುವೇಂಗ ಡಮ್ (ತಿರುಮಲೆ) ಮುಂತಾದ ದಿವ್ಯಕ್ಷೇತ್ರಗಳಲ್ಲಿ ವಿರಾಜಮಾನನಾಗಿರುವ ಅರ್ಚಾಮೂರ್ತಿಗಳನ್ನು ಸ್ತುತಿಸಲಾಗಿದೆ.

ಎರಡನೆಯವರು ಪೂದತ್ತಾಳ್ವಾರ್‌ರವರು. ಇವರೂ ಕೂಡ ಅಂದಾದಿ

ಶೈಲಿಯಲ್ಲಿಯೇ ತಮ್ಮದಾದ 'ಇರಂಡಾಂ ತಿರುವಂದಾದಿ'ಯನ್ನು ರಚಿಸಿದ್ದಾರೆ. ಇವರು ದೇವರ ಆತ್ಮವೆಂಬ ನಂಬಿಕೆ. ನಿರೀಶ್ವರವಾದಿಗಳನ್ನು ಇವರು ತಮ್ಮ ಭಕ್ತಿಯ ಕೆಚ್ಚಿನಿಂದ ಪರಾಜಯಗೊಳಿಸಿ, ಅವರು ನೆಲವನ್ನು ಅಪ್ಪುವಂತೆ ಮಾಡಿದ್ದರು. 'ಅನ್ಬೇತ ಹಳಿಯಾಹ' ಎಂದು ಪ್ರಾರಂಭವಾಗುವ ಇವರ ಕೃತಿಯು 'ಭಕ್ತಿಯೇ ಹಣತೆ; ಆಸೆಯೇ ತುಪ್ಪ. ಆನಂದದಿಂದ ಕರಗುವ ಚಿಂತೆಯೇ ಅದರಲ್ಲಿ ಇಡುವ ಬತ್ತಿ. ಹೀಗೆ ನನ್ನ ಆತ್ಮವು ಕರಗಿ ನಾರಾಯಣನಿಗೆ ಜ್ಞಾನಜ್ಯೋತಿಯನ್ನು ಹಚ್ಚಿದೆನು.'

ಇವರ ಹೃದಯ ಕುಹರದಿಂದ ಹೊರಬಂದ ಭಾವನೆಗಳ ಪರಂಪರೆಗಳು ಅನುಭೂತಿ ಪದರಗಳಾಗಿ ನಮಗೆ ಕಾಣಿಸುತ್ತವೆ. ಈ ಪಾಶುರಗಳಲ್ಲಿ ಮುಖ್ಯವಾಗಿ ಭಗವದ್ವೈಭವ, ಭಕ್ತಿ ಪ್ರಭಾವ, ಶರಣಾಗತಿ ಪ್ರಾಶಸ್ತ್ಯ ಮುಂತಾದುವುಗಳನ್ನು ವಿಶದೀಕರಿಸಲಾಗಿದೆ. ಅಲ್ಲದೆ ವಿಷ್ಣುವಿಗೆ ಸಂಬಂಧಪಟ್ಟ ವಿವಿಧ ಆಕಾರಗಳನ್ನು, ಸುಪ್ರಸಿದ್ಧವಾದ ಕೆಲವು ವೈಷ್ಣವಾಲಯಗಳನ್ನು ವಿವರಿಸಲಾಗಿದೆ. ಪ್ರಕೃತಿ ಸೌಂದರ್ಯವನ್ನಂತೂ ವಿಪುಲವಾಗಿ ವರ್ಣಿಸಿದ್ದಾರೆ.

ಬ್ರಹ್ಮಜ್ಞಾನದಿಂದಲೇ ಆತ್ಮಸದ್ಭಾವವನ್ನು ಪಡೆದವರನ್ನು 'ಭೂತ' ಎಂಬ ಪದಪ್ರಯೋಗದಿಂದ ಕರೆಯಲಾಗುವುದು ಇವರು ಅಂತಹ ಭೂತರಾಗಿದ್ದು, ಭೂತರಲ್ಲಿ ಅಗ್ರಗಣ್ಯರಾದವರಾದುದರಿಂದ ಮೂರನೆಯವರಾದ ಇವರನ್ನು 'ಪೇಯಾಳ್ವಾರ್' ಎಂದು ಕರೆದರು. ಇವರಿಗೆ ಪರಮಾತ್ಮನಲ್ಲಿ ಅಪಾರವಾದ ಭಕ್ತಿ. ಹಾಡಿ, ನಕ್ಕು, ನಲಿದು, ಅತ್ತು, ಕಾಡಿ, ಬೇಡಿ ಪರಮಾತ್ಮನಲ್ಲಿ ಮೊರೆಯಿಡುತ್ತಿದ್ದರು. ಜನರಿಗೆ ಇವರು ಮತಿಭ್ರಾಂತರಂತೆ ಕಂಡರೆ ಆಶ್ಚರ್ಯವಿಲ್ಲ. ಆದರೆ ಇವರು ಜನರಲ್ಲಿನ ಭ್ರಾಂತಿಯನ್ನು ತುಂಡರಿಸುತ್ತಿದ್ದುದರಿಂದ, ಇವರಿಗೆ ದೇವರ ಹುಚ್ಚು ಹತ್ತಿತ್ತು.

'ಶ್ರೀದೇವಿಯನ್ನು ಕಂಡೆ; ಹೊನ್ನೊಡಲ ಕಂಡೆ, ಬೆಳಗುವ ಸೂರ್ಯನ ಅಣಿಹೊಗರ ಕಂಡೆ, ಯುದ್ಧದಲ್ಲಿ ಕೆರಳುವ ಚಕ್ರವನ್ನು ಕಂಡೆ, ಅಂದವಾದ ಬಲಮುರಿ ಶಂಖವಸ್ತುವನ್ನು ಕಂಡೆ–ನನ್ನ ಕಡಲ್ವಣ್ಣನ ಬಳಿಯಲ್ಲಿ' ಎಂದು ಹೇಳಿದ ಪೇಯಾಳ್ವಾರ್‌ರವರು ತಮ್ಮ 'ಮೂನ್ರಾಂ ತಿರುವಂದಾದಿ' ಎನ್ನುವ ನೂರು ಪಾಶುರಗಳಲ್ಲಿ ಇದೇ ಸಾರವನ್ನು ತುಂಬಿಸಿದ್ದಾರೆ. ತಿರುವಂದಾದಿ' ವ್ಯಕ್ತಿ ವಿಶೇಷದಲ್ಲಿರುವ ಈ ಕೃತಿಯು 'ಇಯಪ್ಪಾ' ವಿಭಾಗದಲ್ಲಿ ಸೇರಿಸಲಾಗಿದೆ.

ಈ ಪಾಶುರಗಳಲ್ಲಿ ಭಕ್ತಿಪರವಶವಾದ ಈ ಆಳ್ವಾರರ ಹೃದಯದ ಭಾವವನ್ನು ಹೊರಗೆಡಹುತ್ತದೆ ಪಾಷಾಣ ಸದೃಶವಾದ ಹೃದಯವನ್ನೂ ಕೂಡ ಕರಗುವಂತೆ ಮಾಡುವ ಪಾಶುರಗಳಿವು. ಇವುಗಳನ್ನು ರಚಿಸಿದ ಪೇಯಾಳ್ವಾರರು ವೇದಗಳು, ಉಪನಿಷತ್ತುಗಳು, ಭಗವದ್ಗೀತೆ, ಎಷ್ಟೋ ಧರ್ಮಶಾಸ್ತ್ರಗಳನ್ನು ಮಥಿಸಿ, ಅವುಗಳಲ್ಲಿರುವ ವಿಜ್ಞಾನ ಸಂಪತ್ತನ್ನು ಸಂಪೂರ್ಣವಾಗಿ ಸಮುಪಾರ್ಜಿಸಿರುವುದು ಈ ಪಾಶುರಗಳಿಂದ ವ್ಯಕ್ತವಾಗುವುದು. ಈ ಪಾಶುರಗಳಲ್ಲಿ ತಾತ್ತ್ವಿಕ ರಹಸ್ಯಗಳನ್ನೆಷ್ಟೋ ವಿಶದೀಕರಿಸಲಾಗಿದೆ. ಅಲ್ಲದೆ ಮಹಾವಿಷ್ಣುವಿಗೆ ಸಂಬಂಧಿಸಿದ ವಿವಿಧ ಅವತಾರಗಳು, ಪ್ರಕೃತಿ ಸೌಂದರ್ಯದ ವಿಶೇಷತೆಗಳು ಹಾಗೂ ಅವುಗಳಲ್ಲಿ ಕಂಡುಬರುವ ಪರಮಾತ್ಮನ ಪ್ರತಿಮಾಕಾರ-ಇತ್ಯಾದಿಗಳನ್ನು ಆಕರ್ಷಕ ರೀತಿಯಲ್ಲಿ ಈ ಆಳ್ವಾರರು ಚಿತ್ರಿಸಿದ್ದಾರೆ. ಪರಮಾತ್ಮನ ಸೌಷ್ಠ್ಯರೂಪದ ಪರಮಾವಧಿಯನ್ನು ಜಗತ್ತಿನಾದ್ಯಂತ ಕಾಣುವ ಇವರಿಗೆ ಎಲ್ಲೆಲ್ಲೂ ಆತನೇ ಕಾಣುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ.

**2. ತಿರುಮಳಿಶೈ ಆಳ್ವಾರರು :**

ಸುದರ್ಶನಾಂಶ ಸಂಭೂತರಾದ ಇವರು ಬಾಲ್ಯದಿಂದಲೇ ಭಗವದ್ಗುಣಾನುಭವವನ್ನು ಧಾರಕ ಪೋಷಕ ಭಾಗ್ಯಗಳಾಗಿದ್ದುವು. ಬಾಲ್ಯದಲ್ಲಿಯೇ ಸರ್ವ ಮತಗಳ ಸಾರವನ್ನೂ ಪರಿಶೋಧಿಸುತ್ತಾ ಬಂದ ಇವರು 'ಶಿವವಾಕ್ಕಿಯರ್' ಎಂಬ ಹೆಸರನ್ನು ಹೊಂದಿ ಶೈವಮತವನ್ನು ಅನುಸರಿಸಿದರು. ನಂತರ ಪೇಯಾಳ್ವಾರರ ಪ್ರಭಾವಕ್ಕೆ ಒಳಗಾಗಿ ಶ್ರೀವೈಷ್ಣವರಾದರು. ಪರಿಣಾಮವಾಗಿ ಇವರು ಶ್ರೀಮನ್ನಾರಾಯಣನ ಆಳವಾದ ಭಕ್ತರಾಗಿ 'ಭಕ್ತಿಸಾರ' ಎಂಬ ಹೆಸರನ್ನು ಹೊಂದಿದರು. ಮೊದಲಾಳ್ವಾರರೊಂದಿಗೆ ಭಗವದ್ಗುಣಾನುಭವದಲ್ಲಿ ಲೀನವಾಗಿದ್ದರು. ಅನೇಕ ದಿವ್ಯಕ್ಷೇತ್ರಗಳನ್ನು ದರ್ಶಿಸಿ, ಕುಂಭಕೋಣದಲ್ಲಿ ಭಗವದ್ಸೇವೆಯಲ್ಲಿ ಮಗ್ನರಾದರು.

ಭಕ್ತಿ ಪ್ರಮುಖವಾದ ಮೊದಲಾಳ್ವಾರರ ತತ್ತ್ವ ಚಿಂತನೆಯನ್ನು ಇವರೂ ಅನುಸರಿಸಿ, ತತ್ತ್ವಾರ್ಥ ಚಿಂತನೆಯಲ್ಲಿ ತೊಡಗಿದರು. ಹಲವು ದೇವತೆಗಳನ್ನು ಪೂಜಿಸುವ ಪದ್ಧತಿಯನ್ನು ಅಲ್ಲಗಳೆದು, ಏಕದೇವೋಪಾಸನೆಯನ್ನು ಎತ್ತಿ ತೋರಿದರು.

ಇವರು ತಮ್ಮ ಭಾವನಾ ಪ್ರಪಂಚದಿಂದ ಹೊರಹೊಮ್ಮಿದ ಅನುಭೂತಿ

ಗಳನ್ನು ಉಪಯೋಗಿಸಿಕೊಂಡು, ಅನೇಕ ಗ್ರಂಥಗಳನ್ನು ರಚಿಸಿದರು. ಒಮ್ಮೆ ಅದೇನು ಕಾರಣವೋ ಏನೋ, ಇವರು ತಾವು ರಚಿಸಿದ ಗ್ರಂಥಗಳನ್ನೆಲ್ಲ ಕಾವೇರಿ ನದಿಯಲ್ಲಿ ಎಸೆದುಬಿಟ್ಟರಂತೆ. ಆ ಪ್ರವಾಹದಲ್ಲಿ ಎಲ್ಲ ಗ್ರಂಥಗಳೂ ಹೊಡೆದು ಕೊಂಡುಹೋಗಿ, ಕೇವಲ ಎರಡು ಗ್ರಂಥಗಳು ಮಾತ್ರ ತೀರವನ್ನು ಸೇರಿದುವಂತೆ-ಅವೇ 'ನಾನ್ಮುಹನ್‌ತಿರುವಂದಾದಿ' ಹಾಗೂ 'ತಿರುಚ್ಚನ್ದ ವಿರುತ್ತಮ್' ಎನ್ನುವವು. ಇವನ್ನು ಅವರ ಭಕ್ತರು ನಂತರ ಸಂಗ್ರಹಿಸಿಟ್ಟರಂತೆ. ಈ ರೀತಿಯಲ್ಲಿ ನಾಲಾಯಿರ ದಿವ್ಯಪ್ರಬಂಧದಲ್ಲಿ ಸೇರಿಸಲು ಯೋಗ್ಯವಾದ ಕೃತಿಗಳು ಇವೇ ಎಂದು ಭಗವಂತನು ಈ ರೀತಿಯಲ್ಲಿ ತೀರ್ಮಾನ ನೀಡಿದನೆಂದು ಒಂದು ಕಿಂವದಂತಿ ಪ್ರಚಾರದಲ್ಲಿದೆ.

ಈ ಆಳ್ವಾರರು ಪರಮಾತ್ಮನ ಅಂತರತತ್ವ ರಹಸ್ಯವನ್ನು ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ. ಅಲ್ಲದೆ ಅರ್ಚಾರೂಪದ ದಿವ್ಯತ್ವವನ್ನು ಬಹಳ ಸುಂದರವಾಗಿ, ಅಚ್ಚುಕಟ್ಟಾಗಿ ಇವರು ತಮ್ಮ ಪಾಶುರಗಳಲ್ಲಿ ನಿರೂಪಿಸಿದ್ದಾರೆ.

ಭಕ್ತಿಸಾರರ ಕವಿತ್ವವು ಗಹನವಾದುದೂ, ಪಾಂಡಿತ್ಯಪೂರ್ಣವಾದುದೂ, ಸ್ಫೂರ್ತಿದಾಯಕವಾದುದೂ ಆಗಿದೆ. ಪ್ರಸ್ತುತ ಜನ್ಮದ ಹಿಂದಿನ ಜನ್ಮದಲ್ಲಿ ಪರಾತ್ಪರನು ಸ್ಥಿತಿತ್ರಯಗಳಲ್ಲಿ ಇದ್ದನೆಂತಲೂ, ಸಾದಿರ್ಭಾವಾತ್ಪರವು ಆ ಸ್ಥಿತಿತ್ರಯವನ್ನು ತ್ಯಜಿಸಿ, ಸ್ವೀಯ ಕುಹರಾಂತರ್ವ್ಯಾಪಿಯಾಗಿ ಇರುವನೆಂತಲೂ ಭಕ್ತಿಸಾರರು ತಿಳಿಸುತ್ತಾರೆ.

'ವಿಶಿಷ್ಟಾದ್ವೈತ ತತ್ತ್ವವು ಶಾಸ್ತ್ರಸಮ್ಮತವಾದುದು. ಪ್ರತಿ ಮಾನವನೂ ಪ್ರಾಪಂಚಿಕ ಜೀವನದಲ್ಲಿ ಉದಾತ್ತ ಭಾವನೆಗಳನ್ನೂ, ಭಗವದ್ ಭಕ್ತಿಯನ್ನೂ, ಪ್ರೇಮತತ್ತ್ವವನ್ನೂ ಬೆಳೆಯಿಸಿಕೊಂಡು ಉತ್ತಮ ಜ್ಞಾನವನ್ನು ಪಡೆಯ ಬೇಕು. 'ಆತ್ಮವತ್ ಸರ್ವಭೂತಾನಿ' ಎಂದು ಭಾವಿಸಿಕೊಳ್ಳಬೇಕು. ನಮ್ಮ ಜೊತೆಯ ಮಾನವರೊಂದಿಗೆ ಪ್ರೇಮದಿಂದಿರುತ್ತಾ, ಕಾಲಕ್ರಮೇಣ ಪರಮಾತ್ಮನ ಬಗ್ಗೆ ಅನುರಾಗವನ್ನು ಹೊಂದುವಂತಾಗಬೇಕು' ಎಂಬುದೇ ತಿರುಮಳಿಶೈ ಆಳ್ವಾರರ ತತ್ತ್ವಬೋಧೆಯಾಗಿದೆ

'ನಾನ್ಮುಹನ್ ತಿರುವಂದಾದಿ'ಯಲ್ಲಿ ಅಂದಾದಿ ವೃತ್ತದಲ್ಲಿ ರಚಿಸಲ್ಪಟ್ಟ 96 ಪಾಶುರಗಳಿವೆ. ಪರಮಾತ್ಮನಾದ ವಿಷ್ಣುವಿಗೆ ಬ್ರಹ್ಮರುದ್ರೇಂದ್ರಾದಿಗಳೆಲ್ಲರೂ ಕಿಂಕರಪ್ರಾಯರೆಂದು, ಈ ದಿವ್ಯಪ್ರಬಂಧದಲ್ಲಿ ಸ್ಪಷ್ಟೀಕರಿಸಲ್ಪಟ್ಟಿದೆ. ಅಲ್ಲದೆ ಭಗವದ್ವೈಭವ, ಭಕ್ತಿಪ್ರಭಾವ ಇತ್ಯಾದಿಗಳನ್ನು ಇದರಲ್ಲಿ ವರ್ಣಿಸಲ್ಪಟ್ಟಿದೆ.

ಸಾರರಹಿತವಾದ ಸಂಸಾರವನ್ನು ಸತ್ಯವಾಗಿ, ನಿತ್ಯವಾಗಿ ಭಾವಿಸದೆ, ಭಗವತ್ ಪಾದಾರವಿಂದಗಳನ್ನು ಆಶ್ರಯಿಸಿ, ಅವನ್ನೇ ಧ್ಯಾನಿಸಿ, ಆತನಲ್ಲಿ ಶರಣಾಗತಿ ಹೊಂದಿದ ಪ್ರಪನ್ನರಿಗೆ ಲಭಿಸುವ ಆನಂದವು ಅತ್ಯಧಿಕವಾಗಿ ಅಭಿವರ್ಣಿಸ ಲಾಗಿದೆ. ಅಷ್ಟೇ ಅಲ್ಲದೆ ಈ ಕೃತಿಯಲ್ಲಿ ಪ್ರಕೃತಿ ಸೌಂದರ್ಯವನ್ನು ರಮಣೀಯ ವಾಗಿ ವರ್ಣಿಸಲ್ಪಟ್ಟಿದೆ.

'ತಿರುಚ್ಚಂದವಿರುತ್ತಂ' ಎಂಬುದು ಒಂದು ವೇದಾಂತ ಗ್ರಂಥ. ಇದರಲ್ಲಿ 120 ಪಾಶುರಗಳಿದ್ದು, ವಿವಿಧ ರಾಗ, ತಾಳ ಸಹಿತವಾಗಿ ಅನುಗುಣವಾಗಿ ರಚಿತವಾಗಿದೆ. ಈ ಕೃತಿಯ ಪೂರ್ವಾರ್ಧದಲ್ಲಿ ಶ್ರೀವೈಷ್ಣವ ಧರ್ಮವನ್ನು ವಿಪುಲೀಕರಿಸಲಾಗಿದೆ. ಉತ್ತರಾರ್ಧದ ಕೆಲವು ಪಾಶುರಗಳಲ್ಲಿ ವಿರಹ ವೇದನೆ ಯನ್ನು ಅನುಭವಿಸುತ್ತಿರುವ ನಾಯಿಕೆ, ತನ್ನ ಪ್ರಿಯತಮನ ಪರವಾಗಿ ಪರಿತಪಿ ಸುವ ರೀತಿಯು ಆಳ್ವಾರರು ತಮ್ಮ ಪ್ರಿಯಕರನಾದ ಭಗವಂತನಿಗಾಗಿ ವಿಶೇಷ ವಾಗಿ ಪರಿತಪಿಸಿದಂತೆ ವರ್ಣಿಸಲಾಗಿದೆ.

ನಾಯಕೀ ನಾಯಕರ ವಿರಹ ವೇದನೆ, ಭಕ್ತನಿಗೆ ಭಗವಂತನ ಮೇಲಿನ ಆಕಾಂಕ್ಷೆ–ಇವು ಹನ್ನೆರಡು ಆಳ್ವಾರರಲ್ಲಿಯೂ ಸರ್ವೇ ಸಾಧಾರಣವಾಗಿ ಕಂಡು ಬರುತ್ತಲೇ ಇದೆ. ಆದರೆ ಅಂತಹ ಭಾವ ಪರಂಪರೆಗಳನ್ನು ಪ್ರಕಟಿಸುವ ವಿಷಯ ದಲ್ಲಿ ತಿರುಮಳಿಶೈ ಆಳ್ವಾರರೇ ಮೊದಲಿಗರು. ಈ ಭಾವ ಪರಂಪರೆಯು ಇವರಲ್ಲಿ ಪರಿಪೂರ್ಣವಾಗಿದ್ದು, ಪರಾಕಾಷ್ಠತೆಯನ್ನು ಹೊಂದಿದ್ದರು ಎಂಬುದನ್ನು 'ತಿರುಚ್ಚನ್ದ ವಿರುತ್ತಮ್' ಪ್ರಬಂಧವನ್ನು ಓದಿದ ಪ್ರತಿಯೊಬ್ಬರೂ ಸುಲಭವಾಗಿ ಗ್ರಹಿಸಬಲ್ಲರಾಗಿರುತ್ತಾರೆ.

ಈ ಆಳ್ವಾರರ ಕಾವ್ಯಶೈಲಿ ಕಠಿಣವಾದುದಾದರೂ, ಪ್ರತಿಭಾನ್ವಿತವಾದ ಕಾವ್ಯಮಯ ಶೈಲಿಯಾಗಿದೆ. ಇವರ ಕೃತಿಗಳಲ್ಲಿ ವೇದಗಳ ಸಾರ ಹಾಗೂ ಆಗಮಗಳ ತಿರುಳು ತುಂಬಿರುತ್ತದೆ.

'ಈ ಸಮಸ್ತ ಜಗತ್ತೂ ಭಗವಂತನಲ್ಲಿಯೇ ಹುಟ್ಟಿ, ಅಳಿಯುತ್ತದೆ. ಈ ಜಗತ್ತನ್ನೆಲ್ಲ ಸೃಷ್ಟಿಸಿ, ಅದರಲ್ಲಿಯೇ ಅವತಾರಗಳನ್ನೆತ್ತಿ, ಅದಕ್ಕೆ ಅಂಟಿಕೊಳ್ಳದ ಸೂಕ್ಷ್ಮಾತಿಸೂಕ್ಷ್ಮ ವಸ್ತು. ಜಗತ್ತೇ ಅವನ ಶರೀರ, ಆತ್ಮಗಳು. ಅದುದರಿಂದ ಭಗವಂತನಿಗೂ, ಜೀವಿಗೂ ಎಡಬಿಡದ, ಅಳಿಸಲಾರದ ಸಂಬಂಧವಿದೆ.

'ಭಗವಂತನೇ ಸ್ವಾಮಿ, ಜೀವಿಯೇ ದಾಸ; ದೇವರು ನಿಯಂತ್ರಕ,

ಜೀವಿಯು ನಿಯಂತ್ರಿತ. ಅಂತಹ ಪರಮಾತ್ಮನನ್ನು ತಪಸ್ಸು, ಕರ್ಮಗಳಿಂದ ಹೊಂದುವುದು ಸಾಧ್ಯವಿಲ್ಲ. ಅವನನ್ನು ನವವಿಧ ಭಕ್ತಿಯಿಂದಲೇ ಪಡೆಯಬೇಕು.

'ಪರಮಾತ್ಮ, ಪ್ರಪನ್ನ-ಇಬ್ಬರೂ ಒಬ್ಬರನ್ನು ಬಿಟ್ಟು ಮತ್ತೊಬ್ಬರು ಇರಲಾರರು. ಶ್ರೀಮನ್ನಾರಾಯಣನ ಕೃಪೆಗೆ ಮುಮುಕ್ಷುಗಳು ಸದಾ ಪಾತ್ರರು; ಆತನ ಪಾದಗಳೇ ಅವನಿಗೆ ಗತಿ.'-ಇವು ತಿರುಮಳಿಶೈ ಆಳ್ವಾರರ ಕೃತಿಗಳಲ್ಲಿ ತತ್ತ್ವಸಾರಗಳು.

ಈ ಭಾವನೆಗಳನ್ನೆಲ್ಲ ಶ್ರೀ ಯಾಮುನರು ತಮ್ಮ 'ಪುರುಷ ನಿರ್ಣಯ' ಎನ್ನುವ ಗ್ರಂಥದಲ್ಲಿ ಉಪಯೋಗಿಸಿಕೊಂಡಿದ್ದಾರೆ.

**3. ತೊಂಡರಡಿಪ್ಪೊಡಿ ಆಳ್ವಾರರು :**

ವಿಪ್ರನಾರಾಯಣರೆಂಬ ವಿಪ್ರಕುಮಾರರಾಗಿದ್ದ ಇವರು ಸಕಲ ವಿದ್ಯಾ ಪಾರಂಗತರಾಗಿ ಜ್ಞಾನಾನುಷ್ಠಾನ ಸಂಪದ್ಯುಕ್ತರಾಗಿ ಪರಮ ಸತ್ತ್ವನಿಧಿಗಳಾಗಿ ಬೆಳಗಿದವರು. ಶ್ರೀರಂಗನಾಥನಿಗೆ ಪುಷ್ಪಮಾಲೆಯನ್ನು ಅರ್ಪಿಸುವ ಕೈಂಕರ್ಯ ದಲ್ಲಿ ನಿರತರಾಗಿದ್ದ ಇವರು ನರ್ತಕಿಯೋರ್ವಳಲ್ಲಿ ಅನುರಕ್ತರಾಗಿ, ನಂತರ ಪರಮ ದೈವಭಕ್ತರಾಗಿ ಪರಿವರ್ತನೆಗೊಂಡ ರೀತಿ ತುಂಬಾ ರೋಚಕವಾದ ಕಥಾನಕ. ಶ್ರೀವೈಷ್ಣವರ ಶ್ರೀಪಾದಧೂಳಿಯಾಗಿ, ಅವರಿಗೆ ದಾಸಾನುದಾಸರಾಗಿ 'ಭಕ್ತಾಂಘ್ರಿ ರೇಣು' ಎಂಬ ಹೆಸರನ್ನು ಪಡೆದರು. ಭಗವಂತನ ಅರ್ಚಾವತಾರದಲ್ಲಿ ಅದರಲ್ಲೂ ಶ್ರೀರಂಗದ ರಂಗನಾಥನಲ್ಲಿ ಅಚಲ ಭಕ್ತಿಯನ್ನುಳ್ಳ ಇವರು, ಭಗವದನುಭವ ಜನ್ಯವಾದ ಪ್ರೀತ್ಯಾತಿಶಯಗಳನ್ನು ತಮ್ಮ ಎರಡು ಕೃತಿಗಳಾದ 'ತಿರುಮಾಲೈ', 'ತಿರುಪ್ಪಳ್ಳಿಯೆಳುಚ್ಚಿ' ಎನ್ನುವವುಗಳಲ್ಲಿ ಪ್ರಕಟಿಸಿದ್ದಾರೆ.

ಇವರಿಗೆ ಸ್ವರ್ಗಸುಖದ ಅಭಿಲಾಷೆ ಇಲ್ಲ. ಮಾನವನಾಗಿ ತೃಪ್ತಿಯಾಗು ವಷ್ಟು ಭಗವದ್ಗುಣಾನುಭವವನ್ನು ಹಾಡುವುದೇ ಇವರ ಮನದ ಆಶಯ.

ಇವರ 'ತಿರುಮಾಲೈ' ಪ್ರಬಂಧವು 45 ಪಾಶುರಗಳಿಂದ ಕೂಡಿದೆ. ಶ್ರೀರಂಗನಾಥನನ್ನು ಕುರಿತಾದ ಭಕ್ತಿ, ಪ್ರಪತ್ತಿಗಳಿಂದ ತುಂಬಿದ ಪರಮಾತ್ಮನ ಪ್ರಶಂಸನೀಯ ಗಾಥೆಗಳು. ಈ ಕೃತಿಯು ಭಕ್ತರ ಹೃದಯಗಳನ್ನು ಸ್ಪಂದಿಸು ತ್ತದೆ. 'ಮೊದಲು ತಾನು ಇಂದ್ರಿಯಲೋಲುಪನಾಗಿದ್ದುದಾಗಿಯೂ, ಈಗ ತಾನು ಮೋಕ್ಷಕಾಮಿಯಾಗಿರುವೆನೆಂದೂ, ಭಗವಂತನಲ್ಲಿ ಶರಣು ಹೊಂದಿರುವು ದಾಗಿಯೂ' ಇವರು ತಿಳಿಸುತ್ತಾರೆ. 'ಕಾಮಿಯಾಗದೆ, ಮೋಕ್ಷಕಾಮಿಯಾಗು

ವುದು ಅಸಾಧ್ಯ' ಎಂಬ ಗಾದೆಯು ಇವರ ಜೀವನದಲ್ಲಿ ಸತ್ಯವಾಗಿದೆ.

ವಿಮರ್ಶಾ ದೃಷ್ಟಿಯಲ್ಲಿ ಇದೊಂದು ಗೋಪ ಕಾವ್ಯ. ತುಂಬಾ ಭಗವದ್ಭಕ್ತಿ ಭರಿತವಾದುದು.

ತಿರುಮಾಲ (ವಿಷ್ಣುವಿ)ನಿಗೆ ಅರ್ಪಿಸಿದ ಕಾವ್ಯವಿದು. ಆದರಿಂದ ಇದು 'ತಿರುಮಾಲೈ' ಆಗಿದೆ. ಹೀಗೆಂದರೆ ತಮಿಳಿನಲ್ಲಿ 'ಪವಿತ್ರವಾದ ಹಾರ' ಎಂದರ್ಥ. ಇದರಲ್ಲಿನ ಅನೇಕ ಪಾಶುರಗಳು ಆತ್ಮನಿವೇದನ ಪರವಾದವುಗಳಾಗಿವೆ. ಭಗವತ್ ಸನ್ನಿಧಾನದಲ್ಲಿ ಆಳ್ವಾರರು ತಮ್ಮ ದೈನ್ಯವನ್ನು ಪ್ರಕಟಿಸುತ್ತಾ, ತಮ್ಮನ್ನು ಆತನ ದಾಸಾನುದಾಸನನ್ನಾಗಿ ಸ್ವೀಕರಿಸುವಂತೆ ಬೇಡುತ್ತಾರೆ.

ಈ ಪ್ರಬಂಧದಲ್ಲಿ ಭಕ್ತಿ ವೈಭವವನ್ನು ವಿಶೇಷವಾಗಿ ವರ್ಣಿಸಲ್ಪಟ್ಟಿದೆ. ಇದರಲ್ಲಿನ ಕವಿತಾ ಶೈಲಿಯು ಅನನ್ಯಾದೃಶವಾದುದು, ಮನೋಹರವಾದುದು. ಕವಿಯಲ್ಲಿ ಸಹಜವಾಗಿ ಮೂಡಿಬರುವ ಕವಿತಾ ನೈಪುಣ್ಯವನ್ನು ನಾವು ಓದಿದಾಗ ಅರ್ಥಮಾಡಿಕೊಳ್ಳಬಹುದು.

ತಮಿಳು ಭಾಷೆಯಲ್ಲಿ 'ತಿರುಮಾಲೈ ಅರ್ರಿಯಾನ್' ಎನ್ನುವುದೊಂದು ಲೋಕೋಕ್ತಿ ಇದೆ. ಅಂದರೆ 'ತಿರುಮಾಲೈ' ಎನ್ನುವ ಹೆಸರಿನ ದಿವ್ಯಪ್ರಬಂಧ ವನ್ನು ಅರಿಯದವರೂ ಇರುವರೇನು ? ಎಂಬರ್ಥವಿರುವಂತೆ, 'ತಿರುಮಾಲ' (ಮಹಾವಿಷ್ಣುವ)ನನ್ನು ಅರಿಯದವರು ಇರುವರೇನು ? ಎಂಬ ಅರ್ಥವೂ ಬರುತ್ತದೆ. ಇದರಿಂದ 'ತಿರುಮಾಲೈ'ನ ಸಹಜ ವೈಶಿಷ್ಟ್ಯತೆ ಸುಪ್ರಸಿದ್ಧವು.

ಈ ಆಳ್ವಾರರ ಎರಡನೇ ರಚನೆ 'ತಿರುಪ್ಪಳ್ಳಿಯೆಮುಚ್ಚಿ'. ಇದು ಪರಮಾತ್ಮನನ್ನು ಎಬ್ಬಿಸುವ ಒಂದು ಸುಪ್ರಭಾತ ಗೀತೆ. ಹಾಡುವುದಕ್ಕೆ ಯೋಗ್ಯವಾಗಿರುವಂತೆ ಈ ಗೀತೆಯನ್ನು ರಚಿಸಲಾಗಿದೆ. ಆದುದರಿಂದ ಈ ಪಾಶುರಗಳನ್ನು ನಿತ್ಯಾನುಸಂಧಾನದಲ್ಲಿ ಜೋಡಿಸಲಾಗಿದ್ದು, ಪ್ರತಿನಿತ್ಯ ಪ್ರಾತಃಕಾಲದಲ್ಲಿ ವಿಷ್ಣು ದೇವಾಲಯುಗಳಲ್ಲಿ ಅನುಸಂಧಾನ ಮಾಡಲಾಗುತ್ತದೆ.

ಇದರಲ್ಲಿನ ಒಂದು ಪಾಶುರದಲ್ಲಿ ಪ್ರಕೃತಿಯನ್ನು ವರ್ಣಿಸುತ್ತಾ, ಶಯ್ಯೆಯಿಂದ ಎದ್ದು, ಅದನ್ನು ಬಿಟ್ಟು, ಭಕ್ತರ ಬಳಿಗೆ ಬಾ ಎಂದು ಇವರು ಪರಮಾತ್ಮನನ್ನು ಪ್ರಾರ್ಥಿಸುತ್ತಾರೆ. ಮತ್ತೊಂದು ಪಾಶುರದಲ್ಲಿ ಪ್ರಾತಃಕಾಲದ ಸುಂದರ ಪರಿಸರವನ್ನು, ಅದರ ಪ್ರಶಾಂತತೆಯನ್ನು ವರ್ಣಿಸಿದ್ದಾರೆ. ಈ ಪಾಶುರಗಳಲ್ಲಿನ ಪದಗಳ ಜೋಡಣಾಲಂಕಾರವು ಹೃದಯಂಗಮವಾಗಿದೆ.

ಈ ಕೃತಿಯು 'ದಶಪಾಶುರಿ' ಎಂದು ವರ್ಣಿಸಿದ್ದು, ಉಷಃಕಾಲದ ವೈಭವಯುತ ದರ್ಶನವನ್ನು ಮಾಡಿಸುತ್ತದೆ. ಪಕ್ಷಿಗಳ ಕಲಕಲರವವು ಸಕಲ ರನ್ನೂ ಆಕರ್ಷಿಸುತ್ತದೆ. ಕುಸುಮ ಸೌರಭವು ಆಘ್ರಾಣಿಸಲು ಯೋಗ್ಯವಾಗಿರುತ್ತದೆ. ಜಪಾ ಪುಷ್ಪ ಪಾಟಲ ವರ್ಣಸದೃಶ ದೀಪ್ತಿಯು ಪ್ರಜ್ವಲಿಸುತ್ತಿರುತ್ತದೆ. ತುಂಬಿದ ಕತ್ತಲನ್ನು ಓಡಿಸಿಬಿಡುವ ಉದಯಭಾನುವಿನ ಕಿರಣಾರುಣ ಕಾಂತಿಗಳನ್ನು ನೋಡುವುದಕ್ಕೆ ರಮ್ಯವಾಗಿರುತ್ತದೆ. ಅರಂಗನಗರ ರಂಗನಾಥನನ್ನು ಅನಂತಶಯನದಿಂದ ನಿದ್ದೆಯಿಂದ ಎದ್ದೇಳುವಂತೆ ಪ್ರಾರ್ಥಿಸುತ್ತಾ, ಈ ಪಾಶುರ ಪುಷ್ಪಗಳನ್ನು ಕವಿಯು ವಿಕಸಿತಗೊಳಿಸುವರು.

ವಿಶ್ವಾಮಿತ್ರ ಮಹರ್ಷಿಯು 'ಕೌಸಲ್ಯಾ ಸುಪ್ರಜಾರಾಮ' ಎಂದು ಹೇಳಿ, ಯೋಗನಿದ್ದೆಯಿಂದ ಶ್ರೀರಾಮನನ್ನು ಎಬ್ಬಿಸುವ ಶ್ರೀಮದ್ರಾಮಾಯಣದ ರಸಘಟ್ಟದಂತೆ, ಪ್ರಬಂಧ ಸಾಹಿತ್ಯಕ್ಕೆ ಈ ಆಳ್ವಾರರು ಈ ಕೃತಿಯ ಮೂಲಕ 'ಮಾತೃಕೆ'ಯನ್ನು ಪೋಣಿಸಿದಂತಿದೆ.

ನಿದ್ರಾವಸ್ಥೆಯಲ್ಲಿರುವ ನಮ್ಮ ಧೀಃಶಕ್ತಿಯನ್ನು ಪ್ರಬೋಧಿಸಿ, ವಾಸ್ತವಿಕ ಜಗತ್ತನ್ನು ಅರ್ಥಮಾಡಿಕೊಂಡು, ಪರಮಾತ್ಮನೊಂದಿಗೆ, ವಿಶಿಷ್ಟಾದ್ವೈತವನ್ನು ಸಂಯೋಜಿಸುವ ರೀತಿಯೇ ಈ ಕೃತಿಗಳಲ್ಲಿ ಅಡಗಿರುವ ತತ್ತ್ವರಹಸ್ಯವಾಗಿದೆ.

ಪುನರ್ಜನ್ಮರಾಹಿತ್ಯವನ್ನು ಕರುಣಿಸೆಂದು ಈ ಆಳ್ವಾರರು ಶ್ರೀರಂಗನಾಥನನ್ನು ಅರ್ಥೈಸಿದರು. ಏಕೆಂದರೆ ವೇದೋಕ್ತವಾದ ಶತ ಸಂವತ್ಸರ ಪರಿಮಿತಾರ್ಥವನ್ನು ಹೊಂದಿದ್ದಾಗ್ಯೂ, ಮಾನವನಲ್ಲಿನ ಬಾಲ್ಯ ಕೌಮಾರ ಯೌವ್ವನ ದಶಾನುರೂಪ ಪ್ರವೃತ್ತಿಗಳು, ಸಾಂಸಾರಿಕ ಸಂಕಷ್ಟಗಳು, ನಿದ್ರಾಲಸ್ಯ ಪರಾವಸ್ಥೆಗಳು, ನೈರಾಶ್ಯಾದಿಗಳು ಅನುಲ್ಲಂಘನೀಯವಲ್ಲವೆ ? ಈ ಸತ್ಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಇರಬಹುದು–

ಇದಮನುಚಿತಮಕ್ರಮಶ್ಚ ಪುಂಸಾಂ
ಯದಿಹ ಜರಾಸ್ವಪಿ ಮಾನ್ಮಥಾಃ ವಿಕಾರಾಃ ||

ಎಂದು ಭರ್ತೃಹರಿ ಹೇಳಿದ್ದಾನೆ.

## 4. ಕುಲಶೇಖರಾಳ್ವಾರ್ :

ಇವರು ಚೇರ ದೇಶದ ರಾಜರು. ಭಕ್ತಸೇವೆಯೇ ಭಗವತ್ ಸೇವೆ ಎನ್ನುವುದು ಇವರ ಲಕ್ಷ್ಯ. ಹಾಗಾಗಿ ಭಾಗವತೋಪಚಾರ ಇವರ ಜೀವನದ ಮುಖ್ಯ

ಗುರಿಯಾಗಿತ್ತು. ಇವರ ಭಕ್ತಿತತ್ತ್ವ, ಭಗವದಾರಾಧನೆ–ಇಂದಿನ ಜನಾಂಗಕ್ಕೆ ಮಾರ್ಗದರ್ಶನ. ರಾಜಭೋಗಗಳು ಇವರಿಗೆ ರುಚಿಸಲಿಲ್ಲ. ರಾಜಮುಕುಟವನ್ನು ಧರಿಸಲು ಇಚ್ಛಿಸದ ಇವರು ಶ್ರೀರಾಮನ ಆಜ್ಞೆಗಳನ್ನು ಶಿರಸಾ ವಹಿಸಲು, ಅದನ್ನು ತ್ಯಾಗ ಮಾಡಿ, ಭಗವಂತನ ಸೇವೆಯಲ್ಲಿ ತೊಡಗಿದರು. ಹೃದಯವನ್ನು ಸ್ಪಂದಿಸುವಂತಹ ಜೋಗುಳದ ಹಾಡುಗಳಿಂದ ಶ್ರೀರಾಮನನ್ನು ಸ್ತುತಿಸಿದರು.

ಕುಲಶೇಖರಾಳ್ವಾರರು ದಶಶ್ಲೋಕಾತ್ಮಕ ರಾಮಾಯಣವನ್ನು ರಚಿಸಿದರು. ಶ್ರೀರಾಮ ಜನನ, ಆತನು ಅನುಭವಿಸಿದ ಕಷ್ಟಗಳು, ಆತನ ಪಟ್ಟಾಭಿಷೇಕ, ಪರಮಪದಕ್ಕೆ ಹಿಂತಿರುಗಿದ್ದು–ಇತ್ಯಾದಿಗಳು ಆಳ್ವಾರರ ಮನಸ್ಸಿನ ಮೇಲೆ ಅಳಿಸಲಾರದ ಮುದ್ರೆಯನ್ನು ಒತ್ತಿದ್ದುವು.

ಈ ಆಳ್ವಾರರ ಶ್ರೀರಂಗನಾಥ ಗುಣಾನುಭವವು ರಂಗಭಕ್ತರಿಗೆ, ರಂಗನಾಥನ ಸಾನ್ನಿಧ್ಯಾನುಭವಜ್ಞರಿಗೆ, ಶೇಷಶಾಯಿ ದರ್ಶನ ಜನಿತ ಮಧುರಾನಂದ ರಸಜ್ಞರಿಗೆ ಅತ್ಯಂತ ಸತ್ಯವೆನ್ನುವ ಅನುಭವವಾಗುತ್ತದೆ. ಸ್ವಾತ್ಮ, ಪರಮಾತ್ಮರುಗಳನ್ನು ಕುಲಶೇಖರರು ಅವಿನಾಭಾವದಿಂದ, ಸಂಪೂರ್ಣವಾಗಿ ಮೇಳವಿಸಿದರು. ಅದೇ ಅತ್ಯಂತ ಪವಿತ್ರವಾದ ಸುಖಾನುಭವವಾಯಿತು.

ಇವರು ತಮಿಳು ಭಾಷೆಗೆ ಭೂಷಣಪ್ರಾಯವಾದ 'ಪೆರುಮಾಳ್ ತಿರುಮೊಳಿ', ಸಂಸ್ಕೃತ ಭಾಷೆಯಲ್ಲಿ ಒಂದು ಕೃತಿ 'ಮುಕುಂದಮಾಲೆ'–ಇವೆರಡೇ ಕೃತಿಗಳನ್ನು ರಚಿಸಿದರೂ, ಅವು ಭಗವಂತನ ಸಾಹಿತ್ಯಕ್ಕೆ ಭೂಷಣಪ್ರಾಯವಾಗಿದೆ.

'ಪೆರುಮಾಳ್ ತಿರುಮೊಳಿ' ನಾಲಾಯಿರ ದಿವ್ಯಪ್ರಬಂಧದಲ್ಲಿ ಸೇರಿಸಲ್ಪಟ್ಟಿರುವ 105 ಪಾಶುರಗಳ ಒಂದು ಸುಂದರ ಕೃತಿ. ಇದರಲ್ಲಿ ಪಾಶುರಗಳನ್ನು ದಶಕಗಳಾಗಿ ವಿಭಾಗಿಸಲಾಗಿದೆ. ಶ್ರೀರಂಗದಲ್ಲಿನ ಭಕ್ತರೊಂದಿಗೆ ಕಲೆತು, ನೃತ್ಯ ಸಹಿತವಾಗಿ ಭಗವನ್ನಾಮ ಸಂಕೀರ್ತನೆಯನ್ನು ಮಾಡಬೇಕೆನ್ನುವ ಅಭಿಲಾಷೆಯು ಈ ಕೃತಿ ರಚನೆಗೆ ಪ್ರೇರೇಪಣೆ ನೀಡಿತು.

ಬರುವ ಜನ್ಮದಲ್ಲಿ ಶ್ರೀ ವೇಂಕಟಾಚಲದಲ್ಲಿ ಯಾವ ರೂಪದಲ್ಲಿಯಾದರೂ ಜನಿಸಬೇಕೆನ್ನುವ ಆಕಾಂಕ್ಷೆಯು ತಪ್ಪುಲ್ಲಿ ಗಾಢವಾಗಿ ಇರುವುದಾಗಿ ಆಳ್ವಾರರು ಈ ದಶಕಗಳಲ್ಲಿ ಸ್ಪಷ್ಟೀಕರಿಸಿದ್ದಾರೆ. ಎಂಟನೆಯ ದಶಕದಲ್ಲಿ ಮಗನಾದ ರಾಮನು ಬಾಲ್ಯವನ್ನು ತೋರಿಸುವ ಸನ್ನಿವೇಶ, ರಾಮನು ವನವಾಸಕ್ಕೆ ಹೋದ ಕಾರಣ

ದಶರಥನು ವಿಲಪಿಸುವುದು-ಇತ್ಯಾದಿ ಘಟ್ಟಗಳನ್ನು ಹೃದಯಂಗಮವಾಗಿ ಆಳ್ವಾರರು ಚಿತ್ರಿಸಿದ್ದಾರೆ. ಕಡೆಯ ದಶಕದಲ್ಲಿ ರಾಮಾಯಣದ ಕಥಾನಕವನ್ನು ಸಂಗ್ರಹವಾಗಿ ನೀಡಲಾಗಿದೆ.

ಈ ಕೃತಿಯ ಪಾಶುರಗಳೆಲ್ಲವೂ ಭಾವ ಮಧುರ ಶೈಲಿಯಲ್ಲಿ, ಓದುಗರ ಹೃದಯಗಳನ್ನು ಕರಗಿಸಿಬಿಡುವಂತಿವೆ.

ಈ ಆಳ್ವಾರರ ಎರಡನೇ ರಚನೆಯಾದ 'ಮುಕುಂದಮಾಲಾ' ಸ್ತೋತ್ರವು ಸಂಸ್ಕೃತ ಭಾಷೆಯ ಒಂದು ಉತ್ತಮ ಸ್ತೋತ್ರಗ್ರಂಥ. ಇವರ ಸಹಜ ಶೈಲಿಯ ಕವಿತಾ ಸಂಪತ್ತು ಈ ಕೃತಿಯಲ್ಲಿ ಸುಲಭವಾಗಿ ಅರ್ಥವಾಗುವಂತೆ ಚಿತ್ರಿಸಲಾಗಿದೆ. ಇದರಲ್ಲಿನ ದಿವ್ಯಸಂದೇಶಗಳು ಪ್ರಭೋದಭರಿತವಾದುದು. ಇವರ ಭಾವ ಪರಂಪರೆಗಳು ಭಕ್ತಿಲೋಕಕ್ಕೆ ಶುಭಂಕರಗಳಾಗಿವೆ. ಶ್ಲೋಕಗಳು ಮಧುರಾತಿಮಧುರವಾಗಿವೆ. ಆದುದರಿಂದಲೇ ಈ ಕೃತಿಯು ಸಂಸ್ಕೃತ ವಾಙ್ಮಯ ಜಗತ್ತಿನಲ್ಲಿ ಒಂದು ಗಮನಾರ್ಹ ಸ್ಥಾನವನ್ನು ಪಡೆದಿದೆ. ಭಾರತೀಯ ಭಾಷೆಗಳಲ್ಲಿನ ಎಲ್ಲ ಸ್ತೋತ್ರಗ್ರಂಥಗಳ ಮೇಲೂ ಇದರ ಆಯಾ ಭಾಷೆಯಲ್ಲಿನ ಅನುವಾದಗಳು ಪ್ರಭಾವ ಬೀರುತ್ತಿವೆ, ಬೀರಿವೆ.

ಈ ಕೃತಿಯ ಮೇಲೆ 17ನೇ ಶತಮಾನದಲ್ಲಿ 'ರಾಘವಾನಂದ' ಎನ್ನುವ ಓರ್ವ ಪ್ರಮುಖ ವಿದ್ವಾಂಸನು ವಿಪುಲವಾದ ಟೀಕೆಯನ್ನು ರಚಿಸಿದ್ದಾನೆ. ಅದರಲ್ಲಿ ಈ ಸ್ತೋತ್ರವು ಕೇವಲ ತಿರುಮಂತ್ರವಾಗಿ ಪ್ರಸಿದ್ಧಿ ಹೊಂದಿದ ನಾರಾಯಣಾಷ್ಟಾಕ್ಷರೀ ಮಹಾಮಂತ್ರದ ಪ್ರಭಾವವನ್ನು ಸುಸ್ಪಷ್ಟವಾಗಿ ಸಾರುತ್ತದೆ ಎಂದು ಆ ವಿದ್ವಾಂಸನು ಈ ಸ್ತೋತ್ರವನ್ನು ಕೊಂಡಾಡಿದ್ದಾನೆ. (ಶ್ರೀ ಮುಕುಂದಮಾಲಾ-ಸಮೀಕ್ಷಾ ಭಾಗ). 'ಮುಕುಂದಮಾಲಾ ತಾತ್ಪರ್ಯ ದೀಪಿಕಾ' ಎನ್ನುವ ಈ ಕೃತಿಯ ವ್ಯಾಖ್ಯೆಯ ಮತ್ತೊಂದು ಗ್ರಂಥವು ಭಾರತೀಯ ಸಮೀಕ್ಷಾ ಸಾಹಿತ್ಯದಲ್ಲಿ ಒಂದು ಪ್ರಮುಖ ಆಕರ್ಷಣೆಯಾಗಿದೆ.

ಸದಾ ಪಾರಮಾರ್ಥಿಕ ಚಿಂತನೆ, ಮತಗ್ರಂಥಗಳ ಕಾಲಕ್ಷೇಪದಲ್ಲಿ, ಶ್ರೀವೈಷ್ಣವರ ಸತ್ಸಂಗದಲ್ಲಿ ಇರುತ್ತಿದ್ದ ಇವರು ಭಕ್ತಿ ವೈರಾಗ್ಯ ಜ್ಞಾನಸಂಪನ್ನರಾಗಿದ್ದರು. ಸತತವಾದ, ಆವೇಶಪೂರಿತ, ಆತ್ಮ ನಿವೇದಕ ಶಕ್ತಿ, ಅದಕ್ಕೆ ಪೋಷಕವಾದ ಜ್ಞಾನ, ಜ್ಞಾನದ ಫಲದ ವೈರಾಗ್ಯ ಇವರಲ್ಲಿದ್ದಿತು.

ದಿವ್ಯದೇಶಗಳ ಯಾತ್ರೆಮಾಡಿ, ಅಲ್ಲಿನ ಅರ್ಚಾಮೂರ್ತಿಗಳನ್ನು ದರ್ಶಿಸಿ,

ಆ ಭಗವದನುಭವದಿಂದ ಜನಿಸಿದ ಆನಂದ ಪರವಶತೆಯು ಇವರ 'ಪೆರುಮಾಳ್ ತಿರುಮೊಳಿ' ಗ್ರಂಥದಲ್ಲಿ ಕಂಡುಬರುತ್ತದೆ. ತಿರುಪತಿಯ ಶ್ರೀನಿವಾಸ, ಶ್ರೀರಂಗದ ರಂಗನಾಥ, ಚಿತ್ರಕೂಟದ ಶ್ರೀರಾಮ, ಮನ್ನಾರ್ ಕೋಯಿಲಿನ ರಾಜಮನ್ನಾರ್- ಈ ದೇವರಮೂರ್ತಿಗಳನ್ನು ತುಂಬು ಹೃದಯದಿಂದ ಹಾಡಿದ್ದಾರೆ.

ಶ್ರೀವೈಷ್ಣವರ ವಿರೋಧಿಯಾದ ಚೋಳರಾಜನೇ ಇವರ ಕೃತಿಗಳನ್ನು ಶ್ರೀರಂಗದ ರಂಗನಾಥನ ಎದುರಿಗೆ ಹಾಡುವ ವ್ಯವಸ್ಥೆ ಮಾಡಿದ್ದಾನಂತೆ. ಅಂದರೆ ಇವರ ಕೃತಿಗಳ ಮಹತ್ವ ಅರ್ಥವಾಗುತ್ತದೆ.

ಇವರು ಪೆರಿಯೊಳ್ವಾರ್‌ರಂತೆ ತಮ್ಮ ಮಗಳಾದ ಮಲೆಯಾಳ ನಾಚ್ಚಿ ಯಾರ್ (ನೀಳಾದೇವಿ)ಯನ್ನು ಶ್ರೀ ರಂಗನಾಥಸ್ವಾಮಿಗೆ ವಿವಾಹ ಮಾಡಿಕೊಟ್ಟ ಅದೃಷ್ಟಶಾಲಿ ಮಾವ.

'ನೀನು ದುಃಖಕೊಟ್ಟರೆ ಅದನ್ನು ನೀನೇ ಪರಿಹರಿಸು ದೇವಾ! ಪರಿಣಾಮ ವಾಗಿ ನೀನು ನನ್ನನ್ನು ಬಿಟ್ಟರೂ, ನಾನು ನಿನ್ನನ್ನು ಬಿಡಲಾರೆ. ನಿನ್ನಲ್ಲಿ ನಂಬಿಕೆ ಇಟ್ಟಿದ್ದೇನೆ. ನಿನ್ನ ದಾಸನಾಗಿ, ನಿನ್ನ ಸೇವೆಗಾಗಿ ಕಾದು, ನಿನ್ನ ಕೃಪೆಯನ್ನೇ ಬಯಸುತ್ತಿರುತ್ತೇನೆ. ಅಂತ್ಯದಲ್ಲಿ ನೀನೇ ನನಗೆ ಶರಣು!' ಎನ್ನುವ ಪ್ರಪತ್ತಿ ಮಾರ್ಗ ಈ ಆಳ್ವಾರರದ್ದು.

'ಮಹಾವಿಷ್ಣುವೇ ಪರದೈವ' ಎಂದು ಇವರು ನಂಬಿದ್ದರಿಂದ ಭಗವಂತನಲ್ಲಿ ಇವರ ಭಕ್ತಿ ಉಕ್ಕೇರಿತ್ತು. ಶ್ರೀರಾಮ ಮತ್ತು ಶ್ರೀಕೃಷ್ಣಾವತಾರಗಳಲ್ಲಿ ಇವರ ಪ್ರೇಮ ಅಪಾರವಾಗಿದ್ದುದರಿಂದ ಅವರುಗಳ ಸುಖ-ದುಃಖಗಳನ್ನೇ ಇವರು ತಮ್ಮ ಸುಖ-ದುಃಖಗಳೆಂದು ತಿಳಿದಿರುತ್ತಿದ್ದರು. ಈ ಕಾರಣದಿಂದಲೇ ಇವರನ್ನು 'ಕುಲಶೇಖರ ಪೆರುಮಾಳ್' ಎಂದು ಕರೆದರು.

ಇವರು 'ಪಡಿಯಾಯ್‌ಕ್ಕಿಡಂದ್ ಉನ್ ಪವಳವಾಯ್ ಕಾಣ್ಬೇನೇ' ಎಂದು ಹಂಬಲಿಸುತ್ತಿದ್ದುದರಿಂದ, ದೇವಾಲಯಗಳ ಗರ್ಭಗುಡಿಯ ಹೊಸಿಲಿಗೆ 'ಕುಲಶೇಖರಪ್ಪಡಿ' ಎಂದು ಹೆಸರಿಸುವ ರೂಢಿ ಇದೆ.

ಈ ಆಳ್ವಾರರು ಕೇರಳನಾಥನನ್ನು ಹೀಗೆಂದು ಸ್ತುತಿಸಿದ್ದಾರೆ—'ಕೋಪ ಪರವಶಳಾದ ತಾಯಿಯಿಂದ ದೂರಮಾಡಲ್ಪಟ್ಟ ಮಗುವಿನಂತೆ, ನಾನು ನಿನ್ನನ್ನು ಬೇಡುತ್ತಿದ್ದೇನೆ. ಭರ್ತೃ ಬಾಧಿತಳಾದ ಪತಿವ್ರತೆಯಂತೆ ನಾನು ನಿನ್ನ ಆಶ್ರಯ ವನ್ನು ಅರ್ಥೈಸುತ್ತಿದ್ದೇನೆ. ಮಳೆಗಾಗಿ ಎದುರು ನೋಡುತ್ತಿರುವ ಪೈರಿನಂತೆ

ನಾನು ನಿನ್ನ ಶರಣು ಹೊಂದಿದ್ದೇನೆ. ನನ್ನ ಪ್ರಾರ್ಥನೆಯನ್ನು ಮನ್ನಿಸಿ, ಭವದ್ವಿರಹಾರ್ತಿಯಾಗಿ ಕೃಶಿಸಿಹೋಗುತ್ತಿರುವ ನನ್ನನ್ನು ನಿನ್ನ ತೋಳಿನ ತೆಕ್ಕೆಯಲ್ಲಿ ತೆಗೆದುಕೊ. ಬೇರೆ ದಾರಿ ಇಲ್ಲ.'

ನಿಸ್ಪೃಹ ನಿರಾಶೆಗಳೊಂದಿಗೆ ಕ್ಷೀಣಿಸುತ್ತಿದ್ದರೂ ಕೂಡ ಸ್ವಯಂ ಧೀ ವಿಭವತ್ವವನ್ನು, ತಾತ್ತ್ವಿಕ ಭಾವನಾ ಬಲವನ್ನು ಒಟ್ಟುಗೂಡಿಸಿಕೊಂಡು ಆಳ್ವಾರರು ಭಗವಂತನನ್ನು ಪ್ರಾರ್ಥಿಸಿದರು. ಶ್ರೀ ವೇಂಕಟೇಶ್ವರನ ಬಗ್ಗೆ ಇವರಿಗಿದ್ದ ಭಕ್ತಿ ಪ್ರಪತ್ತಿಗಳು ಇವರು ಪ್ರತಿಪಾದಿಸಿದ ಸಿದ್ಧಾಂತಕ್ಕೆ ಮುಕುಟಪ್ರಾಯವಾಗಿದೆ. ಭಗವದ್ಗುಣಾನುಭವವನ್ನು ಹೊರಚೆಲ್ಲುವ ಇವರ ರಚನೆಗಳು ಅಸಾಧಾರಣವಾದ ಕೃತಿರತ್ನಗಳಾಗಿವೆ.

**5. ತಿರುಪ್ಪಾಣಿ ಆಳ್ವಾರ್ :**

ಸಂಗೀತ ಸಮನ್ವಿತ ಸವಿನಯ ಭಾವ ಹಾಗೂ ಪ್ರಾರ್ಥನಾ ಪೂರ್ವಕ ದೈವ ಸಾನ್ನಿಧ್ಯ ಪ್ರಾಪ್ತಿ–ಎನ್ನುವ ಎರಡು ವೈಶಿಷ್ಟ್ಯತೆಗಳು ಇವರ ಜೀವನವನ್ನು ಪ್ರಜ್ವಲಗೊಳಿಸಿವೆ. ಇವೆರಡೂ ಈ ಆಳ್ವಾರರು ತಮ್ಮ ಭಾವೀ ಜನಾಂಗಕ್ಕೆ ನೀಡಿದ ಗುಣವಿಶೇಷಗಳು.

ಸಂಗೀತದ ಮುಖಾಂತರ ಇವರ ಆತ್ಮವು, ಇವರಿಗೆ ಅತ್ಯಂತ ಪ್ರಿಯಕರವಾದ ಪರಮಾತ್ಮನಲ್ಲಿ ಲೀನವಾಗುವಂತೆ ಸಹಾಯ ಹಾಗೂ ಸಹಕಾರಗಳನ್ನು ನೀಡಿದುವು. ಜೀವಾತ್ಮವು ಭಗವತ್ ದಿವ್ಯೋಪದೇಶ ಪ್ರೇರಿತವಾಗಿ, ಪರಮಾತ್ಮನಿಂದ ಆಚ್ಛಾದಿತವಾಗಿದೆ.

ಈ ಆಳ್ವಾರರು ಪ್ರಸಿದ್ಧ ಸಂಗೀತ ಜ್ಞಾನಿಗಳೆಂದು ಪ್ರಸಿದ್ಧಿ ಹೊಂದಿದ್ದರು. ದಿವ್ಯ ಸಂಗೀತ ಸಾರ್ವಭೌಮರೆಂಬ ಖ್ಯಾತಿಗೇರಿದ್ದರು. ಈ 'ಪ್ರಾಣಾಳ್ವಾರರು', 'ಪ್ರಾಣ್ ಆಳ್ವಾರರು' ಎಂದು ಜನರು ಸಂಭಾವಿಸುವಂತಾಗಿತ್ತು. ಈ ಆಳ್ವಾರರ ಜೀವನದಿಂದ ನಾವು ತಿಳಿಯಬೇಕಾದುದೆಂದರೆ ಸಭಕ್ತಿಯಾದ ಸಂಗೀತ ವಿದ್ಯೆಯಿಂದ ನಾವು ಭಗವಂತನನ್ನು ಪಡೆಯಬಹುದು ಎಂಬ ಭಾವವನ್ನು ಅರಿಯಬಹುದು.

ಹತ್ತು ಪಾಶುರಗಳನ್ನು ಹೊಂದಿರುವ ಇವರ ಏಕೈಕ ರಚನೆಯೆಂದರೆ 'ಅಮಲನಾದಿ ಪಿರಾನ್' ಎಂಬುದು ಮಾತ್ರ. ಆದರೂ ಈ ಕೃತಿಯು ತನ್ನ

ಸಂಗೀತ ಹಿನ್ನೆಲೆಯ ಪ್ರೌಢಿಮೆಯಿಂದ ನಾಲಾಯಿರ ದಿವ್ಯಪ್ರಬಂಧದಲ್ಲಿ ಇದನ್ನು ಸೇರಿಸಲಾಗಿದೆ.

ಇದರಲ್ಲಿ ಶ್ರೀರಂಗನಾಥನ ದಿವ್ಯಸೌಂದರ್ಯವನ್ನು ನಖಶಿಖಾಂತದವರೆಗೂ ರಮಣೀಯವಾಗಿ ವರ್ಣಿಸಲಾಗಿದೆ. ಆದುದರಿಂದಲೇ ಇದನ್ನು ಪ್ರತಿದಿನವೂ ಗಾಯನ ಮಾಡಬೇಕೆಂದು, ಪರಮಾತ್ಮನಿಗೆ ತುಂಬಾ ಇಷ್ಟವಾದ ಸ್ತೋತ್ರ ವಿದೆಂದು ಸಂಪ್ರದಾಯಜ್ಞರು ತೀರ್ಮಾನಿಸಿದ್ದಾರೆ.

ಇಂತಹ ಆಳ್ವಾರರ ಭಕ್ತಿವೈಭವವನ್ನು ಶ್ರೀ ವೇದಾಂತ ದೇಶಿಕರು ಅನೇಕ ರೀತಿಗಳಲ್ಲಿ ವರ್ಣಿಸಿದ್ದಾರೆ. ಈ ಕೃತಿಯನ್ನು ಕುರಿತಾದ ಒಂದು ಟೀಕೆಯನ್ನು ಇವರು ರಚಿಸಿದ್ದಾರೆ. ಅದು 'ಮುನಿವಾಹನ ಭೋಗವುಮ್' ಎನ್ನುವ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಪ್ರಬಂಧದ ಪ್ರಭಾವವು ಈ ರೀತಿಯಲ್ಲಿ ಸುಲಭ ಗ್ರಾಹ್ಯವು.

**6. ಪೆರಿಯಾಳ್ವಾರ್ :**

'ಭಗವಂತನಿದ್ದಾನೆ. ಆತನು ಪರಾತ್ಪರನು; ಸರ್ವಾಂತರ್ಯಾಮಿ' ಎಂದು ಇವರು ಪ್ರಬೋಧಿಸಿದರು, 'ಭಗವನ್ ! ನಿನ್ನನ್ನು ನನ್ನಲ್ಲಿ ಇರಿಸಿಕೊಂಡಿದ್ದೇನೆ. ನಾನು ನಿನ್ನಲ್ಲಿ ಸೇರಿಕೊಂಡಿರುವೆನು' ಎಂದು ತಮ್ಮ ದಿವ್ಯಪ್ರಬಂಧದಲ್ಲಿ ಇವರು ಭಗವಂತನನ್ನು ಪ್ರಶಂಶಿಸಿದರು. ತಮ್ಮ ಪಾಶುರಗಳಲ್ಲಿನ ಭಾವಾಭರಣಗಳಿಂದ ದೇವರನ್ನು ಅಲಂಕರಿಸುವರು.

'ವಿಷ್ಣುಚಿತ್ತ' ಎನ್ನುವ ಹೆಸರಿನ ಈ ಆಳ್ವಾರರು 'ತಿರುಪ್ಪಲ್ಲಾಂಡು' 'ಪೆರಿಯಾಳ್ವಾರ್ ತಿರುಮೊಳಿ' ಎನ್ನುವ ಎರಡು ಕೃತಿಗಳನ್ನು ರಚಿಸಿದ್ದಾರೆ. ಇವೆರಡನ್ನೂ ಮೊದಲಾಯಿರದ ನಾಲಾಯಿರ ದಿವ್ಯಪ್ರಬಂಧದಲ್ಲಿ ಸೇರಿಸಲಾಗಿದೆ.

'ತಿರುಪ್ಪಲ್ಲಾಂಡು' ಎನ್ನುವುದರಲ್ಲಿ ಹನ್ನೆರಡು ಪಾಶುರಗಳಿವೆ. ಗರುಡ ಗಮನನಾದ ವಿಷ್ಣು ಭಗವಾನನಿಗೆ ಮಂಗಳಾ ಶಾಸನ ಮಾಡುತ್ತಾ, ಈ ಆಳ್ವಾರರು ಹಾಡಿದ ಗೀತೆಗಳೇ ಈ ಕೃತಿ. ಅಸದೃಶವಾದ ಪರಮಾತ್ಮನ ಭುವನ ಮೋಹನ ಸೌಂದರ್ಯವು ನಿರಂತರವಾಗಿ ನಿತ್ಯನೂತನವಾಗಿ ಪ್ರಕಾಶಿಸುತ್ತಿರ ಬೇಕೆಂದು ಪರಮ ಭಕ್ತಾಗ್ರಣಿಗಳಾದ ಪೆರಿಯಾಳ್ವಾರ್‌ರವರು ತಮಗೆ ಗರುಡ ವಾಹನನಾಗಿ ದಿವ್ಯ ಸಂದರ್ಶನವನ್ನು ಪ್ರಸಾದಿಸಿದ ಮಹಾವಿಷ್ಣುವಿಗೆ ಶುಭಾ ಶಾಂಕ್ಷೆಗಳನ್ನು ತಿಳಿಯಹೇಳುವುದೇ ಈ ರಚನೆಯ ಪ್ರಧಾನಾಂಶ.

ಇತರೇ ಆಳ್ವಾರರು, ಭಕ್ತರುಗಳು ದೇವರಲ್ಲಿ ಏನೇನೋ ವರಗಳನ್ನು, ಬೇಡಿಕೆಗಳನ್ನು ನೆರವೇರಿಸು ಎಂದು ಕೇಳಿಕೊಂಡರೆ ಈ ಮಹಾಭಕ್ತರು ಇಷ್ಟೊಂದು ಸುಂದರನಾದ ಭಗವಂತನನ್ನು ಎಲ್ಲರೂ ನೋಡಿ, ನೋಡಿ ದೃಷ್ಟಿಯಾಗುವುದಿಲ್ಲವೇ ಎಂಬ ಮಗುವಿನ ಮೇಲೆ ತಾಯಿಯು ತೋರುವ ಕಾರುಣ್ಯಭಾವವನ್ನು ಇವರು ತೋರಿಸಿದ್ದಾರೆ.

ಭಕ್ತರಾದವರು ತಮ್ಮ ಜೀವನಗಳನ್ನು ಭಗವತ್ ಸೇವೆಯಲ್ಲಿ ಕಳೆಯು ವುದು ಶ್ರೇಯಸ್ಕರವೆಂದು ಪೆರಿಯಾಳ್ವಾರರು ಇದರಲ್ಲಿ ಒಂದು ಸಂದೇಶವನ್ನು ನೀಡಿದ್ದಾರೆ. ಈ ಕಾರಣಗಳಿಂದಲೇ 'ತಿರುಪ್ಪಲ್ಲಾಂಡು'ವಿಗೆ ನಾಲಾಯಿರ ದಿವ್ಯಪ್ರಬಂಧದಲ್ಲಿ ಒಂದು ಪ್ರಮುಖ ಸ್ಥಾನವನ್ನು ನೀಡಲಾಗಿದೆ. ಇದನ್ನು ಶ್ರೀವೈಷ್ಣವರೆಲ್ಲರೂ ಪ್ರಣವ ತುಲ್ಯವಾಗಿ ಭಾವಿಸಿ, ಪ್ರತಿದಿನವೂ ಭಕ್ತಿ ಶ್ರದ್ಧೆ ಗಳಿಂದ ಅನುಸಂಧಾನ ಮಾಡುವುದು ರೂಢಿಯಾಗಿದೆ.

'ಪೆರಿಯಾಳ್ವಾರ್ ತಿರುಮೊಳಿ'ಯಲ್ಲಿ 461 ಪಾಶುರಗಳಿವೆ. ಇವುಗಳಲ್ಲಿ ಬಾಲಕೃಷ್ಣನ ಮಧುರ ಲೀಲೆಗಳನ್ನು ಮನೋಹರವಾಗಿ ವರ್ಣಿಸಲಾಗಿದೆ. ಭಗವಂತನಲ್ಲಿ ಇವರಿಗೆ ಪುತ್ರಭಾವವಿತ್ತು.

ಈ ಪ್ರಬಂಧದಲ್ಲಿ ಪೆರಿಯಾಳ್ವಾರ್‌ರವರು ಪ್ರದರ್ಶಿಸಿರುವ ವಾತ್ಸಲ್ಯ ಭಾವ ಗಳು ಅತ್ಯದ್ಭುತವಾಗಿವೆ. ಪರಾಕಾಷ್ಠತೆಯನ್ನು ಹೊಂದಿರುವ ಇಂತಹ ವಾತ್ಸಲ್ಯ ಭಾವಗಳು-ಪ್ರಬಂಧದಲ್ಲಲ್ಲದೆ ಬೇರೆ ಯಾವ ತಮಿಳು ಕೃತಿಯಲ್ಲೂ ಕಂಡು ಬರುವುದಿಲ್ಲ ಎಂದರೆ ಅತಿಶಯೋಕ್ತಿಯಲ್ಲ.

ಈ ಕೃತಿಯಲ್ಲಿ ಕೃಷ್ಣನ ಜನ್ಮದಿನೋತ್ಸವ, ಗೋಕುಲದಲ್ಲಿನ ವಿವಿಧ ಹರ್ಷೋಲ್ಲಾಸಗಳು, ಕೃಷ್ಣನನ್ನು ನಿದ್ದೆ ಮಾಡಿಸುವುದು, ಯಶೋದಾ ಜೋಗುಳ ಹಾಡುವುದು, ಕೃಷ್ಣನನ್ನು ಸಮಾಧಾನಗೊಳಿಸುವುದಕ್ಕಾಗಿ ಚಂದ್ರ ನನ್ನು ಬಾ ಎಂದು ಕರೆಯುವಿಕೆ, ಕೃಷ್ಣನ ಕರ್ಣವೇಧಾ ಸಂಸ್ಕಾರ, ಕೃಷ್ಣನಿಗೆ ದೃಷ್ಟಿ ತೆಗೆದುಹಾಕುವುದು, ಕೃಷ್ಣನು ಬೆಣ್ಣೆಯನ್ನು ತಿರಸ್ಕರಿಸುವಿಕೆ, ಕೃಷ್ಣನ ಚೇಷ್ಟೆಗಳನ್ನು ಗೋಪಿಯರು ಯಶೋದೆಯೊಂದಿಗೆ ದೂರಿಕೊಳ್ಳುವಿಕೆ, ಕೃಷ್ಣನು ಗೋವುಗಳನ್ನು ಮೇಯಿಸಲು ಅರಣ್ಯಕ್ಕೆ ಕಳುಹಿಸಿದ ನಂತರ ತಾಯಿಯಾದ ಯಶೋದೆಯು ವಿಲಪಿಸುವುದು, ಕೃಷ್ಣನ ಭುವನ ಮೋಹನ ಸೌಂದರ್ಯಕ್ಕೆ ಮುಗ್ಧರಾಗಿ ಗೋಪಿಯರು ಮೋಹಗೊಳ್ಳುವುದು, ಕೃಷ್ಣನ ವೇಣುಗಾನ

ಮಾಧುರ್ಯ–ಇತ್ಯಾದಿ ಅನೇಕ ಸನ್ನಿವೇಶಗಳನ್ನು ಹೃದಯಂಗಮವಾಗಿ ಕವಿ ವರ್ಣಿಸಿದ್ದಾರೆ.

ಅದರಲ್ಲೂ ಮುದ್ದು ಬಾಲಕೃಷ್ಣನು ಹಠ ಮಾಡುವಿಕೆ, ಹರ್ಷ ಹೊಂದು ವಿಕೆ, ವಿಲಪಿಸುವುದು–ಇತ್ಯಾದಿ ಸನ್ನಿವೇಶಗಳನ್ನು ಪೆರಿಯಾಳ್ವಾರ್‌ರವರು ಸಹಜ ಸುಂದರವಾಗಿ ಚಿತ್ರಿಸಿದ್ದಾರೆ.

ಶೈಶವಾವಸ್ಥೆಯಲ್ಲಿನ ಕೃಷ್ಣನ ವಿವಿಧ ಚೇಷ್ಟೆಗಳನ್ನು ಬಹು ರಮಣೀಯ ವಾಗಿ ಕವಿ ವರ್ಣಿಸಿದ್ದಾರೆ.

ಬಹಳ ಕಾಲದವರೆಗೆ ಮಾತೆಯರು ತಮ್ಮ ತಮ್ಮ ಮಕ್ಕಳನ್ನು ಆಡಿಸು ವಾಗ, ಹಾಲು ಕುಡಿಸುವಾಗ, ನಿದ್ದೆ ಮಾಡಿಸುವಾಗ, ಮುದ್ದಾಡುವಾಗ ಹಾಡುವ ಹಾಡುಗಳಿಗೆ ವಾಙ್ಮಯ ಜಗತ್ತಿನಲ್ಲಿ ಪೆರಿಯಾಳ್ವಾರರಿಗೆ ಪ್ರಮುಖ ಸ್ಥಾನವನ್ನು ಕಲ್ಪಿಸಿ, ಚಿರಸ್ಮರಣೀಯವಾಗಿಸಿರುವುದು ಈ ಕೃತಿಯೇ !

'ಪಿಳ್ಳೈ ತಮಿಳ್' ಎಂದು ವ್ಯವಹರಿಸುವ ಈ ಹಾಡುಗಳು ಸೂಕ್ತ ರಾಗ, ಶೈಲಿಗಳೊಂದಿಗೆ ಹಾಡುವ ರೀತಿಯನ್ನು ಬೆಳೆಸಿದವರಲ್ಲಿ ಪೆರಿಯಾಳ್ವಾರರೇ ಮೊದಲಿಗರು. ಈ ಕಾರಣ ಅವರು ಅಖಂಡ ವಿಖ್ಯಾತಿಯನ್ನು ಹೊಂದಬಲ್ಲವ ರಾದರು.

ಪೆರಿಯಾಳ್ವಾರ್ ನಂತರದಲ್ಲಿನ ಅನೇಕ ಕವಿಗಳು ವಿಶಿಷ್ಟವಾದ 'ಪಿಳ್ಳೈ ತಮಿಳ್' ಕಾವ್ಯ ಶೈಲಿಯನ್ನು ಅನುಕರಿಸುತ್ತಾ, ಎಷ್ಟೋ ಗೀತೆಗಳನ್ನು ಕವಿ ಗಳನೇಕರು ರಚಿಸಿದರು.

ಈ ರೀತಿಯಲ್ಲಿ ಶ್ರೀ ವಿಲ್ಲಿಪುತ್ತೂರಿನಲ್ಲಿ ಇದ್ದುಕೊಂಡು ನಿರಂತರವೂ ಭಗವತ್ಸೇವೆಯಲ್ಲಿ ಹಾಗೂ ಆತನ ಚಿಂತನೆಯಲ್ಲಿ ಕಾಲವನ್ನು ಕಳೆಯುತ್ತಿರಲು, ವರಪ್ರದಾನವೆಂಬಂತೆ ಹೆಣ್ಣು ಶಿಶುವೊಂದು ದೊರೆತು, ಮುಂದೆ ಈ ಮಗುವೇ ಗೋದಾದೇವಿ (ಆಂಡಾಳ್) ಆದಳು.

ಭಗವಂತನ ಕೃಷ್ಣಾವತಾರ, ಆ ಕೃಷ್ಣನ ದಿವ್ಯಚೇಷ್ಟೆಗಳು, ದಯಾ ಕಾರ್ಯಗಳನ್ನು ಆಳ್ವಾರರು ಅನುಭವಪೂರ್ಣವಾಗಿ ಹಾಡಿದುದು, ಆ ರಸಮಯ ಸನ್ನಿವೇಶಗಳ ವರ್ಣನೆಯನ್ನು ಬಾಲ್ಯದಿಂದಲೂ ಆಲಿಸುತ್ತಾ ಬಂದ ಆಂಡಾಳ್ ಪರಮ ಭಕ್ತೆಯಾದಳು.

7. ಆಂಡಾಳ್ :

ಪೆರಿಯಾಳ್ವಾರ್‌ರವರ ತುಳಸೀ ತೋಟದಲ್ಲಿ ದೊರೆತ ಶಿಶುವೇ ಈಕೆ. ಅವರು ನಿರ್ಮಿಸಿದ ಭಕ್ತಿ ವಾತಾವರಣದಲ್ಲಿ ಬೆಳೆಯುತ್ತಾ, ತಂದೆಯಿಂದ ಭಗವಂತನ ಗುಣ, ರೂಪ, ಸೌಂದರ್ಯ, ಲೀಲೆಗಳನ್ನು ಕೇಳಿ, ಅವನನ್ನೇ ಪ್ರೇಮಿಸಿ, ಅವನನ್ನೇ ವಿವಾಹವಾಗಿ, ಅವನಲ್ಲಿ ಐಕ್ಯವಾದಳು ಆಂಡಾಳ್.

ಈಕೆ ಭಗವಂತನಲ್ಲಿ ತೀವ್ರವಾದ ಅಭಿನಿವೇಶವನ್ನು ಹೊಂದಿ ಅವನ ವಿರಹವನ್ನು ಸಹಿಸಲಾಗದೆ 'ತಿರುಪ್ಪಾವೈ', 'ನಾಚ್ಚಿಯಾರ್ ತಿರುಮೊಳಿ' ಎಂಬ ಕೃತಿ ರತ್ನಗಳ ಮುಖಾಂತರ ಭಗವಂತನಲ್ಲಿ ತನ್ನನ್ನು ನಿವೇದಿಸಿಕೊಂಡಳು.

ವಟಪತ್ರ ಶಾಯಿಯ ಅಲಂಕಾರಕ್ಕೆ ಹೂಮಾಲೆ ಯೋಗ್ಯವೇ ಇಲ್ಲವೇ ಎಂಬುದನ್ನು ತಾನು ಧರಿಸಿ ಪರೀಕ್ಷಿಸುವಂತಹ ಭುಕ್ತ ಮುಕ್ತ ಸುಮ ದಾಮ ಪರಿಷ್ಕೃತ ರಂಗನಾಥ ದಿವ್ಯಾಳಿಕವು, ಭಗವದ್ ಅರ್ಪಣಕ್ಕೆ ನಿರ್ಮಿಸಿದ ವಸ್ತುಗಳ ಯೋಗ್ಯತೆಯನ್ನು ನಿರೂಪಿಸುವುದಕ್ಕಾಗಿ ಈಕೆ ಅನುಸರಿಸಿದ ಒಂದು ಪದ್ಧತಿ. ಈ ಪರೀಕ್ಷಾ ಪದ್ಧತಿಯು ಒಂದು ಅಸಾಧಾರಣ ತತ್ತ್ವವಾಗಿದೆ. ಭೂವಸ್ತು ಜಾತದ ಈ ಪರೀಕ್ಷಾ ಪದ್ಧತಿಯು, ದಿವ್ಯವಸ್ತು ಜಾತವಾಯಿತು.

ಸಹೃದಯರೆಲ್ಲರೂ ಗೋದಾದೇವಿಯ ಈ ಮಧುರ ಸಾಹಸೀ ಪರೀಕ್ಷಾ ಪದ್ಧತಿಯ ತತ್ತ್ವರಹಸ್ಯವನ್ನು ಕೊಂಡಾಡಬಲ್ಲರು. ಪರಮಾತ್ಮನನ್ನು ಕಲೆತು ಕೊಳ್ಳುವ ಅಭಿಲಾಷೆಯನ್ನು ಹೊಂದಿರುವ ಜೀವಾತ್ಮಳೇ ಗೋದಾದೇವಿ. ಈಕೆಯ ಧನ್ಯಚರಿತ್ರೆಯು ಮಾನವರಿಗೆ ಮಾರ್ಗದರ್ಶನವಾದುದು. ಶ್ರೀರಂಗನಾಥನ ದಿವ್ಯದೇಹವನ್ನು ಮನೋಹರವಾದ ಪುಷ್ಪಮಾಲೆಯಿಂದಲೂ, ಕಮನೀಯವಾದ ಕಾವ್ಯಮಾಲೆಯಿಂದಲೂ ಗೋದಾದೇವಿಯು ಬಂಧಿಸಿಟ್ಟಿರುವಳು. ಈ ಕಾರಣದಿಂದಲೇ ಈಕೆಯು ರಚಿಸಿರುವ 'ತಿರುಪ್ಪಾವೈ' ವಿಶಿಷ್ಟಾದ್ವೈತ ಸಿದ್ಧಾಂತದ ಸಾರವಾಗಿದೆ. ಅದೇ ರೀತಿಯಲ್ಲಿ ಈ ಕಾವ್ಯವು ಒಂದು ಉತ್ತಮ 'ಗೋಪೀ ಕಾವ್ಯ'ವೆಂದು ಪ್ರಸಿದ್ಧಿ ಪಡೆದಿದೆ.

ಆಂಡಾಳ್‌ಳ ಪ್ರಬಂಧದಲ್ಲಿ ದಿವ್ಯಪ್ರೇಮ ಪ್ರಕರ್ಷಣೆಯು ಗೋಚರವಾಗುತ್ತದೆ. ಈಕೆಯು ದೇವ-ಮಾನವ ಸಂಭಾವಿತೆ. ಈಕೆ ತಮಿಳು ಕವಯಿತ್ರಿಯಾದರೂ, ಸಂಸ್ಕೃತ ವಿದ್ವಾಂಸರು ಈಕೆಯನ್ನು 'ಗೋದಾ' ಎಂದೇ ಸಂಭಾವಿಸಿದರು. 'ಗೋದಾ' ಎಂದರೆ ಉತ್ತಮ ವಾಗ್ಮಿ, ಉತ್ತಮ ವಚೋರಚನಾ

ಧುರೀಣಳು ಎಂದರ್ಥ. ಈಕೆ ಕೃಷ್ಣಪ್ರೇಮವನ್ನು ಸಂಕೀರ್ತಿಸಿದ್ದಾಳೆ. ಮಾನವರಲ್ಲಿನ, ಸಾಧುಗಳಲ್ಲಿನ, ದಿವ್ಯ ಜನರಲ್ಲಿ ನೆಲೆಸಿರುವ ಕೃಷ್ಣಪ್ರೇಮವು ಉದಾತ್ತವಾದುದೆಂದು ಈಕೆ ಸಾರಿದಳು. ಈಕೆಯ ಪ್ರಬಂಧ ಪಠಣವು ಹೇಯ ಭಾವಗಳನ್ನು ದೂರ ಮಾಡುವ, ಬ್ರಹ್ಮಾನಂದವನ್ನು ಹೃದಯಕ್ಕೆ ಒದಗಿಸುವ ಒಂದು ಕಾರಂಜಿ ಎಂದು ಹೇಳಿದ್ದಾಳೆ.

ಈಕೆಯು ಭಾರತೀಯ ಸಾಹಿತ್ಯಕ್ಕೆ ಭೂಷಣಪ್ರಾಯಳು. ಪ್ರಾಚ್ಯ ಪಾಶ್ಚಾತ್ಯ ಪಂಡಿತರು, ತತ್ತ್ವಶಾಸ್ತ್ರಜ್ಞರನೇಕರು ಈಕೆಯ ಕಾವ್ಯಗಳಲ್ಲಿನ ಮಧುರಾತಿಮಧುರವಾದ ಭಾವನೆಗಳ ಪರಂಪರೆಯನ್ನು ಪರಿಶೀಲಿಸಿ, ಆಶ್ಚರ್ಯಚಕಿತರಾಗಿ, ಆ ಕಾವ್ಯಗಳನ್ನು ಎಷ್ಟೋ ರೀತಿಗಳಲ್ಲಿ ಪ್ರಶಂಸಿಸಿದ್ದಾರೆ.

'ತಿರುಪ್ಪಾವೈ' ಒಂದು ವಿಶಿಷ್ಟವಾದ ಪ್ರಬಂಧ ಕಾವ್ಯ. ಇದರಲ್ಲಿ ಗೋಪಿಕಾ ಭಾವವನ್ನು ತುಂಬಾ ಸೊಗಸಾಗಿ ಕವಯಿತ್ರಿ ಚಿತ್ರಿಸಿದ್ದಾಳೆ. ಈಕೆ ಶ್ರೀವಿಲ್ಲಿಪುತ್ತೂರಿನಲ್ಲಿನ ಸಖಿಯರನ್ನು ಕೃಷ್ಣ ವಿರಹದಿಂದ ಪರಿತಪಿಸುವ ಗೋಪಿಕಾ ಸ್ತ್ರೀಯರೆಂದು ಭಾವಿಸಿದಳು. ಆ ಸ್ಥಳವನ್ನೇ ಗೋಕುಲವೆಂದು ಭಾವಿಸಿದಳು. ವಟಪತ್ರಶಾಯಿಯ ದೇವಾಲಯವನ್ನು ನಂದಗೋಪನ ನಿಲಯವೆಂದು ಭಾವಿಸಿದಳು. ವಟಪತ್ರಶಾಯಿಯನ್ನು ಶ್ರೀಕೃಷ್ಣನೆಂದೇ ತಿಳಿದಳು. ಹೀಗೆ 'ತಿರುಪ್ಪಾವೈ' ಅನುಸಂಧಾನಕ್ಕೆ ಆಂಡಾಳ್ ತನ್ನ ಸ್ವಂತ ಊರಿನಲ್ಲೇ ಕಾವ್ಯಾನುಭವಕ್ಕೆ ಪೂರ್ವರಂಗವನ್ನು ನಿರ್ಮಿಸಿದಳು.

ಗೋಪಿಯರ ನಾಯಕಿಯಾದ ಗೋದಾದೇವಿಯು ತನ್ನ ಸ್ನೇಹಿತೆಯರೊಡಗೂಡಿ, ಮುಕ್ತಕಂಠದಿಂದ ರಾಗಸ್ವರ ಮೇಳದೊಂದಿಗೆ ಪ್ರತಿಧ್ವಾನಿತ ಮಧುರ ಸಂಗೀತದೊಂದಿಗೆ ಹಾಡುಗಳನ್ನು ಹಾಡುವಳು. 29 ಪಾಶುರಗಳು ಅತ್ಯಂತ ಮನೋಹರವಾಗಿ ಗೋದಾ ಪ್ರಬಂಧ ವಿವರ್ತನ ಕೀಲಕವಾಗಿರುತ್ತದೆ. ಅವರೆಲ್ಲರ ಮಧುರ ಭಾವಗಳನ್ನು, ಕೋರಿಕೆಗಳನ್ನು ಭಗವನ್‌ಮುಖವಾಗಿಸಿ, ಸರ್ವದಾ ಪರಮಪದ ನಾಥ ಸೇವಾ ಭಾಗ್ಯವನ್ನು ಕಲ್ಪಿಸಬೇಕೆಂದು ಗೋದಾದೇವಿಯು ಶ್ರೀಕೃಷ್ಣನನ್ನು ದೊಡ್ಡ ವರ ಕೇಳುವಳು. ಗಹನ ವೇದಾಂತ ಶಾಸ್ತ್ರ ರಹಸ್ಯಗಳನ್ನು ಈ ಪ್ರಬಂಧದಲ್ಲಿ ಕರತಲಾಮಲಕವಾಗುವಂತೆ ಜನರಿಗೆ ತಿಳಿಯಪಡಿಸಿರುವಳು.

'ತಿರುಪ್ಪಾವೈ'ನಲ್ಲಿನ 30 ಪಾಶುರಗಳನ್ನು ವಿವಿಧ ರಾಗ ತಾಳಗಳೊಂದಿಗೆ

ಹಾಡುವುದಕ್ಕೆ ಅನುಕೂಲ ಮಾಡಿಕೊಡುವಂತೆ ರಚಿಸಲಾಗಿದೆ. ಮಾಸಗಳಲ್ಲೇ ಶ್ರೇಷ್ಠತಮವಾದ ಮಾರ್ಗಶೀರ್ಷ ಮಾಸದಲ್ಲಿ ಯೋಗ್ಯರಾದ ವರಗಳನ್ನು ಹೊಂದುವುದಕ್ಕಾಗಿ ನವ ಯುವತಿಯರು ನಿಯಮಯುಕ್ತವಾಗಿ ಆಚರಿಸುವ 'ಮಾರ್ಗಳಿ ನೋಮು'ಕ್ಕೆ ಸಂಬಂಧಿಸಿದ ವಿಶೇಷಗಳನ್ನು ಈ ಕಾವ್ಯದಲ್ಲಿ ಅಭಿವರ್ಣಿಸಲಾಗಿದೆ.

ಸ್ವತಃ ಆಚರಿಸುವವರಿಗೇ ಅಲ್ಲದೆ ದೇಶದಾದ್ಯಂತದ ಪ್ರಜೆಗಳೆಲ್ಲರಿಗೂ ಒಳ್ಳೆಯದಾಗಲೆಂದೂ, ಸಕಾಲದಲ್ಲಿ ಮಳೆಯಾಗಲೆಂದೂ, ಸಸ್ಯಗಳು ಸಮೃದ್ಧವಾಗಿ ಬೆಳೆಯಲೆಂದೂ, ಒಳ್ಳೆಯ ಬೆಳೆಗಳಿಂದ ದೇಶವೆಲ್ಲವೂ ಸುಭಿಕ್ಷವಾಗಿರಲೆಂದೂ, ಇವೆಲ್ಲವೂ ಈ ವ್ರತದ ಆಚರಣೆಯಿಂದ ಸಾಧ್ಯವೆಂದೂ ಇದರಲ್ಲಿ ಸ್ಪಷ್ಟೀಕರಿಸಲಾಗಿದೆ.

ದೇಶಕಾಲ ಪಾತ್ರತೆಗಳನ್ನು ಪರಿಗಣಿಸದೆ ಆಂಡಾಳ್ ತಾನು ಗೋಪಿಯೆಂದು ಭಾವಿಸಿಕೊಂಡು, ಸಖೀಜನರಿಂದೊಡಗೂಡಿ, ತನ್ನ ಇಷ್ಟದೈವವಾದ ಶ್ರೀಕೃಷ್ಣನ ಸಾನ್ನಿಧ್ಯಕ್ಕೆ ವ್ರತಫಲ ಪ್ರಾಪ್ತಿಗಾಗಿ ಹೊರಡುವುದು–ಇತ್ಯಾದಿ ವಿಷಯಗಳನ್ನು–'ತಿರುಪ್ಪಾವೈ'ನಲ್ಲಿ ವಿಶದೀಕರಿಸಲಾಗಿದೆ.

ಈ ಮಹಾಭಕ್ತಳು ಸಹಜ ಸಿದ್ಧವಾದ ತನ್ನ ಭಕ್ತಿ ಭಾವವನ್ನು ಸುಸ್ಪಷ್ಟವಾಗಿ ವ್ಯಕ್ತಪಡಿಸಿರುವುದೇ ಅಲ್ಲದೆ ಆ ಕಾಲದಲ್ಲಿನ ಗ್ರಾಮಜೀವನದ ವಿಧಾನಗಳನ್ನು ಕೂಡ ರಮಣೀಯವಾಗಿ ವರ್ಣಿಸಿರುವುದೇ ಅಲ್ಲದೆ ಇದರ ಮುಖಾಂತರ ಆಕೆಯ ತಾತ್ತ್ವಿಕ, ಭಕ್ತಿಭಾವದ ದೃಕ್ಪಥವನ್ನು ಚಿತ್ರಿಸಿದ್ದಾಳೆ.

ಈ 'ತಿರುಪ್ಪಾವೈ' ದಿವ್ಯಪ್ರಬಂಧದಲ್ಲಿನ 30 ಪಾಶುರಗಳು ಮಾರ್ಗಳಿ ಮಾಸದಲ್ಲಿ ಶ್ರೀವೈಷ್ಣವರೆಲ್ಲರ ಗೃಹಗಳಲ್ಲಿ ಶ್ರವಣಾನಂದಕರವಾಗಿ ಗಾನ ಮಾಡಲಾಗುತ್ತದೆ. ವಿವಿಧ, ವರ್ಣ, ಜಾತಿಗಳ ಶ್ರೀವೈಷ್ಣವರೆಲ್ಲರೂ ಈ ದಿವ್ಯಪ್ರಬಂಧವನ್ನು ಭಕ್ತಿ ಶ್ರದ್ಧೆಗಳಿಂದ ಅನುಸಂಧಾನ ಮಾಡುತ್ತಾ, ಆತ್ಮಾನಂದವನ್ನು ಹೊಂದುತ್ತಿದ್ದರು.

ಈ ದಿವ್ಯಪ್ರಬಂಧದಲ್ಲಿ ಗೋದಾದೇವಿಯಿಂದ ಪ್ರತಿಪಾದಿಸಲ್ಪಟ್ಟಿರುವ ಮಾರ್ಗಳಿ ವ್ರತವು ಕೇವಲ ದಕ್ಷಿಣ ಭಾರತದಲ್ಲೇ ಅಲ್ಲದೆ ಉತ್ತರ ಭಾರತಾದ್ಯಂತ ಆಚರಿಸಲ್ಪಡುತ್ತಿರುವುದು ಗಮನಾರ್ಹ ಅಂಶ.

'ನಾಚ್ಚಿಯಾರ್ ತಿರುಮೊಳಿ'ಯಲ್ಲಿನ ನೂರ ನಲವತ್ತು ಮೂರು ಪಾಶುರ

ಗಳು ವಿವಿಧ ರಾಗ ತಾಳಗಳೊಂದಿಗೆ ಗಾನ ಮಾಡುವುದಕ್ಕೆ ಯೋಗ್ಯವಾದು ದಾಗಿವೆ. ಜಗನ್ಮೋಹನನಾದ ಕೃಷ್ಣನಿಗೆ ತಾನು ಪ್ರೇಯಸಿಯಾಗಿದ್ದು ಕೊಂಡು, ಅಂತಹ ಪ್ರೇಮಾತಿಶಯದೊಂದಿಗೆ ಆಂಡಾಳಳು ಪಾಶುರಗಳನ್ನು ರಚಿಸಿರುವಳು. ಶ್ರೀಕೃಷ್ಣನ ಮೇಲೆ ತನಗಿರುವ ಅಭಿಮಾನವನ್ನು ಮನ್ಮಥನಿಗೆ ತಿಳಿಸುವಿಕೆ, ಕೋಗಿಲೆ ಹಾಗೂ ಮೇಘಗಳೊಂದಿಗೆ ಕೃಷ್ಣನಿಗೆ ತನ್ನ ಪ್ರೇಮ ಸಂದೇಶವನ್ನು ತಿಳಿಸುವಂತೆ ಹೇಳುವಿಕೆ, ಶ್ರೀಕೃಷ್ಣನ ಆಗಮನಕ್ಕಾಗಿ ಪರಿತಪಿಸಿ ಪ್ರಾರ್ಥಿಸುವಿಕೆ, ಕನಸಿನಲ್ಲಿ ಮಾಧವನೊಂದಿಗೆ ಮದುವೆ ಮಾಡಿಕೊಳ್ಳುವಿಕೆ, ಶ್ರೀಕೃಷ್ಣನೊಂದಿಗೆ ಸಂಯೋಗ–ವಿಯೋಗಗಳನ್ನು ಹೊಂದಿರುವಿಕೆ–ಇತ್ಯಾದಿ ವಿಷಯಗಳು ಈ ಪಾಶುರಗಳಲ್ಲಿ ವರ್ಣಿಸಲಾಗಿದೆ.

ಈ ಪ್ರಬಂಧಗಳಲ್ಲಿನ 'ವಾರಣಮಾಯಿರಂ' ಎನ್ನುವ ದಶಕವನ್ನು ಶ್ರೀವೈಷ್ಣವರ ಮನೆಗಳಲ್ಲಿ, ವಿವಾಹ ಮಹೋತ್ಸವ ಸಂದರ್ಭಗಳಲ್ಲಿ ಗಾನ ಮಾಡುವಿಕೆ–ಇತ್ಯಾದಿಯವುಗಳು ಪರಿಪಾಟವಾಗಿದೆ. ಇದೊಂದು ವಿಶೇಷ ವಿಷಯ ವೆಂಬುದನ್ನು ಗಮನಿಸಬೇಕು

ಜೀವವೆಂಬುದು ಹೆಣ್ಣು, ಪರಮಾತ್ಮನೊಬ್ಬನೇ ಗಂಡು, ಅವನಿಗೇ ಎಲ್ಲವೂ, ಎಲ್ಲರೂ ಮೀಸಲು–ಎನ್ನುವ ಬಹು ಕಠಿಣವಾದ ಕಾಂತಭಾವ ಮಾರ್ಗ ವನ್ನು ಆಂಡಾಳ್ ತನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದಳು. ಅದನ್ನು ಅನು ಸರಿಸಿ, ಭಕ್ತಿ ಜ್ಞಾನ ವೈರಾಗ್ಯಗಳಿಂದ ಹಾಗೂ ಭಗವತ್ ಪ್ರೇಮದಿಂದ ಇವಳ ನಾರೀ ಹೃದಯವು ತುಂಬಿರುತ್ತಿತ್ತು.

**8. ತಿರುಮಂಗೈ ಆಳ್ವಾರ್ :**

ಭಗವಂತನ ಶಾಙ್ರ್ಗದ ಅವತಾರಿಯಾಗಿ ಬೇಡರ ಕುಲದಲ್ಲಿ ಜನಿಸಿದ ಈ ಆಳ್ವಾರರು ಮೊದಲು ದುಷ್ಟರಾಗಿದ್ದು, ನಂತರ ಭಗವತ್ ಕೃಪೆಯಿಂದ ಸತ್ಪುರುಷ ರಾಗಿ ಪರಿವರ್ತನೆ ಹೊಂದಿ, ಪರಮಾತ್ಮನ ಸೇವೆಯಲ್ಲೇ ತಮ್ಮೆಲ್ಲ ಜೀವನವನ್ನು ಸವೆಸುತ್ತಾ, ಕೃತಿ ರಚನೆ ಮಾಡಿದ್ದಾರೆ. ಇವರು ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎನ್ನುವ ಆರು ವೇದಾಂತಗಳಂತಿರುವ ಪೆರಿಯ ತಿರುಮೊಳಿ, ತಿರುಕ್ಕುರುಂದಾಂಡಕಂ, ತಿರುನೆಡುಂದಾಂಡಕಂ, ತಿರುವೆಳಿಕ್ಕು ತ್ತಿರುಕ್ಕೈ, ಶಿರಿಯ ತಿರುಮಡಲ್, ಪೆರಿಯ ತಿರುಮಡಲ್–ಎನ್ನುವ ಆರು ಗೀತಾತ್ಮಕ ಕೃತಿಗಳನ್ನು ಆಶು, ಮಧುರ, ಚಿತ್ರ, ವಿಸ್ತಾರ ಎನ್ನುವ ನಾಲ್ಕು

ರೀತಿಗಳಲ್ಲಿ ರಚಿಸಿ, ಹಾಡಿದ್ದಾರೆ.

ನಾಲಾಯಿರ ದಿವ್ಯಪ್ರಬಂಧದಲ್ಲಿ ಇವರು ರಚಿಸಿರುವಷ್ಟು ಪಾಶುರಗಳನ್ನು ಬೇರೆ ಯಾವ ಆಳ್ವಾರರೂ ರಚಿಸಿಲ್ಲ. ಅತ್ಯಂತ ಅಧಿಕ ಸಂಖ್ಯೆಯ ಪಾಶುರಗಳನ್ನು ಬರೆದಿದ್ದರೂ, ಅವೆಲ್ಲವೂ ವಿವಿಧ ರಾಗ ತಾಳಗಳಿಂದ ರಚಿಸಲ್ಪಟ್ಟಿವೆ, ಒಟ್ಟು 1361 ಪಾಶುರಗಳ ರಚನೆಯಾಗಿದೆ.

'ಪೆರಿಯ ತಿರುಮೊಳಿ'ಯಲ್ಲಿ ಭಗವಂತನು ಆಳ್ವಾರರಿಗೆ ನಿರ್ಹೇತುಕ ಕೃಪೆ ಮಾಡಿ ವೇದಸಾರವಾದ ಅಷ್ಟಾಕ್ಷರೀ ಮಂತ್ರವನ್ನು ಉಪದೇಶಿಸಿದ ವಿವರಗಳು, ಆ ಮಂತ್ರದ ಪೂರ್ಣ ವಿವರಣೆ, ಅದರ ಅನುಭವದ ಸಂಪೂರ್ಣ ಚಿತ್ರಣವಿದೆ. ಪರಿಣಾಮವಾಗಿ ಈ ಕೃತಿಯನ್ನು ಅದೇ ಅಷ್ಟಾಕ್ಷರೀ ಮಂತ್ರದಿಂದ ಪ್ರಾರಂಭಿಸುತ್ತಾರೆ. ಅದರ ಮಹಿಮೆಯು ವಿವರಗಳು ಇದರಲ್ಲಿ ಹಾಸುಹೊಕ್ಕಾಗಿದೆ. ಈ ತಿರುಮಂತ್ರ ಅವತರಿಸಿದ ಬದರಿಕಾಶ್ರಮದಿಂದ, ತಿರುಪ್ಪುಲ್ಲಾಣಿವರೆಗೆ ಇರುವ ಎಲ್ಲ 108 ದಿವ್ಯದೇಶಗಳಲ್ಲಿರುವ ಭಗವಂತನ ಅರ್ಚಾಮೂರ್ತಿಗಳನ್ನು ದರ್ಶಿಸಿದ ಅನುಭವದ ಪ್ರವಾಹವೇ ಈ ಕೃತಿ. ತಿರುಮಂತ್ರದ ಸಾರಾರ್ಥವೇ 'ಭಗವಂತನ ದಾಸಾನುದಾಸ್ಯ' ಎಂಬುದಾಗಿ ತಿಳಿಸುವ ಆಳ್ವಾರರು ಭಗವಂತನಿಗೆ ನಾವು ಸ್ವರೂಪಕೃತ ದಾಸರು ಎಂಬ ವಿಷಯವನ್ನು ಪ್ರತಿಪಾದಿಸುತ್ತಾರೆ. 'ಭಗವತ್ ಭಾಗವತ ಕೈಂಕರ್ಯವೇ ಪರಮ ಪುರುಷಾರ್ಥ' ಎಂಬ ತತ್ತ್ವವನ್ನು ಈ ಕೃತಿಯಲ್ಲಿ ಆಳ್ವಾರರು ಬಹಳ ಸುಂದರವಾಗಿ ಪ್ರತಿಪಾದಿಸುತ್ತಾರೆ.

ತಾವು ದರ್ಶಿಸಿದ ಎಲ್ಲ ದಿವ್ಯಕ್ಷೇತ್ರಗಳ ಅರ್ಚಾಮೂರ್ತಿಗಳ ಸ್ತೋತ್ರದ ವಿವರಗಳು ಇಲ್ಲಿನ ಪಾಶುರಗಳಲ್ಲಿ ಕಂಡುಬರುತ್ತವೆ. ತಾವು ಯೌವ್ವನ ದೆಸೆಯಲ್ಲಿ ತಮ್ಮ ಅರಿವಿಗೆ ಬರದೆ ನಡೆಸಿದ ದುಷ್ಕೃತ್ಯಗಳನ್ನು ವರ್ಣಿಸಿ, ಭಗವತ್ ಚರಣಾರವಿಂದಗಳಲ್ಲಿ ತದಾತ್ಮ್ಯದಿಂದ ತಮ್ಮನ್ನು ತಾವು ಸಮರ್ಪಿಸಿಕೊಂಡ ವೃತ್ತಾಂತ, ಅದರಿಂದ ತಮ್ಮ ಜೀವನದಲ್ಲಾದ ಪರಿವರ್ತನೆ, ಅದರ ಪ್ರಭಾವ ಇತ್ಯಾದಿಗಳನ್ನು ಆಳ್ವಾರರು ಈ ಪ್ರಬಂಧದಲ್ಲಿ ವ್ಯಕ್ತೀಕರಿಸಿದ್ದಾರೆ. ಅನೇಕ ತಾತ್ತ್ವಿಕ ರಹಸ್ಯಗಳನ್ನು ವಿವರಿಸಿರುವ ಈ ಪ್ರಬಂಧವು ನಿತ್ಯಾನುಸಂಧಾನಯೋಗ್ಯವಾದುದನ್ನಾಗಿ ಆಳ್ವಾರರು ಪರಿವರ್ತನೆಗೊಳಿಸಿದ್ದಾರೆ.

'ಪೆರಿಯ ತಿರುಮೊಳಿ'ಯು ತಿರುಮಂಗೈ ಆಳ್ವಾರರ ಸರ್ವತೋಮುಖ ಪ್ರಜ್ಞಾವಂತಿಕೆಯನ್ನು ಚಿತ್ರಿಸುತ್ತದೆ. ಅವರ ರಚನಾ ಸಾಮರ್ಥ್ಯ ಅನುಭವ

ವಾದುದೆಂಬುದು ಈ ಕೃತಿಯಿಂದ ತಿಳಿದುಬರುತ್ತದೆ. ದಿವ್ಯದೇಶಗಳನ್ನು ದರ್ಶಿಸುವುದು ಜೀವಿಯು ಧನ್ಯನಾಗುವುದಕ್ಕೆ ಮಾರ್ಗವಾಗುತ್ತದೆಯೆಂದು ಇವರು ತಿಳಿಸುತ್ತಾರೆ. ವಿಪ್ಲವವಾದಿಯಾಗಿದ್ದವರು ಹೇಗೆ ಭಗವದ್ಭಕ್ತರಾದರು, ಮಹಾ ಪಂಡಿತರಾದರು ಎಂಬುದರ ದೈವ ಪರಿವರ್ತನೆಯ ಅದ್ಭುತ ಚಿತ್ರಣ ಈ ಕೃತಿಯಲ್ಲಿದೆ.

ಭಗವದ್ದರ್ಶನ ಮಾಡಬೇಕೆಂದರೆ ಅರ್ಚಾರೂಪದ ಮೇಲೆಯೇ ನಮ್ಮ ಗಮನವನ್ನು ಕೇಂದ್ರೀಕರಿಸಬೇಕು. ಆ ದೇವದೇವನ ಮಹಿಮೆಯನ್ನು ಅಭಿವರ್ಣಿಸಿ, ನಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು. ಅನಿತ್ಯವಾದ ಸ್ವರ್ಗಸುಖವು ಇದರಿಂದ ಚೇತನರಿಗೆ ಲಭಿಸುವುದು ಎಂದು ಆಳ್ವಾರರು ಆಹ್ಲಾದಕಾರಕ, ಹೃದಯಂಗಮ ರೀತಿಯ ಕಾವ್ಯಶೈಲಿಯಲ್ಲಿ ವಿವರಿಸಿರುತ್ತಾರೆ. ಅನಿತ್ಯವಾದ ಸ್ವರ್ಗವು ಬೇಕೆನ್ನುವವರು ಭೂತಲ ವೈಕುಂಠದ ಪ್ರತಿಬಿಂಬಗಳಾದ ದೇವಾಲಯಗಳನ್ನು ದರ್ಶಿಸಿ, ಅಲ್ಲಿನ ಅರ್ಚಾಮೂರ್ತಿಗಳನ್ನು ಸ್ತೋತ್ರಗೈದು ಬ್ರಹ್ಮಾನಂದವನ್ನು ಪಡೆಯಬೇಕು. ಇದೇ ಶ್ರೇಷ್ಠತರವಾದ ಮಾರ್ಗವಾಗಿರುತ್ತದೆ ಎಂದು ಈ ಆಳ್ವಾರರು ಈ ಕೃತಿಯಲ್ಲಿ ಬೋಧಿಸಿರುವರು.

ಈ ದೇವಾಲಯಗಳಲ್ಲಿನ ದೈವದರ್ಶನ, ಅದರ ಅರ್ಚನೆ, ಪೂಜನ, ಸ್ತೋತ್ರ ಪಠಣಗಳು ಸ್ವರ್ಗತುಲ್ಯ ಸುಖಗಳನ್ನು ನೀಡಿ, ಆ ಭಗವದಾರಾಧನ ದ್ವಾರಾ ಸಾಧ್ಯವಿಲ್ಲದ ಗುರಿ ಬೇರೆ ಯಾವುದೂ ಇಲ್ಲ ಎಂದು ಆಳ್ವಾರರು ಸ್ಪಷ್ಟೀಕರಿಸಿದ್ದಾರೆ.

ಇಂದ್ರಿಯ ನಿಗ್ರಹವನ್ನು ಸಾಧಿಸಿ, ತಪಸ್ಸನ್ನು ಮಾಡಿ ಎಂದು ಇವರು ಬೋಧಿಸಲಿಲ್ಲ. ಕಠೋರ ನಿಯಮಗಳಿಂದ ಪಂಚಾಗ್ನಿಗಳ ಮಧ್ಯದಲ್ಲಿ ಏಕಪಾದಿಗಳಾಗಿ ಅರಣ್ಯದಲ್ಲಿ ಘೋರ ತಪಸ್ಸನ್ನು ಆಚರಿಸಿರಿ ಎಂದು ಇವರು ಬೋಧಿಸಲಿಲ್ಲ. ದೇವಾಲಯದಲ್ಲಿರುವ ಮನೋಹರ ಸೌಮ್ಯ ಕರುಣಾಮಯ ಅರ್ಚಾರೂಪವನ್ನು ಆರಾಧಿಸಿ, ದೈವ ವಿರಹವನ್ನು ಹೊಂದಿ ಎಂದು ಇವರು ಉಪದೇಶಿಸಿದರು. ದೈವದರ್ಶನಾಕಾಂಕ್ಷಿಗಳಾಗಿ, ದೈವಾನುಗ್ರಹವನ್ನು ಕೋರಿ, ದೇವಾಲಯಗಳಿಗೆ ಬರುವ ಭಕ್ತರುಗಳೊಂದಿಗೆ ಕಲೆತು, ಮೆಲುತು ಭಗವನ್ನಾಮ ಸ್ಮರಣೆ, ಆತನ ಮಹಿಮೆಯ ಚರ್ಚೆಗಳನ್ನು ಮಾಡುವುದು ಉತ್ತಮವೆಂದು ಈ ಆಳ್ವಾರರು ಆದೇಶಿಸುತ್ತಾರೆ.

ಮಾನವಶಾವಾದಿಗಳಾದ ಈ ಆಳ್ವಾರರ ಮತ್ತೊಂದು ತತ್ತ್ವೋಪದೇಶವೂ ಇದೆ. ಸಾಹಿತ್ಯ ಮಾರ್ಗದಲ್ಲಿ ಪ್ರಯಾಣ ಮಾಡಿ, ಭಗವಂತನನ್ನು ತಲುಪಬೇಕು ಎಂಬುದು ಇವರ ತತ್ತ್ವೋಪದೇಶ. ತಮಿಳು ವಾಙ್ಮಯ ಜಗತ್ತಿನ ಈ ಮಹ ನೀಯರು ಚತುಷ್ಕವಿ ಶಿಖಾಮಣಿಗಳೆಂದು ವಿಖ್ಯಾತಿ ಪಡೆದರು. ಇವರ ಗೀತೆ ಗಳು, ವೃತ್ತಗಳು, ಬಂಧುಗಳು ಸುಸಂಗತಗಳಾಗಿದ್ದು, ಮಧುರಮಯವಾಗಿದ್ದು ಓದುಗರಿಗೆ ಪ್ರತಿಧ್ವಾನಿತ ಬ್ರಹ್ಮಾನಂದದ ಅನುಭವವಾಗುವುದು.

'ತಿರುನೆಡುಂದಾಂಡಕಂ' ಎನ್ನುವ ಪ್ರಬಂಧದಲ್ಲಿ ಮೂವತ್ತು ಪಾಶುರ ಗಳಿವೆ. ಆಳ್ವಾರರು ಇದರಲ್ಲಿ ನಾಯಿಕಾ ಭಾವವನ್ನು ವಿವರಿಸಿ, ಆದರ ಮುಖಾಂ ತರ ಭಗವದನುಭವ ಪಡೆಯಲು ಸಾಧ್ಯ ಎಂದು ತಿಳಿಸುತ್ತಾರೆ. ಸಾಂಸಾರಿಕವಾದ ಮೋಹ ಬಂಧನದಿಂದ ಬಿಡುಗಡೆ ಹೊಂದಿ, ಪರಮ ಕಾರುಣಿಕನಾದ ಭಗವಂತ ನನ್ನು ಶರಣು ಹೊಂದುವುದರಿಂದ ಪಡೆಯುವ ಪ್ರಯೋಜನವನ್ನು ಇದರಲ್ಲಿ ಆಳ್ವಾರರು ವಿಶದೀಕರಿಸಿದ್ದಾರೆ. ಈ ಕೃತಿಯಲ್ಲಿ ವಿವರಿಸಿರುವ ಶಾಸ್ತ್ರಾರ್ಥದ ಆಧಾರವನ್ನು ಅನುಸರಿಸಿಯೇ ಶ್ರೀ ಪರಾಶರ ಭಟ್ಟರು ಅದ್ವೈತಿಯಾದ ಮಾಧವಾಚಾರ್ಯರನ್ನು ಜಯಿಸಿದರು. ಇದೇ ಮಾಧವಾಚಾರ್ಯರೇ ನಂತರ 'ನಂಜೀಯರ್' ಎಂಬ ಹೆಸರಿನಿಂದ ಮುಂದೆ ಶ್ರೀವೈಷ್ಣವ ಸಂಪ್ರದಾಯದ ಪ್ರವರ್ತಕರಾದರು. ಈ ಪ್ರಬಂಧವು ಪಾರಾಯಣ ಮಾಡಲೂ ಸಹ ಸುಯೋಗ್ಯ ವಾಗಿದೆ. ಇದರ ಪಠಣ ಆಲಿಸಲು ಇಂಪಾಗಿರುತ್ತದೆ.

ಈ ಆಳ್ವಾರರು ಒಂದು ದೀರ್ಘ ಪಾಶುರ ಮಾತ್ರವಿರುವ 'ತಿರುವೆಳುಕೂಂ ತ್ತಿರುಕ್ಕೈ' ಎನ್ನುವ ಕೃತಿಯಲ್ಲಿ ಭಗವಂತನ ಸ್ವರೂಪ, ರೂಪ, ಗುಣ ವಿಭೂತಿ ಗಳನ್ನು ಸವಿಸ್ತಾರವಾಗಿ ವಿವರಿಸಿ, ತಿರುಕ್ಕುರಿಂದೈನಲ್ಲಿನ ಆರಾವಮುದನಲ್ಲಿ ಶರಣಾಗತಿ ಮಾಡುತ್ತಿದೆ.

ಈ ರೀತಿ ಶರಣಾಗತಿ ಮಾಡಿದರೂ ಕೂಡ ಭಗವಂತನು ಬಂದು ಇವರಿಗೆ ದರ್ಶನ ನೀಡುವುದಿಲ್ಲ. ಈ ಕಾರಣ ವಿಭವಾವತಾರದಲ್ಲಿರುವ ಗುಣ ವಿಭೂತಿ ಗಳನ್ನು ನಾಶಪಡಿಸುವುದಾಗಿ ಹೇಳಿಕೊಂಡು, ಶಿರಿಯ ತಿರುಮಡಲ್ ಎಂಬ ಪ್ರಬಂಧವನ್ನು ರಚಿಸಿದರು.

ಅರ್ಚಾವತಾರದಲ್ಲಿರುವ ಗುಣ ವಿಭೂತಿಗಳನ್ನು ನಾಶಪಡಿಸುವುದಾಗಿ ಹೇಳಿಕೊಂಡು 'ಪೆರಿಯ ತಿರುಮಡಲ್' ಎಂಬ ಪ್ರಬಂಧವನ್ನು ರಚಿಸಿದರು.

ಈ ಎಲ್ಲ ರಚನೆಗಳಲ್ಲಿ ಭಗವಂತನಲ್ಲಿ ಆಳ್ವಾರರಿಗಿರುವ ಅತ್ಯುತ್ಕಟ ಭಕ್ತಿಯನ್ನು ತೋರಿಸುತ್ತದೆ.

ಪಂಡಿತ ಪಾಮರರಿಗೆ ಪರಮಾತ್ಮನ ಭುವನ ಸುಂದರ ಮೂರ್ತಿಯಾದ ಅರ್ಚಾರೂಪವು ಎಂದೆಂದಿಗೂ ಮರೆಯಲಾರದಂತಹ ಪ್ರಭಾವವನ್ನು ಬೀರುವಂತಹುದಾಗಿದೆ. ಈ ಆಳ್ವಾರರ ಪ್ರಬಂಧ ಪಠನವು ಹೃದಯ ಸ್ಪಂದನವನ್ನು ಮಾಡುವಂತಹುದಾಗಿರುತ್ತದೆ. ದೈವ ಮಾಹಾತ್ಮ್ಯಾಭಿ ವರ್ಣನೆ ಹಾಗೂ ವೈಯಕ್ತಿಕ-ಸಾಹಿತ್ಯ ಮಾರ್ಗ ಸಂಪಾದಿತ ಭಗವದ್ಭಕ್ತಿ-ಈ ಎರಡೂ ಉನ್ನತ, ಉದಾತ್ತ ವೇದಾಂತ ತತ್ತ್ವಗಳು ಕಾಲಗರ್ಭದಲ್ಲಿ ವಿಲನಗೊಂಡಿಲ್ಲ.

ತಿರುಮಂಗೈ ಆಳ್ವಾರರ ತತ್ತ್ವಬೋಧನೆಯು ನಮಗೆ ಶಿರೋಧಾರ್ಯ. ಶ್ರೀವೈಷ್ಣವ ಮತ ವಿಷಯಕ ತತ್ತ್ವಬೋಧೆಯಲ್ಲಿ ಈ ಆಳ್ವಾರರು ಅಗ್ರಗಣ್ಯರು.

**9. ನಮ್ಮಾಳ್ವಾರರು :**

ಇವರು 'ತಿರುವಿರುತ್ತಮ್', 'ತಿರುವಾಶಿರಿಯಮ್', 'ಪೆರಿಯ ತಿರುವಂದಾದಿ', 'ತಿರುವಾಯ್ಮೊಳಿ' ಎನ್ನುವ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ. ಈ ನಾಲ್ಕೂ ಕೃತಿಗಳು ನಾಲ್ಕು ರತ್ನಗಳೆಂದು ನಾವು ಭಾವಿಸಬಹುದು.

'ತಿರುವಿರುತ್ತಮ್' ಎನ್ನುವುದು ಋಗ್ವೇದದ ಸಾರವಾಗಿದೆ. ಇದರಲ್ಲಿ ಒಂದುನೂರು ಪಾಶುರಗಳಿವೆ. ದೇಹಾತ್ಮಾ ವಿವೇಕ ಜ್ಞಾನದಿಂದ ಪ್ರಾರಂಭಿಸಿ ಜ್ಞಾನಪಿರಾನ್‌ನ ಅನುಗ್ರಹವಿಲ್ಲದೆ ಮತ್ತೊಂದು ಪುರುಷಾರ್ಥವಿಲ್ಲ ಎನ್ನುವ ಗೀತೆಯ ಸಾರವನ್ನು ಆಳ್ವಾರರು ಇದರಲ್ಲಿ ವಿವರಿಸಿರುತ್ತಾರೆ.

ಭಕ್ತನಿಗೆ ಭಗವಂತನ ಮೇಲೆ ಇರುವ ಭಕ್ತಿಯ ಆಳ, ಅದರ ತನ್ಮಯತ್ವ ಇತ್ಯಾದಿಯವುಗಳನ್ನು ಈ ಪ್ರಬಂಧದಲ್ಲಿ ವಿಶೇಷತಃ ವರ್ಣಿಸಲಾಗಿದೆ. ಈ ಆಳ್ವಾರರು ತಮ್ಮನ್ನು ನಾಯಕಿ ಎಂದು ಭಾವಿಸಿಕೊಂಡು, ಪರಮಾತ್ಮನನ್ನು ಪ್ರಿಯತಮ ನಾಯಕನೆಂದು ಭಾವಿಸಿಕೊಂಡು, ತಮ್ಮ ನಾಥನ ನಿಮಿತ್ತ ವಿರಹ ವೇದನೆಯೊಂದಿಗೆ ಪರಿಪರಿ ರೀತಿಗಳಲ್ಲಿ ಪರಿತಪಿಸುವ ಸನ್ನಿವೇಶವನ್ನು ಇದರಲ್ಲಿ ವರ್ಣಿಸಲಾಗಿದೆ.

ನಾಯಕಿಯು ತನ್ನ ಪ್ರಿಯತಮನ ಅನುರಾಗವನ್ನು ಅಪೇಕ್ಷಿಸಿ, ಪ್ರಕೃತಿಯುಷ್ಟೂ ತನಗೆ ಪ್ರತಿಕೂಲವಾಗಿದೆಯೆಂದು ಭಾವಿಸಿ, ವಿಹ್ವಲಳಾದ ನಾಯಕಿಯಂತೆ ನಾಯಕನ ಬರುವಿಕೆಗಾಗಿ ಕಾಯುತ್ತಾ ಅವನ ನಿರೀಕ್ಷೆಯಲ್ಲಿ ಕಾಲ

ಕಳೆಯುತ್ತಿರುವ ಚಿತ್ರಣ ತುಂಬಾ ಹೃದಯಂಗಮವಾಗಿದೆ.

ಹೀಗೆ ನಾಯಕನಿಗಾಗಿ ನಿರೀಕ್ಷಿಸುತ್ತಾ ನಾಯಕಿಯು ಕೊರಗಿ ಕೊರಗಿ ಕೃಶಳಾಗುತ್ತಾಳೆ. ಆಗಲೂ ಅವನು ಬರದೇ ಇದ್ದಾಗ, ತನ್ನ ಪ್ರಿಯತಮನಿಗೆ ಮೇಘಗಳ ಮುಖಾಂತರ ತನ್ನ ಸಂದೇಶವನ್ನು ಅವಳು ಕಳುಹಿಸುವಳು. ಇದರಿಂದ ಯಾವುದೇ ಪ್ರಯೋಜನವಾಗುವುದಿಲ್ಲ. ಇದರಿಂದ ರೋಸಿಹೋದ ನಾಯಕಿಯು ತನ್ನ ಪ್ರಿಯತಮನ ವಿರಹವನ್ನು ಸಹಿಸಲಾರದೆ ಪ್ರಾಣತ್ಯಾಗ ಮಾಡುವ ಸಾಹಸಕ್ಕೂ ಇಳಿಯುವಳು. ಆಗಲಾದರೂ ನಾಯಕನ ರೂಪದ ಪರಮಾತ್ಮನ ಅನುಗ್ರಹ ತನ್ನ ಮೇಲೆ ಉಂಟಾಗುವುದೇನೋ ಎನ್ನುವ ನಿರೀಕ್ಷೆ ಆಳ್ವಾರರದ್ದು.

ಇಂತಹ ನಾಯಿಕಾ ಭಾವದಿಂದ ಕೂಡಿದ ಅನೇಕ ವಿಷಯಗಳೊಂದಿಗೆ ಈ ಕೃತಿಯು ತುಂಬಾ ರಸವತ್ತಾಗಿ ಕಂಡುಬರುವುದು.

ಸ್ಥೂಲದೃಷ್ಟಿಯಿಂದ ವೀಕ್ಷಿಸಿದಲ್ಲಿ ಲೌಕಿಕ ದೃಷ್ಟಿಯಲ್ಲಿನ ಪ್ರೇಮತತ್ತ್ವವನ್ನು ವರ್ಣಿಸುವಂತೆ ಕಂಡುಬಂದು, ಒಂದು ಮನೋಹರ ಕಾವ್ಯದಂತೆ ತೋರುತ್ತದೆ.

ಆದರೆ ಸೂಕ್ಷ್ಮವಾಗಿ ಗಮನಿಸಿದಲ್ಲಿ ಭಗವಂತನ ವಿರಹವೇದನೆಯನ್ನು ಹೊಂದಿರುವ ನಾಯಕಿಯಂತೆ ಆಳ್ವಾರರು ಕಂಡುಬರುವರು. ಭಗವಂತನ ನಿಮಿತ್ತ ಎಷ್ಟೋ ಪರಿತಪಿಸುತ್ತಿರುವಂತಹ ಭಾವ ಇದರಿಂದ ವ್ಯಕ್ತವಾಗುವುದು.

ಆದುದರಿಂದ ಈ ದಿವ್ಯಪ್ರಬಂಧವು ಮಧುರ ಭಕ್ತಿಯನ್ನು ಹರಿಯಬಿಡುವ ಗ್ರಂಥಗಳಲ್ಲಿ ಪ್ರಮುಖವಾದುದಾಗಿ ಪರಿಗಣಿಸಲಾಗಿದೆ.

ಹೀಗೆ 'ತಿರುವಿರುತ್ತ'ದಲ್ಲಿ ಸಂಸಾರ ಜೀವನವು ದುಸ್ಸಾಹಸ ಎಂಬುದನ್ನು ನಿರೂಪಿಸುವ ನಮ್ಮಾಳ್ವಾರರು 'ತಿರುವಾಶಿರಿಯಮ್'ನಲ್ಲಿ ಭಗವಂತನ ದಿವ್ಯಮಂಗಳ ವಿಗ್ರಹದ ಸೌಂದರ್ಯವನ್ನು ಪೂರ್ಣವಾಗಿ ಅನುಭವಿಸುವರು. ಇದರಲ್ಲಿ ಏಳು ಪಾಶುರಗಳಿವೆ. ಇದು ಯಜುರ್ವೇದ ಸಾರವಾದುದಾಗಿದೆ.

ಈ ರೀತಿಯಲ್ಲಿ ಹಿಂದಿನ ಪ್ರಬಂಧದಲ್ಲಿ ಭಗವಂತನ ದಿವ್ಯಮಂಗಳ ವಿಗ್ರಹದ ಸೌಂದರ್ಯವನ್ನು ಅನುಭವಿಸಿದ ಆಳ್ವಾರರು ಮೂರನೆಯದಾದ 'ಪೆರಿಯ ತಿರುವನ್ದಾದಿ'ಯಲ್ಲಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಯಥಾವತ್ತಾಗಿ ಆತನನ್ನು ಅನುಭವಿಸಬೇಕೆಂಬ ಹಂಬಲವು ಹುಟ್ಟಿ, ತಮ್ಮ ಆರ್ತ್ಯತಿಶಯವನ್ನು ನಿರೂಪಿಸಿರುವರು.

'ಪೆರಿಯ ತಿರುವಂದಾದಿ'ಯಲ್ಲಿ 87 ಪಾಶುರಗಳಿವೆ. ಇದನ್ನು ಅಥರ್ವಣ ವೇದವನ್ನಾಗಿ ಪರಿಗಣಿಸಲಾಗುತ್ತಿದೆ. ಈ ಕೃತಿಯಲ್ಲಿ ಯಾವುದೇ ರೀತಿಯ ಕಥಾನಕವೂ ಇಲ್ಲ. ಇದರಲ್ಲಿನ ಎಲ್ಲ ಪಾಶುರಗಳು ಭಗವಂತನನ್ನು ಕುರಿತಾದ ಭಕ್ತಿ ವೈಭವವನ್ನು ಸಾರುತ್ತವೆ. ಅಲ್ಲದೆ ಭಗವಂತನ ಭುವನ ಮೋಹನ ಸೌಂದರ್ಯವನ್ನು, ಆತನ ಕಲ್ಯಾಣಗುಣಗಳನ್ನು, ಇತರೇ ವಿವರಗಳನ್ನು ಮನೋಹರವಾಗಿ ವಿವರಿಸಲಾಗಿದೆ.

ನಾಲ್ಕನೆಯ ಪ್ರಬಂಧವಾದ 'ತಿರುವಾಯ್ಮೊಳಿ'ಯು ಶ್ರೀವೈಷ್ಣವ ಸಾಹಿತ್ಯಕ್ಕೆ, ದರ್ಶನಕ್ಕೆ ಕಿರೀಟಪ್ರಾಯವಾದಂತಹುದು. ಆಳ್ವಾರರು ಇದರಲ್ಲಿ ಭಗವಂತನನ್ನು ಪರಿಪೂರ್ಣವಾಗಿ ಅನುಭವಿಸಿದ ಪ್ರಕಾರವನ್ನು ನಿರೂಪಿಸುತ್ತಾ, ಮುಕ್ತಿ ಪಡೆಯುವ ರೀತಿಯನ್ನು ವಿವರಿಸಿದ್ದಾರೆ.

ಈ ಕೃತಿಯು ಶಾರೀರಿಕ ಮೀಮಾಂಸೆಯ ಕ್ರಮವನ್ನು ಅವಲಂಬಿಸಿದೆ. ನಾರಾಯಣ ಶಬ್ದಾರ್ಥ ಇದು ವಿವರಿಸುತ್ತದೆ. ಆದಾಗಿ ಪರತತ್ತ್ವ, ಪರಮಹಿತ, ಪರಮ ಪುರುಷಾರ್ಥಗಳನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. ಭಗವಂತನ ಕಲ್ಯಾಣಗುಣಗಳನ್ನು ನಿರೂಪಿಸಿ, ಪರತತ್ತ್ವ ಎನ್ನುವುದು ಶ್ರಿಯಃ ಪತಿಯಾದ ನಾರಾಯಣನೇ ಎಂದು ವಿವರಿಸಲಾಗಿದೆ. ಶರಣಾಗತಿಯೇ ಪರಮಹಿತ. ಅಪ್ರಾಕೃತ ದೇಶವಿಶೇಷವನ್ನು ಅರ್ಚಿರಾದಿ ಮಾರ್ಗದಿಂದ ಹೊಂದಿ ಅಲ್ಲಿ ಭಗವಂತನನ್ನು ಪರಿಪೂರ್ಣವಾಗಿ ಅನುಭವಿಸಿ, ಆ ಅನುಭವದ ಪರೀವಾಹವಾಗಿ ಅವನಿಗೆ ಕೈಂಕರ್ಯವನ್ನು ಮಾಡುವುದೇ ಪರಮ ಪುರುಷಾರ್ಥ ಎಂಬುದನ್ನು ಆಳ್ವಾರರು ಇದರಲ್ಲಿ ಸ್ಪಷ್ಟೀಕರಿಸಿದ್ದಾರೆ.

ಇವುಗಳನ್ನು ಸ್ವತಃ ಪ್ರತ್ಯಕ್ಷೀಕರಿಸಿಕೊಂಡಿದ್ದ ನಮ್ಮಾಳ್ವಾರರು ಸ್ವಾನುಷ್ಠಾನ ಮುಖೇನ ಲೋಕೋಪಕಾರಕ್ಕಾಗಿ ತಮ್ಮ ಅನುಭವವನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ.

ಇದು ಆಳ್ವಾರರ ಗ್ರಂಥಗಳಲ್ಲೆ ಅಗ್ರಗಣ್ಯವಾದುದು. ತಮಿಳು ವಾಙ್ಮಯ ದಲ್ಲೇ ಅಲ್ಲದೆ ಭಾರತೀಯ ತತ್ತ್ವಶಾಸ್ತ್ರದಲ್ಲಿಯೇ ಅತ್ಯುತ್ತಮವಾದ ಗ್ರಂಥ ವಾಗಿದೆ. ಇದೊಂದು ಶೋಭಾಯಮಾನವಾದ ಕೃತಿಯಾಗಿದೆ.

'ತಿರುವಾಯ್‌ಮೊಳಿ' ಎಂದರೆ 'ಮಹನೀಯನ ವಾಕ್ಕಿನಿಂದ ಹೊರಬಿದ್ದ 'ದಿವ್ಯವಾಣಿ' ಎಂದರ್ಥ. 'ವಾಯ್‌ಮೊಳಿ' ಎನ್ನುವ ಶಬ್ದವು ಪ್ರಾಚೀನ ತಮಿಳು

ವಾಙ್ಮಯದಲ್ಲಿ 'ವೇದ' ಎನ್ನುವ ಅರ್ಥ ನೀಡುವ ಪದವಾಗಿದೆ. ಆದುದರಿಂದಲೇ ಈ ಕೃತಿಯನ್ನು ವೇದಕ್ಕೆ ಸಮಾನವಾದ ಕೃತಿಯನ್ನಾಗಿ ಗೌರವಿಸಲಾಗುತ್ತಿದೆ. ಸಾಮವೇದ ಸಾರವೆಲ್ಲವೂ ಈ ಕೃತಿಯಲ್ಲಿ ಭಟ್ಟಿ ಇಳಿಸಲಾಗಿದೆ ಎಂದು ಸಂಪ್ರದಾಯವೇತ್ತರ ತೀರ್ಮಾನ.

ಈ ಪ್ರಬಂಧದಲ್ಲಿ 1102 ಪಾಶುರಗಳಿವೆ. ಇವು ವಿವಿಧ ರಾಗ, ತಾಳ ಗಳೊಂದಿಗೆ, ಹಾಡುವುದಕ್ಕೆ ಅನುಕೂಲವಾಗಿರುವಂತೆ ರಚಿಸಲಾಗಿದೆ. ಈ ಪ್ರಬಂಧ ವೆಲ್ಲವೂ ಶತಕಗಳಾಗಿ ವಿಭಾಗಿಸಲಾಗಿದ್ದು, ಒಂದೊಂದು ಶತಕವೂ ಹತ್ತು ದಶಕ ಗಳಾಗಿ ವಿಭಾಗಿಸಲಾಗಿದೆ. ಪ್ರತಿ ದಶಕದಲ್ಲೂ ಹತ್ತು ಪಾಶುರಗಳಿದ್ದು, ಹನ್ನೊಂದನೇ ಪಾಶುರದಲ್ಲಿ ಆ ದಶಕದ 'ಫಲಶ್ರುತಿ'ಯನ್ನು ಹೇಳಲಾಗಿದೆ.

ಈ ಪ್ರಬಂಧದಲ್ಲಿ ಭಕ್ತಿ ಪ್ರಪತ್ತಿಗಳು, ಆಚಾರ್ಯ ಪ್ರಭಾವ ಮುಂತಾದ ಅನೇಕ ವಿಷಯಗಳನ್ನು ವರ್ಣಿಸಲಾಗಿದೆ. ಅಲ್ಲದೆ ಅನೇಕ ಧರ್ಮ ಮರ್ಮ ಗಳಷ್ಟನ್ನೂ ಸವಿಸ್ತಾರವಾಗಿ ವಿವರಿಸಲಾಗಿದೆ. ಇದರಲ್ಲಿ ಅನೇಕ ದಶಕಗಳಲ್ಲಿ ಜೀವಾತ್ಮ-ಪರಮಾತ್ಮರ ನಡುವೆ ಇರುವ ನಾಯಕ-ನಾಯಕಿ ಸಂಬಂಧವನ್ನು ಬಹಳಷ್ಟು ಮನೋಜ್ಞವಾಗಿ ವರ್ಣಿಸಲಾಗಿದೆ.

ತಮಿಳು ವಾಙ್ಮಯ ಪ್ರಪಂಚದಲ್ಲಿ ನಮ್ಮಾಳ್ವಾರರಿಗೆ ದೊರೆತಿರುವಂತಹ ಉನ್ನತ ಸ್ಥಾನ ಬೇರೆ ಯಾರಿಗೂ ದೊರೆತಿರುವುದಿಲ್ಲ. ಇವರು 'ತಿರುವಾಯ್ಮೊಳಿ' ಯಲ್ಲಿ ಪ್ರತಿಪಾದಿಸಿರುವ ಸಿದ್ಧಾಂತಗಳು ಶ್ರೀವೈಷ್ಣವ ಮತ ಹಾಗೂ ದರ್ಶನಕ್ಕೇ ಬುನಾದಿ ಎಂಬುದು ನಿರ್ವಿವಾದ. ಇದನ್ನು ಎಲ್ಲರೂ ಏಕಕಂಠದಿಂದ ಒಪ್ಪುತ್ತಾರೆ.

ಆದುದರಿಂದಲೇ ಶ್ರೀವೈಷ್ಣವ ಲೋಕವು ನಮ್ಮಾಳ್ವಾರರನ್ನು 'ಶ್ರೀವೈಷ್ಣವ ಕುಲಪತಿ' ಎಂಬ ಬಿರುದಿನಿಂದ ಗೌರವಿಸಿ, ಅವರ ಮೇಲೆ ತಮಗಿರುವ ಅಚಂಚಲ ವಾದ ಭಕ್ತಿ ಪ್ರಪತ್ತಿಗಳನ್ನು ತೋರ್ಪಡಿಸಿದೆ. ಅಷ್ಟೇ ಅಲ್ಲದೆ ನಮ್ಮಾಳ್ವಾರರನ್ನು 'ತಮಿಳು ವೇದ ಪ್ರಣೇತ' ಹಾಗೂ 'ತಮಿಳು ವೇದವ್ಯಾಸರು' ಎಂಬ ಬಿರುದು ಗಳಿಂದ ಪ್ರಶಂಸಿಸಲಾಗಿದೆ.

ನಮ್ಮಾಳ್ವಾರರನ್ನು ಪ್ರಸ್ತಾಪಿಸುತ್ತಾ ಅನೇಕರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಅಂತಹ ಪ್ರಶಂಸಾ ಗ್ರಂಥಗಳಲ್ಲಿ ನಮ್ಮಾಳ್ವಾರರ ಶಿಷ್ಯರತ್ನರಾಗಿ ಪ್ರಖ್ಯಾತಿ ಹೊಂದಿರುವ ಮಧುರ ಕವಿ ಆಳ್ವಾರರು 'ಕಣ್ಣಿನುಣ್ ಶಿರುತ್ತಾಂಬು' ಎನ್ನುವ ಕೃತಿಯನ್ನು ಮೊಟ್ಟಮೊದಲನೆಯದನ್ನಾಗಿ ಉದಾಹರಿಸಬಹುದು.

ನಂತರದ್ದು 'ಆಚಾರ್ಯ ಹೃದಯಂ'. ತದನಂತರದ್ದು 'ಪಾದುಕಾ ಸಹಸ್ರ', 'ದ್ರಾವಿಡ ಉಪದೇಶ ರತ್ನಾವಳಿ', 'ಶಠಗೋಪರಂದಾದಿ', 'ಆಳ್ವಾರ್ ಅನುಭೂತಿ', 'ದಿವ್ಯ ಸೂರಿ ಚರಿತಂ' ಮುಂತಾದ ಗ್ರಂಥಗಳನ್ನು ಮುಖ್ಯವಾದು ವನ್ನಾಗಿ ಪರಿಗಣಿಸಲಾಗಿದೆ.

ಇವೇ ಅಲ್ಲದೆ 'ಬ್ರಹ್ಮಾಂಡ ಪುರಾಣ', 'ಭವಿಷತ್ ಪುರಾಣ', 'ಮಾರ್ಕಂಡೇಯ ಪುರಾಣ' ಮುಂತಾದ ಗ್ರಂಥಗಳಲ್ಲಿಯೂ ನಮ್ಮಾಳ್ವಾರರ ಅವತಾರ ಪ್ರಾಶಸ್ತ್ಯವನ್ನು ಕುರಿತಾದ ಸವಿಸ್ತಾರವಾದ ವರ್ಣನೆಗಳಿವೆ. ಇದರಿಂದ ನಮ್ಮಾಳ್ವಾರರ ಮಹಾ ಪ್ರಭಾವವನ್ನು ನಾವು ಸುಲಭವಾಗಿ ಗ್ರಹಿಸಬಹುದಾಗಿದೆ.

ಯಾವ ತಿಂತ್ರಿಣಿ ಕೋಟರವನ್ನು ನಿವಾಸಸ್ಥಾನವನ್ನಾಗಿ ಮಾಡಿಕೊಂಡು, ದಿವ್ಯವಾದ ತಮ್ಮ ಜ್ಞಾನತೇಜವನ್ನು ದಿಗಂತಗಳವರೆಗೆ ನಮ್ಮಾಳ್ವಾರರು ಹರಡಿದರೋ, ಅಂತಹ ತಿಂತ್ರಿಣಿ ಮಹಾವೃಕ್ಷವು ಇಂದಿಗೂ 'ಆಳ್ವಾರ್ ತಿರುನಗರಿ' ಯಲ್ಲಿ ಸುರಕ್ಷಿತವಾಗಿದ್ದು, ಅದನ್ನು ದರ್ಶಿಸುವ ಮುಮುಕ್ಷುಗಳಿಗೆ ಆಶ್ಚರ್ಯ ವನ್ನು ಉಂಟುಮಾಡುತ್ತಾ ನಿಂತಿದೆ.

ನಮ್ಮಾಳ್ವಾರರ ನಾಲ್ಕೂ ಕೃತಿಗಳು ಒಟ್ಟುಗೂಡಿ 'ದ್ರಾವಿಡ ವೇದಸಾಗರ' ಎನ್ನುವ ಖ್ಯಾತಿಯನ್ನು ಪಡೆದಿದೆ. ಭಗವದ್ರಾಮಾನುಜರು ಬ್ರಹ್ಮಸೂತ್ರಗಳನ್ನು ಕುರಿತು 'ಶ್ರೀಭಾಷ್ಯ' ರಚಿಸುವಾಗ, ನಮ್ಮಾಳ್ವಾರರ ಕೃತಿಗಳು ಅವರಿಗೆ ಬಹಳ ವಾಗಿ ಸಹಕರಿಸಿದುವೆಂದು ತಿಳಿದುಬರುತ್ತದೆ. ಇಷ್ಟೇ ಅಲ್ಲದೆ ಶ್ರೀ ವೇದಾಂತ ದೇಶಿಕರೂ ಕೂಡ ನಮ್ಮಾಳ್ವಾರರ ಕೃತಿಗಳಿಂದಲೇ ವೇದ ರಹಸ್ಯಗಳನ್ನು ಗ್ರಹಿಸಿದುವೆಂದು ಒಂದೆಡೆ ತಿಳಿಸಿದ್ದಾರೆ.

ಈ ಆಳ್ವಾರರ 'ತಿರುವಾಯ್ಮೊಳಿ'ಯ ಮೇಲೆ ಅನೇಕ ಭಾಷ್ಯಗಳು, ಟೀಕೆಗಳು ಪ್ರಕಟವಾಗಿವೆ. ಭಾರತೀಯ ಭಾಷೆಗಳೆಲ್ಲವುಗಳಲ್ಲೂ ಇದು ಅನುವಾದ ವಾಗಿರುವುದೇ ಅಲ್ಲದೆ ವಿದೇಶೀ ಭಾಷೆಗಳಲ್ಲೂ ಪ್ರಮುಖವಾಗಿ ಜರ್ಮನಿ, ಇಂಗ್ಲಿಷ್, ಫ್ರೆಂಚ್ ಭಾಷೆಗಳಲ್ಲೂ ಈ ಕೃತಿ ಅನುವಾದಗೊಂಡಿದ್ದು, ಅದನ್ನು ಕುರಿತಾದ ಸಂಗ್ರಹ ವ್ಯಾಖ್ಯಾನಗಳೂ ಪ್ರಕಟವಾಗಿವೆ. ಹೀಗಾಗಿ ಜಗತ್ತಿನ ಧಾರ್ಮಿಕ ಸಾಹಿತ್ಯಕ್ಕೆ ಈ ಕೃತಿಯು ಸೇರ್ಪಡೆಯಾಗಿ, ಅದರಲ್ಲಿನ ಅಂತಃಸತ್ವ ವನ್ನು ಸಕಲರೂ ಅರಿಯುವ ಮಾರ್ಗ ಸಿದ್ಧವಾಗಿದೆ. ಏನಿದ್ದರೂ ಈ ಕಾರ್ಯ ಮುಂದುವರಿಯಲು ಆ ದೇಶಗಳಲ್ಲಿ, ಆ ಭಾಷೆಗಳಲ್ಲಿ ಸೂಕ್ತ ಪ್ರವಚನಗಳು,

ಉಪನ್ಯಾಸಗಳು, ಪ್ರಾತ್ಯಕ್ಷಿಕೆಗಳು ತುಲನಾತ್ಮಕ ಅಧ್ಯಯನಗಳೂ ಬರಬೇಕಾದುದು ಅವಶ್ಯಕ. ಆದುದರಿಂದಲೇ ಈ ಕೃತಿಯು 'ಸಹಸ್ರಗೀತಾ' ಎಂದು ಸುಪ್ರಸಿದ್ಧವಾಗಿದೆ.

ನಮ್ಮಾಳ್ವಾರರ ನಂತರದ ಕಾಲದಲ್ಲಿ ಹೊರಬಂದಿರುವ ಭಕ್ತಿ ಕಾವ್ಯದ ಮೇಲೆ 'ತಿರುವಾಯ್ಮೊಳಿ' ಗ್ರಂಥವು ಅಪಾರ ಪ್ರಭಾವವನ್ನು ಬೀರಿದೆ ಎನ್ನುವುದಕ್ಕೆ ಎರಡನೇ ಮಾತಿಲ್ಲ. ಈ ಕೃತಿಯಲ್ಲಿನ ದಿವ್ಯ ಸಂದೇಶವನ್ನು ತದನಂತರದ ಭಕ್ತಕವಿಗಳನೇಕರು ಪರಿಗ್ರಹಿಸಿ, ತಮ್ಮ ತಮ್ಮ ಗ್ರಂಥಗಳಲ್ಲಿ ಅಳವಡಿಸಿಕೊಂಡು, ಗ್ರಂಥ ರಚನೆ ಮಾಡಿರುವ ಉದಾಹರಣೆಗಳು ಬೇಕಾದಷ್ಟಿವೆ. ಇಷ್ಟೇ ಅಲ್ಲದೆ ಹಲವು ವ್ಯಾಕರಣ ತಜ್ಞರು, ಈ ಕೃತಿಯಿಂದ ಉದಾಹರಣೆಗಳನ್ನು ನೀಡಿ, ಈ ಪಾಶುರಗಳ ಆಧಾರದ ಮೇಲೆ ವ್ಯಾಕರಣ ಶಾಸ್ತ್ರಗ್ರಂಥಗಳನ್ನು ರಚಿಸಿ, ವಿಶೇಷ ಪ್ರಶಂಸೆಯನ್ನು ಪಡೆದಿದ್ದಾರೆಂದು ತಿಳಿದುಬಂದಿದೆ.

ನಮ್ಮಾಳ್ವಾರರ ಕೃತಿಗಳಲ್ಲಿ ಕೆಲವೊಂದು ಸಿದ್ಧಾಂತಗಳನ್ನು ಪ್ರತಿಪಾದಿಸಲಾಗಿದೆ. ಅವುಗಳಲ್ಲಿ ಭಗವತ್ತತ್ತ್ವ ಮುಖ್ಯವಾದುದು. ಇದನ್ನು ಸತ್ಯಸ್ವರೂಪ, ಆನಂದ ಸ್ವರೂಪ ಎನ್ನುವ ಹೆಸರುಗಳಿಂದಲೂ ಕರೆಯಬಹುದು.

ಭಗವಂತನು ಭಕ್ತರ ಬಗ್ಗೆ ದಯಾಮಯನಾಗಿರುತ್ತಾನೆ. ಆತನು ಸರ್ವ ಕಲ್ಯಾಣಗುಣಕಾರನು, ಆರ್ತತ್ರಾಣ ಪರಾಯಣನು. ಚರಾಚರ ವಿಶ್ವವೆಲ್ಲವೂ ಭಗವತ್ ಶರೀರಭೂತವಾಗಿರುವುದು. ಈ ಸಮಸ್ತ ವಿಶ್ವಕ್ಕೇ ಭಗವಂತನು ಆತ್ಮಭೂತನು. ಪರಮಾತ್ಮ, ಜೀವಾತ್ಮ ಸಂಬಂಧಗಳು ನಾನಾ ರೀತಿಯದ್ದಾಗಿದೆ. ಜೀವನು ಭಕ್ತಿ, ಪ್ರಪತ್ತಿಗಳ ಮೂಲಕ ಮೋಕ್ಷವನ್ನು ಹೊಂದುವನು. ಇದೇ ನಮ್ಮಾಳ್ವಾರರ ತತ್ತ್ವನಿರ್ಣಯ. ಸ್ವಧರ್ಮಾಚರಣೆಯಿಂದ ಮಾನವನು ತನ್ನನ್ನು ತಾನು ಅರ್ಹಮಾಡಿಕೊಳ್ಳಬಲ್ಲನು. ಈ ಆತ್ಮಜ್ಞಾನದಿಂದ ಭಗವತ್ಪ್ರಾಪಕವಾಗುವುದು ಸಾಧ್ಯ.

ಈ ಆಳ್ವಾರರು ಭಗವದ್ವಿರಹ ಭಾವಾನುಭವವನ್ನು ಪಾಶುರಗಳ ಮುಖಾಂತರ ತೋಡಿಕೊಂಡು ಆನಂದತುಂದಿಲರಾದಾಗ, ಭಗವಂತನ ಬಗೆಗೆ ಅವರಿಗಿರುವ ಪ್ರೀತಿಯ ಆಳದ ಅರಿವಾಗುವುದು. 'ಮಹನೀಯ ವಿಷಯೇ ಪ್ರೀತಿರ್ಭಕ್ತಿಃ' ಎನ್ನುವ ಶ್ರೀ ಭಾಷ್ಯದ ಸಿದ್ಧಾಂತದ ಅನುಸಾರ ಅದರ ಸಾಧನೆಯ ಫಲಿತವು ಭಗವದ್ದರ್ಶನ ಎನ್ನುವುದು ಶತಸ್ಸಿದ್ಧ.

ಈ ಆಳ್ವಾರರು ಸಂಸಾರಾರ್ದ್ರಿತ ಮಾನವ ಕೋಟಿಯ ಬಗ್ಗೆ ಬಹಳಷ್ಟು ದಯೆಯನ್ನು ಹೊಂದಿದ್ದವರು. ಅವರಿಗಾಗಿ ಅನೇಕ ಮಾರ್ಗೋಪಾಯಗಳನ್ನು ಸೂಚಿಸಿ, ಭಗವತ್ ಸಾಕ್ಷಾತ್ಕಾರಕ್ಕೆ ಅನುವು ಮಾಡಿಕೊಟ್ಟರು. ಇವರು ಜನ್ಮತಃ ಪರಮ ತಾತ್ತ್ವಿಕರು. ಇವರು ಜನಿಸಿದ ಕೂಡಲೇ ಅಜ್ಞಾನಾವೃತ ಆತ್ಮವನ್ನು ಅನುಭವಿಸಿದ್ದಲ್ಲದೆ ಶಠವಾಯುವನ್ನು ಜಯಿಸಿ, 'ಶಠಗೋಪರು' ಎಂಬ ಅನ್ವರ್ಥ ನಾಮವನ್ನು ಪಡೆದವರು. ಸಾಮಾನ್ಯ ಜನರ ಅಜ್ಞಾನವನ್ನು ಕಂಡು ಇವರಿಗೆ ತುಂಬಾ ನೋವು ಉಂಟಾಯಿತು. ಅದರಿಂದ ಮಿಥ್ಯಾ ಧ್ಯಾನದಿಂದಲೂ, ಹೇಯ ಶರೀರ ಸಂಬಂಧದಿಂದಲೂ ಜನರು ಮುಕ್ತಿ ಹೊಂದಲಿ ಎಂದು ಭಗವಂತನನ್ನು ಪ್ರಾರ್ಥಿಸಿದ್ದಾರೆ. ಪರಿದೃಶ್ಯವಾದ ಪ್ರಪಂಚಕ್ಕೂ, ಸರ್ವೇಶ್ವರನಿಗೂ ನಡುವೆ ಅವಕಾಶಕಾಲಿಕಾವರೋಧಗಳು ಇಲ್ಲವೆಂದು, ಸೃಷ್ಟಿಯಲ್ಲಿ ದೈವಸ್ವರೂಪವಾದುದು ಯಾವುದು ಇಂದ್ರಿಯಗೋಚರವಾಗಿರುತ್ತದೆಯೋ, ಅದನ್ನು ಅನುಸರಿಸಿ, ತಮ್ಮ ಜೀವನಗಳನ್ನು ತಿದ್ದಿ, ಸರಿಪಡಿಸಿಕೊಳ್ಳುವುದು ಉತ್ತಮವೆಂದೂ ಇವರು ತಿಳಿಸಿದರು.

ಹವ್ಯವಾಹನನಾದ ಹಯಗ್ರೀವ ದೇವನನ್ನು ಇವರು ದರ್ಶಿಸಿ, ಗಾಢಾಲಿಂಗನ ಮಾಡಿಕೊಳ್ಳಲು ಇವರು ಪ್ರಯತ್ನಿಸಿದರು. ಆ ದೇವನನ್ನು ಅಚ್ಯುತನೆಂದು ಇವರು ಕರೆದರು. ವೀತಿಹೋತ್ರನು ತಮ್ಮನ್ನು ಬಾಧಿಸುವುದಿಲ್ಲವೆಂದು ಇವರು ಭಾವಿಸಿದರು. ನವನೀತನನ್ನು ನೋಡಿ ಕೃಷ್ಣ ರಸನಾಸ್ವಾದ್ಯವೆಂದೂ, ಭೋಗಾಸನಾಸೀನನಾದ ಭೋಗ್ಯವಸ್ತುವೆಂದೂ ಸಂಭಾವಿಸಿದರು. ಸರ್ವ ದರ್ಶನ ವನ್ನು ಆನಂದ ರಸ ಸಂಪ್ಲಾವಿತರಾದರು. ಶೇಷಶಯನನ ಶಯನವಾದ ಆದಿಶೇಷ ನನ್ನು ಪರಿದೃಶ್ಯವಾದ ಸರ್ಪವೆಂದು ಭಾವಿಸಿದರು. ವೇಣುನಾದ ಶ್ರವಣನೂ, ಅಧರಾರ್ಪಿತ ವೇಣುಗಾನಲೋಲನಾದ ಶ್ರೀಕೃಷ್ಣ ಪರಮಾತ್ಮನ ದಿವ್ಯಮಂಗಳ ವಿಗ್ರಹವು ಈ ಆಳ್ವಾರರಿಗೆ ನಯನ ಪಥವರ್ತಿಯಾಗಿ, ನೇತ್ರಪರ್ವವಾಯಿತು. ಇವರ ಭಗವದ್ವಿಷಯಿಕ ಮೋಹಾವೇಶವು ಒಂದು ವಿಶಿಷ್ಟ ರೀತಿಯ ತತ್ತ್ವಶಾಸ್ತ್ರ ವಾಗಿದೆ. ಅದು ಕಾಲ ನಿಯಂತ್ರಿತನೂ, ಯೋಗೀಶ್ವರನೂ ಆದ ಪರಾತ್ಪರನನ್ನೇ ಶಾಸಿಸುವುದು.

ಭಕ್ತಿ ದೆಶೆಯಲ್ಲಿ ಈ ಆಳ್ವಾರರು ಅವಸ್ಥಾಂತರವನ್ನು ಹೊಂದುವರು. ಅದೇ ವಿರಹ ವೇದನಾದೋದೂಯಮಾನ ನಾಯಿಕಾ ಭಾವ. ಈ ಭಾವಭರಿತ

ನಮ್ಮಾಳ್ವಾರರು ಸರ್ವೇಶ್ವರನಿಗೆ ತಾವು ಅತ್ಯಂತ ಅನುರಾಗ ಪಾತ್ರರಾಗಿದ್ದೇವೆಂದು ತಿಳಿದರು. ತಾವೇ ಜಗನ್ನಿಯಂತನಾದ ಜಗನ್ನಾಥನೆಂದು ಭಾವಿಸಿದರು. ವಾಮನಾವತಾರದಲ್ಲಿ ಬಲಿಚಕ್ರವರ್ತಿಯಿಂದ ಪಾದತ್ರಯಾಕ್ರಾಂತ ನಿಖಿಲ ಲೋಕವೇ ತಾನಾಗಿ, ಹೆಸರಿಗೆ ಮಾತ್ರ ದಾನವನ್ನು ಗ್ರಹಿಸಿ, ಅಕುಂಠ ಮಹಿಮಾನ್ವಿತನಾದ ವೈಕುಂಠ ಕಂಠೀರವನು ತಾನೇ ಎಂದು ಭಾವಿಸಿದರು. ಶ್ರೀದೇವಿಯನ್ನು ಉದ್ಧರಿಸುವುದಕ್ಕಾಗಿ ಭೂಗರ್ಭದಿಂದ ಬಂದ ಆದಿ ಘೋಣಮೂರ್ತಿ ತಾವೇ ಎಂದು ಭಾವಿಸಿದರು. ಕಲ್ಪಾಂತದಲ್ಲಿ ಪ್ರಳಯದ ಸಮಯದಲ್ಲಿ ಬ್ರಹ್ಮಾಂಡ ಭಾಂಡವನ್ನು ಗ್ರಹಿಸಿ, ಪುನಃ ಸೃಷ್ಟಿ ಪ್ರಾರಂಭಿಸಿದ ಆದಿದೇವನು ತಾವೇ ಎಂದು ನೆನೆದರು.

ಈ ಆಳ್ವಾರರ ಭಕ್ತಿಭಾವವು ನಂತರದಲ್ಲಿ ಶೃಂಗಾರ ರಸ ಪುಷ್ಟವಾಯಿತು. ತಮ್ಮ ವಿರಹವನ್ನು ದೂತ ಕವಿತಾ ರೂಪದಲ್ಲಿ ಪ್ರದರ್ಶಿಸಿ, ಭಗವದ್ದರ್ಶನವನ್ನು ಕೋರುತ್ತಾ, ದೌತ್ಯದ ಹಾದಿ ಹಿಡಿದರು. ದೇಹ ಬಂಧನದಿಂದ ಪ್ರಾಣವಾಯುವು ವಿರಹಾಗ್ನಿ ಫಲಿತವಾಗಿ ಯಮನಿಂದ ಆಕೃಷ್ಟವಾಗುವುದಕ್ಕೆ ಮುಂಚೆಯೇ, ನಾಯಕೀ ದರ್ಶನವನ್ನು ಅಪೇಕ್ಷಿಸಿದರು.

ಭಗವಂತನ ಮೇಲೆ ಇವರಿಗಿರುವ ಪ್ರೇಮಾತಿಶಯವು ಭಗವನ್ಮೋಹನಾವೇಶವಾಗಿ ಬದಲಾಯಿತು. ಈ ಪ್ರೇಮವು ಉನ್ಮಾದವಸ್ಥೆಯಾಗಿ ಪರಿಣಮಿಸಿತು. ಒಂದು ಕ್ಷಣವೂ ಇವರು ಭಗವದ್ವಿರಹದಿಂದ ದೂರವಿರಲಾರರು. ಕೃತಿಯ ಎಲ್ಲೆಡೆಯಲ್ಲೂ ಆತುರ ಸೂಚನೆಗಳು ಭಾವಾಂಬರ ದೃಗ್ಗೋಚರವಾಗಿರುವುದು.

ಕೃಷ್ಣಪಕ್ಷದ ಚಂದ್ರನಂತೆ ಇವರೂ ಸ್ವತಃ ಕೃಶಿಸಿಹೋಗುತ್ತಿದ್ದರು ಈ ಕಾರಣದಿಂದ.

ಸಮುದ್ರವನ್ನು ವೀಕ್ಷಿಸಿದರೆ ಇವರಲ್ಲಿ ಹುಟ್ಟುತ್ತಿದ್ದ ಭಾವನೆಗಳೇ ಬೇರೆ. ಅದರ ತರಂಗಗಳು ಅಸಂಭಾವಿತವೂ, ಅನಾಸ್ವಾದಿತವೂ, ಅನಾಲಿಂಗಿತಗಳೂ ಆಗಿದ್ದು, ವಿಫಲೀಕೃತ ಪ್ರೇಮದಿಂದ ತಪಿಸುತ್ತಿರುವ ಪ್ರೇಯಸಿಯನ್ನು ಅನುಕರಿಸುತ್ತಾ, ವಿಹಾರಾರ್ತಿಯಾಗಿ ಘೋಷಿಸಿಕೊಂಡಂತೆ ಇವರಿಗೆ ತೋರುತ್ತಿತ್ತು.

ಇವರ ವಿರಹ ಬಾಧೆಯನ್ನು ಭಗವಂತನು ಉಪಶಮನಗೊಳಿಸಲಿಲ್ಲ. ಭಕ್ತಿ ವೈಭವ ಸಮನ್ವಿತವಾದ ಇವರ ಪ್ರೇಮತತ್ತ್ವವು ಈ ತರಹದ್ದೇನೇ. ಈ ರೀತಿಯ ಯಾವುದೇ ಭಾವಗೌರವವು ಜ್ಞಾನೋದಯಕ್ಕೆ ಪೂರ್ವಭಾವಿಯಾದು

ದಾಗಿರುತ್ತದೆ. ಇಂತಹ ಭಕ್ತಿರಾಗಗಳ ಆಹ್ಲಾದಕರವಾದ ಸಂಯೋಗವು ಅಸ್ಮಾದೃಶರ ದೈನಂದಿನ ಸ್ವಪ್ನ ಲಕ್ಷ್ಯವಾಗಿರುತ್ತದೆ. ಭಗವದ್ಭಕ್ತ ತಾತ್ತ್ವಿಕೈಕ್ಯ ವಾಗಿರುವುದೇ ಶಠಕೋಪ ಶಂಖನಾದದ ಮುಖ್ಯ ಸ್ವರವಾಗಿರುತ್ತದೆ.

ಆಳ್ವಾರರಷ್ಟೂ ಜನ ಭಗವತ್ಪ್ರೇಮ ರಸಜ್ಞರು. ಅವರ ಕವಿತ್ವವು ಭಗವ ದ್ಜ್ಞಾನಾನುಭವದಿಂದ ಪರಿಪುಷ್ಟವಾದುದು. ಅವರೆಲ್ಲರೂ ಭಗವದ್ಭಕ್ತಿ ಪ್ರೇರಿತರು. ಇವರೆಲ್ಲರ ರಚನೆಗಳಲ್ಲಿನ ತತ್ತ್ವಶಾಸ್ತ್ರ ಗಂಭೀರತೆ, ಮತ ವಿಷಯಿಕ ಭಕ್ತಿತತ್ತ್ವ ಗಳು ಭಗವತ್ ಸಾನ್ನಿಧ್ಯ ಪ್ರಾಪ್ತಿಗೆ ನಿಜವಾದ ಮಾರ್ಗಗಳು. ಇವೆಲ್ಲವುಗಳಿಂದ ನಮ್ಮಾಳ್ವಾರರೂ ಹೊರತಲ್ಲ. ಇವೆಲ್ಲಕ್ಕಿಂತ ಹೆಚ್ಚಾಗಿ ಅವರದ್ದೇ ಈ ಪ್ರಬಂಧ ಗಳಲ್ಲಿ ಸಿಂಹಪಾಲು.

ಅವರ ಕವಿತೆಗಳಲ್ಲಿ ದಿವ್ಯಪ್ರೇಮ, ಭಗವದ್ಭಕ್ತಿ ರೂಪದ ಮೋಹಾವೇಶ ಗಳು ಬಹಳವಾಗಿ ಕಂಡುಬರುತ್ತಿತ್ತು. ಪ್ರಾಪಂಚಿಕ ನೋವುಗಳನ್ನು ಮರೆಯು ವುದಕ್ಕಾಗಿ, ನೋವುಂಡ ಮಾನವನಿಗೆ ಜರುಗಿದ ಅನ್ಯಾಯವನ್ನು ದೂರಮಾಡು ವಂತೆ ನಮ್ಮಾಳ್ವಾರರು ಭಗವಂತನನ್ನು ಸದಾ ಪ್ರಾರ್ಥಿಸುತ್ತಿದ್ದರು. ಇಂತಹ ನೋವುಂಡ ಜನರ ಬಗ್ಗೆ ಈ ಆಳ್ವಾರರಿಗೆ ವಿಶೇಷ ಕರುಣಾಭಾವ. ಭಗವಂತನು ಅಂತರ್ಯಾಮಿಯೂ ನಿಯಂತಿತನೂ, ಮಾರ್ಗದರ್ಶಿಯಾದ 'ಶೇಷಿ'ಯೆಂದೂ ಈ ಆಳ್ವಾರರ ನಮ್ರ ಭಾವನೆ. ಇದನ್ನೇ ಇವರು ಜನರಿಗೆ ಉದ್ಘೋಷಿಸುತ್ತಿದ್ದರು.

ನಮ್ಮಾಳ್ವಾರ್‌ರವರು ಪರತತ್ತ್ವ ಧ್ಯಾನಮಗ್ನರಾಗಿದ್ದಾಗ ಮಧುರ ಕವಿಯಾಳ್ವಾರ್‌ರವರು ಅಲ್ಲಿಗೆ ಬಂದು, ಅವರ ಪ್ರಭಾವವನ್ನು ಅರಿತರು. ಕೂಡಲೇ ಅವರ ಶಿಷ್ಯರೂ ಆದರು. ಅಂತೆಯೇ ನಮ್ಮಾಳ್ವಾರರು ಭಗವಂತನಲ್ಲಿನ ನಿರತಿಶಯ ಪ್ರೇಮದ ಪರಿವಾಹವಾದ ತಿರುವಾಯ್ಮೊಳಿಯನ್ನು ಮಧುರಕವಿಗಳಿಗೆ ತತ್ತ್ವಹಿತ ಪುರುಷಾರ್ಥಗಳ ಸಹಿತ ಉಪದೇಶಿಸಿದರು. ನಂತರ ಹೀಗೆಯೇ ಈ ಪರಂಪರೆ ಮುಂದುವರಿಯಿತು.

ನಮ್ಮಾಳ್ವಾರರ ಪ್ರಬಂಧಗಳಲ್ಲಿನ ಅರ್ಥಪಂಚಕಗಳು, ಮಂತ್ರರತ್ನವಾದ ದ್ವಯ ಮಂತ್ರದ ಸಾರಾರ್ಥವಾದ ಶರಣಾಗತಿ, ವಿಶಿಷ್ಟಾದ್ವೈತ ಸಿದ್ಧಾಂತದ ಸಾರಾರ್ಥವನ್ನು ಭಗವಂತನ ಸ್ತೋತ್ರರೂಪದಲ್ಲಿ ರಚಿಸಲಾಗಿದೆ. ಇವರು ಪರಭಕ್ತಿ, ಪರಜ್ಞಾನ ಹಾಗೂ ಪರಮಭಕ್ತಿಯುತರಾಗಿದ್ದು ತಮ್ಮ ಮೂವ ತ್ತೈದನೇ ವಯಸ್ಸಿನಲ್ಲಿ ಪರಮಪದಿಸಿದರು.

**10. ಮಧುರ ಕವಿ ಆಳ್ವಾರ್ :**

ನಮ್ಮಾಳ್ವಾರರ ಶಿಷ್ಯರತ್ನರಾದ ಮಧುರ ಕವಿಯಾಳ್ವಾರರು ತಮ್ಮ ಗುರುಗಳನ್ನು ವಿಶೇಷ ರೀತಿಯಲ್ಲಿ ಕೊಂಡಾಡಿ ರಚಿಸಿದ ಹನ್ನೊಂದು ಪಾಶುರಗಳ 'ಕಣ್ಣಿನುಣ್ ಶಿರುತ್ತಾಮ್ಬು' ಎನ್ನುವ ಕೃತಿಯನ್ನು ನಾಲಾಯಿರ ದಿವ್ಯಪ್ರಬಂಧದಲ್ಲಿ ಸೇರಿಸಲಾಗಿದೆ. ತಮ್ಮ ಗುರುಗಳನ್ನು ಭಗವತ್ತುಲ್ಯವಾಗಿ ಭಾವಿಸಿ, ವಂದನಾರೂಪದಲ್ಲಿ ಈ ಕೃತಿಯನ್ನು ಈ ಆಳ್ವಾರರು ರಚಿಸಿದ್ದಾರೆ. ಗುಣಸಂಪತ್ತಿಗಳಿಂದ ಕೂಡಿದ ಗುರುವನ್ನು ಮುಮುಕ್ಷುಗಳು ಆಶ್ರಯಿಸಬೇಕಾದ ರೀತಿಯನ್ನೇ ಅಲ್ಲದೆ ಆಚಾರ್ಯ ಲಕ್ಷಣ, ಭಕ್ತಿ ಪ್ರಪತ್ತಿಗಳ ಪ್ರಾಮುಖ್ಯತೆ ಮೊದಲಾದ ವಿಶಿಷ್ಟ ವಿಷಯಗಳನ್ನು ಇದರಲ್ಲಿ ವಿವರಿಸಲಾಗಿದೆ. ಈ ಕೃತಿಯನ್ನು ಅಧ್ಯಯನ ಮಾಡಿದ ನಂತರವೇ, 'ತಿರುವಾಯ್ಮೊಳಿ' ದಿವ್ಯಪ್ರಬಂಧವನ್ನು ಅನುಸಂಧಾನ ಮಾಡುವ ಪರಿಪಾಟವು ರೂಢಿಗೆ ಬಂದಿದೆ.

ಭಗವದ್ಗುಣಾನುಭವಕ್ಕಿಂತ, ಗುರುಗುಣ ಸ್ತುತಿಯೇ ಉತ್ತಮವೆಂದು ಈ ಆಳ್ವಾರರು ಭಾವಿಸಿದರು. ಈ ಅಂಶವು ಶ್ರೀವೈಷ್ಣವ ಪ್ರಮುಖ ಸಿದ್ಧಾಂತವಾದ 'ಗುರುಗಳ ಸೇವೆಯು, ಸ್ಮರಣೆಯು ಮುಖಾಂತರ ಮೋಕ್ಷವು ಲಭಿಸುತ್ತದೆ' ಎನ್ನುವುದನ್ನು ಪ್ರತಿಪಾದಿಸುತ್ತದೆ. ಈ ಅರ್ವಾಚೀನ ವಿಶಿಷ್ಟಾದ್ವೈತ ಸಿದ್ಧಾಂತವೇ ಭವ ಸಮರ್ಪಣ ರೂಪವನ್ನು ತಳೆದು ಇಂದು ನಮ್ಮೆದುರುಗಡೆ ಇದೆ. ಇದರ ಗುರುಸ್ತೋತ್ರ ರೂಪವಾದ ಶಂಖನಾದವು ಪೂರ್ವೋಕ್ತ ಶ್ರೀವೈಷ್ಣವ ಸಿದ್ಧಾಂತ ವೈಶಿಷ್ಟ್ಯವನ್ನು ಪ್ರತಿಧ್ವನಿಸುವಂತೆ ಮಾಡುತ್ತದೆ.

ಇವರೀರ್ವರ ಗುರು ಶಿಷ್ಯರ ಸಂಬಂಧ ಒಂದರೊಡನೊಂದು ಸೇರಿರುವ ತಾತ್ತ್ವಿಕ ಬಂಧವಾಗಿರುತ್ತದೆ. ಗುರುವೇ ದೈವ ಎನ್ನುವುದು 'ಆಚಾರ್ಯ ದೇವೋ ಭವ' ಎನ್ನುವ ವೇದಾನುಶಾಸನ. ಇಂತಹ ಉದಾತ್ತವಾದ ಗುರು ಶಿಷ್ಯ ಸಂಬಂಧ ಭಾವವು ವಿಶಾಲ ದೃಕ್ಪಥವನ್ನು ಹೊಂದಿರುವ ಶ್ರೀವೈಷ್ಣವ ಸಿದ್ಧಾಂತದ ಮೂಲಸ್ತಂಭವಾಗಿದೆ. ಶ್ರೀವೈಷ್ಣವ ದರ್ಶನದಲ್ಲಿ ಗುರುವಿಗೆ ಉನ್ನತಸ್ಥಾನವಿದೆ.

ಮುಂದೆ ಈ ದರ್ಶನದಲ್ಲಿ ಈ ಗುರು ಶಿಷ್ಯ ಸಂಬಂಧ ಬೆಳೆದು ಮೋಕ್ಷವನ್ನು ಅಪೇಕ್ಷಿಸಿದ ಮಹನೀಯರ ಪರಂಪರೆಯೇ ಇದೆ–ನಾಥಮುನಿ, ಶ್ರೀ ರಾಮಾನುಜ, ಪಡುಹನಂಬಿ, ಕಿಡಾಂಬಿಯಾಚ್ಚಾನ್, ಪಿಳ್ಳಾನ್–ಇತ್ಯಾದಿಯಮರುಗಳು.

ಈ ಕೃತಿಯನ್ನು ಅಧ್ಯಯನ ಮಾಡುವುದರ ಮುಖಾಂತರ ನಾಥಮುನಿಗಳು ನಮ್ಮಾಳ್ವಾರರ ಅನುಗ್ರಹ ಪಡೆದು, ನಾಲಾಯಿರ ದಿವ್ಯಪ್ರಬಂಧಗಳನ್ನು ಪುನರು ಜ್ಜೀವನಗೊಳಿಸಲು ಸಾಧ್ಯವಾಗಿಸಿದರು ಎಂಬ ದಂತಕಥೆಗೆ ಈ ಆಳ್ವಾರರು ಬೆನ್ನೆಲುಬಾಗಿರುವುದು.

ಈ ರೀತಿಯಲ್ಲಿ ಈ ಎಲ್ಲ ಆಳ್ವಾರರೂ ತಮಗೆ ಗೊತ್ತಿದ್ದೋ ಗೊತ್ತಿಲ್ಲ ದೆಯೋ ಭಗವತ್ ಸಾಕ್ಷಾತ್ಕಾರದ ನೆಪದಲ್ಲಿ ಸ್ತೋತ್ರಗಳನ್ನು ರಚಿಸಿ, ಶ್ರೀವೈಷ್ಣವ ದರ್ಶನವನ್ನು ನೇರವಾಗಿ ವಿವರಿಸುವಂತಹ ಗ್ರಂಥಗಳನ್ನು ಬರೆಯದೇ ಇದ್ದರೂ ಮುಂದಿನ ಆಚಾರ್ಯ ಪರಂಪರೆಗೆ ಅಗತ್ಯವಾದ ಮೂಲ ಸಾಮಗ್ರಿಗಳನ್ನು ಒದಗಿಸುವುದರ ಮುಖಾಂತರ ಈ ದರ್ಶನದ ಪುರೋಭಿವೃದ್ಧಿಗೆ ಸಾಧಕರಾದರು.



## 3. ಭಾರತದಲ್ಲಿನ ಶ್ರೀವೈಷ್ಣವ ಧರ್ಮ

ಯಾವುದೇ ಒಂದು ಧರ್ಮ ಅಭಿವೃದ್ಧಿಯಾಗಬೇಕಾದರೂ, ಅದರ ಪ್ರಚಾರ ಆಗಬೇಕಾದರೂ ಎರಡು ಅಂಶಗಳು ಬಹಳ ಮುಖ್ಯ–ಒಂದು–ಅದಕ್ಕೆ ಸಂಬಂಧಪಟ್ಟ ದೇವಾಲಯಗಳ ನಿರ್ಮಾಣ; ಎರಡು ಅದಕ್ಕೆ ದೊರೆಯುವ ರಾಜಾಶ್ರಯ. ಇವೆರಡರ ಆಧಾರದ ಮೇಲೆ ಆಯಾ ಧರ್ಮದ ದರ್ಶನ ಸಿದ್ಧಾಂತ ಗಳ ಬೆಳವಣಿಗೆಯಾಗುತ್ತದೆ. ಇದು ಶ್ರೀವೈಷ್ಣವ ಧರ್ಮಕ್ಕೂ ಅನ್ವಯಿಸುತ್ತದೆ.

ಭಾರತೀಯ ಇತಿಹಾಸವನ್ನು ಪರಿಶೀಲಿಸಿದಲ್ಲಿ ಹಲವಾರು ಚಕ್ರವರ್ತಿಗಳು, ಮಹಾರಾಜರು, ಪ್ರಭುಗಳು, ಸಾಮಂತರು ಶ್ರೀವೈಷ್ಣವ ಧರ್ಮವನ್ನು ಅವಲಂಬಿ ಸಿದ, ಅದಕ್ಕೆ ಆಶ್ರಯ ನೀಡಿದ ಉದಾಹರಣೆಗಳು ಇವೆ. ಕ್ರಿಸ್ತಪೂರ್ವ ಹಾಗೂ ಕ್ರಿಸ್ತಶಕ–ಎರಡೂ ಸಮಯಗಳಲ್ಲಿ ಈ ವಂಶಗಳಿಗೆ ಸೇರಿದ ಪ್ರಭುಗಳು ಯಜ್ಞಾದಿ ಗಳನ್ನು ನಿರ್ವಹಿಸಿದ್ದೇ ಅಲ್ಲದೆ ತಮ್ಮ ಹೆಸರಿನಲ್ಲೂ, ತಾವು ನಿರ್ಮಿಸಿದ ಶಾಸನ ಗಳಲ್ಲೂ, ತಾವು ನಂಬಿದ ಶ್ರೀವೈಷ್ಣವತ್ವವನ್ನು ಲೋಕಕ್ಕೆ ಪ್ರಕಟಿಸಿದರು.

ಶ್ರೀವೈಷ್ಣವ ಧರ್ಮದ ಪ್ರಸಾರಕ್ಕೆ, ಪ್ರಚಾರಕ್ಕೆ ಸೇರಿದ ಪ್ರಾಚೀನ ಚರಿತ್ರೆ ಯನ್ನು ಅವಗಾಹನೆ ಮಾಡಿಕೊಳ್ಳುವವರಿಗೆ ಅಂದಿನ ಶಾಸನಗಳು, ನಾಣ್ಯಗಳು, ಅವರುಗಳಿಂದ ನಿರ್ಮಿಸಲ್ಪಟ್ಟ ದೇವಾಯುತನಾದಿ ನಿರ್ಮಾಣಗಳು, ಜಲಸ್ತಂಭ ಗಳು, ಮಠಗಳು, ವಿದ್ಯಾಸಂಸ್ಥೆಗಳು–ಇಂದಿಗೂ ನಮ್ಮ ಕಣ್ಣಿಗೆ ಕಟ್ಟಿದಂತೆ ಕಾಣುತ್ತಿವೆ.

**1. ಸಾತ್ವತ ಮತ ವ್ಯಾಪ್ತಿ :** ಇತಿಹಾಸಕಾರರು ತಮಗೆ ಲಭಿಸಿದ ಆಧಾರಗಳನ್ನು ಅನುಸರಿಸಿ, ಕ್ರಿ.ಪೂ. 6, 7 ಶತಮಾನಕ್ಕೆ ಮುಂಚೆಯೇ ವೈಷ್ಣವೋಪಾಸನಾ ಪ್ರಕ್ರಿಯೆಯು ಪ್ರಚಲಿತವಾಗಿರುವಂತೆ ತಿಳಿದುಬರುತ್ತದೆ.

ಸೂರ್ಯವಂಶವು ಭಾರತ ಭೂಭಾಗವನ್ನು ಪಾಲಿಸುತ್ತಿದ್ದ ಕಾಲದಲ್ಲಿ 'ಸಾತ್ವತ ಮತ' ಎನ್ನುವ ಭಾಗವತ ಮತವು ವ್ಯಾಪ್ತಗೊಂಡಿತ್ತು, ಪ್ರಚಲಿತ ವಾಗಿತ್ತೆಂದು ತಿಳಿದುಬಂದಿದೆ. ಅಂದು ದೇವಕೀಪುತ್ರನಾದ ವಾಸುದೇವನು ವಿಷ್ಣುವಿನ ಅವತಾರಿಯೆಂದು ಆರಾಧಿಸುವ ಭಕ್ತಿ ವಿಧಾನವು ಪ್ರಬಲವಾಗಿದ್ದಿತು.

ಕ್ರಿ.ಶ. 4ನೇ ಶತಮಾನದಷ್ಟು ಹೊತ್ತಿಗೆ ವಾಸುದೇವ ಕೃಷ್ಣೋಪಾಸ ನೆಯು ಪ್ರಾಬಲ್ಯವಾಗಿತ್ತು. ಯಮುನಾ ನದಿಯ ದಡದಲ್ಲಿನ 'ಮಥುರ'

ಪ್ರಾಂತ್ಯದಲ್ಲಿ, ಸುತ್ತಮುತ್ತಲ ಇನ್ನೂ ಅನೇಕ ಪ್ರದೇಶಗಳಲ್ಲಿ ಈ ವಾಸುದೇವ ಕೃಷ್ಣೋಪಾಸನೆಯು ಚಾಲ್ತಿಯಲ್ಲಿತ್ತೆಂದು ಇತಿಹಾಸಕಾರರು ತೀರ್ಮಾನಿಸಿದ್ದಾರೆ.

**2.** ತುಂಗವಂಶದ ಪ್ರಭುಗಳು (ಕ್ರಿ.ಪೂ. 185–93) : ಈ ವಂಶದ ರಾಜರುಗಳನ್ನು ಕುರಿತು ಪುರಾಣಗಳಲ್ಲಿ ಪ್ರಸ್ತಾಪ ಮಾಡಲಾಗಿದೆ. 'ಭಾಗವತ ಮತ' ಎಂದು ಕರೆಯುವ ಸಾತ್ತ್ವತ ಮತವು ಆ ಕಾಲದಲ್ಲಿ ತುಂಬಾ ಚೆನ್ನಾಗಿ ವ್ಯಾಪ್ತಗೊಂಡಿತ್ತು. ಇದಕ್ಕೆ ಪ್ರತ್ಯಕ್ಷನಿದರ್ಶನವೂ ಇದೆ. ಮಧ್ಯಪ್ರದೇಶದಲ್ಲಿ ಬೆನ್‌ಸಾಗರ್ (BENSAGAR) ಎನ್ನುವ ಸ್ಥಳದ ಬಳಿ ಗುರ್ತಿಸಲಾಗಿರುವ ಸ್ತಂಭದ ಮೇಲಿನ ಶಿಲಾಶಾಸನವು ಇದಕ್ಕೆ ಉದಾಹರಣೆಯಾಗಿದೆ.

ವಾಸುದೇವನ ಆರಾಧನೆ ಮಾಡುವುದರ ಕುರುಹಾಗಿ ಈ ಸ್ತಂಭವನ್ನು ಹಾಕಿಸಲಾಗಿದೆ. ಇದನ್ನು ಓರ್ವ ಗ್ರೀಕ್ ರಾಯಭಾರಿಯಾದ 'ಹೆಲಿಯೋಡೋರಸ್' (HALIODORAS) ಎನ್ನುವಾತನು ಹಾಕಿಸಿದನು. ವಿದೇಶೀಯನೋರ್ವನು ಈ ಶಾಸನವನ್ನು ಕೆತ್ತಿಸಿರುವುದೇ ಇದರ ವಿಶೇಷ. ಈತನು ತನ್ನನ್ನು ಓರ್ವ ಭಾಗವತನೆಂದು ಕರೆದುಕೊಂಡಿದ್ದಾನೆ. ಆ ಕಾಲದಲ್ಲಿ ಶ್ರೀವೈಷ್ಣವ ಮತವು ಗ್ರೀಕರನ್ನೂ ಕೂಡ ಆಕರ್ಷಿಸಿತ್ತು ಎಂದರೆ ಈ ಧರ್ಮವು ಆಗ ಎಷ್ಟೊಂದು ಪ್ರಬಲವಾಗಿತ್ತೆಂದು ಊಹಿಸಬಹುದಾಗಿದೆ.

**3.** ಕುಶಾನ–ಶಕರು : ಕ್ರಿ.ಶ. ಒಂದನೇ ಶತಮಾನದ ಈ ಕಾಲದಲ್ಲಿ ಮಥುರಾವು ಭಾಗವತ ಮತಕ್ಕೆ ಕೇಂದ್ರಸ್ಥಾನವಾಗಿತ್ತು. ಮಹಾಕ್ಷಾತ್ರ ಪರಂಜುವುವಿನ ಮಗನಾದ ಷೋಡಶನು ಹಾಕಿಸಿರುವ ಮೋಡಾ (MODA) ಶಾಸನವನ್ನು ಅನುಸರಿಸಿ, ಐವರ ವೃಷ್ಣಿವರರ ವಿಗ್ರಹಗಳನ್ನು ಆತನು ಪ್ರತಿಷ್ಠಿಸಿದನೆಂದು ತಿಳಿದುಬರುತ್ತದೆ.

ಮತ್ತೊಂದು ಶಾಸನದಲ್ಲಿ ಈತನೇ ವಾಸುದೇವನ ವಿಗ್ರಹವನ್ನು ದೇವಾಲಯವೊಂದರಲ್ಲಿ ಪ್ರತಿಷ್ಠಾಪಿಸಿ, ಅಲ್ಲಿನ ಆಲಯಕ್ಕೆ ತೋರಣವನ್ನು, ವೇದಿಕೆಯನ್ನು ನಿರ್ಮಿಸಿದನೆಂದೂ ತಿಳಿದುಬರುತ್ತದೆ.

ಈ ಎರಡೂ ಶಾಸನಗಳನ್ನು ಅನುಸರಿಸಿ, ಹೇಳಬೇಕೆಂದರೆ ಮಥುರ ಪ್ರಾಂತ್ಯದಲ್ಲಿ ಇದಕ್ಕೆ ಸಂಬಂಧಪಟ್ಟ ಹಾಗೆ ಎರಡು ಶ್ರೀವೈಷ್ಣವಾಲಯಗಳನ್ನು ಆ ಕಾಲದಲ್ಲಿ ನಿರ್ಮಿಸಲಾಯಿತೆಂದು ಸ್ಪಷ್ಟವಾಗುತ್ತದೆ.

ಕುಶಾನ ರಾಜರ ಕಾಲಕ್ಕೆ ಸೇರಿದ ವಿಗ್ರಹಗಳು, ಶಿಲ್ಪಗಳಿಂದ ಕೂಡಿದ ಕಟ್ಟಡಗಳು ಇತ್ತೀಚಿಗಷ್ಟೆ ಬೆಳಕಿಗೆ ಬಂದುವು. ಇವುಗಳ ಶ್ರೀವೈಷ್ಣವ ದರ್ಶನಕ್ಕೆ ಸಂಬಂಧಪಟ್ಟ ಅನೇಕ ಕಥಾನಕಗಳಿವೆ. ಮಥುರೆಗೆ ಸಮೀಪದಲ್ಲಿ ದೊರೆತಿರುವ ಶಿಲ್ಪಗಳಲ್ಲಿ ಒಂದು ಈ ರೀತಿ ಇದೆ–ಕೃಷ್ಣಶಿಶುವನ್ನು ಹೊತ್ತ ವಸುದೇವನು ಗೋಕುಲಕ್ಕೆ ಹೋಗಬೇಕಾದರೆ ನದಿಯನ್ನು ದಾಟಿಕೊಂಡು ಹೋಗುತ್ತಿರುವ ದೃಶ್ಯವನ್ನು ಆ ಶಿಲ್ಪದಲ್ಲಿ ಕೆತ್ತಲಾಗಿದೆ. ಈ ಶಿಲ್ಪದ ನಿರ್ಮಾಣವನ್ನು ಅನುಸರಿಸಿ, ಇದನ್ನು ಕ್ರಿ.ಶ. ಒಂದನೇ ಶತಮಾನದಲ್ಲಿ ರಚಿಸಲಾಗಿದೆ ಎಂದು ತೀರ್ಮಾನಿಸಲಾಗಿದೆ.

ಗೋವರ್ಧನದ್ಧರಣ ಘಟ್ಟವು ನಿಜ ಅರ್ಥದಲ್ಲಿ ಸಂಭವಿಸಿರುವುದು ಈ ಸಮಯದಲ್ಲೇ ಎಂಬುದು ಐತಿಹಾಸಜ್ಞರ ಅಭಿಪ್ರಾಯ. ಇದನ್ನು ಕೆಂಪು ಶಿಲೆಯಲ್ಲಿ ಸುಂದರವಾಗಿ ಕೆತ್ತಲಾಗಿದೆ.

ಇದೇ ರೀತಿಯಲ್ಲಿ ಇನ್ನೂ ಅನೇಕ ವೈಷ್ಣವತ್ವದ ಭಕ್ತಿ ವಿಶ್ವಾಸ ನಂಬಿಕೆಗಳನ್ನು ತಿಳಿಯಪಡಿಸುತ್ತವೆ ಎಂದು ಇತಿಹಾಸಜ್ಞರು ತಿಳಿಸಿರುತ್ತಾರೆ.

**4. ಶಾತವಾಹನರು :** ಶಾತವಾಹನರು ಮಹಾಸಾಂಘಿಕರನ್ನು, ಮಹಾಯಾನ ಬೌದ್ಧರನ್ನು ಪ್ರೋತ್ಸಾಹಿಸಿದರೆಂಬುದೇನೋ ನಿಜವೆ ! ಅದೇ ರೀತಿ, ಇತರೇ ಧರ್ಮಗಳಿಗೂ ಅವರು ಪ್ರೋತ್ಸಾಹ ನೀಡಿದ್ದಾರೆ. ಶ್ರೀವೈಷ್ಣವ ಧರ್ಮಕ್ಕೂ ಕೂಡ ಇವರು ತಕ್ಕಮಟ್ಟಿನ ಪ್ರೋತ್ಸಾಹ, ಆದರಗಳನ್ನು ನೀಡಿದ್ದಾರೆ.

ಕ್ರಿ.ಶ. 174-203ರಲ್ಲಿದ್ದ ಗೌತಮೀಪುತ್ರ ಯಜ್ಞಶ್ರೀಯು ಹಾಕಿಸಿರುವ ಒಂದು ಶಿಲಾಶಾಸನವನ್ನು ಇತಿಹಾಸ ಸಂಶೋಧಕನೊಬ್ಬನು ಪರೀಕ್ಷಿಸಿ, ಅದರಲ್ಲಿ 'ವಾಸುದೇವ' ಎನ್ನುವ ನಾಲ್ಕಕ್ಷರಗಳಿರುವುದನ್ನು ಗುರ್ತಿಸಿದ್ದಾನೆ. ಇದು ಆ ಕಾಲದ ತತ್ವಮಹತ್ವಕ್ಕೆ ಪ್ರತೀಕವಾದುದೆಂದು ಇತಿಹಾಸಕಾರರು ಊಹಿಸುತ್ತಾರೆ.

**5. ಗುಪ್ತರ ಕಾಲದಲ್ಲಿ ವೈಷ್ಣವ ಧರ್ಮ :** ಭಾರತೀಯ ಇತಿಹಾಸದಲ್ಲಿ ಗುಪ್ತರ ಕಾಲವು ಸ್ವರ್ಣಯುಗವಾಗಿದೆ. ವಾಸ್ತವವಾಗಿ ಶ್ರೀವೈಷ್ಣವ ಧರ್ಮ ಹಾಗೂ ನಂಬಿಕೆಗಳಿಗೆ ಕೂಡ ಗುಪ್ತರ ಯುಗವು ಸ್ವರ್ಣಯುಗವೆಂದು ಇತಿಹಾಸಕಾರರು ನಿರ್ಣಯಿಸಿದ್ದಾರೆ. ಇವರ ಕಾಲದಲ್ಲಿ ವೈಷ್ಣವ ಮತವು ಭಾರತಾದ್ಯಂತವು ಹರಡಿದುದೇ ಅಲ್ಲದೆ ಜಾವಾ, ಸುಮಾತ್ರಾ, ಬಾಲಿ ಇತ್ಯಾದಿ

ಆಗ್ನೇಯ ಏಷ್ಯಾ ದೇಶಗಳಿಗೂ ಕೂಡ ಹರಡಿತು.

ರಾಜಾಸ್ಥಾನದಲ್ಲಿ ದೊರೆತಿರುವ 'ಹಿಸ್ಸಾರ್ ರುಶಾವಕ್' ಎನ್ನುವ ಗ್ರಾಮದಲ್ಲಿ ಲಭಿಸಿರುವ ಶಾಸನವು 'ವಿಷ್ಣುಸ್ತುತಿ'ಯಿಂದ ಪ್ರಾರಂಭಿಸಲ್ಪಟ್ಟಿದೆ. ಓರ್ವ ಭಾಗವತನಿಗೆ ಗೃಹಾರ್ಚನೆಗಾಗಿ ಎರಡು ಸರೋವರಗಳನ್ನು ಯಶಸ್ತೋತ್ರ ಎನ್ನುವವನ ಮೊಮ್ಮಗನು ಸಮರ್ಪಿಸಿದನೆಂದು, ಹಾಗೆ ದಾನ ನೀಡಿದವನೂ ಕೂಡ ಭಾಗವತನೆಂದೂ ಕೆತ್ತಲಾಗಿದೆ.

ಈ ಶಾಸನದನುಸಾರ ಗುಪ್ತರ ಕಾಲದಲ್ಲಿ ಪ್ರಜಾ ಸಮುದಾಯಗಳಲ್ಲಿ ಕೂಡ ಶ್ರೀವೈಷ್ಣವ ಪ್ರತಿಪತ್ತಿಯು ಹರಡಿತ್ತೆಂದೂ ಸ್ಪಷ್ಟವಾಗುತ್ತದೆ.

ಆರನೇ ಶತಮಾನದಷ್ಟರ ಹೊತ್ತಿಗೆ ಬಂಗಾಳ ದೇಶವು ವೈಷ್ಣವತ್ವದ ಆಶ್ರಯ ಸ್ಥಾನಗಳಲ್ಲಿ ಒಂದಾಗಿ ಮಣಿಪುರ, ತ್ರಿಪುರಾಗಳಿಗೂ ಕೂಡ ಹರಡಿತು. ರಾಜಷಾಹಿ ಜಿಲ್ಲೆಯಲ್ಲಿನ 'ಪಹರ್‌ಪೂರ್' ಎಂಬಲ್ಲಿ ದೊರೆತಿರುವ ಶಿಲಾಪ್ರತಿಮೆಗಳಲ್ಲಿ ಕೃಷ್ಣಾವತಾರಕ್ಕೆ ಸಂಬಂಧಪಟ್ಟ ಅನೇಕ ಗಾಥೆಗಳು ಸೂಚಿಸಲ್ಪಟ್ಟಿವೆ ಎಂದು ತಿಳಿದುಬಂದಿದೆ. ಇವುಗಳಲ್ಲಿ ಯಮಳಾರ್ಜುನ ಭಂಗ, ಕೇಶಿವಧ, ಚಾಣೂರ ಮುಷ್ಟಿಕ ವಧೆ, ಕೃಷ್ಣನನ್ನು ಗೋಕುಲಕ್ಕೆ ಕರೆದೊಯ್ಯುವಿಕೆ–ಮೊದಲಾದುವು ಕಂಡುಬರುತ್ತವೆ.

ಬಾರ್ದ್ವಾನ್ ಜಿಲ್ಲೆಯಲ್ಲಿನ ಚೈತನ್ ಪೂರ್‌ನಲ್ಲಿ ಕೃಷ್ಣಶಿಲೆಯಲ್ಲಿ ಕೆತ್ತಲಾಗಿರುವ ವಿಷ್ಣು ವಿಗ್ರಹವೊಂದು ಲಭಿಸಿದೆ. ಈ ವಿಗ್ರಹದನುಸಾರ ಅಭಿಸಾರಿಕ ಕ್ರಿಯೆಗಳಲ್ಲಿ ಕೂಡ ವೈಷ್ಣವ ವಿಗ್ರಹಗಳನ್ನು ವಿನಿಯೋಗಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

ಗುಪ್ತ ಚಕ್ರವರ್ತಿಗಳ ಪರಿಪಾಲನೆಯ ಕಾಲದಲ್ಲಿ ಶ್ರೀವೈಷ್ಣವತ್ವವು ಅಸ್ಸಾಂನಲ್ಲಿ ಕೂಡ ವ್ಯಾಪಿಸಿತು. ಉಮಾಚಲಾಶ್ರಮಕ್ಕೆ ಸಮೀಪದಲ್ಲಿರುವ ಒಂದು ಶಿಲಾಫಲಕದ ಮೇಲೆ ಕೆತ್ತಲ್ಪಟ್ಟಿರುವ ಶಾಸನಾನುಸಾರ, ಮಹಾರಾಜ ಸುರೇಂದ್ರವರ್ಮನು ಬಲಭದ್ರಸ್ವಾಮಿಗಾಗಿ ಗುಹಾಲಯಗಳನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಈತನು ಭೌಮರಾಜ ವಂಶಕ್ಕೆ ಸೇರಿದ ಮಹೇಂದ್ರವರ್ಮನೆಂದು ಇತಿಹಾಸ ಸಂಶೋಧಕರು ಗುರ್ತಿಸಿದ್ದಾರೆ. ಈತನು ಕ್ರಿ.ಶ. 470ರಿಂದ 490ರವರೆಗೆ ರಾಜ್ಯಾಡಳಿತ ನಡೆಸಿದನು.

ಇದೇ ಗುಪ್ತರ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಶ್ರೀವೈಷ್ಣವ ಧರ್ಮ ಯಾವ

ಪರಿಸ್ಥಿತಿಯಲ್ಲಿತ್ತು ಎಂಬುದನ್ನು ನೋಡೋಣ.

ಕ್ರಿ.ಶ. ಒಂದರಿಂದ ಐದನೇ ಶತಮಾನದವರೆಗೆ ದಕ್ಷಿಣ ಭಾರತದಲ್ಲಿ ಶಾತವಾಹನರ ನಂತರ ಇಕ್ಷ್ವಾಕರು, ಬೃಹತ್ಪಲಾಯನರು, ಶಾಲಂಕಾಯರು, ಆನಂದಗೋತ್ರೀಯರು, ವಿಷ್ಣು ಕುಂಡೀನರು ಆಂಧ್ರಭಾಗವನ್ನು ಆಳಿದರು.

ಕ್ರಿ.ಶ. 3 ಮತ್ತು 9ನೇ ಶತಮಾನದ ನಡುವೆ ದಕ್ಷಿಣ ಭಾರತದ ದಕ್ಷಿಣ ಭಾಗವನ್ನೆಲ್ಲ ಪಲ್ಲವರು ಆಳಿದರು. ಆದರೂ ಕ್ರಿ.ಶ. 4–5 ಶತಮಾನದ ಮಧ್ಯ ದಲ್ಲಿ ಆಂಧ್ರವನ್ನು ಪರಿಪಾಲಿಸಿದವರಲ್ಲಿ ಶಾತವಾಹನರ ಬಗ್ಗೆ ಆಗಾಗಲೇ ತಿಳಿಸ ಲಾಗಿದೆ. ಇವರ ನಂತರದ ಇಕ್ಷ್ವಾಕ ರಾಜವಂಶೀಯರ ಯೆಹೋವಲ ಶಾಂತಿ ಮೂಲನು ಹಾಕಿಸಿದ ಶಾಸನವು ನಾಗಾರ್ಜುನಗೂಂಡ ಪ್ರಾಂತ್ಯದಲ್ಲಿ ದೊರೆತಿದೆ. ಇದರ ಪ್ರಕಾರ ಕೆಲವು ರಾಜರು ದೇವತೆಗಳ ಪ್ರೀತ್ಯರ್ಥವಾಗಿ ಒಂದು ಸ್ಥಳದಲ್ಲಿ 'ನಾದಗೀಶ್ವರಸ್ವಾಮಿ' ಪ್ರೀತ್ಯರ್ಥವಾಗಿ ದೇವಾಲಯವೊಂದನ್ನು ನಿರ್ಮಿಸ ಲಾಯಿತು ಎಂದು ತಿಳಿಸಲಾಗಿದೆ. ಈ ಶಾಸನವು ಕ್ರಿ.ಶ. 333ರ ಸುಮಾರಿಗೆ ಸೇರಿದುದೆಂದೂ, ಈ 'ನಾಗೀಶ್ವರಸ್ವಾಮಿ' ಎನ್ನುವುದು ವಿಷ್ಣುವೇ ಎಂದು ಡಿ.ಸಿ. ಸರ್ಕಾರ್‌ರವರ ನಿರ್ಣಯ. ನಾಗಾರ್ಜುನಕೊಂಡದ ಸುತ್ತಮುತ್ತಲ ಪ್ರಾಂತ್ಯಗಳಲ್ಲಿ ಕನಿಷ್ಟಪಕ್ಷ ಎರಡು ವಿಷ್ಣು ದೇವಾಲಯಗಳನ್ನಾದರೂ ನಿರ್ಮಿಸ ಲಾಗಿತ್ತೆಂದು ಅವರು ಊಹಿಸಿರುತ್ತಾರೆ.

ಶಾಲಂಕಾಯ ಪ್ರಭುಗಳಲ್ಲಿ ನಂದಿವರ್ಮನು 'ಪೆದಪೇಗಿ' ಎನ್ನುವಲ್ಲಿ ಒಂದು ಶಾಸನವನ್ನು ಹಾಕಿಸಿದ್ದಾರೆ. ಇದರಲ್ಲಿ ತ್ರಿಲೋಕನಾಥನಾದ 'ವಿಷ್ಣುಗೃಹ ಸ್ವಾಮಿ'ಗೆ ಬೇರೆ ಬೇರೆಯಾದ ಗ್ರಾಮಗಳಲ್ಲಿ ಸ್ವಲ್ಪ ಸ್ವಲ್ಪ ಭೂಮಿಯನ್ನು ದೇವಭೋಗವನ್ನು ಮಾಡಿ, ತನ್ನ 10ನೆಯ ವಿಜಯರಾಜ್ಯ ಸಂವತ್ಸರದಲ್ಲಿ ಶ್ರಾವಣಶುದ್ಧ ಪಾಡ್ಯಮಿಯಂದು ನಂದಿವರ್ಮನು ದಾನಮಾಡಿದನೆಂದು ತಿಳಿಸ ಲಾಗಿದೆ. ಈ ನಂದಿವರ್ಮನು ಪರಮ ಭಾಗವತನು. ಆಂಧ್ರಪ್ರದೇಶದ ಪ್ರಸಿದ್ಧ ವಿಷ್ಣು ದೇವಾಲಯವೊಂದು ಆಗ ಲಭ್ಯವಿತ್ತು ಎನ್ನುವುದಕ್ಕೆ ಆಧಾರವಾಗಿರುವ ಶಾಸನವಿದೊಂದೇ ಎಂಬುದು ಚರಿತ್ರೆ ಪರಿಶೋಧಕರ ಅಭಿಪ್ರಾಯ.

'ವಿನುಕೊಂಡ' ಎನ್ನುವ ಸ್ಥಳವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಂಧ್ರಪ್ರದೇಶವನ್ನು ಪರಿಪಾಲಿಸಿದ ವಿಷ್ಣುಕುಂಡೀಯ ಪ್ರಭುಗಳ ಹೆಸರುಗಳೆಲ್ಲವೂ ವೈಷ್ಣವ ಪ್ರಭಾವವನ್ನು ಸ್ಪಷ್ಟಗೊಳಿಸುತ್ತವೆ.

ಇವರ ಕಾಲದಲ್ಲಿ ಬೆಜವಾಡಾದ ಹತ್ತಿರದಲ್ಲಿ ಕೃಷ್ಣಾನದಿಯ ದಕ್ಷಿಣ ತೀರ ದಲ್ಲಿದ್ದ 'ಉಂಡುವಲ್ಲಿ' ಎನ್ನುವ ಸ್ಥಳದ ಬಳಿಯಲ್ಲಿ ನಿರ್ಮಿಸಿರುವ ಗುಹಾಲಯ ವೊಂದರಲ್ಲಿನ ಅನಂತಶಯನ ವಿಗ್ರಹವು ಪ್ರಸಿದ್ಧವಾದುದು ಶ್ರೀರಂಗದಲ್ಲಿನ ಶ್ರೀರಂಗನಾಥನ ವಿಗ್ರಹದಂತೆ, ತಿರುವನಂತಪುರದಲ್ಲಿನ ಅನಂತಪದ್ಮನಾಭ ಸ್ವಾಮಿಯ ತರಹ ಶೇಷಶಯನನಾದ ಈ ಶ್ರೀಮನ್ನಾರಾಯಣನ ವಿಗ್ರಹವನ್ನು ಪ್ರತಿಷ್ಠಾಪಿಸುವುದರಲ್ಲಿ ವಿಷ್ಣುಕುಂಡೀನರ ಶ್ರೀವೈಷ್ಣವ ಭಕ್ತಿ ವಿಶೇಷವು ಸ್ಪಷ್ಟ ವಾಗುತ್ತದೆ.

ಈ ಸಮಯದಲ್ಲಿಯೂ ವಿದೇಶಗಳಲ್ಲಿ ಶ್ರೀವೈಷ್ಣವ ಧರ್ಮವು ಹರಡಿತು. ಕ್ರಿ.ಶ. 5ನೇ ಶತಮಾನದ ಮಧ್ಯಭಾಗದಲ್ಲಿ ಈ ಧರ್ಮವು ಆಗ್ನೇಯ ಏಷ್ಯಾ ಪ್ರದೇಶಗಳಲ್ಲಿ ವಿಸ್ತಾರಗೊಂಡಿತು. ಜಾವಾದಲ್ಲಿನ ಪ್ರಭುಗಳು ತಮ್ಮನ್ನು 'ವಿಷ್ಣು'ವಿನ ಅವತಾರವೆಂದು ಭಾವಿಸುತ್ತಿದ್ದರು. ಇದಕ್ಕೆ ಸಂಬಂಧಪಟ್ಟ ಶಾಸನ ಗಳೂ ಅಲ್ಲಿವೆ. ಮಲಯೇಷಿಯಾ (ಮಲಯ) ದಲ್ಲಿ ಪೆರೆಕ್ **(PERAK)** ಪ್ರಾಂತ್ಯದಲ್ಲಿನ 'ಸೆಲೆಂಗ್‌ಸಿನ್' **(SELENGSIN)** ಎನ್ನುವ ಸ್ಥಳದಲ್ಲಿ ದೊರೆತಿರುವ ಚಿನ್ನದ ಆಭರಣವೊಂದರ ಮೇಲೆ ಗರುಡ ವಾಹನನಾದ ಮಹಾ ವಿಷ್ಣುವಿನ ಚಿತ್ರವಿದೆಯೆಂದು ಗೊತ್ತಾಗಿದೆ.* ಕಾಂಬೋಡಿಯಾ (ಕಾಂಭೋಜ) ದಲ್ಲಿ ದೊರೆತಿರುವ ಶಾಸನಗಳಲ್ಲಿ ಶ್ರೀವೈಷ್ಣವ ಪ್ರಭಾವವು ಸ್ಪಷ್ಟವಾಗಿ ಕಂಡು ಬರುತ್ತದೆ–ಎಂದು ಇತಿಹಾಸ ಸಂಶೋಧಕರು ತಿಳಿಸುತ್ತಾರೆ.

**6. ಪಲ್ಲವರ ಕಾಲದ ವೈಷ್ಣವತ್ವ :** ಗುಪ್ತರ ನಂತರ ದಕ್ಷಿಣ ಭಾರತ ದಲ್ಲಿ ತಮಿಳುನಾಡಿನಲ್ಲಿ ಪಲ್ಲವರು, ಕರ್ನಾಟಕದಲ್ಲಿ ಕದಂಬ, ಗಂಗರು, ಆಂಧ್ರದ ಕಳಿಂಗಗಳಲ್ಲಿ ಅರ್ವಾಚೀನ ಗಂಗವಂಶಜರು ರಾಜ್ಯಾಡಳಿತ ನಡೆಸುತ್ತಾ ಇತರೇ ಧರ್ಮಗಳೊಂದಿಗೆ ಶ್ರೀವೈಷ್ಣವ ಧರ್ಮದ ಪೋಷಕರೂ ಆಗಿದ್ದರು.

ಮಹಾ ಪಲ್ಲವರೆಂದು ಹೆಸರು ಪಡೆದ ಸಿಂಹವಿಷ್ಣು, ನರಸಿಂಹ ವರ್ಮ ಮೊದಲಾದವರ ಹೆಸರಿನಲ್ಲೆ ವೈಷ್ಣವ ಸಂಸ್ಕಾರವಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಕಂಚಿಯು ಕೇಂದ್ರವಾಗಿದ್ದುಕೊಂಡು, ಎಲ್ಲೆಡೆ ಪಸರಿಸಿದ ಶ್ರೀವೈಷ್ಣವ ಮತದ ಪ್ರಾಧಾನ್ಯತೆಗೆ ಈ ಪಲ್ಲವ ರಾಜರೇ ಮೂಲಕಾರಣರು.

---

*VAKATA-GUPTHA AGE-Page No. 320.

ಕ್ರಿ.ಶ. 733-794ರಲ್ಲಿದ್ದ ಇಮ್ಮಡಿ ನಂದಿವರ್ಮನು ಶ್ರೀವೈಷ್ಣವ ಧರ್ಮದಲ್ಲಿ ಅತ್ಯಂತ ಹೆಚ್ಚಿನ ಭಕ್ತಿ ವಿಶ್ವಾಸಗಳನ್ನು ಹೊಂದಿದ್ದನೆಂದು ಪ್ರಸಿದ್ಧನು. ಈತನು ಕಂಚಿಯಲ್ಲಿನ ವೈಕುಂಠ ಪೆರುಮಾಳ್ ಕೋಯಿಲನ್ನು ನಿರ್ಮಿಸಿದನು. ಮುಂದೆ ಶ್ರೀವೈಷ್ಣವ ಕೇಂದ್ರವಾಗಿ, ಸಾಂಸ್ಕೃತಿಕ ನಿಲಯವಾಗಿ ಪ್ರಖ್ಯಾತಿ ಪಡೆಯಲು ಇವನೇ ಕಾರಣನು.

ಶ್ರೀವೈಷ್ಣವರಿಗೆಲ್ಲ ಪ್ರಮುಖ ಕೇಂದ್ರವಾಗಿ, ಆಳ್ವಾರರುಗಳಿಂದ ಸಂಕೀರ್ತಿಸಲ್ಪಟ್ಟಿರುವ ಶ್ರೀರಂಗನಾಥನ ನೆಲೆವೀಡಾದ ಶ್ರೀರಂಗವು ಅತ್ಯಂತ ಗಮನಾರ್ಹ ರೀತಿಯಲ್ಲಿ ಬೆಳೆಯಿತು. ಮೊದಲಾಳ್ವಾರರ ವಿನಹ ಉಳಿದೆಲ್ಲ ಆಳ್ವಾರರೂ ಹೆಚ್ಚು ಕಡಿಮೆ ಸ್ವಲ್ಪ ಕಾಲಾವಧಿಯ ವ್ಯತ್ಯಾಸದಲ್ಲಿ ಒಂದೇ ಕಾಲಕ್ಕೆ ಸೇರಿದವರೇನೆ. ಇದು ಕ್ರಿ.ಶ. 8ನೇ ಶತಮಾನಕ್ಕೆ ಮುಂಚಿನದು. ಈ ಕಾಲವು ಪಲ್ಲವರ ಪರಿಪಾಲನೆಗೆ ಒಳಪಟ್ಟಂತಹುದು. ಅಷ್ಟು ಪ್ರಾಚೀನ ಪ್ರಭುಗಳಿವರು.

ಇತಿಹಾಸಜ್ಞರು ಕ್ರಿ.ಶ. 13ನೇ ಶತಮಾನಕ್ಕೆ ಸೇರಿದ ಚೇರ ರಾಜನೊಬ್ಬನನ್ನು ಪಾಂಡ್ಯರಾಜನೊಬ್ಬನು ಸೋಲಿಸಿದ ಘಟನೆ ತಾಮ್ರ ಶಾಸನವೊಂದರಲ್ಲಿ ಹೆಸರಿಸಲಾಗಿದೆ. ಹೀಗೆ ಜಯಿಸಲ್ಪಟ್ಟ ಚೇರ ಪ್ರಭುವು ಕುಲಶೇಖರನೆಂದು ಪಾಂಡ್ಯ ದೊರೆಗಳು ಹೇಳಿಕೊಂಡಿದ್ದಾರೆ. ಈ ಕುಲಶೇಖರನೇ ನಮ್ಮ ಆಳ್ವಾರರಲ್ಲಿ ಒಬ್ಬರಾಗಿರುವ ಕುಲಶೇಖರಾಳ್ವಾರ್ ಎಂಬುದು ನಿಸ್ಸಂದೇಹ. ಇನ್ನೂ ಕೆಲವು ತಾಮ್ರಶಾಸನಗಳೂ ಇದಕ್ಕೆ ಸಂಬಂಧಪಟ್ಟ ಹಾಗೆ ದೊರೆತಿವೆ. ಈ ಎಲ್ಲ ತಾಮ್ರ ಶಾಸನಗಳೂ ಕ್ರಿ.ಶ. 8ನೇ ಶತಮಾನಕ್ಕೆ ಸೇರಿದವುಗಳೇನೇ ! ಆದರಿಂದ ಕುಲಶೇಖರಾಳ್ವಾರರು ಈ ಕಾಲಕ್ಕೆ ಸೇರಿದವರೇ ಆಗಿರುತ್ತಾರೆ. 11ನೇ ಶತಮಾನದ ಹೊತ್ತಿಗೆ ಇವರ ಪಾಶುರಗಳು ಶ್ರೀರಂಗನಾಥನನ್ನು ಕುರಿತ ತಮ್ಮ 'ಪೆರುಮಾಳ್ ತಿರುಮೊಳಿ' ಪ್ರಬಂಧದಲ್ಲಿ ಸಂಕೀರ್ತನೆ ಮಾಡಿದ್ದಾರೆ.

ಈ ಸಮಯಕ್ಕೆಲ್ಲ ತಿರುಪತಿ ಕ್ಷೇತ್ರವೂ ಕೂಡ ಸುಪ್ರಸಿದ್ಧವಾಗಿ, ಸಂಕೀರ್ತನೆಗೊಂಡಿತ್ತು. 'ಚೆರುಕುಲಪಲ್ಲಿ' (ಚೋಳಪಲ್ಲಿ) ಎನ್ನುವುದು ತಮ್ಮ ಕುಮಾರಿಯನ್ನು ಅಳಿಯ ಮಣವಾಳಸ್ವಾಮಿಗೆ ಕುಲಶೇಖರಾಳ್ವಾರರು ನೀಡಿ ಮದುವೆ ಮಾಡಿಕೊಟ್ಟ ಸ್ಥಳ. ಹೀಗೆಂದು ಶ್ರೀರಂಗದ ದೇವಸ್ಥಾನಕ್ಕೆ ಸೇರಿದ 'ಕೋಯಿಲ್ ಒಳಹು' ಗ್ರಂಥವು ತಿಳಿಸುತ್ತದೆ.

ಮೂರನೇ ಪ್ರಾಕಾರಕ್ಕೆ ಸೇರಿದ ಗೋಡೆಗಳು, ಭವನಗಳನ್ನು ಈ

ಆಳ್ವಾರರು ಜೀರ್ಣೋದ್ಧಾರ ಮಾಡಿದರೆಂದೂ, ಅಂತೆಯೇ ದಕ್ಷಿಣ ಪ್ರತೀಚೀ ಭಾಗವನ್ನೂ ಮತ್ತು ಸೇನೈ ವೆಂಡ್ರಾನ್ ತಿರುಮಂಟಪವನ್ನು ನಿರ್ಮಿಸಿದರಂತೆ. ಈ ಪ್ರದೇಶಕ್ಕೆಲ್ಲ ಇಂದಿಗೂ 'ಕುಲಶೇಖರ್ ತಿರುವೀಧಿ' ಎನ್ನುವ ಹೆಸರು ಇದೆ.

ಇದೇ ಶ್ರೀರಂಗದ ದೇವಾಲಯದಲ್ಲಿ ಚೇರುಕಪಲ್ಲಿ ವಿಗ್ರಹವನ್ನು ಕೂಡ ಪ್ರತಿಷ್ಠಾಪಿಸಲಾಗಿದೆ.

ಈ ಕಾಲಕ್ಕೇ ಸೇರಿದ ಆಂಡಾಳಳ ತಂದೆಯಾದ ಪೆರಿಯಾಳ್ವಾರ್‌ರವರು (ಕ್ರಿ.ಶ. 8ನೇ ಶತಮಾನ) ತಮ್ಮ ವಾದ ಪ್ರಖರತೆಯಿಂದ ವಿರೋಧಿಗಳನ್ನು ಸೋಲಿಸಿ ಪಾಂಡ್ಯರಾಜನಾದ ವಲ್ಲಭದೇವನನ್ನು ಶ್ರೀವೈಷ್ಣವನನ್ನಾಗಿ ಮಾಡಿದ ವಿಷಯ, ಶ್ರೀ ಗೋದಾದೇವಿಯು ಶ್ರೀರಂಗನಾಥನನ್ನು ವಿವಾಹವಾದುದು ಶ್ರೀವೈಷ್ಣವ ಇತಿಹಾಸದಲ್ಲಿ ಪ್ರಖ್ಯಾತವಾದುದೇ ಆಗಿದೆ.

ಈ ವಲ್ಲಭ ದೇವನೇ ಶ್ರೀರಂಗಕ್ಕೆ ಸೇರಿದ ಅಳಹಿಯ ಮಣವಾಳ ಪೆರುಮಾಳ್‌ಗೆ ಅಪಾರವಾದ ಧನವನ್ನು ಸಮರ್ಪಿಸಿದನೆಂದು 'ಕೋಯಿಲ್ ಒಳಹು' ತಿಳಿಸುತ್ತದೆ. ತೊಂಡರಡಿಪ್ಪೊಡಿ ಆಳ್ವಾರರು, ತಿರುಪ್ಪಾಣಿ ಆಳ್ವಾರರು, ತಿರುಮಂಗೈ ಆಳ್ವಾರರು ಈ ಕಾಲಕ್ಕೇ ಸೇರಿದವರಾಗಿದ್ದು, ಶ್ರೀವೈಷ್ಣವ ಸಂಪ್ರದಾಯವನ್ನು ಬಹಳವಾಗಿ ಪ್ರಚಾರಕ್ಕೆ ತಂದ ಮಹನೀಯರಾಗಿರುವರು. ಇವರಲ್ಲಿ ತಿರುಮಂಗೈ ಆಳ್ವಾರರು ಕೂಡ ಓರ್ವ ಪಾಳೆಯಗಾರ (ರಾಜ) ರಾಗಿದ್ದರೆಂದು ಶ್ರೀವೈಷ್ಣವ ಗ್ರಂಥಗಳು ಹೆಸರಿಸುತ್ತವೆ. ಈತನು ಚೋಳ ರಾಜ್ಯಕ್ಕೆ ಸೇರಿದ ಅಲ್ಲಿನಾಡು ಪ್ರಾಂತ್ಯಕ್ಕೆ ಸೇರಿದ ಓರ್ವ ಸಣ್ಣ ರಾಜನು. ಶ್ರೀರಂಗ ದೇವಾಲಯದ ನಿರ್ಮಾಣದಲ್ಲಿ ಇವರ ಹೆಸರು ಪ್ರಮುಖ ಸ್ಥಾನದಲ್ಲಿದೆ. ಇದರನುಸಾರ ನಾಲ್ಕನೇ ಪ್ರಾಕಾರವು 'ಆಳಂದಾನ್ ತಿರುವೀದಿ' ಎನ್ನುವ ಹೆಸರನ್ನು ಪಡೆದಿದೆ. ಅದರ ನಿರ್ಮಾಣಕ್ಕೆ ಅಗತ್ಯವಾದ ಹಣವಿಲ್ಲದ್ದರಿಂದ ನಾಗಪಟ್ಟಣದ ಬಳಿ ಇರುವ ಒಂದು ಬೌದ್ಧಗ್ರಾಮವನ್ನು ಕೊಳ್ಳೆ ಹೊಡೆದು, ಆ ಧನದಿಂದಲೇ ಆ ಪ್ರಾಕಾರ, ಧಾನ್ಯಾಗಾರ ಹಾಗೂ ಗೋಪುರಗಳನ್ನು ಈ ತಿರುಮಂಗೈ ಆಳ್ವಾರರು ಪೂರ್ಣಗೊಳಿಸಿದರು.

**7. ಗಂಗರ ಕಾಲದಲ್ಲಿ ವೈಷ್ಣವತ್ವ :** ಕರ್ನಾಟಕದಲ್ಲಿ ಬನವಾಸಿಯ ಕದಂಬರು ಮೂಲ ದೊರೆಗಳು. ಇವರ ಕಾಲ ಕ್ರಿ.ಶ. 280-547. ಆದರೆ ಇವರ ಕಾಲದಲ್ಲಿ ವಿಷ್ಣು ದೇವಾಲಯಗಳು ನಿರ್ಮಾಣವಾದಂತೆ ಕಾಣೆ.

ಆದರೆ ತಲಕಾಡಿನ ಗಂಗರ ಕಾಲವು ಕ್ರಿ.ಶ. 350-1024. ಇವರ ಕಾಲದಲ್ಲಿ ಜೈನ ದೇವಾಲಯಗಳ ನಿರ್ಮಾಣವು ಹೆಚ್ಚು ಪ್ರಚಾರಕ್ಕೆ ಬಂದುವು. ಬೌದ್ಧ ಚೈತ್ಯಾಲಯಗಳು, ಗುಹಾರ್ಂತ ದೇವಾಲಯಗಳು ಇದಕ್ಕೆ ಮುಂಚೆಯೇ ರೂಢಿಯಲ್ಲಿದ್ದುದರಿಂದ ಅದೇ ಮಾದರಿಯ ದೇವಾಲಯಗಳು ಮುಂದುವರೆದುವು. ವಿಶೇಷವಾಗಿ ವೈಷ್ಣವ ದೇವಾಲಯಗಳು ಸ್ಥಾಪನೆಯಾಗಲಿಲ್ಲ. ವಿಷ್ಣುವಿನ ಹೆಸರಿನ ರಾಜರುಗಳು–ವಿಷ್ಣು ಗೋಪ, ರಘುಪತಿ ವರ್ಮ ಇತ್ಯಾದಿ ಹೆಸರುಗಳು ಇದ್ದು, ಪಕ್ಕದ ತಮಿಳುನಾಡಿನ ಪ್ರಭಾವ ಈ ರಾಜ್ಯದ ಮೇಲಿದ್ದರೂ, ವಿಷ್ಣು ದೇವಾಲಯಗಳು ನಿರ್ಮಾಣವಾಗುವಂತಹ ಪ್ರಭಾವ ಕಂಡುಬರುವುದಿಲ್ಲ. ಬೌದ್ಧ, ಜೈನರ ವಾಸ್ತುಶಿಲ್ಪಗಳದ್ದೇ ಪ್ರಾಧಾನ್ಯ.

ಆದರೆ ನಂತರದ ವರ್ಷಗಳಲ್ಲಿ ಗುಪ್ತರ ಪ್ರಭಾವ ಈ ರಾಜರುಗಳ ಮೇಲೆ ಬಿದ್ದು, ಮುಂದೆ ಚಾಲುಕ್ಯರ ಕಾಲದಲ್ಲಿ ಕರ್ನಾಟಕದಲ್ಲಿ ವಿಷ್ಣು ದೇವಾಲಯಗಳ ನಿರ್ಮಾಣ ಸಾಧ್ಯವಾಯಿತು.

ಈ ಗಂಗರ ಸಹೋದರ ಗಂಗ ವಂಶಗಳವರು ಹೊರನಾಡುಗಳಲ್ಲೂ ಹರಡಿ, ಅಲ್ಲಿ ವೈಷ್ಣವ ದೇವಾಲಯಗಳ ನಿರ್ಮಾಣಕ್ಕೆ ಮೂಲಪುರುಷರಾದರು. ಇಂದಿನ ಆಂಧ್ರಪ್ರದೇಶ, ಒರಿಸ್ಸಾಗಳಲ್ಲಿ ಪೂರ್ವಗಂಗರು, ಮಹಾಗಂಗರು, ಶ್ವೇತಗಂಗರೇ ಅಲ್ಲದೆ ಜಯಂತಿಪುರದ ಕದಂಬರೂ ಕೂಡ ಪ್ರಬಲರಾಗಿ ಅಲ್ಲಿ ರಾಜ್ಯಗಳನ್ನು ನಿರ್ಮಿಸಿದರು.

ವೈಷ್ಣವ ಮತ ಚರಿತ್ರೆಯಲ್ಲಿ ಅರ್ವಾಚೀನ ಗಂಗರ ಪಾತ್ರ ಮಹತ್ತರವಾದುದು. ಇವರ ಪರಿಪಾಲನೆಯು ಕ್ರಿ.ಶ. 960ರಿಂದ ಪ್ರಾರಂಭವಾಯಿತು. ಈ ಗಂಗ ಪ್ರಭುಗಳು ವೈಷ್ಣವ ಧರ್ಮಾರಾಧಕರೆಂದೂ, ಕದಂಬ ವಂಶದವರೊಂದಿಗೆ ಸನ್ನಿಹಿತ ಸಂಬಂಧವಿತ್ತೆಂದೂ ತಿಳಿದುಬರುತ್ತದೆ. ಈ ಎರಡೂ ವಂಶಗಳೂ ಕರ್ನಾಟಕದಿಂದ ವಲಸೆ ಹೋದವರು. ಕದಂಬರು ರಾಜ್ಯವಿಸ್ತಾರದಲ್ಲಿ ಗಂಗರೊಂದಿಗೆ ಸಹಕರಿಸಿದರು. ಇವರ ಕುಲದೈವ ಮಧುಕೇಶ್ವರ. ಮಧುಕೇಶ್ವರನೆಂದರೆ ವಿಷ್ಣು ಭಗವಾನನೆ! ಕಳಿಂಗ ನಗರದಲ್ಲಿ ಮಧುಕೇಶ್ವರ ದೇವಾಲಯವೊಂದಿದೆ. ಅಲ್ಲಿನ ಗಂಗವಂಶದ ಮೊದಲ ದೊರೆಯಾದ ವಜ್ರಹಸ್ತ ದೇಹ (ಕ್ರಿ.ಶ. 1038-1070) ನ ಮೊಮ್ಮಗನಾದ ಅನಂತ ಗಂಗದೇವನ ಪೂರ್ವಜರಲ್ಲಿ ಓರ್ವನಾದ ಎರಡನೇ ಕಾಮಾರ್ಣವನು ಈ ದೇವಾಲಯವನ್ನು

ನಿರ್ಮಿಸಿದನು. ಕದಂಬರು ಕಳಿಂಗಕ್ಕೆ ಬಂದಾಗ ತಮ್ಮೊಂದಿಗೆ ತಮ್ಮ ಮನೆದೇವರಾದ 'ಮಧುಕೇಶ್ವರ'ನನ್ನು ತಂದರೆಂದೂ, ಅದರ ಪ್ರಭಾವವೇ ಕಳಿಂಗಾಂಧ್ರಗಳಲ್ಲಿ ವಿಷ್ಣು ದೇವಾಲಯಗಳ ನಿರ್ಮಾಣಕ್ಕೆ ಪೂರಕವೆಂದೂ ಇತಿಹಾಸಜ್ಞರ ಅಭಿಪ್ರಾಯ. ಇವರ ದಾನಶಾಸನಗಳ ಮೇಲೆ 'ಮತ್ಸ್ಯ' ಲಾಂಛನವಿದೆ.

**8. ಚಾಳುಕ್ಯರ ಕಾಲದ ವೈಷ್ಣವತ್ವ :** ಬಾದಾಮಿ ಚಾಳುಕ್ಯರು ಕರ್ನಾಟಕದವರಾದರೂ, ದಕ್ಷಿಣ ಭಾರತವಷ್ಟನ್ನೂ ಆಳಿದ ಮೊದಲ ಚಕ್ರವರ್ತಿಗಳು. ಇವರಲ್ಲಿ ವೈಷ್ಣವತ್ವಕ್ಕೆ ಪ್ರೋತ್ಸಾಹ ನೀಡಿದ ಅನೇಕರಿದ್ದಾರೆ. ಇವರು ಬಾದಾಮಿಯಲ್ಲಿ ಶಿಲಾ (ಗುಹಾಂತ) ದೇವಾಲಯಗಳನ್ನು ನಿರ್ಮಿಸಿದರು. ಒಂದನೆಯ ಪುಲಿಕೇಶಿಯ ಮಕ್ಕಳಾದ ಕೀರ್ತಿ ವರ್ಮ ಹಾಗೂ ಮಂಗಲೀಶ– ಇವರಿಬ್ಬರು ನಾಲ್ಕು ಶಿಲಾ ದೇವಾಲಯಗಳನ್ನು ಕಟ್ಟಿಸಿದ್ದು ಅವುಗಳಲ್ಲಿ ಮೂರು ವಿಷ್ಣು ದೇವಾಲಯಗಳು. ಇದರಲ್ಲಿ ಹೆಚ್ಚಿನ ಪಾಲು ಮಂಗಲೀಶ (ಕ್ರಿ.ಶ. 594–98; 609–618) ನದೇ ಆಗಿದ್ದು, ಇಲ್ಲಿನ ಶಿಲ್ಪಕಲೆ ಚಿತ್ತಾಕರ್ಷಕವಾಗಿದೆ. ಇವುಗಳಲ್ಲಿ ಎರಡನೆಯ ಗುಹಾಂತ ದೇವಾಲಯದಲ್ಲಿ ಎಡಗೈನಲ್ಲಿ ಪೃಥ್ವಿಯನ್ನು ಹಿಡಿದಿರುವ ವರಾಹವೂ ರಕ್ಕಸನನ್ನು ಇಕ್ಕಿ ಮೆಟ್ಟಿದ ವರಾಹದ ಬೃಹದಾಕಾರ ಮೂರ್ತಿಯೂ ಇವೆ. ಮೂರನೆಯದಲ್ಲಿ ಹನ್ನೊಂದು ಅಡಿ ಎತ್ತರದ ನರಸಿಂಹ ಮೂರ್ತಿ ಇದೆ. ಇಲ್ಲಿನ ಬಲಿ ಗರ್ವಭಂಗವೂ ಸುಂದರವಾದುದೇ ಆಗಿದೆ.

ಬಾದಾಮಿ ಚಾಲುಕ್ಯರಲ್ಲಿ ಪ್ರಸಿದ್ಧನಾದ ಇಮ್ಮಡಿ ಪುಲಿಕೇಶಿಯ ತಮ್ಮನಾದ ಕುಬ್ಜ ವಿಷ್ಣುವರ್ಧನನು ಪೂರ್ವ ಚಾಲುಕ್ಯರ ವಂಶದ ಸ್ಥಾಪಕನಾಗಿ (ಕ್ರಿ.ಶ. 654) ಆಂಧ್ರದಲ್ಲಿ ಆ ಸಾಮ್ರಾಜ್ಯದ ಭಾಗವು ಮುಂದುವರಿಯುವಂತೆ ಮಾಡಿದನು.

ನಂತರದಲ್ಲಿ ಕರ್ನಾಟಕವನ್ನು ಆಳಿದ ಮಾನ್ಯಖೇಟದ ರಾಷ್ಟ್ರಕೂಟರು (ಕ್ರಿ.ಶ. 735ರಿಂದ 973) ವೈಷ್ಣವ ಅಭಿಮಾನಿಗಳಾಗಿದ್ದಂತೆಯೇ ಅವರ ಹೆಸರುಗಳಾದ ಗೋವಿಂದ, ಕೃಷ್ಣರಾಜ, ಇಂದ್ರ ಇತ್ಯಾದಿ ಹೆಸರುಗಳಿದ್ದು, ಶ್ರೀವಲ್ಲಭ, ಕೀರ್ತಿನಾರಾಯಣ, ಧವಳ ನಾರಾಯಣ ಇತ್ಯಾದಿ ಬಿರುದುಗಳನ್ನು ಹೊಂದಿದ್ದರೂ ಅಜಂತಾ ಎಲ್ಲೋರಗಳಲ್ಲಿ ವಾಸ್ತುಶಿಲ್ಪ, ಚಿತ್ರಕಲೆಯ, ಏಕಶಿಲಾ ನಿರ್ಮಾಣಗಳಲ್ಲಿ ಶೈವತ್ವವೇ ಹೆಚ್ಚಾಗಿ ಎದ್ದುಕಾಣುತ್ತದೆ. ಇವರ ರಾಷ್ಟ್ರಚಿಹ್ನೆ ಗರುಡ.

ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಕರ್ನಾಟಕದಲ್ಲಿ ಅಂತಹ ಹೇಳುವಂತಹ ವಿಷ್ಣು ದೇವಾಲಯಗಳ ನಿರ್ಮಾಣ ಆಗಲಿಲ್ಲ.

ಆದರೆ ಪೂರ್ವ ಚಾಲುಕ್ಯರು ಈ ನಿಟ್ಟಿನಲ್ಲಿ ಮಹಾನ್ ಸಾಧನೆಯನ್ನು ಮಾಡಿದರು. ಕುಬ್ಜ ವಿಷ್ಣುವರ್ಧನನು ಪ್ರಖ್ಯಾತಿ ಹೊಂದಿದನು. ತ್ರಿವಿಕ್ರಮ್ನ ಸಮಪ್ರಭಾವವನ್ನು ಹೊಂದಿರುವವನು ಎಂದು ಸಾರಿಕೊಳ್ಳಲು ಈತನು ಕುಬು ವಿಷ್ಣು (ವಾಮನ) ಎಂಬ ಹೆಸರನ್ನೇ ಧರಿಸಿದ. ಮುಂದೆ ಪಲ್ಲವರೂ ಕೂಡ ಈತನ ಧೈರ್ಯ ಸಾಹಸಗಳ ನೆನಪಿಗಾಗಿ ಮುಂದೆ 'ವಿಷ್ಣುವರ್ಧನ' ಎಂಬ ಬಿರುದನ್ನು ಹೊಂದಿದ್ದರೆಂದು ತಿಳಿದುಬರುತ್ತದೆ.

ಈ ಕುಬ್ಜವಿಷ್ಣುವು ಹಾಕಿಸಿದ ಚೀವುರುಪಲ್ಲಿ ಶಾಸನದಲ್ಲಿ, ಈತನ ದಾನ ಶಾಸನವನ್ನು ಅವುರಿಗೆ ತಂದ ಬುದ್ಧವರ್ಮ ಎನ್ನುವ ಅಧಿಕಾರಿಯು ವಿಷ್ಣುವಿಗೆ ಗರುಡನಂತೆ, ರಾವಣಾಂತಕನಿಗೆ ಹನುಮಂತನಂತೆ ತಾನು ಸೇವೆ ಮಾಡಿದವ ನೆಂದು ಅದರಲ್ಲಿ ಹೇಳಿಕೊಂಡಿದ್ದಾನೆ. ಇದೇ ಕುಬ್ಜ ವಿಷ್ಣುವು ಹಾಕಿಸಿರುವ ತಿಮ್ಮಾಪುರದ ತಾಮ್ರ ಶಾಸನದಲ್ಲಿ ಈ ರಾಜನು ಶುದ್ಧ ವಿಷ್ಣುಭಕ್ತನೆಂದೂ, ಪರಮ ಭಾಗವತನೆಂದೂ ಹೆಸರುವಾಸಿಯಾಗಿದ್ದಾನೆ.

ಈ ವಿಷ್ಣುವರ್ಧನನಿಂದ ಆಂಧ್ರ, ಕಳಿಂಗಗಳಲ್ಲಿ ಶ್ರೀವೈಷ್ಣವ ಸಂಪ್ರದಾಯಕ್ಕೆ ವಿಶೇಷ ಪ್ರಚಾರವು ಲಭಿಸಿತು. ಈ ವಂಶಕ್ಕೆ ಸೇರಿದ ವಿಷ್ಣುವರ್ಧನ ಹೆಸರನ್ನು ಧರಿಸಿರುವ ಕೆಲವು ಶೈವರೂ ಇದ್ದಾರೆ. ಆದರೆ ಇವರೆಲ್ಲ ವೈಷ್ಣವಧರ್ಮ ಪೋಷಕ ರಾಗಿದ್ದುದು ವಿಶೇಷ ವಿಷಯ. ಈ ಕಾರಣದಿಂದಲೇ ಈ ಪೂರ್ವ ಚಾಲುಕ್ಯ ವಂಶಜರು ಕುಬ್ಜ ವಿಷ್ಣುವನ್ನು 'ಕಾರಣ ವಿಷ್ಣು'ವೆಂದು ಕರೆದಿದ್ದಾರೆ.

ಲಕ್ಷ್ಮಣಸೇನನು ಕೂಡ ವೈಷ್ಣವ ಭಕ್ತಿಯನ್ನು ಆವಿಷ್ಕರಿಸಿದವನೇ ! ಖ್ಯಾತ ಕವಿ ಜಯದೇವನು ಈತನ ಆಸ್ಥಾನ ಕವಿ. ಈತನ ಕೃತಿ 'ಗೀತಗೋವಿಂದ' ದಲ್ಲಿ ರಾಧಾಕೃಷ್ಣ ಭಕ್ತಿಯನ್ನು ಶೃಂಗಾರಪ್ರಧಾನವಾಗಿ ಚಿತ್ರಿಸಲಾಗಿದೆ.

ಗಂಗವಂಶಕ್ಕೆ ಸೇರಿದ ರಾಜರಾಜದೇವನ ಕಾಲದಲ್ಲಿಯೇ ಉಡುಪಿಯಲ್ಲಿ ಆನಂದತೀರ್ಥ ಶ್ರೀಪಾದರು ವೈಷ್ಣವತ್ವದಲ್ಲಿನ ಒಂದು ಭಾಗವಾದ ದ್ವೈತ ಸಿದ್ಧಾಂತವನ್ನು ಸ್ಥಾಪಿಸಿದರು.

ಈ ವಂಶಕ್ಕೆ ಸೇರಿದ ವೀರನರಸಿಂಹ ದೇವನ ವೈಷ್ಣವ ಪ್ರೀತಿ ವಿಶಿಷ್ಟ ವಾದುದು-ಎಂದು ಇತಿಹಾಸಜ್ಞರು ತಿಳಿಸುತ್ತಾರೆ. ಶ್ರೀ ಕೂರ್ಮದಲ್ಲಿರುವ ಕೂರ್ಮನಾಥಾಲಯಕ್ಕೆ ಈತನು ಅನೇಕ ದಾನಗಳನ್ನು ನೀಡಿದ್ದಾರೆ. ಸಿಂಹಾಚಲ

ದಲ್ಲಿನ ವರಾಹ ನೃಸಿಂಹ ಸ್ವಾಮಿಯ ದೇವಾಲಯಕ್ಕೆ ಕೃಷ್ಣ ಶಿಲೆಯ ವಿಮಾನ, ಮುಖ ಮಂಟಪ, ನಾಟ್ಯ ಮಂಟಪ, ತಿರುಚ್ಚುಟ್ಟು ಮಾಲಿ–ಇತ್ಯಾದಿಗಳನ್ನು ಈತನ ಆದೇಶಾನುಸಾರ ಈತನ ಸೇನಾಧಿಪತಿಯು ಕಟ್ಟಿಸಿದನು.

ಅನಂತವರ್ಮ ಚೋಳಗಂಗನು ಪೂರಿ ಕ್ಷೇತ್ರದಲ್ಲಿನ ಜಗನ್ನಾಥ ಕ್ಷೇತ್ರವನ್ನು ನಿರ್ಮಿಸಿದನು. ಇದರಿಂದ ಸ್ಫೂರ್ತಿಗೊಂಡ ಗಂಗವಂಶದ ಸೇನಾಧಿಪತಿಗಳು, ಪ್ರಧಾನಿಗಳು ಮತ್ತಿತರ ಆಡಳಿತದ ಅಧಿಕಾರಿಗಳು ತಮ್ಮ ಮೇಲ್ವರ್ಗದವರನ್ನು ಅನುಕರಿಸುವ ರೀತಿಯಲ್ಲಿ ಎಷ್ಟೋ ವಿಷ್ಣು ದೇವಾಲಯಗಳನ್ನು ನಿರ್ಮಿಸಿದರು.

ನರಸಿಂಹ ದೇವನ ಕಾಲದಲ್ಲಿ ಕಳಿಂಗದಲ್ಲಿ ಹಾಗೂ ಓಢ್ರದಲ್ಲಿ ವೈಷ್ಣವತ್ವವು ಬಹಳ ಚೆನ್ನಾಗಿ ವಿಜೃಂಭಿಸಿತು. ಅಪ್ಪನ, ಅಪ್ಪಕೊಂಡ, ನರಸಿಂಹ, ಅಪ್ಪಲಕೊಂಡ ಇತ್ಯಾದಿಯ ಹೆಸರುಗಳನ್ನು ಸಿಂಹಾಚಲದ ವರಾಹ–ನೃಸಿಂಹ ದೇವರ ಬಗ್ಗೆ ಭಕ್ತಿಭಾವವನ್ನು ಸಾಮಾನ್ಯ ಜನತೆಯು ಪ್ರಸ್ಫುಟಿತಗೊಳಿಸಿದರು.

ದಕ್ಷಿಣ ಕಳಿಂಗದಲ್ಲಿ ಅಂದರೆ ಶ್ರೀಕಾಕುಳಂ, ವಿಶಾಖಪಟ್ಟಣ ಜಿಲ್ಲೆಗಳಲ್ಲಿ ಇಂತಹ ಪ್ರಜೆಗಳು ಎಷ್ಟೋ ಜನರಿದ್ದಾರೆ. ಇವರ ಕಾಲದಲ್ಲಿ ಸಿಂಹಾಚಲದೊಂದಿಗೆ ಬಾಂಧವ್ಯ–ಸಂಬಂಧಗಳನ್ನು ಏರ್ಪಾಟು ಮಾಡಿಕೊಂಡರು.

ವೀರನರಸಿಂಹದೇವನ ಕಾಲದಲ್ಲಿ ಶಕವರ್ಷ 1178ರಲ್ಲಿ ಸಿಂಹಳ ದೇಶದಲ್ಲಿ ಆಜ್ಞ ಕೇಶವದೇವನ ತನಯಳಾದ ಗಾಯಕಿ ಭಾಗಲದೇವಿಯು ಕಳಿಂಗ ದೇಶಕ್ಕೆ ಬಂದು, ಶ್ರೀ ಕೂರ್ಮನಾಥನಿಗೆ ಅಖಂಡ ದೀಪದಾನವನ್ನು ಮಾಡಿದಳಂತೆ !

ವೀರ ನರಸಿಂಹನು ತನ್ನ ಕಳಿಂಗ ರಾಜ್ಯದ ಮೇಲೆ ದಂಡೆತ್ತಿ ಬಂದ ಕಾಕತೀಯ ಪ್ರಭುಗಳ ಮೇಲೆ ಪ್ರತೀಕಾರ ಮಾಡಲು ತನ್ನ ಸಾಕುತಮ್ಮನಾದ ಅನಂತಪಾಲ ದಂಡನಾಥನನ್ನು ಕಳುಹಿಸಿದನಂತೆ. ಆತನು ಮಾರ್ಗಮಧ್ಯದಲ್ಲಿ ಕೃಷ್ಣಾ ಜಿಲ್ಲೆಯಲ್ಲಿರುವ 'ಶ್ರೀಕಾಕುಳಮ್' ಬಳಿ ಠಾಣ್ಯ ಹೂಡಿ, ಅಲ್ಲಿನ ಆಂಧ್ರ ವಿಷ್ಣುವಿಗೆ ಒಂದು ದೇವಾಲಯವನ್ನು ಕಟ್ಟಿಸಿದನಂತೆ–ಎಂಬುದಾಗಿ ಶ್ರೀಕಾಕುಳದ ಸ್ಥಳಪುರಾಣದ ಬಗ್ಗೆ ಸಂಸ್ಕೃತದಲ್ಲಿ ರಚನೆಯಾಗಿರುವ ಶ್ರೀಕಾಕುಳ ಮಾಹಾತ್ಮ್ಯೆದಲ್ಲಿ ತಿಳಿಸಲಾಗಿದೆ. 'ವಲ್ಲಭಾಭ್ಯುದಯ' ಎಂಬ ಹೆಸರಿನಲ್ಲಿ ಈ ಕಾವ್ಯವು ಅರ್ವಾಚೀನ ತೆಲುಗು ಕಾವ್ಯವಾಗಿ ಅನುವಾದಗೊಂಡಿದೆ.

ಅದಾಗ್ಯೂ ಶ್ರೀಕಾಕುಳದಲ್ಲಿರುವ ಆಂಧ್ರ ಮಹಾವಿಷ್ಣುಮಂದಿರವು

ಶಕವರ್ಷ 1088ರಷ್ಟು ಸಮಯಕ್ಕೇ ಇದ್ದಿತೆಂಬುದಕ್ಕೆ ಐತಿಹಾಸಿಕ ಸಾಕ್ಷಿಗಳು ಉಪಲಬ್ಧವಿರುವುದರಿಂದ ಬಹುಶಃ ಶಿಥಿಲವಾಗಿರುವ ಅಲ್ಲಿನ ಪ್ರಾಚೀನ ದೇವಾಲಯವನ್ನು ಅನಂತಪಾಲ ದಂಡನಾಥನು ಜೀರ್ಣೋದ್ಧಾರ ಮಾಡಿದನೆಂದು ಇತಿಹಾಸಕಾರರು ಭಾವಿಸುತ್ತಾರೆ.

**9.** ಹೊಯ್ಸಳ ಪ್ರಭುಗಳ ಶ್ರೀವೈಷ್ಣವ ಭಕ್ತಿ : ಕುಳೋತ್ತುಂಗ ಚೋಳ ಕಾಲದಲ್ಲಿ ಅಲ್ಲಿನ ದಮನ ಕೃತ್ಯಕ್ಕೆ ಗುರಿಯಾದ ಶ್ರೀರಾಮಾನುಜರಿಗೆ ಆಶ್ರಯ ನೀಡಿದವರು ಹೊಯ್ಸಳ ಪ್ರಭುಗಳು. ಇವರ ಪ್ರಖ್ಯಾತ ದೊರೆ ಬಿಟ್ಟಿದೇವನು ಅವರ ಪ್ರಭಾವಕ್ಕೆ ಒಳಗಾಗಿ ಶ್ರೀವೈಷ್ಣವನಾಗಿ 'ವಿಷ್ಣುವರ್ಧನ' ಎಂಬ ಹೆಸರಾಗಿ ಬದಲಾಯಿಸಿಕೊಂಡನು. ಇದರ ನೆನಪಿಗಾಗಿ ಪಂಚನಾರಾಯಣರ ದೇವಾಲಯಗಳನ್ನು ನಿರ್ಮಿಸಲಾಯಿತು. ಇವುಗಳಲ್ಲಿ ಮುಖ್ಯವಾದುವು ಬೇಲೂರಿನ ಚನ್ನಕೇಶವ ದೇವಾಲಯ (ಕ್ರಿ.ಶ. 1116), ತಲಕಾಡಿನ ಕೀರ್ತಿನಾರಾಯಣ ದೇವಾಲಯ (ಕ್ರಿ.ಶ. 1117), ತರೀಕೆರೆಯ ಸಮೀಪದಲ್ಲಿರುವ ಅನಂತಶಯನ ದೇವಾಲಯ (ಕ್ರಿ.ಶ. 1196). ಇವಲ್ಲದೆ ಸೋಮನಾಥಪುರದ ಕೇಶವ ದೇವಾಲಯ, ಜಾವಗಲ್ಲಿನ ಲಕ್ಷ್ಮಿನಾರಾಯಣ ದೇವಾಲಯ, ಹಾರನಹಳ್ಳಿಯ ಕೇಶವ ದೇವಾಲಯ, ನುಗ್ಗೇಹಳ್ಳಿಯ ಲಕ್ಷ್ಮೀನಾರಾಯಣ ದೇವಾಲಯಗಳು ಈ ಕಾಲದ ಪ್ರಮುಖ ದೇವಾಲಯಗಳಾದುವು. ಈ ನಿಟ್ಟಿನಲ್ಲಿ ಹೊಯ್ಸಳ ವಾಸ್ತುಶಿಲ್ಪ ಎನ್ನುವ ನವೀನತಮ ಪಂಥ ಪ್ರಾರಂಭವಾಯಿತು. ವಿಷ್ಣುವರ್ಧನನ ನಂತರದ ದೊರೆಗಳೂ ಕೂಡ ಶ್ರೀವೈಷ್ಣವ ಧರ್ಮ ಪ್ರಚಾರಕ್ಕೆ ಸಹಾಯ ಮಾಡಿದರು. ವೀರ ರಾಮನಾಥನು ಚೋಳ ಪ್ರಭುವಾದ ಸುಂದರ ಪಾಂಡ್ಯನನ್ನು ಜಯಿಸಿ, ಶ್ರೀರಂಗ ಪ್ರಾಂತ್ಯದ ರಕ್ಷಣೆ ಮಾಡಿದನು.

**10.** ಕಾಶ್ಮೀರ ಪ್ರಭುಗಳ ವೈಷ್ಣವ ಪ್ರೀತಿ : ಕಾಶ್ಮೀರ ದೇಶದಲ್ಲಿ ಕ್ರಿ.ಶ. 6ನೇ ಶತಮಾನದಿಂದ 13, 14ನೇ ಶತಮಾನದವರೆಗೆ ರಾಜ್ಯ ಪಾಲನೆ ಮಾಡಿದ ಹೈಂದವ ಪ್ರಭುಗಳಲ್ಲಿ ಕೆಲವರು ವೈಷ್ಣವ ಧರ್ಮವನ್ನು ಪೋಷಿಸಿದರು.

ಕಲ್ಹಣನ ರಾಜತರಂಗಿಣಿಯಲ್ಲಿ, ಜೋನರಾಜ ಶ್ರೀವರ ಪಂಡಿತನು, ಪ್ರಾಜ್ಯಭಟ್ಟ-ಎನ್ನುವವರು ರಚಿಸಿದ ರಾಜತರಂಗಿಣಿಯಲ್ಲಿ ಶ್ರೀವೈಷ್ಣವ ದೇವಾಲಯಗಳ ನಿರ್ಮಾಣಕ್ಕೆ ಸಂಬಂಧಪಟ್ಟ ಅನೇಕ ಉದಾಹರಣೆಗಳಿವೆ.

ಕಾಶ್ಮೀರ ದೇಶದ ಹೈಂದವ ರಾಜರ ಕಾಲದಲ್ಲಿ ಯಾವ ಯಾವ ರಾಜರ ಕಾಲದಲ್ಲಿ ಯಾವ ಯಾವ ದೇವಾಲಯ ಕಟ್ಟಲ್ಪಟ್ಟಿತು ಎಂಬುದನ್ನು ಪ್ರಾಜ್ಯ ಭಟ್ಟನು ಈ ರೀತಿ ವಿವರಿಸಿದ್ದಾನೆ–

ಚತ್ವಾರಾಶವಥಾಪಿ ಸಂಚಗಿರಿಶಾಃ, ಪುಷ್ಟಿಶ್ಚ ಚಕ್ರಾಯುಧಾಃ
ಬ್ರಹ್ಮಾಣಸ್ತ್ರಯ ಇತ್ಯನಾಧಿನಿಧನಾ ದ್ವಾವಿಂಶತಿಶ್ಶಕ್ತ್ಯಯಃ ।
ನೀಲಾದೀನಿ ಗತಾನಿ ಸಪ್ತಫಣಿನಾಂ ತಿರ್ಥೌಕಸಾಂ ಕೋಟಯೊ
ವಿಖ್ಯಾತಾಶ್ಚ ಚತುರ್ದಶೋತ್ತಮದಶಾಃ ಕಾಶ್ಮೀರ ಭೂಮಂಡಲೇ ॥

43 ಶಿವಮಂದಿರಗಳು, 60 ವೈಷ್ಣವ ಮಂದಿರಗಳು, 3 ಬ್ರಹ್ಮಮಂದಿರ ಗಳು, 22 ಶಕ್ತಿ ಸ್ಥಾನಗಳು, 'ನೀಲ' ಮೊದಲಾದ ನಾಗದೇವತೆಗಳಿಗೆ 700 ಸ್ಥಾನಗಳು, 14 ಕೋಟಿತೀರ್ಥಗಳು–ಕಾಶ್ಮೀರ ಭೂಮಂಡಲದಲ್ಲಿ ಇವೆಯಂತೆ.

ಕಲ್ಹಣನು ರಾಜತರಂಗಿಣಿಯಲ್ಲಿ ಕಾಶ್ಮೀರವನ್ನು ವರ್ಣಿಸುತ್ತಾ–

ಚಕ್ರಭುಗ್ವಿಜಯೇಶಾದಿ–ಕೇಶವೇ ಶಾನ ಭೂಷಿತೇ ।
ತಿಲಾಂಶೋಽಪಿನಯತ್ರಾಸ್ತಿ–ಪೃಥ್ವ್ಯಾಶ್ತೀರ್ಥೈರ್ವಹಿಸ್ಕೃತಃ ॥

ಚಕ್ರಧಾರಿ, ವಿಜಯೇಶನು ಇತ್ಯಾದಿ ಕೇಶವಸ್ವಾಮಿ ಮೂರ್ತಿಗಳಿಂದ ಅಲಂಕರಿಸಲ್ಪಟ್ಟಿರುವ ಕಾಶ್ಮೀರದಲ್ಲಿ ಎಳ್ಳಿನ ಮೊನೆಯಷ್ಟು ತೀರ್ಥಸ್ಥಳ ಭೂಭಾಗವೂ ಇಲ್ಲವೇ ಇಲ್ಲವಂತೆ. ಕೇಶವ, ಶಿವ, ಸೂರ್ಯ, ಶಕ್ತಿ, ನಾಗಪೂಜೆಯ ಸ್ಥಳಗಳ ಬಗ್ಗೆ ಹೇಳಿದ್ದರೂ, ವಿಶೇಷವಾಗಿ ಅಲ್ಲಿನ ವಿಷ್ಣು ಪ್ರೀತಿಯ ಪರಿಸರವನ್ನು ಮುಖ್ಯವಾಗಿ ಕಲ್ಹಣನು ವರ್ಣಿಸಿದ್ದಾನೆ.

ಅನಂತದೇವನೆನ್ನುವ ಕಾಶ್ಮೀರ ರಾಜನು ತನ್ನ ಪ್ರಾಣಗಳನ್ನು ಬಿಡುವ ಸಮಯದಲ್ಲಿ ಭಗವದ್ಗೀತಾ ಶ್ರವಣವನ್ನು ಮಾಡುತ್ತಾ, ಶ್ರೀವೈಷ್ಣವ ಧಾಮ ಗಳನ್ನು ಧ್ಯಾನಿಸುತ್ತಾ ತನ್ನ ಪ್ರಾಣತ್ಯಾಗ ಮಾಡಿದನೆಂದು ಹೇಳಲಾಗುತ್ತದೆ.

ಅವನ್ತಿ ದೇವ ಪಾತಿನ್ನ ಮಾಂಧಾತೇನ ಮಹೀಪತಿನಾ್
ಪ್ರಾಣಾನ್ತೇ ಪಾಂಜಲಿಶ್ಯಿರೋ ವೈಷ್ಣವತ್ವ ಮುದರ್ಶಯತ್ ।
ದೇಹಾಂತೇ ಭಗವದ್ಗೀತಾ–ಶೃಣ್ವತಾ ಭಾವಿತಾತ್ಮನಾ
ಧ್ಯಾಯತಾ ವೈಷ್ಣವಂ ಧಾಮ–ಏವ ಮುಚ್ಯತ ಜೀವಿತನ್ ॥
(ರಾಜ ತರಂಗಿಣಿ–5-124, 125)

**11. ಓಢ್ರ ಗಜಪತಿಗಳ ವೈಷ್ಣವ ಪೋಷಣೆ :** ಗಂಗರ ನಂತರ ಕಳಿಂಗವನ್ನು ಸ್ವಾಧೀನಪಡಿಸಿಕೊಂಡು, ಶ್ರೀರಂಗದವರೆಗೆ ದಂಡಯಾತ್ರೆ ನಡೆಸಿ, ಸ್ವಲ್ಪ ಕಾಲವಾದರೂ ತಮ್ಮ ರಾಜ್ಯವನ್ನು ಆಂಧ್ರಪ್ರದೇಶ, ತಮಿಳುನಾಡು ಗಳಲ್ಲೆಲ್ಲ ವ್ಯಾಪಿಸುವಂತೆ ಮಾಡಿ, ಕಟ್ಟಕಡೆಗೆ ಶ್ರೀ ಕೃಷ್ಣದೇವರಾಯನ ವೈಭವ, ಸಾಹಸ, ಶೌರ್ಯಗಳ ಎದುರು ತಲೆಬಾಗಿ, ರಾಜ್ಯವನ್ನು ಕಳೆದುಕೊಂಡು, ಹೈಂದವ ಸ್ವಾತಂತ್ರ್ಯಕ್ಕೆ ಪ್ರತೀಕರಂತಿದ್ದ ಗಜಪತಿ ದೊರೆಗಳು ಕೂಡ ತಮ್ಮ ಪೂರ್ವಜರಂತೆ ಶ್ರೀವೈಷ್ಣವ ಪ್ರೀತಿಯನ್ನು ತೋರಿದ ಪ್ರಭುಗಳೇ ಆಗಿದ್ದರು.

ದಕ್ಷಿಣ ಭಾರತದಲ್ಲಿ ಶ್ರೀಕೃಷ್ಣದೇವರಾಯನಂತೆ ಕಳಿಂಗದಲ್ಲಿ ಓಢ್ರ, ತೆಲುಗು, ಸಂಸ್ಕೃತ ವಾಙ್ಮಯ ವ್ಯಾಪ್ತಿಗೆ, ಶ್ರೀವೈಷ್ಣವ ದೀಪ್ತಿಗೆ–ಮೂಲನಾದ ಪುರುಷೋತ್ತಮನೂ ಆದ ಪ್ರತಾಪರುದ್ರ ಗಜಪತಿ ಎನ್ನುವ ಇವರಿಬ್ಬರೂ ಇತಿಹಾಸದಲ್ಲಿ ಸ್ಥಿರವಾದ ಸ್ಥಾನವನ್ನು ನಿರ್ಮಿಸಿಕೊಂಡಿದ್ದಾರೆ. ಭಕ್ತಿ ವಾಙ್ಮಯ ನಿರ್ಮಾಣಕ್ಕೆ ಇವರು ಮಾಡಿರುವ ಸೇವೆ ಪ್ರಖ್ಯಾತಿ ಹೊಂದಿರುವುದಾಗಿದೆ.

ಸ್ವತಃ ಕವಿ–ಪಂಡಿತನಾದ ಪುರುಷೋತ್ತಮ ಗಜಪತಿಯು ಅಭಿನವ ಗೀತಗೋವಿಂದವು, ಆಗಮ ಕಲ್ಪತರುವು, ಗೋಪಾಲಾರ್ಚನಾ ವಿಧಿ ಎನ್ನುವ ಗ್ರಂಥಗಳನ್ನು ರಚಿಸಿರುವನು.

ಇನ್ನು ಪ್ರತಾಪರುದ್ರ ಗಜಪತಿಯು ವಿದ್ಯೆಯಲ್ಲಿ ಚತುರ್ಮುಖನಂತೆ ಕೀರ್ತಿಹೊಂದಿ ಕೌತುಕ ಚಿಂತಾಮಣಿ, ನಿರ್ಣಯ ಸಂಗ್ರಹಮು ಎನ್ನುವ ಅನೇಕ ಗ್ರಂಥಗಳ ರಚನಾಕಾರನಾಗಿ ಪ್ರಖ್ಯಾತಿ ಹೊಂದಿದ್ದಾನೆ. ಶ್ರೀಕೃಷ್ಣದೇವರಾಯ ನಂತೆ ಕವಿ ಹಾಗೂ ಪಂಡಿತ ಸಭೆಗಳನ್ನು ನಿರ್ವಹಿಸಿದ್ದಾನೆ. ಈತನ ಆಸ್ಥಾನ ದಲ್ಲಿನ ವಾಸುದೇವ ಸಾರ್ವಭೌಮ ಭಟ್ಟಾಚಾರ್ಯ ಎನ್ನುವಾತನು ಚೈತನ್ಯ ಮಹಾಪ್ರಭುವಿನೊಂದಿಗೆ ಶ್ರೀವೈಷ್ಣವ ಸಿದ್ಧಾಂತಗಳ ಬಗ್ಗೆ ವಾದ ಮಾಡಿ, ಸೋತು, ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿ, ಚೈತನ್ಯ ಸಂಪ್ರದಾಯ ಪರವಾದನು.

ಇದೇ ಗಜಪತಿಯು ಶ್ರೀಕೃಷ್ಣ ಚೈತನ್ಯ ಮಹಾಪ್ರಭುವಿನ ಗೌಡೀಯ ವೈಷ್ಣವದ ಭಕ್ತಿ ವೈವಿಧ್ಯತೆಯ ಬಗ್ಗೆ ಚರ್ಚೆ, ವಾದಗಳನ್ನು ಮಾಡಿ, ಅಲ್ಲೋಲ ಕಲ್ಲೋಲವೆಬ್ಬಿಸಿದ, ಭಾಗವತೋತ್ತಮನಾಗಿ ಪ್ರಸಿದ್ಧಿ ಹೊಂದಿದ ರಮಾನಂದ ರಾಯನಿಗೆ ಆಶ್ರಯದಾತನಾಗಿದ್ದನು. ಇಂತಹ ರಮಾನಂದರಾಯನನ್ನು

ರಾಜಮಹೇಂದ್ರ ಪ್ರಾಂತ್ಯಕ್ಕೆ ಆಡಳಿತಗಾರನನ್ನಾಗಿ ನೇಮಿಸಲ್ಪಟ್ಟನು. ಈ ರಮಾನಂದನ ಜಗನ್ನಾಥ ನಾಟಕವು ತುಂಬಾ ಪ್ರಸಿದ್ಧವಾದುದು. ಈ ರೀತಿಯಲ್ಲಿ ಪ್ರಭುತ್ವಾಧಿಪತಿಯಾದ ರಮಾನಂದರಾಯನು ಚೈತನ್ಯ ಮಹಾಪ್ರಭುವನ್ನು ಸಂಧಿಸಿ, ವಾದ ಮಾಡಿದ ಕ್ಷೇತ್ರನೆಂದರೆ ಪಶ್ಚಿಮ ಗೋದಾವರಿ ಜಿಲ್ಲೆಯಲ್ಲಿನ ಕೊವ್ವೂರು ಬಳಿ ಇರುವ ಗೋಷ್ಪದೀಕ್ಷೇತ್ರವೇನೇ ! ಇಲ್ಲಿ ಒಂದು ದೇವಾಲಯ ವನ್ನು ನಿರ್ಮಿಸಲಾಗಿದೆ.

ಚೈತನ್ಯ ಮಹಾಪ್ರಭುವಿಗೆ ಭಕ್ತನಾಗಿದ್ದ ಪ್ರತಾಪಚಂದ್ರ ಗತಿಪತಿಯು ಶ್ರೀವೈಷ್ಣವ ಧರ್ಮದ ಪ್ರಚಾರಕ್ಕೆ, ಭಾಗವತ ಮತೋದ್ಧರಣದಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ್ದವನು. ಒರಿಯಾ ಭಾಷೆಯಲ್ಲಿ ಶ್ರೀವೈಷ್ಣವ ಸಾಹಿತ್ಯವು ವೃದ್ಧಿಗೊಳ್ಳಲು ಪ್ರೋತ್ಸಾಹ, ಸಹಾಯಗಳನ್ನು ನೀಡಿದವನು ಈತನೇನೆ !

ಈ ರೀತಿಯಲ್ಲಿ ಉತ್ತರಾರ್ಧ ದಕ್ಷಿಣ ಭಾರತದಲ್ಲಿ ಭಗವದ್ರಾಮಾನುಜ ಸಿದ್ಧಾಂತ ಹರಡಲು ಆದರಲ್ಲೂ ಒರಿಸ್ಸಾ–ಗೌಧ (ಬಂಗಾಳ) ದೇಶಗಳಲ್ಲಿ ಚೈತನ್ಯ ಸಂಪ್ರದಾಯವು ಅವ್ಯಾಹತವಾಗಿ ಹರಡಲು ಅಪ್ರತಿಹತವಾಗಿ ಪ್ರಯತ್ನಗಳನ್ನು ಮುಂದುವರೆಸಿದನು.

ಪ್ರತಾಪರುದ್ರ ಗಜಪತಿಯು ರಚಿಸಿರುವ 'ಪ್ರತಾಪ ಮಾರ್ತಾಂಡಃ' ಎನ್ನುವ ಗ್ರಂಥದಲ್ಲಿ 'ವಿಷ್ಣು ಭಕ್ತಿ ನಿರೂಪಣೆ' ಎನ್ನುವ ಒಂದು ಬೃಹದ್ ಅಧ್ಯಾಯವಿದ್ದು, ಇದು ತಾತ್ತ್ವಿಕರ, ತತ್ತ್ವಶಾಸ್ತ್ರಜ್ಞರ ಗಮನವನ್ನು ಸೆಳೆದಿದೆ. ಈ ಅಧ್ಯಾಯದಲ್ಲಿ 32 ಶ್ರೀವೈಷ್ಣವಾಚರಣೆಗಳ ವಿಶ್ಲೇಷಣೆ ಇದೆ. ಇದರೊಂದಿಗೆ 13 ಪ್ರಾಯಶ್ಚಿತ್ತ ವಿಶೇಷತೆಗಳು ಕೂಡ ಇವೆ. ಈ ಹಸ್ತಪ್ರತಿ ಗ್ರಂಥದ ಪ್ರತಿಗಳು ಪೂನಾ, ವಾರಣಾಸಿ ಪ್ರದೇಶಗಳಲ್ಲಿ ಲಭ್ಯವಿದೆ. ಈ ಗ್ರಂಥದಲ್ಲಿ ಉತ್ಕಳೀಯ (ಒರಿಸ್ಸಾ) ಶ್ರೀವೈಷ್ಣವಾಚಾರವನ್ನು ಕುರಿತು ಬಹಳ ಉತ್ತಮ ವಾದ ವಿವರಗಳಿವೆ. ಇಲ್ಲಿನ ನಿರೂಪಣೆಯೂ ಸೊಗಸಾಗಿದೆ.

ಈ ರೀತಿಯಲ್ಲಿ ಪ್ರತಾಪರುದ್ರ ಗಜಪತಿ ಮತ್ತಿತರ ಗಜಪತಿ ದೊರೆಗಳು ಸ್ವತಃ ಶ್ರೀವೈಷ್ಣವರಾಗಿದ್ದುದೇ ಅಲ್ಲದೆ, ಶ್ರೀವೈಷ್ಣವಾಚಾರ ನಿರ್ದೇಶಕರಾಗಿಯೂ ಇತಿಹಾಸದಲ್ಲಿ ಅಜರಾಮರರಾಗಿದ್ದಾರೆ.

**12.** ರೆಡ್ಡಿ–ಪದ್ಮನಾಯಕ ಪ್ರಭುಗಳ ಶ್ರೀವೈಷ್ಣವ ಭಕ್ತಿ : ಕ್ರಿ.ಶ. 12, 13ನೇ ಶತಮಾನಗಳಲ್ಲಿ ಈ ಪ್ರಭುಗಳ ಪೋಷಣೆಯಲ್ಲಿ

ಆಂಧ್ರಪ್ರದೇಶದಲ್ಲಿನ ದೇವಾಲಯಗಳಲ್ಲಿ ಶ್ರೀರಾಮಾನುಜ ವೈಷ್ಣವ ಸಂಪ್ರದಾಯವು ಶ್ರೀರಾಮಾನುಜರಿಂದ ನಿಯಮಿಸಲ್ಪಟ್ಟ ದಿವ್ಯಪ್ರಬಂಧ ಪಠಣವು ವಿಸ್ತೃತ ಪ್ರಚಾರವನ್ನು ಪಡೆಯಿತು.

ಕ್ರಿ.ಶ. 11ನೇ ಶತಮಾನದಿಂದ ದೇವಾಲಯಗಳ ನಿರ್ಮಾಣದಲ್ಲಿ ಗರ್ಭಗೃಹ, ಅಂತರಾಳಿಕ, ಮುಖಮಂಟಪ-ಇತ್ಯಾದಿಗಳಿಂದ ಒಡಗೂಡಿದ ನಿರ್ಮಾಣವು ಮುಂದುವರೆದು, ಪ್ರಧಾನ ದೇವರುಗಳೊಂದಿಗೆ ಪರಿವಾರ ದೈವಗಳ ಪ್ರತಿಷ್ಠಾಪನೆ, ಮುಖ್ಯವಾಗಿ ಹನ್ನೆರಡು ಆಳ್ವಾರರುಗಳ ಪ್ರತಿಷ್ಠಾಪನೆಯು, ವಿಶೇಷ ಪ್ರಾಮುಖ್ಯತೆಯನ್ನು ಹೊಂದಿತು.

ದೇವಾಲಯಗಳು ನಾಟ್ಯ, ಸಂಗೀತಾದಿ ಕಲೆಗಳಿಗೆ, ದ್ರಾವಿಡ ವೇದಗಳೊಂದಿಗೆ ವಿವಿಧ ಪಾರಂಪರಿಕ ವಿದ್ಯೆಗಳಿಗೆ ನೆಲವೀಡಾಯಿತು. ಆದಾಗ್ಯೂ ವೇದಾಂತ ದೇಶಿಕರ ನಂತರದಲ್ಲಿ ಹುಟ್ಟಿಕೊಂಡ ವಡಗಲೈ-ತೆಂಗಲೈ ಸಾಂಪ್ರದಾಯಿಕ ಭೇದಗಳು ದೇವಾಲಯಗಳಲ್ಲೂ ಕೂಡ ಪ್ರಸ್ಫುಟಗೊಂಡವು. ಈ ಸಾಂಪ್ರದಾಯಿಕ ಭೇದಗಳು ಪೋಷಕರಾದ ಪ್ರಭುಗಳನ್ನು ಕೂಡ ಪ್ರಭಾವಿತಗೊಳಿಸಿದುವು.

ರೆಡ್ಡಿ ಪ್ರಭುಗಳ ಕಾಲದಲ್ಲಿ ಶ್ರೀವೈಷ್ಣವ ಕ್ಷೇತ್ರಗಳಿಗೆ ಪ್ರೋತ್ಸಾಹವು ಸಾಕಷ್ಟು ಲಭಿಸಿತು. ಕೊಂಡವೀಟಿ ರೆಡ್ಡಿಯವರ ರಾಜ್ಯದಲ್ಲಿ ಸೇರಿದ್ದ ಅಹೋಬಲ ದೇವಾಲಯದಲ್ಲಿ ದರ್ಶನಕ್ಕೆ ಅನುಕೂಲವಾಗಲೆಂದು ವೇಮಾರೆಡ್ಡಿಯು ಮೆಟ್ಟಲುಗಳನ್ನು ನಿರ್ಮಿಸಿರುವುದು ಇತಿಹಾಸ ಪ್ರಸಿದ್ಧವಾದುದಾಗಿದೆ.

ಅನವೇಮಾ ರೆಡ್ಡಿಯ ಕಾಲದಲ್ಲಿ ವೆನ್ನೆಲಕಂಟಿ ಸೂರನ ಎನ್ನುವಾತನು ತನ್ನ ವಿಷ್ಣುಪುರಾಣಾನುವಾದವನ್ನು ಪ್ರಕಟಿಸಿದನು. ಈ ರೆಡ್ಡಿ ರಾಜರ ಹಾಗೂ ಪದ್ಮನಾಯಕರ ಕಾಲದಲ್ಲಿಯೇ ಶ್ರೀ ವೇದಾಂತ ದೇಶಿಕರು ಶ್ರೀವೈಷ್ಣವ ಧರ್ಮದ ವ್ಯಾಪ್ತಿಗೆ, ಪ್ರಚಾರಕ್ಕೆ ಬಹಳವಾಗಿ ಶ್ರಮಿಸಿದರೆಂದು ಇತಿಹಾಸಕಾರರು ತಿಳಿಸಿರುತ್ತಾರೆ.

ಶ್ರೀರಂಗದಿಂದ ಭಟ್ಟರ ವಂಶಕ್ಕೆ ಸೇರಿದ ಪರಾಶರ ಭಟ್ಟರು ಆಗ್ನೇಯ ಕರ್ನಾಟಕ ಹಾಗೂ ಆಂಧ್ರಪ್ರದೇಶಗಳಲ್ಲಿ ಪರ್ಯಟನೆ ಮಾಡಿ, ಕೋರುಕೊಂಡ ರಾಜ್ಯಕ್ಕೆ ದಯಮಾಡಿಸಲು, ಅಲ್ಲಿನ ಮಹಾರಾಜನಾದ ಮುಮ್ಮಡಿ ನಾಯಕನು ಕಸ್ತೂರಿ ವಂಶೀಯ ಶ್ರೀವೈಷ್ಣವ ಗುರುಗಳಿಗೆ ಶಿಷ್ಯನಾದನು. ಈ ರೀತಿಯಲ್ಲಿ ಇವರು ರಾಜಗುರುಗಳಾದರು. ತಿರುಮಲ ವಂಶೀಯರಾದ ತೆಂಗಲೆ ಸಂಪ್ರದಾಯದ

ಶ್ರೀವೈಷ್ಣವರು ಕೂಡ ರೆಡ್ಡಿ ಯುಗದಲ್ಲಿ ಆಂಧ್ರಪ್ರದೇಶಾದ್ಯಂತ ಶ್ರೀವೈಷ್ಣವ ಮತದ ಪ್ರಚಾರವನ್ನು ಮಾಡಿದರು.

**13. ಪಲ್ನಾಟಿ ಸೀಮೆಯಲ್ಲಿ ಶ್ರೀವೈಷ್ಣವ ಧರ್ಮ ವ್ಯಾಪ್ತಿ :** ಕಳಿಂಗದಲ್ಲಿ ಅರ್ವಾಚೀನ ಗಂಗವಂಶದವರ ಕಡೆಯ ರಾಜರುಗಳ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಕರ್ನಾಟಕದ ಚಾಲುಕ್ಯರು ಹಾಗೂ ಪೂರ್ವ ಚಾಲುಕ್ಯರು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಕ್ರಿ.ಶ. 11ನೇ ಶತಮಾನದ ಕಡೆಯ ಭಾಗದಿಂದ 12ನೇ ಶತಮಾನದ ಕೊನೆಯವರೆಗೆ ಆಂಧ್ರಭೂಮಿ, ವೆಲನಾಡು, ಪಲನಾಡು, ಪಾಕನಾಡು, ಕಮ್ಮನಾಡು ಮಂಡಲಗಳಾಗಿ ದೂರ ದೂರ ಸಿಡಿದು ಪಲ್ನಾಟಿ ಪ್ರದೇಶವನ್ನು ಹೈಹೆಯ ವಂಶದ ಪ್ರಭುಗಳು ಪರಿಪಾಲಿಸುತ್ತಿದ್ದರು.

ಈ ವಂಶಕ್ಕೆ ಸೇರಿದ ಅನುಗುರಾಜು ಪುತ್ರರ ನಡುವೆ ಉಂಟಾದ ಪಲ್ನಾಟಿ ಯುದ್ಧವು ಕುಟುಂಬ ಕಲಹಗಳಿಂದ ಏರ್ಪಟ್ಟಿದ್ದಾದರೂ, ಎರಡೂ ಕಡೆಯವರು ಪರಸ್ಪರ ನಂಬಿಕೆಗಳ ಮೇಲೆ ಆಧಾರ ಪಡದೆ, ಪ್ರಜಾಕ್ಷೇಮ ಅಪೇಕ್ಷಿಸದೆ ದ್ವೇಷಾ ಸೂಯೆಗಳಿಂದ ಉದ್ದೀಪನಗೊಂಡು ಹೊಡೆದಾಡಿದರೆಂದು ಇತಿಹಾಸಕಾರರು ಬರೆದರು. ಮುಖ್ಯವಾಗಿ ಧರ್ಮ ಸಂಬಂಧ ಭೇದಭಾವಗಳಿಂದ ಆದ ಯುದ್ಧ ವಿದೆಂಬುದು ಅವರ ಹೇಳಿಕೆ. ನಿಜವಾದ ಮತೀಯ ಯುದ್ಧವೇ ಎಂಬುದನ್ನು ಒಂದು ಪಕ್ಕಕ್ಕೆ ಸರಿಸಿ, ವೀಕ್ಷಿಸಿದಲ್ಲಿ ಕಂಡುಬರುವ ಸತ್ಯವೆಂದರೆ ಎರಡು ಪಕ್ಷಗಳು ಎರಡು ಮತೀಯ ನಂಬಿಕೆಗಳ ನಡುವೆ ನಡೆದ ಹೋರಾಟವಿದು–ಎಂಬುದನ್ನು ನಿರಾಕರಿಸಲಾಗದು.

ಆ ಎರಡು ಮತಗಳಲ್ಲಿ ಒಂದು ವೈಷ್ಣವ ಮತ, ಮತ್ತೊಂದು ಶೈವ ಮತ.

ಅನುಗುರಾಜು ಪಟ್ಟಮಹಿಷಿಯಾದ ವಿಜ್ಜಲದೇವಿಯ ಪ್ರೀತಿಯ ಪುತ್ರನಾದ ಮಲ್ಲಿದೇವನು ಒಂದು ಪಕ್ಷ. ಇವನ ಪರವಾಗಿದ್ದ ಬ್ರಹ್ಮನಾಯುಡು ಶ್ರೀವೈಷ್ಣವ ಸಂಪ್ರದಾಯದವನು. ಈ ಕಾರಣದಿಂದ ಮಹಾರಾಜನು ಇವನ ಪರವಾಗಿದ್ದು, ಶ್ರೀವೈಷ್ಣವ ಧರ್ಮವನ್ನು ಪೋಷಿಸುತ್ತಿದ್ದನು.

ಇನ್ನು ಅನುಗುರಾಜುವಿನ ಮತ್ತೊಬ್ಬ ಪತ್ನಿಯಾದ ಮೈಲಿಮಾದೇವಿಯ ಪುತ್ರನಾದ ನಲಗಾಮುನಿ ಎನ್ನುವವನ ಸಲಹೆಗಾರಳಾದ ನಾಗಮ್ಮಳು ಶೈವ ಮತಾವಲಂಬಿಯಾಗಿದ್ದಳು. ಈ ಕಾರಣದಿಂದ ಶೈವ ಮತ ಪ್ರಭಾವವು ನಲಗಾಮುನಿಯ ಮೇಲೆ ಬಿದ್ದಿತು.

ಪಲ್ನಾಟಿ ಯುದ್ಧವನ್ನು ವರ್ಣಿಸಿರುವ ಶ್ರೀನಾಥಾದಿ ಕವಿಗಳು ಈ ಮತೀಯ ಕಲಹಗಳ ಬಗ್ಗೆ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸದೆ ಇದ್ದರೂ ಬ್ರಹ್ಮನಾಯುಡುವನ್ನು ವಿಷ್ಣುವಿನ ಅವತಾರಿಯಾಗಿ ಭಾವಿಸಿ, ಗೌರವಿಸುವ ಪದ್ಧತಿಯು ಪಲ್ನಾಟಿ ಸೀಮೆಯಲ್ಲಿ ಪ್ರಚಲಿತವಾಗಿತ್ತೆಂದು ತಿಳಿಸಿದ್ದಾರೆ.

ಪಲ್ನಾಟಿನ ಚರಿತ್ರೆಯನ್ನು ಬೇರೆ ಬೇರೆಯಾಗಿಯೇ ರಚಿಸಿರುವ ಮಲ್ಲಯ್ಯ, ಕೊಂಡಯ್ಯನವರುಗಳು ಕೂಡ ಬ್ರಹ್ಮನಾಯುಡುವಿನ ಪ್ರಸಕ್ತಿ ಬಂದಾಗಲೆಲ್ಲ 'ಹರಿತುಳಸೀ ಮಾಲೆಯಂ ಧರಿಸಿ, ಶ್ರೀಕೃಷ್ಣನ ಚೆಲುವನು ಪಸರಿಪ' ಎಂದೋ, 'ಶೀಲಬ್ರಹ್ಮಯಾದಿ ವಿಷ್ಣುವಿವನು' ಎಂದೋ ವರ್ಣಿಸಿದ್ದಾರೆ.

ಶ್ರೀನಾಥನೂ ಕೂಡ ಮಲ್ಲಿದೇವನನ್ನು ವರ್ಣಿಸುವ ಸಂದರ್ಭದಲ್ಲಿ 'ವಿಷ್ಣುನಾಮ ಜಪಕೆ ಮೆರುಗು ನೀಡುವ ಮನುಜ' ಎಂಬುದಾಗಿ ಮಲ್ಲದೇವನ ವಿಷ್ಣುಭಕ್ತಿಯನ್ನು ಅಟ್ಟಕ್ಕೇರಿಸಿದ್ದಾನೆ.

ಆದರೆ ಇದಕ್ಕೆ ವ್ಯತಿರೇಕವಾದ ಪರಿಸರವಿದೆ. ನಾಗಮ್ಮಳು ಶೈವ ಸಂಪ್ರದಾಯ ನಿರತಳಾದರೂ, ತನಗೆ ಆಶ್ರಯ ನೀಡಿದ ನಲಗಾಮುನಿಯ ರಾಜಸಭೆಯನ್ನು 'ಶ್ರೀರಾಮ ಕಥಾನಕ, ಶ್ರೀಕೃಷ್ಣ ಕಥಾನಕಗಳಿಂ ನೇಯ್ದು ಚಿತ್ರಂಗೈದ ಚಿತ್ರಪಟಗಳಿಂ ಅಲಂಕರಿಸಿರ್ಪರ್ ಭಿತ್ತಿಗಳಂ' ಎಂದು ವರ್ಣಿಸಿದ್ದಾಳೆ.

ಅಷ್ಟೇ ಅಲ್ಲದೆ ನಲಗಾಮುನಿಯು ಶ್ರೀವೈಷ್ಣವ ತಿಲಕವನ್ನು (ಊರ್ಧ್ವ ಪುಂಡ್ರವನ್ನು) ಧರಿಸುವಾಗ 'ನಿಲುವುಗನ್ನಡಿ ನೋಡಿ ಅಚ್ಚುಕಟ್ಟಾದ ತಿಲಕದಲಿ ಹೆಚ್ಚು ಕಡಿಮೆಯಾದುದನು ತೀಡಿ, ತಿದ್ದಿ ಸರಿಪಡಿಸಿ' ಎಂಬ ವರ್ಣನೆ ಬರುತ್ತದೆ.

ಪಲ್ನಾಟಿ ಪ್ರಭುಗಳು ಮೊದಲಿನಿಂದಲೂ ಶ್ರೀವೈಷ್ಣವ ಭಕ್ತರಾಗಿದ್ದರಿಂದ, ಆ ಸಂಪ್ರದಾಯಕ್ಕೆ ಬದ್ಧವಾದ ಆಚಾರ ವಿಧಾನಗಳನ್ನೇ ಅನುಸರಿಸುತ್ತಾ ಇದ್ದರೂ, ಅವರಲ್ಲಿ ಅಂತಹ ಶೈವ ದ್ವೇಷವಿರಲಿಲ್ಲವೆಂದು ಹೇಳಲಾಗುತ್ತದೆ.

ವಾಸ್ತವದಲ್ಲಿ ಪರಮ ಭಾಗವತನೂ, ವೀರವೈಷ್ಣವಾಚಾರಪರನೂ ಆದ ಬ್ರಹ್ಮನಾಯುಡುವು ಅನುಗುರಾಜುವು ಮರಣಿಸಿದ ನಂತರ ಮಲ್ಲಿದೇವನಿಗೆ ಮದುವೆ ಮಾಡಬೇಕೆಂದುಕೊಂಡನು. ಅದರಿಂದ ಕಲ್ಯಾಣಪುರಾಧೀಶನಾದ ವರಸೋಮನು ಶೈವ ಸಂಧೀಯನಾದರೂ ಅವನ ಕನ್ಯಾಮಣಿಯನ್ನು ವಿವಾಹಕ್ಕಾಗಿ ಬೇಡಿಕೆಯನ್ನು ಮುಂದಿಟ್ಟ. ಅದಕ್ಕೆ ವರಸೋಮನು ತಾನು ಶೈವ ಸಂಪ್ರದಾಯನಾಗಿರುವುದರಿಂದ ಶ್ರೀವೈಷ್ಣವ ಸಂಪ್ರದಾಯದವರೊಂದಿಗೆ ಬೀಗತನ

ಸರಿಹೋಗುವುದಿಲ್ಲವೆಂದು ಮನೆ ಬಾಗಿಲಿಗೆ ಬಂದ ವಿವಾಹ ಸಂಬಂಧವನ್ನು ತಿರಸ್ಕರಿಸಿದನು. ಆದರೆ ನಂತರದಲ್ಲಿ ಸಂಭವಿಸಿದ ಒಂದು ಯುದ್ಧದಲ್ಲಿ ಅವನು ಬ್ರಹ್ಮನಾಯುಡುವಿನ ಸಹಕಾರವನ್ನು ಪಡೆಯಲೇಬೇಕಾಯಿತು. ಆ ಯುದ್ಧದಲ್ಲಿ ಗೆದ್ದುದರ ಕೃತಜ್ಞತೆಗಾಗಿ ವರಸೋಮನು ತನ್ನ ಮಗಳನ್ನು ಮಲ್ಲಿದೇವನಿಗೆ ನೀಡಿ ಮದುವೆ ಮಾಡಿಕೊಟ್ಟ.

ಹೈಹಯ ವಂಶಜರ ಮೊದಲ ರಾಜನಾದ ಕಾರ್ತವೀರ್ಯಾರ್ಜುನನು ಜಮದಗ್ನಿಯನ್ನು ಕೊಂದ ಕಾರಣ, ಉಂಟಾದ ಪಾಪವನ್ನು ತೀರ್ಥಯಾತ್ರೆ ಮಾಡುವುದರ ಮುಖಾಂತರ ಹೋಗಲಾಡಿಸಿಕೊಳ್ಳುವಂತೆ ಸಾಕ್ಷಾತ್ ಶ್ರೀಮನ್ನಾರಾಯಣನೇ ಅನುಗುರಾಜುವಿಗೆ ಹೇಳಿದನಂತೆ. ಈ ಕಾರಣದಿಂದ ಸಹಜವಾಗಿಯೇ ಶ್ರೀವೈಷ್ಣವನಾದ ಈ ರಾಜನಿಗೆ ಬ್ರಹ್ಮನಾಯುಡುವಿನ ಸಾಹಚರ್ಯದಿಂದ ಪರಿಸರದ ಪ್ರಭಾವದಿಂದ ಶ್ರೀವೈಷ್ಣವ ಪ್ರೇಮಿಗಳಾದರು. ಇದರಿಂದ ಬ್ರಹ್ಮನಾಯುಡುವಾಗಲಿ, ಇತರರಾಗಲಿ ಶೈವ ಮತದ್ವೇಷವನ್ನು ಪ್ರದರ್ಶಿಸಲಿಲ್ಲ.

ಮೇಲೆ ತಿಳಿಸಿದ ಮಲ್ಲಿದೇವನ ವಿವಾಹ ಪ್ರಯತ್ನಗಳ ಪರಿಣಾಮವಾಗಿ ಶೈವರೊಂದಿಗೆ ಒಂದಾಗಿ ಕಲೆತು ಮೆಲೆತು ಅವರೊಂದಿಗೆ ಸಹಕಾರದ ಜೀವನ ಮಾಡುವುದರೊಂದಿಗೆ ತಮ್ಮ ಸಂಪ್ರದಾಯವನ್ನು ಆಚರಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

ಅಂದು ಬ್ರಹ್ಮನಾಯುಡುವಿನ ಆಶ್ರಯ ಪಡೆದ ಶ್ರೀವೈಷ್ಣವತ್ವವೇ ಇಂದಿಗೂ ಪಲ್ನಾಟಿ ಸೀಮೆಯಲ್ಲಿ ವಿರಾಜಮಾನವಾಗಿದೆ. ಇದನ್ನೇ ಇಲ್ಲಿನ ಶ್ರೀವೈಷ್ಣವರು ಇಂದಿಗೂ ಅನುಸರಿಸುತ್ತಿರುವರು.

ಮಾಚರ್ಲದಲ್ಲಿ ಚೆನ್ನಕೇಶವ ದೇವಾಲಯವಿದೆ. ಈ ದೇವರ ಕಂಠಹಾರ ಕನ್ನಮದಾಸನಾಗಿ ಅವತರಿಸಿತೆಂದು ಜನರ ನಂಬಿಕೆ. ಈ ಕನ್ನಮದಾಸನು ಪರಮ ಭಾಗವತೋತ್ತಮನು, ಅಂತ್ಯಜನು ಭಗವದ್ರಾಮಾನುಜರ ಕಾಲದಲ್ಲಿಯೇ ಶ್ರೀವೈಷ್ಣವರನ್ನು ಅವರ ಕುಲಕ್ಕೆ ಅನುಸಾರವಲ್ಲದೆ, ಅವರಲ್ಲಿನ ಶ್ರೀವೈಷ್ಣವ ಶೀಲಸಂಪದವನ್ನು ಗೌರವಿಸಬೇಕೆಂಬ ಅಭಿಪ್ರಾಯವು ಒಡಮೂಡಿತು. ಇದರ ಆಧಾರದ ಮೇಲೆಯೇ ಬೇರೆ ಬೇರೆ ಜಾತಿಗಳಿಗೆ ಸೇರಿದವರಾದರೂ ಶ್ರೀವೈಷ್ಣವ ದೇವಾಲಯಗಳಲ್ಲಿ ಆಳ್ವಾರರ ವಿಗ್ರಹಗಳನ್ನು ಪ್ರತಿಷ್ಠಾಪಿಸಿ

ಅವರನ್ನು ಪೂಜಿಸಿ, ಅವರಿಗೆ ನೈವೇದ್ಯ ಮಾಡಿದ ಪ್ರಸಾದವನ್ನೇ ಎಲ್ಲ ಭಕ್ತರಿಗೂ ನೀಡುವುದು.

ತೆಂಗಲೆ ಸಂಪ್ರದಾಯದಲ್ಲಿ ಪ್ರಸನ್ನನಾದ, ಶರಣಾಗತಿ ತತ್ತ್ವವನ್ನು ಅಕ್ಷರಶಃ ಪಾಲಿಸುವ ಶೂದ್ರನಾದರೂ ಅವನು ಕೊಡುವ ದೇವರ ತೀರ್ಥವನ್ನು ಸ್ವೀಕರಿಸಬೇಕೆಂಬ ನಿರ್ದೇಶನವಿದೆ. ವೈದಿಕ ಸಂಪ್ರದಾಯದ ಕರ್ಮಕಾಂಡ, ವೈದಿಕಾಚಾರಗಳನ್ನು ಪ್ರಧಾನವಾಗಿ ಹೊಂದಿರುವ ವಡಗಲೆ ಸಂಪ್ರದಾಯ ದವರಿಗಿಂತ, ತೆಲುಗು ಪ್ರದೇಶಗಳಲ್ಲಿ ತೆಂಗಲೆ ಸಂಪ್ರದಾಯಕ್ಕೆ ಈ ಕಾರಣದಿಂದ ವಿಶೇಷ ಪ್ರಾಧಾನ್ಯತೆ ಉಂಟಾಯಿತು.

ಶ್ರೀವೈಷ್ಣವ ಸಮಾಜದಲ್ಲಿ ತುಂಬಾ ಕೆಳಸ್ತರದ ಜನತೆಯೂ ಕೂಡ ಉಪಾದೇಯವಾಗುವುದು–ಇತ್ಯಾದಿ ಅನೇಕ ಕಾರಣಗಳಿಂದ ಬ್ರಹ್ಮನಾಯುಡುವು ಅಂತ್ಯಜನಾದ ಕನ್ನಮದಾಸನ ಬಳಿಗೆ ಒಯ್ದಿತು. ಶ್ರೀವೈಷ್ಣವ ಸಮಾಜದ ನಿಜ ಅರ್ಥದ ವೈಶಿಷ್ಟ್ಯಪೂರ್ಣ ಸಂಸ್ಕಾರವೇ ಇದು. ಈ ಕಾರಣದಿಂದಲೇ 'ಕನ್ನಮದಾಸ'ನೂ ಕೂಡ ನಿಜ ಅರ್ಥದ ಭಗವದ್ಭಕ್ತನಾಗಿ, ಮುಮುಕ್ಷುವಾಗಿ ಸಾಮಾನ್ಯ ಜನತೆಯ ಹೃದಯಗಳಲ್ಲಿ ಇಂದಿಗೂ ನೆಲೆಸಿದ್ದಾನೆ. ಈತನು ಸಾಮಾನ್ಯ ಜನರಿಂದ ಇಂದಿಗೂ ಪೂಜೆಗಳನ್ನು ಸ್ವೀಕರಿಸುತ್ತಿದ್ದಾನೆ.

ಶ್ರೀನಾಥನು ತಾನು ರಚಿಸಿದ 'ಪಲ್ನಾಟಿ ಯುದ್ಧ' ಕಾವ್ಯವು ವೀರಭಾಗವತ ವೆಂದು ಪ್ರಸಿದ್ಧಿ ಹೊಂದಿ 'ಪಲನಾಟಿ ವೀರರ ಭಾಗವತವಾಗಿದೆ. ಇದರ ಆಧಾರದ ಮೇಲೆ ಪಲ್ನಾಟಿ ವೀರರನ್ನು ಭಾಗವತರನ್ನಾಗಿ ಭಾವಿಸಲಾಗಿದ್ದು, ಅವರ ವೀರ ಚರಿತೆಯೊಂದಿಗೆ ಶ್ರೀವೈಷ್ಣವ ಭಕ್ತಿ ವಿಶ್ವಾಸಗಳು ಆ ಸೀಮೆಯಲ್ಲೆಲ್ಲ ಪ್ರಬಲ ವಾಗಿದೆಯೆಂದು ಭಾವಿಸಬಹುದು.

**4. ವಿಜಯನಗರ ಪ್ರಭುಗಳ ಶ್ರೀವೈಷ್ಣವ ಭಕ್ತಿ :** ಹೈಂದವ ಸಂಸ್ಕೃತಿಯನ್ನು ತುರುಷ್ಕರ ದಾಳಿಗಳಿಂದ ಸುಮಾರು 200 ವರ್ಷಗಳ ಕಾಲ ಸಂರಕ್ಷಿಸಿದ ವಿಜಯನಗರ ಸಾಮ್ರಾಜ್ಯ ಪ್ರಭುಗಳು ಹೈಂದವ ಸಂಸ್ಕೃತಿಯ ಪರಿವೀಕ್ಷಕರಾಗಿ ಭಾರತದ ಇತಿಹಾಸದಲ್ಲಿ ಚಿರಸ್ಥಾನವನ್ನು ಹೊಂದಿರುವರು. ಹಿಂದೂ ಸಂಸ್ಕೃತಿಯನ್ನು ರಕ್ಷಿಸುವ ನೆಪದಲ್ಲಿ ಅವರು ಶ್ರೀವೈಷ್ಣವ ಸಂಸ್ಕೃತಿ ಯನ್ನು ರಕ್ಷಿಸಿದರು. ಮುಸ್ಲಿಂ ದಾಳಿಕೋರರಿಂದ ನಾಶವಾದ, ಭಗ್ನಾವಶೇಷ ಗಳಾದ ಶ್ರೀವೈಷ್ಣವ ದೇವಾಲಯಗಳು, ಮಠಗಳು, ಸಾಂಸ್ಕೃತಿಕ ಕೇಂದ್ರಗಳು

ಇವರ ಕಾಲದಲ್ಲಿ ಪುನರುಜ್ಜೀವನಗೊಂಡವು. ಹಿಂದೂ ಧರ್ಮದ, ಸಂಸ್ಕೃತಿಯ ಪುನರುತ್ಥಾನವು ಶ್ರೀರಂಗದ ರಂಗನಾಥ ದೇವಾಲಯದಿಂದ ಪ್ರಾರಂಭವಾಯಿತು. ಇದು ವಿಜಯನಗರ ಸಾಮ್ರಾಜ್ಯದ ಪ್ರಥಮ ಪ್ರಸ್ಥಾನವಾಯಿತು. ಪಿಳ್ಳೈ ಲೋಕಾಚಾರ್ಯರು ಹಿಂದೂ ಸಾಮ್ರಾಜ್ಯದ ಉದ್ಧಾರವಾಗಬೇಕಾದರೆ ಶ್ರೀರಂಗದ ದೇವಾಲಯವು ಎಲ್ಲದಕ್ಕಿಂತ ಮೊದಲು ನವೀಕರಣವಾಗಬೇಕು; ಅದಿಲ್ಲದೆ ಹಿಂದೂ ಸಾಮ್ರಾಜ್ಯದ ಉದ್ಧಾರ ಅಸಾಧ್ಯ ಎಂದಿದ್ದರು. ಇದು ವಿಜಯ ನಗರದ ಪ್ರಭುಗಳಿಗೆ ತಲುಪಿತು. ವೀರ ಕಂಪಣರಾಯನು ಕ್ರಿ.ಶ. 1370ರಲ್ಲಿ ಶ್ರೀರಂಗದ ದೇವಾಲಯವನ್ನು ಮೊದಲಿನ ರೂಪಕ್ಕೆ ತಂದು, ಮಲ್ಲಿಕ್ ಕಾಫುರನ ಕಾಲದಲ್ಲಿ ತಿರುಪತಿ-ತಿರುಮಲೆಗಳಲ್ಲಿದ್ದ ಶ್ರೀರಂಗನಾಥರ ವಿಗ್ರಹಗಳನ್ನು ತಂದು ಪುನಃ ಪ್ರತಿಷ್ಠಾಪಿಸಿ, ಆ ಕ್ಷೇತ್ರಕ್ಕೆ ಮೊದಲಿನ ಭವ್ಯತೆ, ದಿವ್ಯತೆಗಳನ್ನು ತಂದು ಕೊಟ್ಟಿದ್ದಾಯಿತು. ಇದು ಮಧುರಾ ವಿಜಯದ ನಂತರವೇ ಸಾಧ್ಯವಾಯಿತು. ಈ ವಿಜಯವು ಇತಿಹಾಸ ಪ್ರಸಿದ್ಧವಾದುದು. ಅಂತೆಯೇ ಶ್ರೀವೈಷ್ಣವ ಇತಿಹಾಸ ದಲ್ಲೂ ಕೂಡ, ವಿಶೇಷವಾಗಿ ಹೆಸರಿಸುವಂತಾಯಿತು. ಇದರ ಪ್ರಭಾವದಿಂದ ಮುಂದೆ ಹರಿದಾಸ ಪರಂಪರೆಯು ವಿಜಯನಗರ ಸಾಮ್ರಾಜ್ಯದಲ್ಲಿ ತಳ ಊರಲೂ ಸಹಕಾರಿಯಾಯಿತು.

ವಿಜಯನಗರದ ಅರಸರಲ್ಲಿ ಕೆಲವರು ಶೈವ, ಸ್ಮಾರ್ತ ಸಂಪ್ರದಾಯಗಳಿಗೆ ಪೋಷಕರಾಗಿದ್ದರೂ, ಇನ್ನು ಕೆಲವರು ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿ, ಆದರಿಸಿದರು. ಈ ಅರಸರಲ್ಲಿ ಸಂಗ ವಂಶಕ್ಕೆ ಸೇರಿದ ವಿರೂಪಾಕ್ಷ ಮಹಾರಾಜರು ಶ್ರೀವೈಷ್ಣವತ್ವವನ್ನು ಸ್ವೀಕರಿಸಿದ ಮೊದಲ ಪ್ರಭುವೆಂದು ಇತಿಹಾಸಕಾರರು ತಿಳಿಸುತ್ತಾರೆ.

ಮೇಲೆ ತಿಳಿಸಿದ ವೀರ ಕಂಪಣರಾಯನ ಸಹಾಯಕರಲ್ಲಿ ಒಬ್ಬನಾದ ಸಾಳುವ ತುಂಗ ಭೂಪತಿ (ಕೊಂಗು) ಯು ಮೇಲೆ ತಿಳಿಸಿದ ಶ್ರೀರಂಗನಾಥ ಸ್ವಾಮಿಯ ಪುನಃ ಪ್ರತಿಷ್ಠಾಪನಾ ಕಾರ್ಯಕ್ಕೆ ಕಾರಕನಾಗಿ, ಆ ದೇವನಿಗೆ ಅನೇಕ ದಾನ ದತ್ತಿಗಳನ್ನು ನೀಡಿದನಂತೆ.

ವೀರ ಕಂಪಣರಾಯನ ಮತ್ತೊಬ್ಬ ಸಹಾಯಕನಾದ ಗೋಪನ್ನ ಮಂತ್ರಿ ಎನ್ನುವಾತನು ಶ್ರೀವೈಷ್ಣವ ಮತಾವಲಂಬಿ.

ಸಾಳುವ ಮಂಗಭೂಪತಿಯ ಪರಾಕ್ರಮಕ್ಕೆ ಮೆಚ್ಚಿದ ವೀರ ಕಂಪಣ

ರಾಯನು ನಾರಾಯಣ ವನವೆಂದು ಹೆಸರುವಾಸಿಯಾದ ಚಂದ್ರಗಿರಿ ರಾಜ್ಯವನ್ನು ಆವನಿಗೆ ನೀಡಿದನು. ಕಾಲಕ್ರಮೇಣ ಈತನು ಚಂದ್ರಗಿರಿ ದುರ್ಗವನ್ನು ಆಕ್ರಮಿಸಿ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಸ್ವತಂತ್ರನಾದನು. ಈ ಚಂದ್ರಗಿರಿಯಲ್ಲಿ ಇರುವ ಪ್ರಭುಗಳ ಮನೆದೇವರು ತಿರುಪತಿ ಶ್ರೀನಿವಾಸನೇನೆ !

ಮಲ್ಲಿಕಾರ್ಜುನರಾಯನ ನಂತರ ಆತನ ಚಿಕ್ಕಪ್ಪನ ಮಗನಾದ ವಿರೂಪಾಕ್ಷನು ವಿಜಯನಗರ ಸಾಮ್ರಾಜ್ಯಾಧಿಪತಿಯಾದನೆಂದೂ, ಈತನು ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿದ ಮೊದಲ ವಿಜಯನಗರದ ಪ್ರಭುವೆಂದೂ ಹಿಂದೆ ಹೇಳಿದಂತೆ ನಡೆಯಿತು.

ಇವನನ್ನು ಕುರಿತು ಪ್ರಪನ್ನಾಮೃತ ಎನ್ನುವ ಶ್ರೀವೈಷ್ಣವ ಗ್ರಂಥವು ಕೆಲವು ಕಡೆ ವಿವರಗಳನ್ನು ನೀಡಿದೆ.

ಇವನ ಸಾಮಂತನಾದ ಸಾಳುವ ನರಸಿಂಹನು ಮಹಾ ಪರಾಕ್ರಮಶಾಲಿ. ಈತನೂ ಶ್ರೀವೈಷ್ಣವನೇನೆ ! ಈತನದ್ದು ವರಾಹಧ್ವಜ. ಮುಂದೆ ಈತನೇ ದೊರೆಯಾದನು. ಈತನಿಗೆ ತಿರುಪತಿ ವೇಂಕಟೇಶ್ವರ ಸ್ವಾಮಿ ಇಷ್ಟದೈವವಾಗಿದ್ದ. ಈತನು ಸಿಂಹಾಸನಾರೋಹಣ ಮಾಡಿದ್ದರಿಂದು ಶ್ರೀವೈಷ್ಣವತ್ವಕ್ಕೆ ನೂತನ ಸ್ಫೂರ್ತಿಯು ಲಭಿಸಿತು.

ಇಲ್ಲಿಂದಾಚೆಗೆ ವಿಜಯನಗರದ ಎಲ್ಲ ಪ್ರಭುಗಳೂ ತಿರುಪತಿಯು ಉತ್ತಮ ದಿವ್ಯದೇಶವಾಗಿ, ಭಕ್ತಿ ಕೇಂದ್ರವಾಗಿ, ಪ್ರಧಾನ ಶ್ರೀವೈಷ್ಣವ ಕ್ಷೇತ್ರವಾಗಿ ಬದಲಾಯಿತು.

'ತಿರುಪತಿ' ಎನ್ನುವ ಪದವು ಈ ಕಾಲದಿಂದಾಚೆಗೆ ಎಷ್ಟು ಪ್ರಖ್ಯಾತ ವಾಯಿತೆಂದರೆ ಎಲ್ಲ (108) ದಿವ್ಯದೇಶಗಳನ್ನೂ 'ತಿರುಪತಿ' ಕ್ಷೇತ್ರಗಳೆಂದು ವ್ಯವಹರಿಸುವ ರೂಢಿ ಪ್ರಾರಂಭವಾಯಿತು. ಆ ರೀತಿಯ ಪಾವಿತ್ರ್ಯತೆಯನ್ನು ಈ ಪದವು ಪಡೆಯಿತು.

ಇಲ್ಲಿಂದ ಮುಂದೆ ಎಲ್ಲ ವಿಜಯನಗರದ ಪ್ರಭುಗಳೂ ಶ್ರೀವೈಷ್ಣವ ಮತಾವ ಲಂಬಿಗಳಾಗಿ, ಶ್ರೀವೈಷ್ಣವಾಚಾರ ನಿರತರಾಗಿ ಪ್ರಸಿದ್ಧಿ ಹೊಂದಿದರು. ಶ್ರೀವೈಷ್ಣವ ದೇವಾಲಯಗಳಿಗೆ ವಿಶೇಷವಾಗಿ ದಾನ ಧರ್ಮಗಳನ್ನು ಮಾಡಿ, ದತ್ತಿಗಳನ್ನು ನೀಡಿ ಉದ್ಧರಿಸಿದರು ಈ ಪ್ರಭುಗಳ ಕಾಲದಲ್ಲಿಯೇ ಕೆಲವು ಶ್ರೀವೈಷ್ಣವಾ ಚಾರ್ಯ ಸ್ವಾಮಿಗಳ, ಸ್ವಯಮಾಚಾರ್ಯ ಸ್ವಾಮಿಗಳಿಗೆ ವಿಶೇಷ ಗೌರವಾದರ

ಗಳನ್ನು ತೋರಬೇಕೆಂದು ಕಟ್ಟಳೆ ಮಾಡಿ, ಶ್ರೀ ರಾಮಾನುಜ ಮತಾವಲಂಬಿ ಗಳಾದ ಸರ್ವ ವರ್ಣೀಯ ಪ್ರಜೆಗಳು—ಆ ಸಂಪ್ರದಾಯಗಳನ್ನು ನಿಯಮವಾಗಿ, ಸಕ್ರಮವಾಗಿ ಅನುಸರಿಸುತ್ತಿರುವರೋ ಇಲ್ಲವೋ ಎನ್ನುವುದನ್ನು ಪರ್ಯಾವೇಕ್ಷಿಸಿ, ಅಗತ್ಯಬಿದ್ದಲ್ಲಿ ತಪ್ಪಿತಸ್ಥರನ್ನು ಶಿಕ್ಷಿಸುವ ಅಧಿಕಾರ ನಿಯಮಗಳನ್ನೂ ಕೂಡ ರೂಪಿಸಿದ್ದರು. ಅಂತಹ ಅಧಿಕಾರವನ್ನು ಅಧಿಕಾರಿಗಳಿಗೆ ನೀಡಲಾಗಿತ್ತು. ಇದರ ಆಧಾರದ ಮೇಲೆ ಶ್ರೀವೈಷ್ಣವ ಧರ್ಮವು ವಿಜಯನಗರ ಪ್ರಭುಗಳನ್ನು ಎಷ್ಟೊಂದು ಪ್ರಭಾವಗೊಳಿಸಿತ್ತು ಎಂಬುದನ್ನು ಹೇಳಬೇಕಾದ ಅಗತ್ಯವೇ ಇಲ್ಲ.

ಈ ಸಮಯದಲ್ಲಿ ಕರ್ನಾಟಕ, ಆಂಧ್ರಪ್ರದೇಶಗಳಲ್ಲಿ ಶ್ರೀವೈಷ್ಣವ ಮತವು ರಾಜಪೋಷಣೆ ಇದ್ದುದರಿಂದ ಬಹಳವಾಗಿ ವ್ಯಾಪಿಸಿತು. ಅಂತೆಯೇ ಶ್ರೀವೈಷ್ಣವ ಸಂಸ್ಕೃತಿಯು ಭದ್ರ ಬುನಾದಿಯ ಮೇಲೆ ನಿಂತಿತು. ಈ ಪ್ರದೇಶಗಳಲ್ಲಿ ಶ್ರೀವೈಷ್ಣವ ಧರ್ಮದ ಪ್ರಚಾರಕ್ಕೆ ವಿವಿಧ ಮಠಗಳು ಶ್ರಮಿಸಲು ಸಹಕಾರಿ ಯಾಯಿತು.

ವಿಜಯನಗರದ ರಾಜರುಗಳಲ್ಲಿ ತುಳು ವಂಶದ ಶ್ರೀ ಕೃಷ್ಣದೇವರಾಯ (1509-1529) ನು ಭಾರತ ದೇಶಕ್ಕೆ ಖ್ಯಾತಿ ಪಡೆದವನಾದನು. ಈತನ ಕಾಲವು ಶ್ರೀವೈಷ್ಣವ ಸಾಹಿತ್ಯಕ್ಕೇ ಸ್ವರ್ಣಯುಗವಾಯಿತು. ಇಂತಹ ವೈಷ್ಣ ವಾಭಿಮಾನ, ಅಭಿನೇವಶವನ್ನು ಹೊಂದಿರುವ ಪ್ರಭುವು ವಿಜಯನಗರದ ಇತಿಹಾಸದಲ್ಲಿ ಮತ್ತೊಬ್ಬನಿಲ್ಲ.

ಕಳಿಂಗದ ಜೈತ್ರಯಾತ್ರೆಯ ಸಂದರ್ಭದಲ್ಲಿ ಶ್ರೀ ಕಾಕುಳಮ್, ಸಿಂಹಾ ಚಲದ ಮೇಲೆ ಹಾಯ್ದು ಕಟಕವನ್ನು ಸೇರಿದ ಈತನು ಅಲ್ಲಿ ತನ್ನ ಅಪ್ರತಿಹತ ಪ್ರತಾಪವನ್ನು ತೋರಿಸಿದ ಮಹಾವೀರನಿವನು.

ದಂಡಯಾತ್ರೆ ಕೈಗೊಳ್ಳಬೇಕಾದ ಸಮಯದಲ್ಲಿ ದಾರಿಯುದ್ದಕ್ಕೂ ಇರುವ ಎಲ್ಲ ಶ್ರೀವೈಷ್ಣವ ಕ್ಷೇತ್ರಗಳನ್ನೂ ದರ್ಶಿಸಿ, ವಿಶೇಷ ದಾನಗಳನ್ನು ಸಮರ್ಪಿಸಿ ದನು. ಸಿಂಹಳದ ದಂಡೆಯಾತ್ರೆಯ ಸಮಯದಲ್ಲಿ ತಮಿಳುನಾಡಿನಲ್ಲಿನ ದಿವ್ಯದೇಶ ಗಳೆಲ್ಲದಕ್ಕೂ ಭೇಟಿ ನೀಡಿ, ಅನೇಕ ದಾನ ಧರ್ಮಗಳನ್ನು ಮಾಡಿದನು. ಎಲ್ಲ ದಂಡಯಾತ್ರೆಗಳಲ್ಲಿಯೂ ಈತನು ತುರುಷ್ಕರ ಮದವನ್ನು ಅಡಗಿಸಿ, ದುಷ್ಟರನ್ನು ಸಂಹರಿಸಲು ಅವತಾರ ಮಾಡಿರುವ ಶ್ರೀಕೃಷ್ಣನೆಂದೇ ಪ್ರಶಂಸಿಸಲ್ಪಟ್ಟನು.

ಕೃಷ್ಣದೇವರಾಯನು ಪ್ರಸಿದ್ಧ ದೇವಾಲಯ ನಿರ್ಮಾಪಕನೂ ಹೌದು.

ವಿಜಯ ವಿಠಲ ಸ್ವಾಮಿ, ಕೃಷ್ಣ ಸ್ವಾಮಿ ದೇವಾಲಯಗಳ ನಿರ್ಮಾಣವನ್ನು ಪ್ರಾರಂಭಿಸಿದನು. ಪ್ರಿಯ ರಾಣಿಯರ ಪ್ರೀತ್ಯರ್ಥವಾಗಿ ಈತನು ಕಟ್ಟಿಸಿದ ದೊಡ್ಡ ದೊಡ್ಡ ದೇವಾಲಯಗಳೂ, ಮಂದಿರಗಳೂ ಈತನ ವಾಸ್ತುಶಿಲ್ಪ ಪ್ರೀತಿಗೆ ಸಾಕ್ಷಿಯಾಗಿವೆ. ತಿರುಮಲಾಂಬೆ, ಮಂಗಳಾಂಬೆ ಎನ್ನುವ ತನ್ನ ಹೆಣ್ಣು ಮಕ್ಕಳ ಪ್ರೀತ್ಯರ್ಥವಾಗಿ ದೇವಾಲಯ ನಿಬಿಡವಾದ ಪ್ರತ್ಯೇಕ ನಗರವನ್ನೇ ನಿರ್ಮಿಸಿದ. ಶ್ರೀವೈಷ್ಣವ ದೇವಾಲಯಗಳನ್ನೇ ಅಲ್ಲದೆ ಶೈವ, ಜೈನ ದೇವಾಲಯ ಗಳನ್ನೂ ನಿರ್ಮಿಸಿದನು.

ಇವನು ದಂಡಯಾತ್ರೆಯ ಸಮಯದಲ್ಲಿ ಗೆದ್ದ ರಾಜ್ಯಗಳಲ್ಲಿನ ವಿದ್ವಾಂಸ ರನ್ನು ತನ್ನ ರಾಜಧಾನಿಗೆ ಕರೆಯಿಸುತ್ತಿದ್ದನು. ಹೀಗೆ ಕರೆಯಿಸಿಕೊಂಡವರಲ್ಲಿ ಕೊಂಡವೀಟು ರಾಜ್ಯದ ರಾಜಗುರುಗಳಾದ ಕಸ್ತೂರಿ ವಂಶೀಯ ಶಠಗೋಪಾಲಾ ಚಾರ್ಯರೂ ಒಬ್ಬರು. ಇವರ 'ಪದ್ಮಾವತೀ ಪರಿಣಯ' ತುಂಬಾ ಪ್ರಖ್ಯಾತ ವಾದ ಸಂಸ್ಕೃತ ಕಾವ್ಯವಾಗಿದೆ. 'ಶ್ರೀವೈಷ್ಣವ ಸಿದ್ಧಾಂತ ದೀಪಿಕಾ' ಎನ್ನುವ ಶ್ರೀವೈಷ್ಣವತತ್ವ ಬಗ್ಗೆಯೂ ಸಂಸ್ಕೃತದಲ್ಲಿ ಕೃತಿ ರಚನೆ ಮಾಡಿದ್ದಾರೆ. ಅಷ್ಟದಿಗ್ಗಜ ಗಳೊಂದಿಗೆ ಅನೇಕ ಕವಿವರೇಣ್ಯರು ಈತನ ಆಸ್ಥಾನದಲ್ಲಿದ್ದುದಕ್ಕೆ, 'ಭುವನ ವಿಜಯ'ವೇ ಉದಾಹರಣೆಯಾಗಿದೆ. ಈ ಕಾರಣದಿಂದಲೇ ಈತನನ್ನು 'ಆಂಧ್ರ ಭೋಜ'ನೆಂದೂ ಕರೆಯಲಾಗುತ್ತಿತ್ತು.

ವಿಜಯನಗರದ ಪ್ರಭುಗಳಿಗೆ ತಿರುಮಲ-ತಿರುಪತಿಯ ಶ್ರೀ ವೇಂಕಟೇಶ್ವರ ಸ್ವಾಮಿ ಹಾಗೂ ಶ್ರೀರಂಗದ ರಂಗನಾಥ ಸ್ವಾಮಿಯು ಅಭಿಮಾನ ದೇವರುಗಳಾ ಗಿದ್ದರು. ಇವೆರಡೂ ಶ್ರೀವೈಷ್ಣವ ಕೇಂದ್ರಗಳಾಗಿದ್ದುದರಿಂದಲೂ, ಶ್ರೀರಾಮಾನುಜ ಸಂಪ್ರದಾಯ ಶ್ರೀವೈಷ್ಣವಾಚಾರ್ಯರುಗಳಿಂದ ಶ್ರೀವೈಷ್ಣವ ದೀಕ್ಷೆಯನ್ನು ಪಡೆದಿದ್ದುದರಿಂದಲೂ ಈ ಪ್ರಭುಗಳು ರಾಮಾನುಜೀಯ ಶ್ರೀವೈಷ್ಣವತತ್ವವನ್ನೇ ಆಶ್ರಯಿಸಿ, ಅನುಸರಿಸುತ್ತಿದ್ದರು. ಶ್ರೀಕೃಷ್ಣದೇವರಾಯನ 'ಆಮುಕ್ತಮಾಲ್ಯದ' ಈ ವಿಷಯಕ್ಕೆ ಪ್ರತ್ಯಕ್ಷ ನಿದರ್ಶನವಾಗಿದೆ. ಶ್ರೀವೈಷ್ಣವತತ್ವದ ಮೂಲಪುರುಷರಲ್ಲಿ ಒಬ್ಬರಾದ ವಿಷ್ಣುಚಿತ್ತರ ಚರಿತ್ರೆ, ಶ್ರೀಸಂಪ್ರದಾಯಕ್ಕೆ ಸೇರಿದ ಶ್ರೀವೈಷ್ಣವ ರೆಲ್ಲರೂ ಪೂಜಿಸುವ ಆಂಡಾಳ್ ಚರಿತ್ರೆ, ಶ್ರೀ ರಾಮಾನುಜರ ಪರೋಕ್ಷ ಗುರು ಗಳಾದ ಶ್ರೀ ಯಾಮುನರ ಚರಿತ್ರೆ-ಇವೆಲ್ಲವುಗಳಿಂದ ಕೂಡಿದ ವರ್ಣನೆಗಳು 'ಆಮುಕ್ತ ಮಾಲ್ಯ'ದಲ್ಲಿರುವುದರಿಂದ, ಈ ಕೃತಿಯು ತೆಲುಗುವಿನಲ್ಲಿ ಇದ್ದರೂ

ಎಲ್ಲ ಶ್ರೀವೈಷ್ಣವರಿಗೂ ಶಿರೋಧಾರ್ಯವಾದುದು. ಅದರಲ್ಲಿ ಕೃಷ್ಣದೇವರಾಯನು ನೀಡಿರುವ ವರ್ಣನೆಗಳು, ವಿವರಗಳು ಅಂದಿನ ಸಾಮ್ರಾಜ್ಯದಲ್ಲಿನ ಶ್ರೀವೈಷ್ಣವಾಚಾರಗಳು ವಿಜಯನಗರ ಪ್ರಭುಗಳನ್ನು ಎಷ್ಟೊಂದು ಪ್ರಭಾವಗೊಳಿಸಿದುವೋ ಎನ್ನುವುದಕ್ಕೆ ಸಾಕ್ಷಿಯಾಗಿದೆ.

ಈತನ ಮರಣಾನಂತರ ಪಟ್ಟಕ್ಕೆ ಬಂದ ಈತನ ತಮ್ಮನಾದ ಅಚ್ಯುತರಾಯನು (1529–1542) ವಿಶೇಷ ವೈಷ್ಣವ ಪ್ರೀತಿಯನ್ನು ಹೊಂದಿದ್ದವನು. ತನ್ನ ಸಾಮ್ರಾಜ್ಯದಲ್ಲಿನ ಎಲ್ಲ ಪುಣ್ಯಕ್ಷೇತ್ರಗಳನ್ನೂ ದರ್ಶಿಸಿ, ಅವುಗಳಿಗೆ ದಾನಗಳನ್ನು ನೀಡಿದನು. ತಿರುಪತಿ, ಶ್ರೀರಂಗಗಳನ್ನು ಅನೇಕ ಸಲ ದರ್ಶಿಸಿದ್ದನು. ಈತನು ವಿಜಯನಗರದಲ್ಲಿನ ಪ್ರಸಿದ್ಧ ಅಚ್ಯುತ ದೇವಾಲಯವನ್ನು ಪ್ರಾರಂಭಿಸಿದನು.

ಈತನ ನಂತರ ಸದಾಶಿವರಾಯ (1543–1571)ನು ಸಿಂಹಾಸನವನ್ನು ಏರಿದರೂ, ಅಳಿಯ ರಾಮರಾಯನು ನಿಜವಾದ ಚಕ್ರವರ್ತಿಯಾಗಿದ್ದನು. ಈ ಕಾಲದಲ್ಲಿ ನಿರ್ವಹಿಸಿದ ದಂಡಯಾತ್ರೆಗಳಲ್ಲಿ ಪ್ರಧಾನವಾಗಿ ಭಾಗವಹಿಸಿದ್ದ ತಿಮ್ಮರಾಜು, ವಿಠಲರಾಜು ಎಂಬ ದಂಡನಾಯಕರು ಶ್ರೀರಂಗದಲ್ಲಿನ ಶ್ರೀರಂಗನಾಥನಿಗೆ ದ್ರೋಹವೆಸಗಿದ ಶತ್ರುವರ್ಗದವರನ್ನು ಬೇಟೆಯಾಡಿ, ಸ್ವಾಮಿಗೆ ಸೇರಿದ ದ್ರವ್ಯಸಂಪತ್ತನ್ನು ಅಪಹರಣಕಾರರಿಂದ ಮತ್ತೆ ದೇವಾಲಯಕ್ಕೆ ಸೇರಿಸಿದ ವಿಷ್ಣುಭಕ್ತರಿವರು.

ಕೃಷ್ಣದೇವರಾಯನ ಕಾಲದಲ್ಲಿ ಆತನ ಆಸ್ಥಾನಕ್ಕೆ ಬಂದು ಗೌರವ ಸ್ವೀಕರಿಸಿದ ಕಸ್ತೂರಿ ಶಠಗೋಪಾಲಾಚಾರ್ಯರ ತಮ್ಮಂದಿರಾದ ಕಸ್ತೂರಿ ದೊಡ್ಡ ರಂಗಾಚಾರ್ಯರು ಆಶುಕವಿಗಳಾಗಿದ್ದು, ಶ್ರೀವೈಷ್ಣವ ಸಿದ್ಧಾಂತದ ಬಗ್ಗೆ ಸೊಗಸಾದ ಆಶುಕವಿತೆಗಳನ್ನು ಸಂಸ್ಕೃತದಲ್ಲಿ ರಚಿಸುತ್ತಿದ್ದರಂತೆ. ಕೃಷ್ಣದೇವರಾಯನ ಸಮಕಾಲೀನರಾದ ಪುರಂದರದಾಸರು ಹಾಗೂ ಕನಕದಾಸರು ಇವರ ಕಾವ್ಯ ವೈಭವಕ್ಕೆ ಸಮ್ಮೋಹಗೊಂಡಿದ್ದರಂತೆ. ಹೀಗಾಗಿ ಪುರಂದರದಾಸರು ತಮ್ಮ ಹಾಡುಗಳಲ್ಲಿ 'ಕಾವೇರಿ ರಂಗ', 'ಕಸ್ತೂರಿ ರಂಗ' ಎಂಬ ಪ್ರಯೋಗಗಳನ್ನು ಶ್ರೀರಂಗಪಟ್ಟಣದ ರಂಗನಾಥ ಹಾಗೂ ಶ್ರೀರಂಗದ ರಂಗನಾಥಸ್ವಾಮಿಗೆ ಅನ್ವಯಿಸಿ ಹೇಳಿದ್ದರೂ, ಈ ಆಶುಕವಿ ಕಸ್ತೂರಿ ರಂಗಾಚಾರ್ಯರಿಗೇ ಹೇಳಿದ್ದೆಂದು ಒಂದು ಪರಂಪರೆಯ ಹೇಳಿಕೆ. ಆದರೂ ಈ ರಂಗಾಚಾರ್ಯರ ಯಾವುದೇ ಕೃತಿ

ಉಳಿದಿಲ್ಲದಿರುವುದು, ಇದುವರೆವಿಗೆ ದೊರೆಯದೆ ಇರುವುದು ದುರದೃಷ್ಟ.

ಇಂತಹ ಕೃಷ್ಣದೇವರಾಯನ ಅಳಿಯನಾದ ರಾಮರಾಯನು ತನ್ನ ಮಾವನಂತೆ ಉತ್ಕಟ ಶ್ರೀವೈಷ್ಣವ ಪಂಥದ ಬೆಂಬಲಿಗನಾಗಿದ್ದನು. ಶ್ರೀವೈಷ್ಣವ ಪ್ರಸಾರಕ್ಕೆ ಇವನು ಹೃತ್ಪೂರ್ವಕವಾಗಿ ಶ್ರಮಿಸಿದ್ದನು. ಕೃಷ್ಣದೇವರಾಯ, ಅಚ್ಯುತರಾಯ ಹಾಗೂ ಸದಾಶಿವರಾಯನು ಅಪ್ಪಟ ಶ್ರೀವೈಷ್ಣವರಾಗಿದ್ದಂತೆ, ಅವರ ರಾಜ ಪ್ರತಿನಿಧಿಯಾದ ರಾಮರಾಯನಿಗೆ ಶ್ರೀವೈಷ್ಣವ ಮತದ ಪ್ರಸಾರಣ ಕಾರ್ಯವು ಸುಗಮವಾಗಿ ಸಾಗುತ್ತಿದ್ದಿತು.

ಸದಾಶಿವರಾಯನು ತಿರುಮಲಯ್ಯಗಾರು ಎಂಬ ಶ್ರೀವೈಷ್ಣವ ವಿದ್ವಾಂಸನ ಮಗನಾದ ತಿರುವೇಂಗಡನಾಥಯ್ಯನಿಗೆ ಓಂಗೋಲು ತಾಲ್ಲೂಕಿನ ಎರಡು ಹಳ್ಳಿಗಳನ್ನು ಕ್ರಿ.ಶ. 1545ರಲ್ಲಿ ಉಂಬಳಿಯಾಗಿ ನೀಡಿದ್ದನು. ಈ ತಿರುಮಲಯ್ಯನು ವಡಗಲೆ, ತೆಂಗಲೆ ಎನ್ನುವ ಎರಡೂ ಪಂಥಗಳ ಸ್ಥಾಪಕನೆಂದು ಹೇಳಲಾಗುತ್ತದೆ. ಈತನ ಮಗನಾದ ತಿರುವೇಂಗಡನಾಥಯ್ಯನೂ ಕೂಡ ಪ್ರಸಿದ್ಧ ಶ್ರೀವೈಷ್ಣವ ಧರ್ಮಾಚಾರ್ಯನಾಗಿದ್ದಿರಬೇಕು.

ತಾಳ್ಳಪಾಕಂ ವಂಶದ ಶ್ರೀವೈಷ್ಣವ ಕುಟುಂಬದ ಹಲವರು ವಿಖ್ಯಾತ ಸಂಗೀತಗಾರರಾಗಿದ್ದರು. ಇವರು ಶ್ರೀ ವೇಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ ನಿಯುಕ್ತರಾದಂತೆ ತೋರುತ್ತದೆ. ಈ ವಂಶದ ಅಣ್ಣಮಾಚಾರ್ಯ ಹಾಗೂ ತಿರುಮಲಾಚಾರ್ಯ ಎನ್ನುವ ವಾಗ್ಗೇಯಕಾರರ ಹಲವಾರು ಕೀರ್ತನೆಗಳು ತಾಮ್ರಫಲಕಗಳಲ್ಲಿ ಬರೆಯಿಸಿದ್ದು, ಇತ್ತೀಚೆಗೆ ಬೆಳಕಿಗೆ ಬಂದಿವೆ. ಈ ಕೀರ್ತನೆಗಳನ್ನು ಈಗ ತಿ. ತಿ. ದೇವಾಲಯದವರು ಜನಪ್ರಿಯಗೊಳಿಸುತ್ತಿದ್ದಾರೆ.

ಸದಾಶಿವರಾಯನ ಕಾಲದವರಾದ ಇವರಿಬ್ಬರಲ್ಲಿ ಅಣ್ಣಮಾಚಾರ್ಯರಿಗೆ ಸದಾಶಿವನು ಉಂಬಳಿ ನೀಡಿದ್ದನು. ಇದೇ ವಂಶಕ್ಕೆ ಸೇರಿದ ತಾಳ್ಳಪಾಕಂ ತಿರುವೇಂಗಡನಾಥನು 'ಪರಮಯೋಗಿ ವಿಲಾಸಮು' ಎಂಬ ಗ್ರಂಥವನ್ನು ರಚಿಸಿ, ಶ್ರೀವೈಷ್ಣವ ತತ್ತ್ವಗಳನ್ನು ಅದರಲ್ಲಿ ಅಳವಡಿಸಿರುವನು. ಇವನೂ ಹಿಂದೆ ತಿಳಿಸಿದ ಇದೇ ಹೆಸರಿನವನು ಒಂದೇ ಆಗಿರಬೇಕೆಂದು ಊಹೆ. ಸದಾಶಿವರಾಯನು ಇವನಿಗೆ ಕ್ರಿ.ಶ. 1546–47ರಲ್ಲಿ ಒಂದು ಗ್ರಾಮವನ್ನು ದಾನ ಮಾಡಿದ್ದನು.

ಸದಾಶಿವನು ತನ್ನ ರಾಜ್ಯಭಾರಾವಧಿಯಲ್ಲಿ ಶ್ರೀವೈಷ್ಣವ ಮತ ಪ್ರವರ್ತಕರಾದ ಶ್ರೀ ರಾಮಾನುಜಾಚಾರ್ಯರ ಮೇಲೆ ಅಪಾರ ಭಕ್ತಿ, ಗೌರವಗಳು

ಇರುವುದನ್ನು ತನ್ನ ದಾನ ಶಾಸನಗಳಿಂದ ವ್ಯಕ್ತಪಡಿಸಿದ್ದಾನೆ.

ಶ್ರೀಪೆರುಂಬುದೂರಿನಲ್ಲಿ ಆಚಾರ್ಯರು ಆರಾಧನೆ ಮಾಡಿದ ಆದಿಕೇಶವ ಪೆರುಮಾಳ್ ಗುಡಿಗೂ, ದಿನನಿತ್ಯದ ಸೇವೆಯ ವೆಚ್ಚಕ್ಕೆಂದು ರಾಮಾನುಜರ ಗುಡಿಗೂ ಚಿನ್ನನಾಯಕನೆಂಬುವನು ಅನೇಕ ಹಳ್ಳಿಗಳನ್ನು ದತ್ತಿ ನೀಡಿದ್ದನೆಂದು ಶಾಸನದ ಉಲ್ಲೇಖವಿದೆ. ಇದೇ ತರಹದ ಮತ್ತೊಂದು ಶಾಸನವು ಅಲ್ಲಿನ ಮಹಾಮಂಡಲೇಶ್ವರನು ಆ ಗುಡಿಯ ಜೀರ್ಣೋದ್ಧಾರ ಮಾಡಿದನೆಂದು ತಿಳಿಸುತ್ತದೆ.

ಕ್ರಿ.ಶ. 1549–50ರಲ್ಲಿ ಇದೇ ಸದಾಶಿವರಾಯನು ಅನಂತರಾಯ ಎಂಬಾತನ ಪುತ್ರನಾದ ಆಚಾರಯ್ಯ ಎಂಬ ಮತ್ತೊಬ್ಬ ಶ್ರೀವೈಷ್ಣವ ವಿದ್ವಾಂಸ ನನ್ನು ಗೌರವಿಸಿದ್ದನು. ಅನಂತರಾಯನು ನ್ಯಾಯಸಂಧನೂ, ಪ್ರತಿಭಾನ್ವಿತನೂ ಆಗಿದ್ದನೆಂದು ತಿಳಿಸಲಾಗುತ್ತದೆ. ಈತನ ಮಗನಾದ ಆಚಾರಯ್ಯನು ಪ್ರಸಿದ್ಧ ಬ್ರಹ್ಮವಾದಿಯಾಗಿದ್ದುದೇ ಅಲ್ಲದೆ ಶ್ರೀಭಾಷ್ಯದ ಬಗ್ಗೆ ವ್ಯಾಖ್ಯಾನವನ್ನು ನೀಡು ತ್ತಿದ್ದನೆಂದು ನೆಲ್ಲೂರಿನ ಒಂದು ಶಾಸನ ತಿಳಿಸುತ್ತದೆ. ಇದೇ ರೀತಿಯಲ್ಲಿ ಶ್ರೀಭಾಷ್ಯದ ಬಗ್ಗೆ ಪ್ರವಚನಗಳನ್ನು ಮಾಡಿ, ಶ್ರೀವೈಷ್ಣವ ಸಿದ್ಧಾಂತಗಳನ್ನು ಪ್ರಸಾರ ಮಾಡುತ್ತಿದ್ದ ಕಸ್ತೂರಿ ರಾಘವಾಚಾರ್ಯ ಎನ್ನುವವರನ್ನು ಈ ರಾಯನು ಗೌರವಿಸಿದ್ದನು. ಹೀಗೆ ಸದಾಶಿವನು ಸದಾ ಪಂಡಿತ, ವಿದ್ವಾಂಸರ ಗೋಷ್ಠಿಯಿಂದ ಸುತ್ತುವರಿಯಲ್ಪಟ್ಟಿರುತ್ತಿದ್ದನೆಂದು ಶಾಸನವೊಂದರಲ್ಲಿ ತಿಳಿಸ ಲಾಗಿದೆ.

ರಾಮರಾಯನು ಶ್ರೀ ಕೃಷ್ಣದೇವರಾಯನ ಗುರುವಾದ ಗೋವಿಂದದೇಶಿಕ ನೆಂಬಾತನನ್ನು ಮಠವೊಂದರ ಆಧಿಪತ್ಯದಿಂದ ಪದಚ್ಯುತಗೊಳಿಸಿ, ಆ ಸ್ಥಾನದಲ್ಲಿ ಪ್ರಸಿದ್ಧ ಶ್ರೀವೈಷ್ಣವ ಯತಿಯಾದ ತಾತಾಚಾರ್ಯನನ್ನು ನಿಯಮಿಸಿದನೆಂದು 'ಮಹಿಶೂರ ನರಪತಿ ವಿಜಯ' ಎಂಬ ಗ್ರಂಥವು ತಿಳಿಸುತ್ತದೆ.

'ಪ್ರಪನ್ನಾಮೃತ'ವು ಈ ತಾತಾಚಾರ್ಯನ ಬಗ್ಗೆ ಸಾಕಷ್ಟು ದೀರ್ಘವಾದ ವಿವರಣೆ ನೀಡಿದೆ. ಚಿದಂಬರದಲ್ಲಿನ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಶತಮಾನಗಳ ಹಿಂದೆಯೇ ದೈವಾರಾಧನೆ ನಿಂತುಹೋಗಿತ್ತಂತೆ. ಆದುದರಿಂದ ಅಲ್ಲಿನ ಪೂಜಾದಿಗಳನ್ನು ಮತ್ತೆ ಪ್ರಾರಂಭಿಸಿ, ಆ ದೇವಾಲಯದ ಪುನರುಜ್ಜೀವನ ಗೊಳಿಸಲು ತಾತಾಚಾರ್ಯನು ತನ್ನ ಶಿಷ್ಯನಾದ ದೊಡ್ಡಯ್ಯಾಚಾರ್ಯನಿಗೆ

ರಾಮರಾಯನ ಮುಖಾಂತರ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟನೆಂದು 'ಪ್ರಪನ್ನಾಮೃತ'ವು ತಿಳಿಸುತ್ತದೆ.

ಇದೇ ತಾತಾಚಾರ್ಯನು ಕೆಲವು ಕಾಲ ಚಂದ್ರಗಿರಿಯಲ್ಲಿ ರಾಮರಾಯ ನೊಡನೆ ನೆಲೆಸಿದ್ದನೆಂದು ಕಾಣುತ್ತದೆ. ತಾತಾಚಾರ್ಯನು ಅಪ್ಪಯ್ಯ ದೀಕ್ಷಿತನ 'ಅದ್ವೈತ ಸಿದ್ಧಿ' ಎನ್ನುವ ಕೃತಿಯನ್ನು ಖಂಡಿಸಿ, 'ಪಂಚಮತ ಭಂಜನ' ಎನ್ನುವ ಪ್ರಖ್ಯಾತ ಗ್ರಂಥವನ್ನು ರಚಿಸಿರುವನು.

ತಾತಾಚಾರ್ಯನ ಮಗನಾದ ಶ್ರೀನಿವಾಸಯ್ಯನು ತಂದೆಗಿಂತಲೂ ಹೆಚ್ಚಿನ ಖ್ಯಾತಿಗೆ ಬಂದವನು. ಈತನ ಮತ್ತೊಂದು ಹೆಸರು ಲಕ್ಷ್ಮೀಕುಮಾರ ತಾತಾಚಾರ್ಯ ಎಂದಾಗಿತ್ತು. ಈ ಶ್ರೀನಿವಾಸಯ್ಯನು ಸದಾಶಿವರಾಯನ ನಂತರದ ಅರವೀಡು ವಂಶದ ಒಂದನೇ ವೇಂಕಟನ ಗುರುವಾಗಿದ್ದನು. ಈ ವೇಂಕಟನ ಕಿರೀಟಧಾರಣೋತ್ಸವದಲ್ಲಿ ಇವನು ಪ್ರಥಮ ಪುರೋಹಿತನಾಗಿದ್ದನು. ಇಂತಹ ವ್ಯಕ್ತಿಯು ಪ್ರತ್ಯುತ್ಪನ್ನಮತಿಯೆಂದು ಹೆಸರುವಾಸಿಯಾಗಿದ್ದನು.

ಇದೇ ಕಾಲದಲ್ಲಿ ತಾತಾಚಾರ್ಯನೆಂಬ ಮತ್ತೊಬ್ಬ ಶ್ರೀವೈಷ್ಣವ ಯತಿಯೂ ಇದ್ದನು. ಈತನಿಗೆ ಆಳ್ವಾರ ತಿರುಮಲೆ ಪೆಂಗೊಂಡ ನರಸಿಂಹ ತಾತಾಚಾರ್ಯ ಎಂಬ ಇನ್ನೊಂದು ಹೆಸರೂ ಇದ್ದಿತು.

ಇದೇ ಹೆಸರಿನ ಮತ್ತೊಬ್ಬ ಯತಿಯೂ ಇದ್ದನು. ಶೋಲಿಂಘರದ (ಚೋಳಸಿಂಗಪುರದ) ದೊಡ್ಡಯಾಚಾರ್ಯ ಎಂಬುದು ಆತನ ಹೆಸರು. ಈ ಶ್ರೀವೈಷ್ಣವ ಯತಿಯೂ ಕೂಡ ಅಪ್ಪಯ್ಯ ದೀಕ್ಷಿತನ 'ಅದ್ವೈತ ಸಿದ್ಧಿ'ಯನ್ನು ಖಂಡಿಸಿ, 'ಚಂಡಮಾರುತವ್' ಎಂಬ ಗ್ರಂಥವನ್ನು ರಚಿಸಿದ್ದಾನೆ.

ಇದೇ ಕಾಲಕ್ಕೆ ಸೇರಿದ ಶ್ರೀರಂಗಾಚಾರ್ಯ ಎಂಬ ಶ್ರೀವೈಷ್ಣವ ಪಂಡಿತ ನನ್ನೂ ಕೂಡ ರಾಮರಾಯನು ಗೌರವಿಸಿದ್ದನು. ಈ ಪಂಡಿತನು ಕಸ್ತೂರಿ ವಂಶಕ್ಕೆ ಸೇರಿದವನೆಂದೂ, ಕಂಡಾಲ ವಂಶಕ್ಕೆ ಸೇರಿದವನೆಂದೂ ಹೇಳಲಾಗುತ್ತದೆ.

ಶ್ರೀಪೆರಂಬುದೂರು ಶ್ರೀರಾಮಾನುಜರ ಜನ್ಮಸ್ಥಳವಾಗಿದ್ದು, ಅಲ್ಲಿನ ಕೆಲವು ಶ್ರೀವೈಷ್ಣವ ಗೋಷ್ಠಿಗಳ ವ್ಯವಸ್ಥೆಯ ಬಗ್ಗೆ, ಸ್ಥಳೀಯ ಮಂಡಲೇಶ್ವರನಾದ ಕೊಂಡರಾಜನು ರಾಮರಾಯನಿಗೆ ವಿನಂತಿಯನ್ನು ಸಲ್ಲಿಸಿದ್ದನು. ಇದರನುಸಾರ ರಾಮರಾಯನು ಈ ಗೋಷ್ಠಿಗಳಿಗೆ 32 ಹಳ್ಳಿಗಳನ್ನು ಸದಾಶಿವನಿಂದ ಉಂಬಳಿ ಕೊಡಿಸಿದ್ದನು. ಇದೇ ಸಂದರ್ಭದಲ್ಲಿ ಶ್ರೀ ರಾಮಾನುಜರ ಒಂದು ಪ್ರತಿಮೆ

ಯನ್ನೂ ಪ್ರತಿಷ್ಠಾಪಿಸಲಾಯಿತು.

ಈ ಕಾಲದಲ್ಲಿ ಸಾಮ್ರಾಜ್ಯಾದ್ಯಂತ ಶ್ರೀವೈಷ್ಣವ ಮತ ಪ್ರಸಾರಕ್ಕಾಗಿ ಹಾಗೂ ಪ್ರಚಾರಕ್ಕಾಗಿ ಅನೇಕ ಶ್ರೀವೈಷ್ಣವ ಯತಿವರೇಣ್ಯರು ದುಡಿದರು. ಹಾಗೆ ಮಾಡುವಾಗ ಸಾಮ್ರಾಜ್ಯದ ಮಂಡಲಾಧಿಪತಿಗಳಲ್ಲಿ ತೀವ್ರಾಸಕ್ತಿಯನ್ನು ಮೂಡಿಸಿದರು. ಈ ಅಸಕ್ತಿ, ಶ್ರದ್ಧೆಗಳು ರಾಮರಾಯನ ಮರಣಾನಂತರದಲ್ಲೂ ಕೂಡ, ಸುಮಾರು ಐವತ್ತು, ಅರವತ್ತು ವರ್ಷಗಳವರೆಗೆ ದಕ್ಷಿಣ ಭಾರತದ್ಯಂತ ಪ್ರಾಬಲ್ಯತೆಯನ್ನು ಪಡೆದಿರಲು ಸಹಾಯಕವಾಯಿತು.

ಅಳಿಯ ರಾಮರಾಯನ ಮರಣಾನಂತರ ಅವನ ತಮ್ಮಂದಿರಿಂದ ಸ್ಥಾಪಿತವಾದ ಆರವೀಡು ವಂಶ (1570–1759)ದ ಪ್ರಭುಗಳೂ ಕೂಡ ಶ್ರೀವೈಷ್ಣವ ಮತವನ್ನು ಪೋಷಿಸಿಕೊಂಡೇ ಬಂದರು. ರಾಮರಾಯನ ತಮ್ಮಂದಿರಾದ ತಿರುಮಲರಾಯ, ಶ್ರೀರಂಗರಾಯರವರುಗಳು ತಮ್ಮ ಪೂರ್ವೀಕರಂತೆ ಶ್ರೀವೈಷ್ಣವತ್ವವನ್ನು ಪೋಷಿಸಿಕೊಂಡು ಬಂದರು.

ಸರ್ವಧರ್ಮ ಸಮನ್ವಯ ದೃಷ್ಟಿ ವಿಜಯನಗರ ಪ್ರಭುಗಳೆಲ್ಲರ ಸಾರ್ವತ್ರಿಕ ದೃಷ್ಟಿಯಾಗಿತ್ತು. ಇದು ಇವರುಗಳು ಶ್ರೀ ರಾಮಾನುಜ ಸಿದ್ಧಾಂತವನ್ನು ಅನುಸರಿಸುತ್ತಿದ್ದುದರ ಪ್ರಭಾವ. ಆ ರಾಜರಲ್ಲಿ ಸಹನೆ, ಕ್ಷಮತೆ, ಎಲ್ಲ ಧರ್ಮಗಳನ್ನೂ ಸಮಾನ ರೀತಿಯಲ್ಲಿ ಕಾಣುವುದು–ಇತ್ಯಾದಿ ಗುಣಗಳನ್ನು ಅವರು ಶ್ರೀವೈಷ್ಣವರಾದುದರಿಂದ ರೂಢಿಸಿಕೊಂಡರು. ಹೀಗಾಗಿ ಅವರು ಸರ್ವಜನಾದರಣೀಯರಾದರು. ತಮ್ಮ ರಾಜರ ಕರ್ತವ್ಯಗಳನ್ನು ಸೂಕ್ತ ರೀತಿಯಲ್ಲಿ ನೆರವೇರಿಸಲು ಸಹಾಯಕವಾಯಿತು.

ಈ ರಾಜರುಗಳು ಶ್ರೀವೈಷ್ಣವ ಸಂಪ್ರದಾಯವನ್ನೇ ಅಲ್ಲದೆ ಮಾಧ್ವ ಸಂಪ್ರದಾಯವನ್ನೂ ಪೋಷಿಸಿದರು. ಪುಷ್ಟಿ ವಂಶೀಯ ಪ್ರವರ್ತಕರಾದ ವಲ್ಲಭಾಚಾರ್ಯರು, ಮಾಧ್ವವೈಷ್ಣವ ಗುರುಗಳಾದ ವ್ಯಾಸತೀರ್ಥರು, ಶ್ರೀರಾಮಾನುಜ ಸಂಪ್ರದಾಯ ಗುರುಗಳಾದ ದೊಡ್ಡಯ್ಯಾಚಾರ್ಯರು, ತಾತಾಚಾರ್ಯರು, ರಂಗಾಚಾರ್ಯರು–ವಿಜಯನಗರದ ಪ್ರಭುಗಳ ಆದರವನ್ನು ಹೊಂದಿದರು.

ಹೀಗೆ ಪ್ರಭುಗಳೇ ಶ್ರೀವೈಷ್ಣವ ದೀಕ್ಷೆಯನ್ನು ಪಡೆದ ಮೇಲೆ, ಪ್ರಜೆಗಳೂ ಆ ಪಥದಲ್ಲಿ ಮುನ್ನಡೆದುದರಲ್ಲಿ ಆಶ್ಚರ್ಯವಿಲ್ಲ. ಅವರ ಆಡಳಿತ ವರ್ಗದವರೂ ಆ ಧರ್ಮದಲ್ಲಿ ಅಭಿಮಾನವಿರಿಸಿದ್ದವರು. ಇದಕ್ಕೆ ಉದಾಹರಣೆ ಎಂದರೆ ವಿಜಯ

ನಗರದ ಪತನದ ನಂತರ ಅದು ಮೊದಲಿನ ವೈಭವಕ್ಕೆ ಬರಲಾಗಲಿಲ್ಲ. ಕರ್ನಾಟಕ ದಲ್ಲಿ ಈ ರಾಜರ ಪ್ರತಿನಿಧಿಯಾಗಿ ಶ್ರೀರಂಗಪಟ್ಟಣದಲ್ಲಿ 'ಶ್ರೀರಂಗರಾಯ' ಎಂಬಾತನು ಇದ್ದನು. ಆಗ ರಾಜ ಒಡೆಯರು (ಕ್ರಿ.ಶ. 1578-1617) ಮೈಸೂರಿನ ರಾಜರಾಗಿದ್ದರು, ವಿಜಯನಗರದ ಸಾಮಂತರಾಗಿದ್ದರು. ಆದರೆ ಅನಾರೋಗ್ಯ ನಿಮಿತ್ತ ಪ್ರತಿನಿಧಿ ಶ್ರೀರಂಗರಾಯನು ತಲಕಾಡು ಸಮೀಪದ ಮಾಲಂಗಿಯಲ್ಲಿ ನೆಲೆಸಿ, ಅಲ್ಲಿಯೇ ಮೃತನಾದನು. ಈತನ ರಾಣಿಯಾದ ರಂಗಮ್ಮನ ವಜ್ರದ ಮೂಗುತಿಗಾಗಿ ರಾಜ ಒಡೆಯರು ಬಲವಂತಪಡಿಸಿದರು. ಇದರಿಂದ ಬೇಸರಗೊಂಡ ಆಕೆ, ಆ ವಜ್ರದ ಮೂಗುತಿ ಸಮೇತ 'ತಲಕಾಡು ಮರುಳಾಗಿ, ಮಾಲಂಗಿ ಮಡುವಾಗಿ ಮೈಸೂರು ದೊರೆಗಳಿಗೆ ಮಕ್ಕಳೇ ಬೇಡ!' ಎಂದು ಮೂರು ಶಾಪಗಳನ್ನಿತ್ತು, ಕಾವೇರಿಯಲ್ಲಿ ಧುಮುಕಿ ಆತ್ಮಹತ್ಯೆ ಮಾಡಿಕೊಂಡಳು.

ಶ್ರೀರಂಗರಾಯ ಮತ್ತು ರಂಗಮ್ಮ ಇಬ್ಬರೂ ಕಟ್ಟಾ ಶ್ರೀವೈಷ್ಣವರಾಗಿದ್ದರು. ಆದರೆ ಈ ಸ್ತ್ರೀ ಶಾಪಕ್ಕೆ ರಾಜ ಒಡೆಯರು ಹೆದರಿ, ಶ್ರೀವೈಷ್ಣವ ಧರ್ಮವನ್ನು ಅನುಸರಿಸಿದರು. ಆದರೆ ಶಾಪವು ಫಲಿಸಿ, ಆಕೆಯ ಶಾಪದಂತೆ ಎಲ್ಲವೂ ಸಂಭವಿಸಿತು. ಮೂರೂ ಶಾಪಗಳು ನಿಜವಾದುವು. ಇಲ್ಲಿಂದ ಮುಂದೆ ಮೈಸೂರು ಅರಸರು ಶ್ರೀವೈಷ್ಣವ ಧರ್ಮವನ್ನು ಅನುಸರಿಸಿದರು.

**15. ನಾಯಕ ಪ್ರಭುಗಳ ಶ್ರೀವೈಷ್ಣವ ಭಕ್ತಿ :** ವಿಜಯನಗರ ಪ್ರಭುಗಳ ನಂತರ ಆ ಪರಂಪರೆಯು ಮಧುರೆ, ತಂಜಾವೂರು, ಶ್ರೀರಂಗಪಟ್ಟಣಗಳಲ್ಲಿ ಮುಂದುವರೆಯಿತು.

ಮಧುರೆ, ತಂಜಾವೂರುಗಳಲ್ಲಿನ ನಾಯಕ ಪ್ರಭುಗಳು ಶ್ರೀವೈಷ್ಣವ ಭಕ್ತಿ ತತ್ತ್ವವನ್ನು ಅನುಸರಿಸುತ್ತಿದ್ದರು. ಇವರ ಕಾಲದಲ್ಲಿ ಸಾಹಿತ್ಯದೊಂದಿಗೆ ಇತರೇ ರಂಗಗಳಲ್ಲಿಯೂ ಶ್ರೀವೈಷ್ಣವತ್ವವು ಪ್ರಚಾರವನ್ನು ಹೊಂದಿತು.

ಈ ವಂಶಕ್ಕೆ ಸೇರಿದ ಚೆವ್ವಪ್ಪ ನಾಯಕನು ವಿಜಯನಗರ ಪ್ರಭುವಾದ ಅಚ್ಯುತರಾಯನ ಪತ್ನಿಯಾದ ತಿರುಮಲಾಂಬಾ ದೇವಿಯ ತಂಗಿಯಾದ ಮೂರ್ತಿಮ್ಮಳನ್ನು ವಿವಾಹವಾಗಿದ್ದ. ಈ ಕಾರಣದಿಂದ ವಿಜಯನಗರ ಪ್ರಭುಗಳ ಸಾನ್ನಿಧ್ಯ ಹಾಗೂ ಸಂಸ್ಕಾರಗಳನ್ನು ಹೊಂದಿದ್ದನು. ಈ ರೀತಿಯಲ್ಲಿ ಈತನು ಶ್ರೀವೈಷ್ಣವಾಭಿಮಾನಿಯಾದನು.

ತಂಜಾವೂರು ನಾಯಕ ಪ್ರಭುಗಳಿಗೆ ಅವರ ಮನೆದೇವರಾದ 'ಮನ್ನಾರ್ ಕ್ಷೇತ್ರ'ದಲ್ಲಿನ ರಾಜಗೋಪಾಲಸ್ವಾಮಿಯು ಪರಮ ಭಕ್ತರಾದುದರಿಂದ ಅವರುಗಳು ಮನ್ನಾರ್ ಗೋತ್ರೀಯರೆಂಬ ಹೆಸರನ್ನು ಪಡೆದರು. ರಂಗಾಜಮ್ಮ ಎನ್ನುವ ಕವಯಿತ್ರಿ ತನ್ನ 'ಮನ್ನಾರ್ ದಾಸ ವಿಲಾಸಮು' ಎನ್ನುವ ಗ್ರಂಥದಲ್ಲಿ ಈ ವಿಚಾರವನ್ನು ತಿಳಿಸಿದ್ದಾಳೆ.

ಈ ಪ್ರಭುಗಳಲ್ಲಿ ಪ್ರಮುಖನಾದವನೆಂದರೆ ರಘುನಾದ ನಾಯಕನು. ಈತನ ಕಾಲದಲ್ಲಿ ಶ್ರೀವೈಷ್ಣವ ಸಾರಸ್ವತವು ಕೂಡ ಆವಿರ್ಭವಿಸಿತು. ಕುಮಾರ ತಾತಾಚಾರ್ಯನ 'ಪಾರಿಜಾತಾಪಹರಣ' ನಾಟಕ, ರಘುನಾಥರಾಯನು ಸ್ವತಃ ತೆಲುಗಿನಲ್ಲಿ ರಚಿಸಿದ 'ರಾಮಾಯಣ' ಹಾಗೂ ಇದರ 'ಮಧುರವಾಣಿ'ಯ ಸಂಸ್ಕೃತಾನುವಾದ, ಅಲ್ಲದೆ 'ಗಜೇಂದ್ರ ಮೋಕ್ಷ', 'ರುಕ್ಮಿಣಿ ಕೃಷ್ಣ ವಿವಾಹ' (ಯಕ್ಷಗಾನ), 'ಜಾನಕೀ ಪರಿಣಯ' ಇತ್ಯಾದಿ ಅನೇಕ ಗ್ರಂಥಗಳು ಶ್ರೀವೈಷ್ಣವ ಕಥಾ ಪ್ರಾಧಾನ್ಯತೆಯನ್ನು ಹೊಂದಿ ರಚಿತವಾದುವು.

ರಘುನಾಥ ನಾಯಕನ ಸೋದರನಾದ ವಿಜಯನಾಯಕನು ಕೂಡ ಶ್ರೀವೈಷ್ಣವನೇ. ಈತನು ಸ್ವತಃ ಕವಿಯಾಗಿ ಅನೇಕ ಕಾವ್ಯಗಳನ್ನು ರಚಿಸಿದ್ದಾನೆ. ಈತನು ರಚಿಸಿರುವ 'ರಘುನಾಥನಾಯಕಾಭ್ಯುದಯ' ಎನ್ನುವ ದ್ವಿಪದ ಕಾವ್ಯವು 'ಶ್ರೀ ರಾಜಗೋಪಾಲ, ಚಿರಕೀರ್ತಿಜಾಲ ರಕ್ಷಿಂಪದಗವಯ್ಯ ರಾಧಿಕಾಲೋಲ' ಇತ್ಯಾದಿ ಕೃಷ್ಣಸ್ತುತಿಯಿಂದ ಪ್ರಾರಂಭಿಸಲ್ಪಟ್ಟಿದೆ.

ಈ ನಾಯಕ ರಾಜರುಗಳ ಕಾಲದಲ್ಲಿ ಉತ್ತರಾರ್ಧ ಭಾರತದಲ್ಲಿ ರಾಧಾಕೃಷ್ಣ ಪ್ರೇಮವು ಹೆಚ್ಚು ಪ್ರಚಾರದಲ್ಲಿತ್ತು. ಇದು ಬಹುಶಃ ದಕ್ಷಿಣ ಭಾರತವನ್ನೂ ಕೂಡ ಪ್ರಭಾವಗೊಳಿಸಿರಬಹುದು. ಮುದ್ದುಪಳನಿ ಎನ್ನುವ ಕವಿಯ 'ರಾಧಿಕಾ ಸಾಂತ್ವನ' ಎನ್ನುವ ಕಾವ್ಯವು ಕೂಡ ರಾಧಾಕೃಷ್ಣ ಭಕ್ತಿಗೆ ನಿದರ್ಶನವಾಗಿರುವುದಕ್ಕೆ ಇದೇ ಕಾರಣವಾಗಿರಬಹುದು.

ವಿಜಯರಾಘವನು ತಾತಾಚಾರ್ಯನ ಶಿಷ್ಯನು. ಈ ತಾತಾಚಾರ್ಯನು ಪರಮ ಚತುರ್ವೇದ ಪಾರಾಯಣನೆಂದೂ, ಶತಕ್ರತುಯಾಜಿ ಎಂದೂ ಹೆಸರು ಪಡೆದು, ಕಾಂಚೀಪುರಕ್ಕೆ ಸೇರಿದವನಾಗಿದ್ದು, ವಡಹಲೈ ವೈಷ್ಣವಾಚಾರ್ಯನಾಗಿದ್ದ, ವೀರವೈಷ್ಣವನಾಗಿದ್ದನು. ಈ ಆಚಾರ್ಯನು ತನ್ನ ಹೃದಯದಲ್ಲಿ ಎರಡನೇ ಮನ್ನನಾರ್ ಆಗಿ ಸಂಸ್ಥಾಪಿತನಾಗಿದ್ದಾನೆಂದು, ವಿಜಯರಾಘವನು

ತನ್ನ ಕಾವ್ಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾನೆ.

ಇನ್ನು ಮಧುರೆಯ ನಾಯಕ ಪ್ರಭುಗಳು ಕೂಡ ವಿಷ್ಣುಭಕ್ತರೇನೇ! ಇವರಲ್ಲಿ ವಿಜಯರಂಗ ಚೊಕ್ಕನಾಥನು 'ಶ್ರೀರಂಗ ಮಾಹಾತ್ಮ್ಯೆ' ಎನ್ನುವ ವಚನ ಪ್ರಬಂಧವನ್ನು ರಚಿಸಿದ್ದಾನೆ. ಜೈಮಿನಿ ಭಾರತವೂ ಕೂಡ ಈ ಕಾಲದಲ್ಲಿ ಬೆಳಕಿಗೆ ಬಂದ ಗ್ರಂಥವೇನೆ! ಇದೇ ವಿಜಯರಂಗ ಚೊಕ್ಕನಾಥನು ಶ್ರೀರಂಗದ ರಂಗನಾಥ ದೇವಾಲಯದ ಪುನರುದ್ಧಾರ ಕಾರ್ಯವನ್ನು ಕೈಗೊಂಡನು.

ವಿಶ್ವನಾಥನಾಯಕನು ಅನೇಕ ಚಿನ್ನದ ಆಭರಣಗಳನ್ನು, ಪಾತ್ರೆಗಳನ್ನು' 'ಸಹಸ್ರಧಾರ' ಎನ್ನುವ ಅಭಿಷೇಕ ಪಾತ್ರೆಯನ್ನು ಸಮರ್ಪಿಸಿದನಂತೆ.

ತಂಜಾವೂರು ನಾಯಕ ರಾಜರುಗಳಲ್ಲಿ ಅಚ್ಯುತಪ್ಪ ನಾಯಕನು (ಕ್ರಿ.ಶ. 1530–1614) ತುಂಬಾ ಶ್ರೀವೈಷ್ಣವ ಪ್ರೀತಿಯನ್ನು ಹೊಂದಿರುವವ ನಾಗಿದ್ದು, ಶ್ರೀರಂಗದ ಬಗ್ಗೆ ವಿಶೇಷ ಆಸಕ್ತಿಯನ್ನು ಹೊಂದಿದ್ದ ಕೀರ್ತಿಶಾಲಿ ಯಾಗಿದ್ದಾನೆ. ಯಜ್ಞನಾರಾಯಣ ದೀಕ್ಷಿತನು ತನ್ನ 'ಸಾಹಿತ್ಯ ರತ್ನಾಕರ' ಎನ್ನುವ ಗ್ರಂಥದಲ್ಲಿ, ಗೋವಿಂದ ದೀಕ್ಷಿತನು ತನ್ನ 'ಸಂಗೀತ ಸುಧಾ' ಗ್ರಂಥ ದಲ್ಲಿ, ರಾಮಭದ್ರಾಂಬೆಯು ತನ್ನ 'ರಘುನಾಥಾಭ್ಯುದಯ'ದಲ್ಲೂ ಈತನಿಗೆ ಶ್ರೀರಂಗದ ಮೇಲೆ ಅಪಾರ ಪ್ರೀತಿ ಇರುವ ವಿಷಯವನ್ನು ಸ್ಪಷ್ಟೀಕರಿಸಿದ್ದಾರೆ. ಇದೇ ಅಚ್ಯುತಪ್ಪ ನಾಯಕನು ತನ್ನ ಕಡೆಗಾಲದಲ್ಲಿ ತನ್ನ 370 ಭಾರ್ಯ ರೊಂದಿಗೆ ಶ್ರೀರಂಗದಲ್ಲಿ ದೇಹತ್ಯಾಗ ಮಾಡಿದನೆಂದು ಹೇಳಲಾಗುತ್ತದೆ.

ಮಧುರೈ ನಾಯಕರಲ್ಲಿ ಕೃಷ್ಣಪ್ಪ ನಾಯಕ I, ಕೃಷ್ಣಪ್ಪ ನಾಯಕ II (ಕ್ರಿ.ಶ. 1564–1601) ಎನ್ನುವ ಇವರಿಬ್ಬರನ್ನು ಕುರಿತು, ಶ್ರೀರಂಗದ ದೇವಾಲಯದಲ್ಲಿರುವ 'ಕೋಯಿಲ್ ಒಳುಹು' ಎನ್ನುವ ಗ್ರಂಥವು ವಿಶೇಷವಾಗಿ ವಿವರಿಸಿದೆ.

ಚೊಕ್ಕನಾಥನು ಶ್ರೀರಂಗಕ್ಕೆ (ಶ್ರೀರಂಗನಾಥನಿಗೆ) 95 ಗ್ರಾಮಗಳನ್ನು ದಾನ ಮಾಡಿದನೆಂದು ಶಾಸನವೊಂದು ಸ್ಪಷ್ಟಪಡಿಸುತ್ತದೆ. ಈ ದಾನವು ಪ್ರಮಾಥಿ ಸಂವತ್ಸರದಲ್ಲಿ (1673) ನೀಡಲಾಗಿದೆ.

ಕೂರತ್ತಾಳ್ವಾರ್, ವಿಠಲೇಶ್ವರರ ದೇವಸ್ಥಾನಗಳ ನಡುವೆ ಅಷ್ಟಭುಜ ಗೋಪಾಲ ಮಂದಿರವನ್ನು ಚಿನ್ನಬೊಮ್ಮಯ್ಯನು ನಿರ್ಮಿಸಿದುದಾಗಿ ಶ್ರೀರಂಗ ದಲ್ಲಿನ ದೇವಾಲಯ ಶಾಸನವೊಂದು ತಿಳಿಸುತ್ತದೆ. ಇಲ್ಲಿನ ರಾಮಾನುಜ ಕೂಟ

ಕೂಟವೊಂದರ ನಿರ್ವಹಣೆಗಾಗಿ ಒಂದು ಗ್ರಾಮವನ್ನು ದಾನ ಮಾಡಲಾಗಿದೆ.

ಶ್ರೀವೈಷ್ಣವ ಪೋಷಕ ಪ್ರಭುಗಳಲ್ಲಿ ಹೆಚ್ಚು ಕಡಿಮೆ ವಿಜಯರಂಗ ಚೊಕ್ಕನಾಥನೇ (ಕ್ರಿ.ಶ. 1706–1736) ಕಟ್ಟಕಡೆಯವನೆಂದು ಹೇಳಬಹುದು. ಚೊಕ್ಕನಾಥನ ತಾಯಿ ಮಂಗಮ್ಮ, ಇವನ ರಾಣಿ ಮೀನಾಕ್ಷಿ-ಇವರಿಬ್ಬರೂ ಶ್ರೀವೈಷ್ಣವ ಧರ್ಮದ ಪೋಷಣೆಯನ್ನು ಮಾಡಿದರೆಂದು ದಾನಶಾಸನವೊಂದು ತಿಳಿಸುತ್ತದೆ.

ರಘುನಾಥ ನಾಯಕನು ರಾಮಭಕ್ತನು. ಇದು ಇವನು ರಚಿಸಿದ 'ವಾಲ್ಮೀಕಿ ಚರಿತ್ರೆ'ಯ ಅನುಸಾರ ತಿಳಿದುಬರುತ್ತದೆ. ಇವನ ರಚನೆಗಳೆಲ್ಲವೂ 'ರಾಮಭದ್ರಾಂಕಿತ'ಗಳೇ ಆಗಿವೆ. ಸೇತುಬಂಧ, ಶ್ರೀರಂಗ, ವಿಜಯರಾಘವಪುರ, ಕುಂಭಕೋಣ ಮತ್ತಿತರ ದಿವ್ಯಕ್ಷೇತ್ರಗಳಲ್ಲಿರುವ ಶ್ರೀರಾಮಚಂದ್ರನನ್ನು ಈತನು ಸೇವಿಸಿದ್ದಾನೆ. ಈ ವಿಷಯವೂ ಕೂಡ 'ವಾಲ್ಮೀಕಿ ಚರಿತೆ'ಯ ಕೊನೆಯಲ್ಲಿನ 'ರಾಮಸೇತು, ಶ್ರೀರಂಗ, ವಿಜಯರಾಘವಪುರ, ಕುಂಭಕೋಣಾದಿ ದಿವ್ಯಸ್ಥಲ ಪ್ರತಿಷ್ಠಾಪಿತ ರಾಮಭದ್ರ' ಎನ್ನುವ ವಾಕ್ಯವು ಸ್ಪಷ್ಟೀಕರಿಸುತ್ತದೆ. ಇವೆಲ್ಲಕ್ಕಿಂತ ಹೆಚ್ಚಾಗಿ ಈತನಿಗೆ ಶ್ರೀರಂಗದ ಬಗ್ಗೆ ಹಾಗೂ ಶ್ರೀರಂಗನಾಥನ ಬಗ್ಗೆ ನಿರತಿಶಯವಾದ ಪ್ರೀತಿ ಇತ್ತೆಂದು ವಾಲ್ಮೀಕಿ ಚರಿತೆಯಲ್ಲಿನ 'ಶ್ರೀರಂಗನಾಥ ವರ್ಣನಮು' (ದ್ವಿ.ಆ.ಪ. 24–34) ಎನ್ನುವ ಭಾಗವು ತಿಳಿಸುತ್ತದೆ.

**16. ಮೈಸೂರು ಒಡೆಯರ ಶ್ರೀವೈಷ್ಣವ ಭಕ್ತಿ :** ರಾಜ ಒಡೆಯರು (1578–17) ವಿಜಯನಗರ ಪ್ರತಿನಿಧಿ ಶ್ರೀರಂಗರಾಯನ ಪತ್ನಿ ರಂಗಮ್ಮನ ಶಾಪಕ್ಕೆ ಹೆದರಿ ಶ್ರೀವೈಷ್ಣವ ಧರ್ಮಕ್ಕೆ ಶರಣಾದರು ಎಂಬ ವಿಷಯವನ್ನು ಈಗಾಗಲೇ ತಿಳಿಸಲಾಗಿದೆ. ಇವರು ಮೇಲುಕೋಟೆಯ ಚೆಲುವನಾರಾಯಣನ ಭಕ್ತರಾಗಿದ್ದರು. ಆ ದೇವಾಲಯದ ಸ್ತಂಭವೊಂದರಲ್ಲಿ ಇವರ ಚಿತ್ರವಿದೆ.

ರಣಧೀರ ಕಂಠೀರವ ನರಸರಾಜ ಒಡೆಯ (1638–1659) ರಲ್ಲೂ ಶ್ರೀವೈಷ್ಣವ ಭಕ್ತಿ ಇತ್ತು. ಇವರು ಶ್ರೀರಂಗಪಟ್ಟಣದಲ್ಲಿ ನರಸಿಂಹ ದೇವಾಲಯವನ್ನು ಕಟ್ಟಿಸಿದರು. ಲಕ್ಷ್ಮೀನರಸಿಂಹ ದೇವರ ಪ್ರೀತ್ಯರ್ಥವಾಗಿ ಏಕಾದಶೀ ವ್ರತಾಚರಣೆಯನ್ನು ಪುನಃ ಪ್ರಾರಂಭಿಸಿದರು. ಇವರು ಕಳಲೆಯಲ್ಲಿ ಒಡೆಯರ ನೆನಪಿನಲ್ಲಿ 1662ರಲ್ಲಿ ಒಂದು ಶ್ರೀವೈಷ್ಣವ ಮಠವನ್ನು ಕಟ್ಟಿಸಿ, ಅದಕ್ಕೆ ಉಂಬಳಿಯನ್ನು ನೀಡಿದ್ದರು.

ಚಿಕ್ಕದೇವರಾಜ ಒಡೆಯರ (1672–1704) ಕಾಲವು ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮಕ್ಕೆ ಭದ್ರವಾದ ಬುನಾದಿ ಹಾಕಲಾಯಿತು. ಸ್ವತಃ ಶ್ರೀವೈಷ್ಣವ ರಾಜರಾಗಿದ್ದ ಇವರು ಆ ಧರ್ಮದ ಅಭಿವೃದ್ಧಿಗಾಗಿ, ತಮ್ಮ ತನು, ಮನ, ಧನ ಗಳೆಲ್ಲವನ್ನೂ ಧಾರೆಯೆರೆದರು. ಶ್ರೀ ಕೃಷ್ಣದೇವರಾಯನ ನಂತರ ಇವರೇ ಆ ಧರ್ಮಕ್ಕೆ ಬೆನ್ನೆಲುಬಾಗಿ ನಿಂತು, ಅದನ್ನು ಸರ್ವತೋಮುಖವಾಗಿ ಹರಡಲು ಶ್ರಮಿಸಿದರು.

ಚಿಕ್ಕದೇವರಾಜ ಒಡೆಯರು ರಾಜನೀತಿ ವಿಚಕ್ಷಣರಾಗಿದ್ದುದೇ ಅಲ್ಲದೆ ಸಾಹಿತ್ಯ ಪೋಷಕರೂ ಆಗಿದ್ದರು. ತಿರುಮಲಾರ್ಯನು ಒಡೆಯರ ಸಹಪಾಠಿ ಕಾಲಾಂತರದಲ್ಲಿ ಅವರ ಮಂತ್ರಿಯಾಗಿ, ಅವರಿಗೆ ಎಲ್ಲ ರೀತಿಗಳಲ್ಲೂ ಬಲಗೈ ನಂತಿದ್ದನು.

ಈ ತಿರುಮಲಾರ್ಯನ ತಂದೆ ಅಳಸಿಂಗಾರ್ಯನು ಚಿಕ್ಕದೇವರಾಜ ಒಡೆಯರ ತಂದೆಯಾದ ದೊಡ್ಡದೇವರಾಜ ಒಡೆಯರ ಪೌರಾಣಿಕನಾಗಿದ್ದನು. ಶ್ರೀವೈಷ್ಣವನಾಗಿದ್ದ ತಿರುಮಲಾರ್ಯನು ಒಡೆಯರಿಗೆ ಪರಮನಿಷ್ಠನಾಗಿ ನಡೆದು ಕೊಂಡಿದ್ದನು.

ಒಡೆಯರ ಆಸ್ಥಾನದಲ್ಲಿದ್ದ ಕವಿಗಳೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಸಂಸ್ಕೃತ ಇಲ್ಲವೆ ಕನ್ನಡ ಭಾಷೆಯಲ್ಲಿ ಶ್ರೀವೈಷ್ಣವ ಸಾಹಿತ್ಯವನ್ನು ರಚಿಸಿದರು.

ಆಸ್ಥಾನ ಪಂಡಿತನಾಗಿದ್ದ ತಿರುಮಲಾರ್ಯನು ಶ್ರೀಶೈಲ ಸೂರಿ ಎಂಬ ಕಾವ್ಯನಾಮವನ್ನಿಟ್ಟುಕೊಂಡು ಹಲವಾರು ಸ್ತವ (ಸ್ತೋತ್ರ) ಗಳನ್ನು ರಚಿಸಿದ್ದಾನೆ. ಸಂಸ್ಕೃತದಲ್ಲಿರುವ ಈ ಸ್ತವಗಳಲ್ಲಿ 'ಶ್ರೀ ಯದುಗಿರಿ ನಾರಾಯಣ ಸ್ತವ', 'ಶ್ರೀ ಯದುಗಿರಿ ನಾಯಕೀ ಸ್ತವ' ಎಂಬುವು ಮುಖ್ಯವಾದುವು. ಮೊದಲನೆಯದರಲ್ಲಿ 79 ಶ್ಲೋಕಗಳು, ಎರಡನೆಯದರಲ್ಲಿ 24 ಶ್ಲೋಕಗಳು ಇವೆ. ಇವೆರಡೂ ಸ್ತವಗಳು ಮೇಲ್ಕೋಟೆಯ ಅಧಿಷ್ಠಾನ ದೇವರುಗಳನ್ನು ಸ್ತುತಿಸಿವೆ. ಇವಲ್ಲದೆ ಶ್ರೀರಂಗಪಟ್ಟಣದ ಲಕ್ಷ್ಮೀನರಸಿಂಹ ಸ್ತುತಿ ರೂಪವಾದ 'ಶ್ರೀ ಲಕ್ಷ್ಮೀ ನರಸಿಂಹ ಸ್ತವ' ನಾಗಮಂಗಲದ ಸೌಮ್ಯಕೇಶವ ಸ್ತೋತ್ರವಾದ 'ಶ್ರೀ ಮಂಜುಳ ಕೇಶವಸ್ತವ', ಒಡೆಯರ ಇಷ್ಟದೇವರಾದ ಹರದನಹಳ್ಳಿಯ ಅಪ್ರತಿಮ ರಾಜಗೋಪಾಲ ದೇವರ ಸ್ತೋತ್ರವಾದ 'ಅಪ್ರತಿಮ ರಾಜಗೋಪಾಲ ಸ್ತವ', ದೇವನಗರದ ಕುಮುದಿನೀ ತೀರದಲ್ಲಿರುವ ಪರವಾಸುದೇವನ ಸ್ತುತಿರೂಪವಾದ

'ಶ್ರೀ ಪರವಾಸುದೇವ ಸ್ತವ' ಇತ್ಯಾದಿಗಳನ್ನು ಕ್ರಿ.ಶ. 1673-79ರ ನಡುವೆ ಈತನು ರಚಿಸಿದ್ದಾನೆ. ಶ್ರೀವೈಷ್ಣವರ ಭಕ್ತಿಸಾಹಿತ್ಯದಲ್ಲಿ ಈ ಸ್ತವಗಳಿಗೆಪ್ರಮುಖ ಸ್ಥಾನವಿದೆ. ಭಕ್ತಿಪೂರ್ಣವೂ, ನೀತಿಬೋಧಕವೂ ಆಗಿ ಲಲಿತಗಂಭೀರ ಶೈಲಿಯಲ್ಲಿರುವ ಈ ಸ್ತೋತ್ರಮಾಲಿಕೆಗಳು ತಿರುಮಲಾರ್ಯನ ಶ್ರೀವೈಷ್ಣವ ಭಕ್ತಿ, ಶ್ರದ್ಧೆ, ವಿದ್ವತ್ತುಗಳನ್ನು ತೋರುತ್ತವೆ.

ಒಡೆಯರ ಮತ್ತೊಬ್ಬ ಕವಿಮಿತ್ರನಾದ ಚಿಕ್ಕುಪಾಧ್ಯಾಯನ ತಂದೆಯಾದ ರಂಗರಾಜನು 'ಸಾತ್ತ್ವಿಕ ಬ್ರಹ್ಮವಿಲಾಸ' ಎಂಬ ಕನ್ನಡ ಗದ್ಯಗ್ರಂಥವನ್ನು ಕ್ರಿ.ಶ. 1670ರಲ್ಲಿ ರಚಿಸಿರುವನು. ಇದು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಗ್ರಂಥವಾಗಿದೆ.

ಸಿಂಗರಾರ್ಯನು ನಾಟಕಕಾರನಾದರೂ, ಶ್ರೀವೈಷ್ಣವ ಸಿದ್ಧಾಂತದ ಬಗ್ಗೆಯೂ ಕೃತಿಗಳನ್ನು ರಚಿಸಿದ್ದಾನೆ. ತಿರುಮಲಾರ್ಯನ 'ಯದುಗಿರಿ ನಾರಾಯಣ ಸ್ತವ'ಕ್ಕೆ ಬರೆದ ಒಂದು ವ್ಯಾಖ್ಯಾನ, 'ಶ್ರೀಶೈಲಾರ್ಯ ದಿನಚರಿ' ಎಂಬ ಕಾವ್ಯ–ಇವೆರಡೂ ಸಂಸ್ಕೃತ ಕೃತಿಗಳು ಸಿದ್ಧಾಂತದ ಪ್ರತಿಪಾದನೆಯ ಕೃತಿಗಳಾಗಿವೆ.

ಮಾಲೂರಿನ ರಂಗನಾಥ ಹಾಗೂ ಶ್ರೀರಂಗಪಟ್ಟಣದ ಶ್ರೀ ರಂಗನಾಥ ದೇವರ ವಸಂತೋತ್ಸವ ಕಾಲದಲ್ಲಿ ಪ್ರೇಕ್ಷಕರ ಸನ್ನಿಧಿಯಲ್ಲಿ ಪ್ರದರ್ಶಿಸಲು ಬೇರೆ ನಾಟಕಗಳೊಂದಿಗೆ ಶ್ರೀ ರಂಗನಾಥನ ವೈಭವವನ್ನೂ ಹೇಳುವ ಸಂಸ್ಕೃತ ನಾಟಕಗಳನ್ನು ಪ್ರದರ್ಶಿಸಲಾಗುತ್ತಿತ್ತು. ಅಲ್ಲದೆ ಅಂದಿನ ಅನೇಕ ಸಂಸ್ಕೃತ ಕಾವ್ಯಗಳ ಪ್ರಾರಂಭದಲ್ಲಿ ಲಕ್ಷ್ಮೀನರಸಿಂಹ ಇಲ್ಲವೆ ಶ್ರೀ ರಂಗನಾಥನ ಸ್ತೋತ್ರರೂಪದ ಶ್ಲೋಕಗಳು ಇರುತ್ತಿದ್ದುವು.

ಈಗಾಗಲೇ ಗಮನಿಸಿದಂತೆ ಒಡೆಯರ ಬಾಲ್ಯಮಿತ್ರ, ಸಹಪಾಠಿ, ಆಸ್ಥಾನ ಕವಿಯಾಗಿ, ಕೊನೆಗೆ ಮಂತ್ರಿಯಾದ ಮಹಾ ಮೇಧಾವಿ ತಿರುಮಲಾರ್ಯನು 'ಚಿಕ್ಕದೇವರಾಜ ವಿಜಯ', 'ಚಿಕ್ಕದೇವರಾಜ ವಂಶಾವಳಿ', 'ಅಪ್ರತಿಮ ವೀರ ಚರಿತ್ರೆ' ಹಾಗೂ 'ಚಿಕ್ಕದೇವರಾಜ ಶತಕ' ಎಂಬ ನಾಲ್ಕು ಕನ್ನಡ ಗ್ರಂಥಗಳನ್ನು ಬರೆದಿದ್ದಾನೆ.

'ಚಿಕ್ಕದೇವರಾಜ ವಂಶಾವಳಿ' ಗದ್ಯಗ್ರಂಥ. 'ಚಿಕ್ಕದೇವರಾಜ ವಿಜಯ'ವು ಅಪರೂಪವಾಗಿದ್ದ ಚಂಪೂ ಶೈಲಿಯ ಗ್ರಂಥ ಈ ಕಾಲದಲ್ಲಿ ಮತ್ತೆ ಈ ಶೈಲಿ

ತಲೆಯೆತ್ತಿತು. ಇದು ಚಾರಿತ್ರಿಕ ಕಾವ್ಯವಾದರೂ ಇದರಲ್ಲಿ ಮೈಸೂರಿನಲ್ಲಿ ಶ್ರೀವೈಷ್ಣವ ಧರ್ಮದ ಹುಟ್ಟು, ಬೆಳವಣಿಗೆಗಳ ವಿವರಗಳಿವೆ. ಇದರಲ್ಲಿ ಚಿಕ್ಕದೇವ ರಾಜ ಒಡೆಯರ ಚರಿತ್ರೆಯಲ್ಲದೆ ಶ್ರೀವೈಷ್ಣವ ತತ್ವ ಸಂಪ್ರದಾಯಗಳನ್ನು ತಿಳಿಸು ವುದರಿಂದ, ಆ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯಾಗಿದೆ.

ಚಿಕ್ಕದೇವರಾಜ ಒಡೆಯರು ಸ್ವತಃ ಕವಿಗಳೂ ಆಗಿದ್ದರು. ಇವರು ಉತ್ಕಟ ಶ್ರೀವೈಷ್ಣವ ಮತಾನುಯಾಯಿಗಳಾಗಿದ್ದರೆಂದು ಅವರ ಗ್ರಂಥಗಳಿಂದಲೇ ವ್ಯಕ್ತ ವಾಗುವುದು. ವಿಷ್ಣುಭಕ್ತಿ ಚೇತನ ಅವರ ಕೃತಿಗಳ ಪದಪದದಲ್ಲೂ ಸ್ಪಂದಿಸು ವುದು. ಇವರು 'ಚಿಕ್ಕದೇವರಾಜ ಬಿನ್ನಪ', 'ಗೀತ ಗೋಪಾಲ', 'ಭಾಗವತ', 'ಶೇಷಧರ್ಮ ಭಾರತ' ಮತ್ತು 'ಶೇಷಧರ್ಮ' ಎಂಬ ಐದು ಕೃತಿಗಳನ್ನು ರಚಿಸಿದ್ದಾರೆ.

'ಚಿಕ್ಕದೇವರಾಜ ಬಿನ್ನಪ'ವು ಹಳೆಗನ್ನಡದಲ್ಲಿರುವ ಗದ್ಯಗ್ರಂಥ. ಒಡೆಯರ ಕುಲದೇವತೆಯಾದ ಮೇಲ್ಕೋಟೆಯ ಚೆಲುವನಾರಾಯಣನಿಗೆ ಸಲ್ಲಿಸಿದ ಮೂವತ್ತು ಬಿನ್ನಪಗಳಿಂದ ಈ ಕೃತಿ ರಚಿತವಾಗಿದೆ. ಈ ಮೂವತ್ತು 'ಬಿನ್ನಪ' ಗಳಲ್ಲಿ ಶ್ರೀವೈಷ್ಣವ ಮತದ ತತ್ತ್ವಸಾರವು ನಿರೂಪಿತವಾಗಿದೆ. ವಿಶಿಷ್ಟಾದ್ವೈತ ತತ್ತ್ವದ ಸಾರ ನಿರೂಪಣೆ ಇದರಲ್ಲಿದೆ.

'ಭಾಗವತ'ವು ಸಂಸ್ಕೃತ ಭಾಗವತಕ್ಕೆ ಗದ್ಯರೂಪದಲ್ಲಿರುವ ಕನ್ನಡ ಟೀಕೆ. ಇದಕ್ಕೆ 'ಚಿಕ್ಕದೇವರಾಜ ಸೂಕ್ತಿವಿಲಾಸ' ಎಂಬ ಹೆಸರಿದೆ. ಉತ್ತರ ಪರ್ವಗಳಿಗೆ ಮಾತ್ರ ಟೀಕಾರೂಪವಾಗಿ ಬರೆದ ಕನ್ನಡ ಅನುವಾದ. ಇದರ ಶೈಲಿ ತಿಳಿಯಾಗಿದೆ. ಒಡೆಯರ ಶ್ರೀವೈಷ್ಣವ ಧರ್ಮ ಪರಾಯಣತೆಗೆ, ವಿಷ್ಣುಭಕ್ತಿಗೆ ಈ ಕೃತಿ ಉದಾಹರಣೆಯಾಗಿದೆ. ಇದು 1682-86ರಲ್ಲಿ ರಚಿತವಾಗಿರಬೇಕು.

ಒಡೆಯರ ಮತ್ತೊಂದು ಕೃತಿಯಾದ 'ಭಾರತ'ವು ವ್ಯಾಸಭಾರತದ ಶಾಂತಿ ಪರ್ವದಿಂದ ಮುಂದಿನ ಭಾಗದ ಟೀಕೆಯಾಗಿದೆ. ಇದರಲ್ಲಿಯೂ ಶ್ರೀವೈಷ್ಣವ ಧರ್ಮದ ನಿರೂಪಣೆ ಇದೆ.

'ಗೀತ ಗೋಪಾಲ'ವು ಜಯದೇವನ ಕೃತಿಯಾದ 'ಗೀತ ಗೋವಿಂದ'ದ ಮಾದರಿಯಲ್ಲಿ ರಚಿತವಾದ ಮೋಕ್ಷಮಾರ್ಗ ದರ್ಶನ ಗ್ರಂಥ. ಆದರೆ ಇದರಲ್ಲಿ ಅಲ್ಲಲ್ಲಿ ಒಡೆಯರ ದಿಗ್ವಿಜಯಗಳ ವರ್ಣನೆ ಇದೆ. ಇದನ್ನು ತಿರುಮಲಾರ್ಯನು ಬರೆದು, ಒಡೆಯರ ಹೆಸರಿನಲ್ಲಿ ಪ್ರಸಿದ್ಧಿಸಿರಬಹುದೆಂದು ಊಹೆ ಇದೆ. ಇದರಲ್ಲಿ

ಪೂರ್ವ ಭಾಗ, ಉತ್ತರ ಭಾಗ ಎಂಬ ಎರಡು ಭಾಗಗಳಿವೆ. ಪ್ರತಿ ಭಾಗದಲ್ಲೂ ಏಳು ಖಂಡಗಳಿದ್ದು, ಪ್ರತಿ ಖಂಡದಲ್ಲೂ ಏಳು ಪದ (ಹಾಡು)ಗಳು ಇವೆ. ಇದರಿಂದ ಪ್ರತಿ ಖಂಡಕ್ಕೂ ಕವಿಯು ಸಪ್ತಪದಿ ಎಂಬ ಹೆಸರನ್ನು ಕೊಟ್ಟಿದ್ದಾನೆ. ಈ ಕೃತಿಯಲ್ಲಿ 'ಎರಡೂ ಭಾಗದೊಳ್ ಶ್ರೀನಾರಾಯಣನ ಗುಣಾನುಭವವಾದ ನಿತ್ಯಫಲಮುಂ ಅವನಡಿದಾವರೆಯೊಳ್ ನೆಂಬುಗೆಯೆಂಬ ತದುಪಾಯಮುಮಪಂ' ಎಂಬುದನ್ನು ಕವಿ ನಿರೂಪಿಸಿದ್ದಾನೆ.

'ಶೇಷಧರ್ಮ'ವು ಸಂಸ್ಕೃತದ ಕೃತಿಯ ಕನ್ನಡ ಅನುವಾದ ಹಾಗೂ ಟೀಕೆಗಳಾಗಿದೆ.

ಒಡೆಯರ ಮತ್ತೊಂದು ಕೃತಿ ಎಂದರೆ 'ಸಚ್ಛೂದ್ರಾಚಾರ ನಿರ್ಣಯ' ಎಂಬುದು. ಇದೊಂದು ಮಹಾಪ್ರಬಂಧ. 'ಸತ್ ಶೂದ್ರ'ನ ಕರ್ತವ್ಯಗಳನ್ನೂ, ಅವನು ಮಾಡಬೇಕಾದ ಹಾಗೂ ಅನುಸರಿಸಬೇಕಾದ ಮತಾಚರಣೆಗಳನ್ನೂ ಈ ಗ್ರಂಥವು ವಿವರಿಸುತ್ತದೆ.

ಮೇಲ್ಕೋಟೆಯ ಚೆಲುವನಾರಾಯಣನ ಗುಡಿಯಲ್ಲಿ ನಡೆಯುವ ವಜ್ರ ಮುಕುಟೋತ್ಸವ (ವೈರಮುಡಿ)ಕ್ಕೆ ಇವರು ಮಹತ್ವ ನೀಡಿರುವುದಲ್ಲದೆ, ಗಜೇಂದ್ರೋತ್ಸವವನ್ನೂ ಪ್ರಾರಂಭಿಸಿದರು. ಇವರು ಶ್ರೀವೈಷ್ಣವಮತಾನುಯಾಯಿಗಳಾದರೂ ಇತರೇ ಧರ್ಮಗಳ ವಿಚಾರದಲ್ಲೂ ಸಮಚಿತ್ತರಾಗಿದ್ದು, ರಾಜರ ಸ್ಥಾನಕ್ಕೆ ಗೌರವವನ್ನು ತಂದುಕೊಂಡರು. ವೀರಶೈವ ಹಾಗೂ ಜೈನಧರ್ಮಕ್ಕೂ ಇದೇ ರೀತಿಯ ಪ್ರೋತ್ಸಾಹ ನೀಡಿದರು. ಹೀಗೆ ಇವರ ಕಾಲದಲ್ಲಿ ಶ್ರೀರಂಗಪಟ್ಟಣವು ಸಕಲರ ಗಮನ ಸೆಳೆಯುವ ಸಾಂಸ್ಕೃತಿಕ, ಕಲೆ ಹಾಗೂ ಧಾರ್ಮಿಕ ಕೇಂದ್ರವಾಗಿ ಪರಿಣಮಿಸಿ, ದಕ್ಷಿಣ ಭಾರತದಲ್ಲೇ ಖ್ಯಾತಿವಂತವಾಯಿತು.

ಈ ಕಾಲದ ಮತ್ತೊಬ್ಬ ಪ್ರಸಿದ್ಧ ಕವಿ 'ಚಿಕ್ಕುಪಾಧ್ಯಾಯ'ನು 'ಲಕ್ಷ್ಮೀಪತಿ' ಎನ್ನುವುದು ಆತನ ಇನ್ನೊಂದು ಹೆಸರು. ಚಿಕ್ಕದೇವರಾಜ ಒಡೆಯರಿಗೆ ಈತನು ಬಾಲ್ಯದಲ್ಲಿ ಉಪಾಧ್ಯಾಯನಾಗಿದ್ದನು. ಒಡೆಯರು ಈತನನ್ನು ತುಂಬಾ ಗೌರವಿಸುತ್ತಿದ್ದರು. ಗುರುವಿನ ಸಾಮರ್ಥ್ಯವನ್ನು ಅರಿತಿದ್ದ ಒಡೆಯರು ನಂತರ ಆಸ್ಥಾನ ಪಂಡಿತನನ್ನಾಗಿಸಿ, ನಂತರ ಮಂತ್ರಿಪದವಿಗೇರಿಸಿದರು. ಇವೆಲ್ಲಕ್ಕಿಂತ ಹೆಚ್ಚಾಗಿ ಈತನು ತಿರುಮಲಾರ್ಯನ ಸಹೋದರನು.

ಮುಮ್ಮಡಿ ಕೃಷ್ಣರಾಜ ಒಡೆಯರು, ಅಳಿಯ ಲಿಂಗರಾಜನನ್ನು ಬಿಟ್ಟರೆ ಈತನಷ್ಟು ಗ್ರಂಥರಚನೆ ಮಾಡಿದವರು ಸಮಗ್ರ ಕನ್ನಡ ಸಾಹಿತ್ಯದಲ್ಲಿ ಬೇರ್ಯಾರೂ ಇಲ್ಲ. ಈತನ ಮೂವತ್ತಕ್ಕೂ ಮೇಲ್ಪಟ್ಟ ಗ್ರಂಥಗಳಲ್ಲಿ ಕೆಲವು ಸ್ವತಂತ್ರ, ಮತ್ತೆ ಕೆಲವು ಸಂಸ್ಕೃತ, ತಮಿಳು ಗ್ರಂಥಗಳ ಅನುವಾದಗಳು. ಆದರೆ ಈತನು ಶ್ರೀವೈಷ್ಣವ ಸಾಹಿತ್ಯಕ್ಕೆ ಮಾಡಿರುವ ಸೇವೆ ಬೇರೆ ಯಾರೂ ಮಾಡಿಲ್ಲವೆನ್ನ ಬಹುದು.

ಈತನು 'ಅಕ್ಷರ ಮಾಲಿಕಾ ಸಾಂಗತ್ಯ', 'ಅಮರ ಶತಕ', 'ಕಮಲಾಚಲ ಮಾಹಾತ್ಮ್ಯೆ', 'ಕಾಮಂದಕ ಟೀಕೆ', ಚಿಕ್ಕದೇವರಾಜ ಶೃಂಗಾರ ಪದಗಳು', 'ಚಿತ್ರಶತಕ ಸಾಂಗತ್ಯ', 'ಪುರುಷ ವಿರಹದ ಸಾಂಗತ್ಯ', 'ತಿರುವಾಯ್ಮೊಳಿ ಟೀಕೆ', 'ದಿವ್ಯಸೂರಿ ಚರಿತ್ರೆ', 'ನೀತಿ ಶತಕದ ಸಾಂಗತ್ಯ', 'ಪಶ್ಚಿಮ ರಂಗ ಸಾಹಿತ್ಯ', 'ಯದುಗಿರಿ ಮಾಹಾತ್ಮ್ಯೆ', 'ಯಾದವಗಿರಿ ಮಾಹಾತ್ಮ್ಯೆ', •ರಂಗಧಾಮ ಸ್ತುತಿ ಸಾಂಗತ್ಯ', 'ರಂಗಸ್ವಾಮಿಯ ಶೃಂಗಾರ ಸೂತ್ರೋದಾ ಹರಣ', 'ರುಕ್ಮಾಂಗದ ಚರಿತ್ರೆ, 'ವಿಷ್ಣು ಪುರಾಣ' (ಚಂಪೂ), 'ವಿಷ್ಣುಪುರಾಣ' (ಗದ್ಯ), 'ವೆಂಕಟಗಿರಿ ಮಾಹಾತ್ಮ್ಯೆ', 'ವೈದ್ಯಾಮೃತ ಟೀಕೆ', 'ಶುಕಸಪ್ತತಿ', 'ಶೃಂಗಾರ ಸೂತ್ರೋದಾಹರಣ', 'ಶೇಷಧರ್ಮ', 'ಶ್ರೀರಂಗ ಮಾಹಾತ್ಮ್ಯೆ', 'ಸಾತ್ವಿಕ ಬ್ರಹ್ಮವಿದ್ಯಾ ವಿಲಾಸ' 'ಹಸ್ತಗಿರಿ ಮಾಹಾತ್ಮ್ಯೆ' ಎಂಬ ಇಪ್ಪತ್ತೆಂಟು ಗ್ರಂಥಗಳನ್ನು ರಚಿಸಿದ್ದಾನೆ. ಇವುಗಳಲ್ಲದೆ 'ಅರ್ಥ ಪಂಚಕ', 'ತತ್ತ್ವತ್ರಯ', 'ರಂಗನಾಯಕ ರಂಗನಾಯಕೀ ಸ್ತುತಿ', 'ಶೃಂಗಾರದ ಹಾಡುಗಳು' ಎಂಬ ನಾಲ್ಕು ಕೃತಿಗಳನ್ನು ಈತನೇ ರಚಿಸಿದನೆಂದು ಹೇಳಲಾಗುತ್ತದೆ.

ಚಿಕ್ಕುಪಾಧ್ಯಾಯನ ಬಹಳಷ್ಟು ಗ್ರಂಥಗಳು ಸಾಂಗತ್ಯ ರೂಪದಲ್ಲಿವೆ. ಬಹುಶಃ ಇವು ಕವಿಯ ಪ್ರಾರಂಭಿಕ ಕೃತಿಗಳಾಗಿರಬೇಕು ಮತ್ತು ಕ್ರಿ.ಶ. 1673–76ರ ನಡುವೆ ಬರೆದಿರಬೇಕು. ತಿರಕಣಾಂಬಿಯ ಶ್ರೀವೈಷ್ಣವನಾದ ಈತನು ತನ್ನ ಗ್ರಂಥ ಗಳಲ್ಲಿ ಶ್ರೀವೈಷ್ಣವ ಧರ್ಮ ಮತ್ತು ತತ್ತ್ವಗಳನ್ನು ಪ್ರತಿಪಾದಿಸಿದ್ದಾನೆ. ತನ್ನೆಲ್ಲ ಕೃತಿಗಳನ್ನೂ ಒಡೆಯರ ಅಪೇಕ್ಷೆಯ ಮೇರೆಗೆ ರಚಿಸಿರುವುದಾಗಿ ಈತನು ಹೇಳಿ ಕೊಂಡಿದ್ದಾನೆ. ಅನೇಕ ಗ್ರಂಥಗಳಲ್ಲಿ ಒಡೆಯರ ಕುಲಚರಿತ್ರೆ ಹಾಗೂ ದಿಗ್ವಿಜಯ ಗಳಿಗೆ ಸಂಬಂಧಪಟ್ಟ ಹಲವಾರು ವಿಷಯಗಳು ನಿರೂಪಿತವಾಗಿವೆ.

'ಅಕ್ಷರ ಮಾಲಿಕಾ ಸಾಂಗತ್ಯ'ದಲ್ಲಿ 103 ಪದ್ಯಗಳಿವೆ. ಇದು ಶ್ರೀರಂಗನಾಥ

ರನ್ನು ಕುರಿತಾದ ಸ್ತೋತ್ರ. ಕಕಾರದಿಂದ ಪ್ರಾರಂಭವಾಗಿ ಕ್ಷಕಾರದವರೆಗೆ ಅಕ್ಷರ ಮೊದಲಾಗಿಯೂ ಗುಣಿತದಿಂದಲೂ ಕಲ್ಪಿಸಿ, ಸ್ತುತಿ ರೂಪದ ಕಾವ್ಯ'ವಿದು. 'ನಾಮ ಸಂಕೀರ್ತನೆ ಪಕ್ಷರವಾದಿಯಾದೀ ಮಹಾಗುಣಿತದಿಂದೊರೆದ ಮನೋಹರ ಸಾಂಗತ್ಯ'.

'ರಂಗಧಾಮ ಪುರುಷ ವಿರಹದ ಸಾಂಗತ್ಯ' ಎನ್ನುವುದರಲ್ಲಿ 102 ಪದ್ಯಗಳಿವೆ. ರಂಗನಾಥ ದೇವರ ವಿರಹ ಸೂಚಕವಾದ ವ್ಯಂಗ್ಯೋಕ್ತಿಯಿಂದ ಕೂಡಿದ ರಚನೆ ಇದು.

'ನೀತಿ ಶತಕದ ಸಾಂಗತ್ಯ'ವು 101 ಪದ್ಯಗಳಲ್ಲಿ ರಂಗನಾಥ ದೇವರ ಸ್ತುತಿ ರೂಪದಲ್ಲಿರುವ ನೀತಿಯನ್ನು ಬೋಧಿಸುವ ಕೃತಿ.

'ಪಶ್ಚಿಮ ರಂಗ ಸಾಂಗತ್ಯ', 'ರಂಗಧಾಮ ಸ್ತುತಿ ಸಾಂಗತ್ಯ', 'ಶೃಂಗಾರ ಶತಕ ಸಾಂಗತ್ಯ', 'ರಂಗಧಾಮ ನೀತಿ ಸಾಂಗತ್ಯ', 'ಚಿತ್ರ ಸಾಂಗತ್ಯ'–ಈ ಕೃತಿಗಳು ಶ್ರೀರಂಗಪಟ್ಟಣದ ಶ್ರೀರಂಗನಾಥನ ಸ್ತುತಿರೂಪವಾದ ಸ್ತೋತ್ರಗಳು. ಇವು ತಿಳಿಗನ್ನಡ ಶೈಲಿಯಲ್ಲಿದ್ದು, ಕನ್ನಡದ ಶ್ರೀವೈಷ್ಣವ ಸಂಪ್ರದಾಯದ ಭಕ್ತಿ ಸಾಹಿತ್ಯಕ್ಕೆ ಕವಿ ನೀಡಿರುವ ಮಹತ್ವದ ಕೃತಿಗಳಾಗಿವೆ.

ಕ್ರಿ.ಶ. 1676–1677ರ ನಡುವೆ ಚಿಕ್ಕುಪಾಧ್ಯಾಯನು ಎರಡು ಸಂಸ್ಕೃತ ಗ್ರಂಥಗಳನ್ನು ಅನುವಾದಿಸಿದನು. ಕಾಮಂದಕ ನೀತಿ ಹಾಗೂ ಶುಕಸಪ್ತತಿಗಳನ್ನು ಇದೇ ಹೆಸರಿನಲ್ಲಿ ಅನುವಾದ ಮಾಡಿರುವನು. 'ಕಾಮಂದಕ ನೀತಿ'ಯು ಸಂಸ್ಕೃತಕ್ಕೆ ಕನ್ನಡ ಟೀಕೆಯಾಗಿದ್ದು, ಇದಕ್ಕೆ 'ಉಪಾಧ್ಯಾಯ ನಿರಪೇಕ್ಷಾ' ಎಂಬ ಹೆಸರೂ ಇದೆ. 'ಶುಕಸಪ್ತತಿ'ಯು ಗದ್ಯರೂಪದಲ್ಲಿದ್ದು 7000 ಗ್ರಂಥ ಸಂಖ್ಯೆಯನ್ನು ಹೊಂದಿದೆ.

'ದಿವ್ಯ ಸೂರಿ ಚರಿತ್ರೆ' ಎನ್ನುವ ಚಂಪೂ ಕಾವ್ಯವನ್ನು ಮೇ 18, 1678 ರಲ್ಲಿ ಚಿಕ್ಕುಪಾಧ್ಯಾಯನು ಪೂರ್ಣಗೊಳಿಸಿದನು. ಇದನ್ನು ಕವಿಯು ಮಹಾಪ್ರಬಂಧವೆಂದು ಕರೆದಿದ್ದಾನೆ. ಗರುಡವಾಹನ ಪಂಡಿತನ 'ದಿವ್ಯ ಸೂರಿ ಚರಿತ್ರೆ'ಯು ಇದಕ್ಕೆ ಆಧಾರ. ಇದರಲ್ಲಿ ಹನ್ನೆರಡು ಆಳ್ವಾರರುಗಳ ಚರಿತ್ರೆಯೇ ಅಲ್ಲದೆ, ಒಡೆಯರ ವಂಶ ಚರಿತ್ರೆ, ಅವರ ಆಸ್ಥಾನದ ವಿವರ, ಅವರ ಧರ್ಮ ನಿಷ್ಠೆಗಳ ವಿವರಗಳನ್ನು ಕವಿ ಸೇರಿಸಿದ್ದಾನೆ. ಇದರಲ್ಲಿ ಶ್ರೀವೈಷ್ಣವ ತತ್ತ್ವ ಸಂಪ್ರದಾಯಗಳನ್ನು ಭಕ್ತಿಪ್ರಧಾನವಾಗಿ ಮಾಡಿ ಜನಸಾಮಾನ್ಯರ ತಿಳುವಳಿಕೆಗಾಗಿ ಕವಿ

ವಿವರಿಸಿದ್ದಾನೆ. 'ಕನ್ನಡ ಭಾಷಾ ಕ್ರಮದಿ ನೊಸೆದು' ಲಲಿತವಾದ ಮೃದು ಬಂಧದಲ್ಲಿ ಕವಿ ಈ ಕೃತಿಯನ್ನು ರಚಿಸಿದ್ದಾನೆ. ಒಡೆಯರ ಇಷ್ಟಾರ್ಥಪೂರ್ತಿಗಾಗಿ ಬರೆದ ಕೃತಿ ಇದು.

ಚಿಕ್ಕುಪಾಧ್ಯಾಯನ 'ಸಾತ್ವಿಕ ಬ್ರಹ್ಮವಿದ್ಯಾ ವಿಲಾಸ'ವೂ ಕೂಡ ಹಿಂದಿನ ಕೃತಿಯಂತೆ ವಿಶಿಷ್ಟಾದ್ವೈತ ಪ್ರತಿಪಾದಕವಾದ ಒಂದು ಪ್ರೌಢ ಗ್ರಂಥ. ಇದರಲ್ಲಿ ಒಂಭತ್ತು ಆಶ್ವಾಸಗಳಿವೆ. ಗ್ರಂಥ ಶೈಲಿಯು ಹಿಂದಿನದಕ್ಕಿಂತಲೂ ಪ್ರೌಢವಾಗಿದೆ. 'ಗುರು ಶಿಷ್ಯೋಕ್ತಿ ಪ್ರತ್ಯುತ್ತರ ಪದ್ಧತಿ ವಿಡಿದು ವೈಷ್ಣವಾಚಾರ್ಯರ ಆಮ್ನಾಯ ಸ್ಮೃತಿ ಶಾಸ್ತ್ರ ಪುರಾಣ ವಾಕ್ ಪ್ರೌಢಿಗಳಿಂ ಸಾತ್ವಿಕ ವಿದ್ಯಾ ವಿಲಾಸವೆಂದು ಸಕಲ ವೇದಾರ್ಥ ಸಾರಮಂ ಸಂಸ್ಕೃತದೊಳ್ ಸಂಗ್ರಹಿಸಿರ್ಪರ್' ಎಂದು ಕವಿಯು ಕೃತಿಯನ್ನು ಕನ್ನಡದಲ್ಲಿ ಬರೆದಿರುವುದಕ್ಕೆ ಕಾರಣ ನೀಡುತ್ತಾನೆ.

ಕ್ರಿ.ಶ. 1681ರಲ್ಲಿ ಬರೆದ 'ಕಮಲಾಚಲ ಮಾಹಾತ್ಮ್ಯೆ' ಗ್ರಂಥವು 16 ಆಶ್ವಾಸ, 4031 ಕಂದ ವೃತ್ತಗಳಿಂದ ಕೂಡಿದೆ. ಭವಿಷ್ಯೋತ್ತರ ಪುರಾಣದ ತೀರ್ಥ ಕಾಂಡದಲ್ಲಿ ವರ್ಣಿತವಾಗಿರುವ 'ಕಮಲಾಚಲ' (ಹಿಮವತ್ ಗೋಪಾಲ ಸ್ವಾಮಿ ಬೆಟ್ಟ)ದ ಮಾಹಾತ್ಮ್ಯೆವನ್ನು ಈ ಕೃತಿ ವರ್ಣಿಸುತ್ತದೆ.

ಕ್ರಿ.ಶ. 1682ರಲ್ಲಿ 'ರುಕ್ಮಾಂಗದ ಚರಿತೆ' ಎನ್ನುವ ಚಂಪೂ ಕೃತಿಯು ರಚನೆಯಾಯಿತು. ನಾರದೀಯ ಪುರಾಣದಲ್ಲಿನ ರುಕ್ಮಾಂಗದ ಚರಿತ್ರೆಯು ಮೇಲೆ ಇದು ಆಧಾರಪಟ್ಟಿದೆ. ಇದರಲ್ಲಿ 10 ಆಶ್ವಾಸಗಳು, 2286 ಪದ್ಯಗಳಿದ್ದು ಚಂಪೂ ಗ್ರಂಥವಾಗಿದೆ. ಏಕಾದಶೀ ವ್ರತದ ಕಥೆಯನ್ನು ಇದು ವಿವರಿಸುತ್ತದೆ.

'ವಿಷ್ಣು ಪುರಾಣ'ವೆಂಬ ಎರಡು ಹೆಸರಿನ ಗ್ರಂಥಗಳನ್ನು ಈ ಕವಿ ರಚಿಸಿದ್ದಾನೆ. ಅವುಗಳಲ್ಲಿ ಒಂದು ಚಂಪೂ, ಮತ್ತೊಂದು ಗದ್ಯಗ್ರಂಥ. ಎರಡರ ವಸ್ತುವೂ ಒಂದೇರೇ. ಚಂಪೂ ಕೃತಿಯಲ್ಲಿ ಮಾತ್ರ 32 ಆಶ್ವಾಸಗಳಿದ್ದು, 6255 ಪದ್ಯಗಳಿವೆ.

ಮೇಲೆ ತಿಳಿಸಿದ ಮಾಹಾತ್ಮ್ಯೆ ಗ್ರಂಥಗಳು ಕಂಚಿ, ಶ್ರೀರಂಗಪಟ್ಟಣ, ಶ್ರೀರಂಗಂ ಮುಂತಾದ ಶ್ರೀವೈಷ್ಣವ ಪುಣ್ಯಕ್ಷೇತ್ರಗಳ ಬಗೆಗೆ ಪುರಾಣಗಳಲ್ಲಿರುವ ಕಥೆಗಳನ್ನು ಗದ್ಯ, ಪದ್ಯ ಮಿಶ್ರಣದಲ್ಲಿ ನಿರೂಪಿಸುತ್ತವೆ. ಕವಿಯು ಪ್ರತಿಯೊಂದು ಮಾಹಾತ್ಮ್ಯೆವನ್ನೂ ಶ್ರೀ ರಾಮಾನುಜ, ಆಳ್ವಾರರುಗಳು, ಶ್ರೀವೈಷ್ಣವ ದೇವತೆ

ಗಳು, ಆಯಾ ಕ್ಷೇತ್ರದ ಅಧಿಷ್ಠಾನ ದೇವತೆಯ ಸ್ತುತಿಯೊಡನೆ ಪ್ರಾರಂಭಿಸು ತ್ತಾನೆ. ತದನಂತರದಲ್ಲಿ ಕನ್ನಡ ನಾಡಿನ ವರ್ಣನೆ, ಚಿಕ್ಕದೇವರಾಜ ಒಡೆಯರ ವೀರಕಾರ್ಯಗಳನ್ನು ಬಣ್ಣಿಸುತ್ತಾನೆ. ಒಡೆಯರ ಶೀಲ ಶುದ್ಧಿ, ಉತ್ತಮ ವ್ಯಕ್ತಿತ್ವ, ಧರ್ಮಿಷ್ಟ ಜೀವನ, ಅವರ ಆಸ್ಥಾನದ ವೈಭವಗಳು-ಇತ್ಯಾದಿಗಳ ವರ್ಣನೆಗಳನ್ನು ಕವಿಯು ಯಥೇಚ್ಛವಾಗಿ ನೀಡುತ್ತಾನೆ.

'ಯಾದವಗಿರಿ ಮಾಹಾತ್ಮ್ಯ'ವು ಮೇಲುಕೋಟೆಯ ಮಹಿಮೆಯನ್ನು ಕುರಿತಾದ ಸಾಂಗತ್ಯ ಗ್ರಂಥ. ನಾರದ ಪುರಾಣದಲ್ಲಿ ವಿವರಿಸಿರುವ ಯಾದವಗಿರಿಯ ಮಹಿಮೆಯನ್ನು ಇಲ್ಲಿ ವಿಸ್ತರಿಸಿ ಹೇಳಿದೆ. ಅಂತೆಯೇ ಮೇಲುಕೋಟೆಯ ಮಹಿಮೆಯನ್ನು ವರ್ಣಿಸುವ ಗ್ರಂಥವಿದಾಗಿದೆ. ಇದು ಗದ್ಯದಲ್ಲಿದೆ.

'ವೆಂಕಟಗಿರಿ ಮಾಹಾತ್ಮ್ಯ'ವು 10 ಆಶ್ವಾಸನೆಗಳಿಂದ ಕೂಡಿದ ತಿರುಪತಿಯ ಮಹಿಮೆಯನ್ನು ವಿವರಿಸುವ ಒಂದು ಗದ್ಯಗ್ರಂಥ. ಇದು ಬ್ರಹ್ಮಾಂಡ ಪುರಾಣದ ಪುಣ್ಯಕ್ಷೇತ್ರ ಮಾಹಾತ್ಮ್ಯ ಖಂಡದಲ್ಲಿ ನಾರದನು ಭೃಗು ಮಹರ್ಷಿಗೆ ನೀಡಿದ ವಿವರಣೆಯ ಕನ್ನಡ ರೂಪ.

'ಶೇಷ ಧರ್ಮ'ವು ಹರಿವಂಶದ ಅಶ್ವಮೇಧಿಕ ಪರ್ವದಲ್ಲಿ ನಿರೂಪಿಸಲ್ಪಟ್ಟಿ ರುವ ಶೇಷಧರ್ಮವನ್ನು ವಿವರಿಸುವ ಗದ್ಯಗ್ರಂಥ. ಇದನ್ನು ಒಡೆಯರ ಇಷ್ಟಪೂರ್ತಿ ಗಾಗಿ ಕನ್ನಡದಲ್ಲಿ ಬರೆದೆನೆಂದು ಕವಿ ತಿಳಿಸುತ್ತಾನೆ.

'ತಿರುವಾಯ್ಮೊಳಿ ಟೀಕು', 'ಪದ್ಮಪುರಾಣ ಟೀಕು', 'ಅಪುರು ಶತಕ', 'ವೈದ್ಯಾಮೃತ ಟೀಕು', 'ಅರ್ಥ ಪಂಚಕ' ಮತ್ತು 'ತತ್ತ್ವತ್ರಯ'-ಈ ಗ್ರಂಥ ಗಳು. ಶ್ರೀವೈಷ್ಣವ ಸಾಹಿತ್ಯಕ್ಕೂ, ಕನ್ನಡದ ಭಕ್ತಿ ಸಾಹಿತ್ಯಕ್ಕೂ ಚಿಕ್ಕುಪಾ ಧ್ಯಾಯನು ನೀಡಿದ ಕಾಣಿಕೆಗಳಾಗಿವೆ. ನಮ್ಮಾಳ್ವಾರರ 'ತಿರುವಾಯ್ಮೊಳಿ'ಯ ಕನ್ನಡ ವ್ಯಾಖ್ಯಾನವೇ 'ತಿರುವಾಯ್ಮೊಳಿ ಟೀಕು'.

ಹಿಂದೆ, ಜೈನ ಕವಿಗಳು ಚಂಪೂ ಕಾವ್ಯಗಳಿಗೆ ಜೈನಮತ ಮತ್ತು ಸಂಪ್ರ ದಾಯಗಳನ್ನು ಜೀವಾಳ ಮಾಡಿಕೊಂಡಿದ್ದರು. ಅದು ಈಗ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ-ಇತ್ಯಾದಿಯವರುಗಳಿಂದ ವಿಶಿಷ್ಟಾದ್ವೈತ ಮತ ಮತ್ತು ಶ್ರೀವೈಷ್ಣವ ಸಿದ್ಧಾಂತ ಹಾಗೂ ಸಂಪ್ರದಾಯಗಳಿಗೆ ಪ್ರಾಧಾನ್ಯತೆ ನೀಡಿದರು. ಕಾಲದ ಪ್ರವಾಹದಲ್ಲಿ ರಾಜಾಶ್ರಯವನ್ನು ಬಯಸಿದ ಕವಿಗಳೆಲ್ಲರೂ ಶ್ರೀವೈಷ್ಣವ ಸಾಹಿತ್ಯ ನಿರ್ಮಾಣ ದಲ್ಲಿ ತೊಡಗಿದರು.

ಈ ಸಮಯದ ಇನ್ನೊಬ್ಬ ಆಸ್ಥಾನ ಕವಿಯಾದ ತಿಮ್ಮ ಕವಿಯು (ಕ್ರಿ.ಶ. 1677) ಚಿಕ್ಕುಪಾಧ್ಯಾಯನ ಶಿಷ್ಯನು. ಇವನು ಒಡೆಯರ ಇಷ್ಟಪೂರ್ತಿಗಾಗಿ 'ಯಾದವಗಿರಿ ಮಾಹಾತ್ಮ್ಯ', 'ವೆಂಕಟಗಿರಿ ಮಾಹಾತ್ಮ್ಯ', 'ಪಶ್ಚಿಮರಂಗ ಮಾಹಾತ್ಮ್ಯ' ಎನ್ನುವ ಮೂರು ಚಂಪೂ ಗ್ರಂಥಗಳನ್ನು ರಚಿಸಿದನು. ಈ 'ಮಾಹಾತ್ಮ್ಯ'ಗಳು ಮೇಲುಕೋಟೆ, ತಿರುಪತಿ, ಶ್ರೀರಂಗಪಟ್ಟಣ ಇತ್ಯಾದಿ ಪುಣ್ಯಕ್ಷೇತ್ರಗಳ ಮಹಿಮೆಯನ್ನು ವಿವರಿಸುತ್ತವೆ.

'ಯಾದವಗಿರಿ ಮಾಹಾತ್ಮ್ಯ'ವು ಮೇಲುಕೋಟೆಯ ಮಾಹಾತ್ಮ್ಯ ವರ್ಣನೆಯನ್ನುಳ್ಳ ಹದಿನಾರು ಆಶ್ವಾಸಗಳ ಕಾವ್ಯವಾಗಿದ್ದು, ಮೊದಲ ನಾಲ್ಕು ಆಶ್ವಾಸಗಳಲ್ಲಿ ಚಿಕ್ಕದೇವರಾಜ ಒಡೆಯರ ವಂಶಾವಳಿಯೂ, ದಿಗ್ವಿಜಯಗಳೂ ವರ್ಣಿತವಾಗಿವೆ. 'ಪಶ್ಚಿಮರಂಗ ಮಾಹಾತ್ಮ್ಯ'ವು ಐದು ಆಶ್ವಾಸಗಳ ಕಾವ್ಯವಾಗಿದ್ದು, ಶಿವನು ನಾರದನಿಗೆ ತಿಳಿಸಿದ ಗೌತಮ ಕ್ಷೇತ್ರ (ಶ್ರೀರಂಗಪಟ್ಟಣದ)ದ ಮಾಹಾತ್ಮ್ಯವನ್ನು ಬಣ್ಣಿಸಲಾಗಿದೆ. 'ವೆಂಕಟಗಿರಿ ಮಾಹಾತ್ಮ್ಯ'ವು ಹತ್ತು ಆಶ್ವಾಸಗಳ ಕಾವ್ಯವಾಗಿದ್ದು, ಬ್ರಹ್ಮಾಂಡ ಪುರಾಣದಲ್ಲಿ ಭೃಗುನಾರದ ಸಂವಾದ ರೂಪವಾಗಿ ನಿರೂಪಿಸಿರುವ ತಿರುಪತಿಯ ಮಾಹಾತ್ಮ್ಯವಾಗಿದೆ.

ಈ ಕಾಲದ ಇನ್ನೊಬ್ಬ ರಾಜಪೋಷಿತ ಕವಿ ಮಲ್ಲಿಕಾರ್ಜುನ (ಕ್ರಿ.ಶ. 1678) ನೆಂಬ ಬ್ರಾಹ್ಮಣ ಕವಿ. ಇವನೂ ಚಿಕ್ಕುಪಾಧ್ಯಾಯನ ಶಿಷ್ಯನೇ. ಇವನು ಬರೆದ ಹನ್ನೆರಡು ಆಶ್ವಾಸಗಳ ಚಂಪೂ ಕಾವ್ಯದಲ್ಲಿ ಆ ಸಮಯದ ಇತರೇ ಕಾವ್ಯಗಳಂತೆ ಕನ್ನಡ ನಾಡಿನ ವರ್ಣನೆ, ಒಡೆಯರ ವಂಶಾವಳಿಯ ನಿರೂಪಣೆ, ಶ್ರೀವೈಷ್ಣವ ಧರ್ಮಕೇಂದ್ರವಾದ ಶ್ರೀರಂಗದ ಮಹಿಮೆಗಳ ವರ್ಣನೆ ಇದೆ. ಇದನ್ನು ಒಡೆಯರ ಆಜ್ಞೆಯಂತೆ ಚಿಕ್ಕುಪಾಧ್ಯಾಯನ ಪ್ರೇರಣೆಯಿಂದ ಬರೆದುದಾಗಿ ಕವಿ ಹೇಳಿಕೊಂಡಿದ್ದಾನೆ. ತನ್ನ ಕಾವ್ಯ 'ಮಂಜುಳ ಕಾವ್ಯ'ವೆಂದು ಹೇಳಿಕೊಂಡಿರುವುದು ಸತ್ಯ. ಕವಿಯ ಬಂಧಲಲಿತವಾಗಿದೆ.

ಚಿಕ್ಕುಪಾಧ್ಯಾಯನ ಮತ್ತೊಬ್ಬ ಶಿಷ್ಯನಾದ ಮಲ್ಲರಸ (ಕ್ರಿ.ಶ. 1680) ನೆಂಬ ಬ್ರಾಹ್ಮಣ ಕವಿ ತನ್ನ ಗುರುವಿನ ಅಪ್ಪಣೆಯಂತೆ ಏಳು ಆಶ್ವಾಸಗಳ 'ದಶಾವತಾರ ಚರಿತ್ರೆ' ಎನ್ನುವ ಚಂಪೂ ಕಾವ್ಯವನ್ನು ರಚಿಸಿದ್ದಾನೆ. ಇದರಲ್ಲಿ ವಿಷ್ಣುವಿನ ಹತ್ತು ಅವತಾರಗಳ ವಿವರವಿದ್ದು, ನಿಸರ್ಗ ವರ್ಣನೆ ಹೃದಯಂಗಮವಾಗಿದೆ. ಕೃತಿಯ ಬಂಧ ಲಲಿತವಾಗಿದೆ.

ಈಗಾಗಲೇ ತಿಳಿಸಿರುವಂತೆ ಸಿಂಗರಾರ್ಯನು (ಕ್ರಿ.ಶ. 1680) ಪ್ರಸಿದ್ಧ ಶ್ರೀವೈಷ್ಣವ ಕವಿಯಾದರೂ ಕನ್ನಡದ ಪ್ರಪ್ರಥಮ ನಾಟಕ 'ಮಿತ್ರವಿಂದಾ ಗೋವಿಂದಾ'ವನ್ನು ನೀಡಿರುವವನು. ದೊರೆತಿರುವವುಗಳಲ್ಲಿ ಅತ್ಯಂತ ಪ್ರಾಚೀನ ನಾಟಕ. ಈ ನಾಟಕದ ನಾಯಕ ಶ್ರೀಕೃಷ್ಣ. ಮೂಲ 'ರತ್ನಾವಳಿ'ಯನ್ನು ಅನುವಾದಿಸಿದ್ದರೂ, ಪಾತ್ರಗಳು ಹಾಗೂ ಕೆಲವೊಂದು ಸನ್ನಿವೇಶಗಳನ್ನು ಬದಲಾಯಿಸಿದ್ದಾನೆ. ಇದು ಕವಿಯ ಶ್ರೀವೈಷ್ಣವ ಮತಾಭಿಮಾನದ ದ್ಯೋತಕ ವಾಗಿದೆ. ಶ್ರೀರಂಗಪಟ್ಟಣದ ರಂಗನಾಥ ದೇವಾಲಯದಲ್ಲಿ ನಡೆಯುವ ವಸಂ ತೋತ್ಸವ ಸಂದರ್ಭದಲ್ಲಿ ಒಡೆಯರ ಸಮ್ಮುಖದಲ್ಲಿ ಇದನ್ನು ಅಭಿನಯಿಸಲಾಗು ತ್ತಿತ್ತು. ಕ್ರಿ.ಶ. 1700–1704ರ ಅವಧಿಯಲ್ಲಿ ಈ ನಾಟಕ ರಚನೆಯಾಗಿರ ಬೇಕು.

ಕನ್ನಡ ಸಾಹಿತ್ಯದ ಮೊಟ್ಟಮೊದಲ ಮೂವರು ಕವಯಿತ್ರಿಯರೂ ಶ್ರೀವೈಷ್ಣವರಾಗಿರುವುದೊಂದು ವಿಶೇಷ. ವಚನಗಾರ್ತಿಯರ ನಂತರದಲ್ಲಿ ಬಂದಿ ರುವ ಈ ಕವಯಿತ್ರಿಯರು ತಮ್ಮ ಕಾವ್ಯಗಳಲ್ಲಿ ಅದ್ಭುತವಾದ ಕವಿತಾ ಸಾಮರ್ಥ್ಯವನ್ನು ತೋರಿದ್ದಾರೆ. ಸಂಚಿ ಹೊನ್ನಮ್ಮಳು ತಮ್ಮ ಗುರುವಾದ ಉಭಯ ವೇದಾಂತಾಚಾರ್ಯ ಅಳಸಿಂಗಾರ್ಯನ ಅಪ್ಪಣೆಯಂತೆ ತಾನು 'ಹದಿಬದೆಯ ಧರ್ಮ' ಎನ್ನುವ ಶ್ರೀವೈಷ್ಣವ ಧರ್ಮಾನುಸಾರ ವಿವರಿಸಿರುವ ಪತಿವ್ರತಾ ಧರ್ಮದ ಕೃತಿಯನ್ನು ರಚಿಸಿದ್ದಾಳೆ. ಸಾಂಗತ್ಯರೂಪವಾದ ಈ ಕೃತಿ ಯಲ್ಲಿ 9 ಸಂಧಿ, 468 ಪದ್ಯಗಳಿವೆ. ಮನುಧರ್ಮ ಶಾಸ್ತ್ರಾನುಸಾರ ಇದನ್ನು ರಚಿಸಲಾಗಿದೆ. 'ಸರಸ ಸಾಹಿತ್ಯ ವರದೇವತೆ, ಕಾವ್ಯಾಲಂಕಾರ ನಾಟಕಗಳ ಸವಣಿಗೆಯ ಬಲ್ಲವಳು' ಎಂದು ಸ್ವತಃ ಗುರುಗಳೇ ಈಕೆಯ ಬಗ್ಗೆ ಹೇಳಿರುವುದ ರಲ್ಲಿ ಅತ್ಯುಕ್ತಿಯಿಲ್ಲವೆಂದು ಈ ಕೃತಿಯನ್ನು ಓದಿದವರೆಲ್ಲ ಅರ್ಥಮಾಡಿಕೊಳ್ಳ ಬಹುದು. ಒಡೆಯರ ಪಟ್ಟದರಸಿ ಯಳಂದೂರು ದೇವಾಜಮ್ಮಣ್ಣೀಗೆ ಈಕೆ ಅಚ್ಚುಮೆಚ್ಚು. ಈ ಕೃತಿಯನ್ನು ಓದಲು ಸುಲಭವಾದರೂ, ಮರೆಯಲು ಸುಲಭವಲ್ಲ. ಪ್ರತಿಯೊಬ್ಬ ಗೃಹಿಣಿಯ ಕೈಪಿಡಿ ಇದು.

ಒಡೆಯರ ಆಶ್ರಯದಲ್ಲಿದ್ದ ಮತ್ತೊಬ್ಬ ಕವಯಿತ್ರಿಯೆಂದರೆ ಶೃಂಗಾರಮ್ಮ. ಈಕೆಯು 'ಪದ್ಮಿನೀ ಕಲ್ಯಾಣ'ವೆಂಬ ಕೃತಿಯಲ್ಲಿ ತಿರುಪತಿ ಶ್ರೀನಿವಾಸದೇವರಿಗೂ, ಪದ್ಮಿನಿ (ಪದ್ಮಾವತಿ)ಗೂ ನಡೆದ ವಿವಾಹದ ವರ್ಣನೆ ಇದೆ. ಸಾಂಗತ್ಯದ ಈ

ಕೃತಿಯು 189 ಪದ್ಯಗಳನ್ನು ಹೊಂದಿದೆ.

ಮತ್ತೊಬ್ಬ ಕವಯಿತ್ರಿ ಚೆಲುವಾಂಬೆ (ಕ್ರಿ.ಶ. 1725)ಯು ಚಿಕ್ಕದೇವ ರಾಜ ಒಡೆಯರ ನಂತರ ಪಟ್ಟಕ್ಕೆ ಬಂದ ದೊಡ್ಡ ಕೃಷ್ಣರಾಜ ಒಡೆಯರ (1723-1731) ಪಟ್ಟ ಮಹಿಷಿಯಾಗಿದ್ದಳು. ಒಡೆಯರು ನಿಸ್ಸೀಮ ಶ್ರೀವೈಷ್ಣವ ದೈವಭಕ್ತರಾದರೂ ಆಡಳಿತದಲ್ಲಿ ಬಿಗಿ ಇಲ್ಲದ ಕಾರಣ, ಮೈಸೂರಿನ ಕೀರ್ತಿ ಇಳಿಮುಖವಾಗತೊಡಗಿತು. ಇವರು ತಮ್ಮ ತಂದೆ ಚಿಕ್ಕದೇವರಾಜ ಒಡೆಯರಂತೆ ದಕ್ಷ ಆಡಳಿತಗಾರರಾಗಿರಲಿಲ್ಲ. ಆದರೆ ಅಪ್ಪಟ ಶ್ರೀವೈಷ್ಣವರಾಗಿ ದ್ದರು. ಕಂಚಿಯ ವರದರಾಜ, ಮೇಲುಕೋಟೆಯ ಚೆಲುವನಾರಾಯಣನ ದೇವಾಲಯಗಳಿಗೆ ದತ್ತಿ ನೀಡಿದ್ದರು. ಕಳಲೆಯಲ್ಲಿ ಒಂದು ಶ್ರೀವೈಷ್ಣವ ಅಗ್ರಹಾರ ವನ್ನು ನಿರ್ಮಿಸಿದರು. ಬೆಂಗಳೂರಿನ ಕೋಟೆಯಲ್ಲಿನ ವೆಂಕಟರಮಣಸ್ವಾಮಿ ದೇವಾಲಯವು ಇವರ ತಂದೆಯವರು ಕಟ್ಟಿಸಿದ್ದರೂ ಅದರ ಸಂಪೂರ್ಣ ಜವಾ ಬ್ದಾರಿ ಇವರದ್ದೇ ಆಗಿತ್ತು.

ಇವರ ಪತ್ನಿ ಚೆಲುವಾಂಬೆಯು ಕಳಲೆಯ ಕಾಂತರಾಜನ ಮಗಳು. ಈಕೆ 'ವರನಂದೀ ಕಲ್ಯಾಣ', 'ವೇಂಕಟಾಚಲ ಮಾಹಾತ್ಮ್ಯ ಲಾಲಿಪದ', 'ಅಲಮೇಲು ಮಂಗೆ ಲಾಲಿಪದ', ತುಲಾಕಾವೇರಿ ಮಾಹಾತ್ಮ್ಯ ಟೀಕೆ' ಎಂಬ ಗ್ರಂಥಗಳನ್ನು ತನ್ನ ಗಂಡನ ಅಭೀಷ್ಟ ತೃಪ್ತಿಗಾಗಿ ಬರೆದೆನೆಂದು ಹೇಳಿಕೊಂಡಿದ್ದಾಳೆ.

'ವರನಂದೀ ಕಲ್ಯಾಣ'ವು ಸಾಂಗತ್ಯದಲ್ಲಿದ್ದು ಏಳು ಸಂಧಿ, 881 ಪದ್ಯ ಗಳನ್ನು ಹೊಂದಿದೆ. ದೆಹಲಿಯ ಬಾದಷಹನ ಮಗಳಾದ ವರನಂದಿಗೂ, ಮೇಲುಕೋಟೆಯ ಚೆಲುವರಾಯಸ್ವಾಮಿಗೂ ನಡೆದ ವಿವಾಹವು ಈ ಕಾವ್ಯದ ವಸ್ತು.

'ವೆಂಕಟಾಚಲ ಮಾಹಾತ್ಮ್ಯ ಲಾಲಿಪದ'ವು 'ವೇಂಕಟಾಚಲ ಮಾಹಾತ್ಮ್ಯೆ' ವನ್ನು ನಿರೂಪಿಸುವ 203 ಪದ್ಯಗಳಿಂದ ಕೂಡಿದೆ.

'ಅಲಮೇಲು ಮಂಗೆ ಲಾಲಿಪದ'ವು ವೇಂಕಟೇಶ್ವರ ಸ್ವಾಮಿಯ ಪತ್ನಿ ಯಾದ ಅಲಮೇಲು ಮಂಗೆ ಎನ್ನುವ ಲಕ್ಷ್ಮೀದೇವಿಯ ಸ್ತುತಿರೂಪದ 35 ಲಾಲಿಪದಗಳಿಂದ ಕೂಡಿದೆ.

ನಾಲ್ಕನೆಯದು ತುಲಾಕಾವೇರಿಯ ಆಗ್ನೇಯ ಪುರಾಣದ ಮೂಲ ಸಂಸ್ಕೃತದ ಕನ್ನಡ ಅನುವಾದವಾಗಿದೆ. ಗದ್ಯರೂಪದ ಈ ವ್ಯಾಖ್ಯಾನದಲ್ಲಿ 30

ಅಧ್ಯಾಯಗಳಿದ್ದು, ಇದನ್ನು 'ಚೆಲುವಾಂಬಾ ವಾಣೀವಿಲಾಸ' ಎನ್ನುವ ಹೆಸರಿನಿಂದ ಕರೆಯಲಾಗುತ್ತದೆ.

ಇಮ್ಮಡಿ ಕೃಷ್ಣರಾಜ ಒಡೆಯರ (ಕ್ರಿ.ಶ. 1734-1766) ಮಾವನಾದ ಕತ್ತಿ ಗೋಪಾಲರಾಜನು ಒಂಭತ್ತು ಅಧ್ಯಾಯಗಳ 'ಕಮಲಾಚಲ ಮಾಹಾತ್ಮ್ಯೆ' ಎನ್ನುವ ಗದ್ಯಗ್ರಂಥವನ್ನು ರಚಿಸಿದ್ದಾನೆ. 'ಗೋಪಾಲ ಭೂಪಾಲೋಕ್ತಿ ವಿಲಾಸ' ಎಂದು ಕರೆಯಲ್ಪಡುವ ಈ ಕೃತಿಯು ಭವಿಷ್ಯೋತ್ತರ ಪುರಾಣದಲ್ಲಿರುವ ಕಮಲಾಚಲ (ದಕ್ಷಿಣ ಗೋವರ್ಧನಾಚಲ) ಎಂದು ಕರೆಯಲ್ಪಡುವ ಹಿಮವತ್ ಗೋಪಾಲ ಸ್ವಾಮಿ ಬೆಟ್ಟದ ಮಾಹಾತ್ಮ್ಯವನ್ನು ವರ್ಣಿಸುತ್ತದೆ.

ಇದೇ ಕಾಲದಲ್ಲಿ ತಿಮ್ಮಾಮಾತ್ಯನೆಂಬ ಶ್ರೀವೈಷ್ಣವ ಕವಿ ಇದ್ದನು. ಈತನು ಶ್ರೀವೈಷ್ಣವ ತತ್ತ್ವಗಳನ್ನು ಒಳಗೊಂಡಿರುವ 'ಆನಂದ ರಾಮಾಯಣ' ಎಂದು ಕರೆಯಲ್ಪಡುವ 'ರಾಮಾಭ್ಯುದಯ ಕಥಾ ಕುಸುಮ ಮಂಜರಿ' ಎನ್ನುವ 7 ಕಾಂಡ, 78 ಸಂಧಿ, 3446 ಪದ್ಯಗಳಿಂದ ಕೂಡಿದ ಬೃಹದ್ಗ್ರಂಥ ರೂಪದ ಕಾವ್ಯವನ್ನು ರಚಿಸಿದ್ದಾನೆ. ಇತರೇ ರಾಮಾಯಣಗಳ ಕಥಾಸಾರವೆಲ್ಲ ಈ ಕೃತಿಯು ಒಳಗೊಂಡಿದೆ. ಇದರ ಬಾಲಕಾಂಡದಲ್ಲಿ ಮೂಲ ಕಥೆಯಲ್ಲದೆ ವರಾಹ, ನರಸಿಂಹಾವತಾರ, ರಾವಣ ದಿಗ್ವಿಜಯಗಳ ಕಥೆಯೂ ಇದೆ. ಉತ್ತರ ಕಾಂಡದಲ್ಲಿ ಶ್ರೀರಾಮನ ರಾಜ್ಯಭಾರ, ದಿಗ್ವಿಜಯ, ಅಶ್ವಮೇಧ ಮೊದಲಾದ ಕಥೆಗಳನ್ನು ಸೇರಿಸಲಾಗಿದೆ.

ಈ ಕಾಲದಲ್ಲೆ ಹೈದರಾಲಿಯು ಮೈಸೂರಿನ ರಾಜಕೀಯದಲ್ಲಿ ಪ್ರಖ್ಯಾತನಾಗತೊಡಗಿ, ಒಡೆಯರ ಆಧಿಪತ್ಯಕ್ಕೇ ಇತಿಶ್ರೀ ಹಾಡಿದನು.

ಬೆಟ್ಟದ ಚಾಮರಾಜ ಒಡೆಯರ (ಕ್ರಿ.ಶ. 1770-1776) ಉಪಾಧ್ಯಾಯನಾಗಿದ್ದ ಸಿಂಗರಾಚಾರ್ಯನು 'ಶ್ರೀರಂಗ ಮಾಹಾತ್ಮ್ಯೆ' ಎನ್ನುವ ಶ್ರೀರಂಗ ಕ್ಷೇತ್ರದ ಮಾಹಾತ್ಮ್ಯದ ಗದ್ಯಗ್ರಂಥವನ್ನು ಬರೆದಿದ್ದಾನೆ.

ಇಲ್ಲಿಂದ ಮುಂದೆ 19ನೇ ಶತಮಾನದ ಪೂರ್ತಿ ಶ್ರೀವೈಷ್ಣವ ಸಾಹಿತ್ಯಕ್ಕೆ ಯಾವುದೇ ಆಧಾರವೂ ದೊರೆಯಲಿಲ್ಲ. 1799ರ ವರೆಗೆ ಟೀಪೂವಿನ ರಾಜ್ಯಾಡಳಿತವಾಗಿ, ಅದೇ ವರ್ಷ ಆತನ ಮರಣವೂ ಸಂಭವಿಸಿತು. ಇದರಿಂದ ಅದುವರೆವಿಗೂ ಇದ್ದ ಶ್ರೀರಂಗಪಟ್ಟಣದ ಪ್ರಾಮುಖ್ಯತೆ ನಾಶವಾಗಿ ಮೈಸೂರಿಗೆ ರಾಜಧಾನಿಯು ಬದಲಾವಣೆ ಆಯಿತು. ಒಡೆಯರ ಆಧಿಪತ್ಯವು ಸ್ಥಾಪನೆ

ಯಾದರೂ, ರಾಜಕೀಯ ಅಸ್ಥಿರತೆಯಿಂದಾಗಿ, 19ನೇ ಶತಮಾನದಲ್ಲಿ ಅಂತಹ ಹೇಳಿಕೊಳ್ಳುವಂತಹ ಶ್ರೀವೈಷ್ಣವ ಸಾಹಿತ್ಯ ನಿರ್ಮಾಣವಾಗಲಿಲ್ಲ. ಮುಮ್ಮಡಿ ಕೃಷ್ಣರಾಜ ಒಡೆಯರು ಶ್ರೀವೈಷ್ಣವ ಮತಾಭಿಮಾನಿಗಳಾಗಿದ್ದು, ಆ ಮತದ ಕವಿಗಳಿಗೆ ಪ್ರೋತ್ಸಾಹ ನೀಡಿದರೂ ಗಮನಾರ್ಹ ಬದಲಾವಣೆಯಾಗಲಿಲ್ಲ. ಇದರೊಂದಿಗೆ ಮೈಸೂರು ನಗರದಲ್ಲಿ ಸ್ಥಾಪಿತವಾದ ರಾಜ್ಯಭಾರ ಕೇಂದ್ರವು ಎಲ್ಲ ಧರ್ಮಗಳಿಗೂ ಪ್ರೋತ್ಸಾಹ ನೀಡತೊಡಗಿದ್ದರಿಂದಲೂ, ಇತರೇ ಧರ್ಮಗಳಲ್ಲಿ ಪ್ರತಿಭಾನ್ವಿತ ಸಾಹಿತಿಗಳಿದ್ದುದರಿಂದಲೂ ಶ್ರೀವೈಷ್ಣವ ಸಾಹಿತ್ಯವು ಸಂಪೂರ್ಣವಾಗಿ ಅವನತಿಯನ್ನು ಹೊಂದಿತು.

20ನೇ ಶತಮಾನದ ಪ್ರಾರಂಭದಲ್ಲಿ ಮಾತ್ರ ರಾಜರ ಪ್ರೋತ್ಸಾಹವಿಲ್ಲದಿದ್ದರೂ, ವ್ಯಕ್ತಿಗತ ಆಧಾರದ ಮೇಲೆ ಅಲ್ಲೊಬ್ಬ ಇಲ್ಲೊಬ್ಬ ಲೇಖಕರು ಕಾಣಿಸಿಕೊಂಡು, ಶ್ರೀವೈಷ್ಣವ ಸಾಹಿತ್ಯದ ಸೃಷ್ಟಿ ಮಾಡತೊಡಗಿದರು.

ಏನಿದ್ದರೂ 20ನೇ ಶತಮಾನದ ಪೂರ್ವಾರ್ಧದಲ್ಲಿ ಹುಟ್ಟಿಕೊಂಡ ಧಾರ್ಮಿಕ ಜನಜಾಗೃತಿ ಶ್ರೀವೈಷ್ಣವ ಸಾಹಿತ್ಯವನ್ನು ಪ್ರಭಾವಗೊಳಿಸುವ ವಿಫಲ ಯತ್ನವನ್ನು ಮಾಡಿತು.

ನಂತರ ಸ್ವಲ್ಪಮಟ್ಟಿನ ಸಾಹಿತ್ಯ ಸೃಷ್ಟಿಯಾಗತೊಡಗಿ, ಹೊಸ ರೂಪವನ್ನು ಪಡೆಯಲಾರಂಭಿಸಿತು.



# 4. ಆಚಾರ್ಯರು ನಿರೂಪಿಸಿದ ಶ್ರೀವೈಷ್ಣವ ದರ್ಶನ

ಆಳ್ವಾರರುಗಳ ಕಾಲ ಮುಗಿಯುತ್ತಿದ್ದಂತೆಯೇ ಶ್ರೀವೈಷ್ಣವ ಇತಿಹಾಸ ದಲ್ಲಿ ಆಚಾರ್ಯರುಗಳು ಅವತರಿಸಿದ್ದು ಒಂದು ಯೋಗಾಯೋಗವೇ ಸರಿ. ಮಧುರ ಕವಿ ಆಳ್ವಾರರ ಸಮಕಾಲೀನರೆಂದೇ ಪರಿಗಣಿಸಲ್ಪಟ್ಟಿರುವ ನಾಥಮುನಿ ಗಳು ಆಚಾರ್ಯ ಪರಂಪರೆಗೆ ಶುಭ ಪ್ರಾರಂಭ ಮಾಡಿದರು. ಇದು ಮುಂದಿನ ಅಪ್ರತಿಮ, ಪ್ರತಿಭಾವಂತ ಆಚಾರ್ಯರುಗಳ ಅವತಾರಕ್ಕೆ ನಾಂದಿಯಾಯಿತು. ಇವರುಗಳು ಆಳ್ವಾರರು ತಿಳಿಸಿದುದನ್ನು ಚಿಂತನೆ ಮಾಡಿ, ಅವುಗಳಿಗೆ ಪ್ರಾಯೋ ಗಿಕವಾದ ನವ್ಯರೂಪ ಕೊಟ್ಟರು. ಅವರು ಸಿದ್ಧಾಂತ ಗ್ರಂಥಗಳನ್ನು ನೀಡಲಿಲ್ಲ. ಆದರೆ ತಮ್ಮ ಸ್ತೋತ್ರಗಳಲ್ಲಿ ಆ ಸಿದ್ಧಾಂತಗಳನ್ನು ಪ್ರಚುರಪಡಿಸಿದರು. ಇವು ಗಹನವಾಗಿ, ಗಂಭೀರವಾಗಿ ಅಂತರ್ಗತವಾಗಿದ್ದುದನ್ನು ಆಚಾರ್ಯರುಗಳು ಸಂಶೋಧನೆ ಮಾಡಿ, ತತ್ತ್ವಗಳನ್ನು ರೂಪಿಸಿ, ದರ್ಶನಕ್ಕೊಂದು ಸಂಪೂರ್ಣ ರೂಪಕೊಟ್ಟರು. ಕೇವಲ ರೂಪಕೊಡುವುದೇ ಅಲ್ಲ, ಅವನ್ನು ಜನಸಾಮಾನ್ಯ ರಲ್ಲಿ ಹರಡುವ ಪ್ರಚಾರ ಕಾರ್ಯವನ್ನೂ ಮಾಡಿದರು. ಈ ಪ್ರಚಾರ ಕಾರ್ಯವೇ ಆಚಾರ್ಯರು ಹಗಲಿರುಳೂ ಮಾಡಿದ ತುಂಬಾ ಪವಿತ್ರತಮವಾದ ಕಾರ್ಯ. ಈ ದೃಷ್ಟಿಯಿಂದ ಇವರು ಆಳ್ವಾರರುಗಳಿಗಿಂತಲೂ ಹೆಚ್ಚಿನದಾದ ಸೇವಾಕಾರ್ಯ ವನ್ನು ಮಾಡಿದರು. ಒಂದು ವೇಳೆ ಆಚಾರ್ಯರು ಅವತರಿಸದಿದ್ದಲ್ಲಿ ಶ್ರೀವೈಷ್ಣವ ದರ್ಶನವೇ ಪ್ರಪಂಚದಲ್ಲಿ ಇರುತ್ತಿರಲಿಲ್ಲ.

ಇಂತಹ ಆಚಾರ್ಯ ಪರಂಪರೆಯಲ್ಲಿ ಮುಖ್ಯರಾದವರು–ನಾಥಮುನಿ, ಯಾಮುನ, ಶ್ರೀ ರಾಮಾನುಜ, ಪಿಳ್ಳೈ ಲೋಕಾಚಾರ್ಯ, ಶ್ರೀ ವೇದಾಂತ ದೇಶಿಕ, ಶ್ರೀ ಮಣವಾಳ ಮಾಮುನಿಗಳು ಮುಖ್ಯರಾದವರು.

## 1. ನಾಥಮುನಿ (823–924)

ನಾಥಮುನಿಗಳು ಜನಿಸಿದ ಸಮಯ ಶ್ರೀವೈಷ್ಣವ ದರ್ಶನಕ್ಕೆ ಒಂದು ಸಂಧಿಕಾಲ. ತಮ್ಮ ಸತತ ಪರಿಶ್ರಮ, ಸಾಹಸ ಹಾಗೂ ಸಾಧನೆಗಳಿಂದ ಈ ದರ್ಶನಕ್ಕೆ ಒಂದು ಮಾರ್ಗಸೂಚಿಯನ್ನು ನಿರ್ಮಿಸಿದರು. ಅದರಿಂದಲೇ ಇವರು ಪ್ರಪನ್ನ ಜನಕೂಟಸ್ಥರು, ವಿಶಿಷ್ಟಾದ್ವೈತ ಹಾಗೂ ಉಭಯ ವೇದಾಂತಗಳ ಪ್ರಥಮಾಚಾರ್ಯರು ಎಂದು ಹೆಸರು ಪಡೆದರು. ಇವರಿಲ್ಲದಿದ್ದಲ್ಲಿ ವಿಶಿಷ್ಟಾದ್ವೈತ

ದರ್ಶನ, ಉಭಯ ವೇದಾಂತಗಳು, ಶ್ರೀವೈಷ್ಣವ ಮತಗಳೇ ಇರುತ್ತಿರಲಿಲ್ಲವೆಂದೇ ಹೇಳಬಹುದು. ಶ್ರೀವೈಷ್ಣವ ದರ್ಶನವನ್ನು ಯೋಗಬಲದಿಂದ ಸಾಕ್ಷಾತ್ಕರಿಸಿ ಕೊಂಡು ಅದಕ್ಕೆ ಅಡಿಪಾಯ ಹಾಕಿಕೊಟ್ಟರು.

ಅಷ್ಟುಹೊತ್ತಿಗಾಗಲೇ ಲುಪ್ತವಾಗತೊಡಗಿದ್ದ ಆಳ್ವಾರರ ಸ್ತೋತ್ರಗಳನ್ನು ಯೋಗದೆಸೆಯಲ್ಲಿ ನಮ್ಮಾಳ್ವಾರರಿಂದ ಉಪದೇಶ ಪಡೆದು, ನಾಲಾಯಿರ ದಿವ್ಯ ಪ್ರಬಂಧಗಳನ್ನು ಸಂಗ್ರಹಿಸಿ, ವಿಂಗಡಿಸಿ, ಸಂಗೀತಕ್ಕೆ ಅಳವಡಿಸಿ, ದೇವಾಲಯ ಗಳಲ್ಲಿ ಹಾಡುವ ಪದ್ಧತಿಯನ್ನು ರೂಢಿಗೆ ತಂದರು. ಭಾರತಾದ್ಯಂತ ಸಂಚರಿಸಿ, ಅಲ್ಲಿನ ವಿಷ್ಣುಕ್ಷೇತ್ರಗಳನ್ನು ಸಂದರ್ಶಿಸಿ, ವಿಷ್ಣುಭಕ್ತಿ, ವೈಷ್ಣವ ಮತವನ್ನು ಹರಡಿದರು. ಈ ರೀತಿಯಲ್ಲಿ ಶ್ರೀವೈಷ್ಣವ ಸಂಸ್ಕೃತಿಗೆ ಮೂಲಪುರುಷರಾದರು.

ಇವರು 'ನ್ಯಾಯತತ್ತ್ವ', 'ಯೋಗರಹಸ್ಯ', 'ಪುರುಷನಿರ್ಣಯ' ಎಂಬ ಗ್ರಂಥಗಳನ್ನು ರಚಿಸಿ, ಶ್ರೀವೈಷ್ಣವ ದರ್ಶನದ ಸ್ವರೂಪವನ್ನು ಅವುಗಳಲ್ಲಿ ತುಂಬಿ ಸಿದರು. ಇವು ಮುಂದಿನ ಆಚಾರ್ಯರುಗಳಾದ ಯಾಮುನ, ರಾಮಾನುಜ, ವೇದಾಂತ ದೇಶಿಕರಿಗೆ ಮಾರ್ಗದರ್ಶಿಯಾದುವು.

ನಾಥಮುನಿಗಳು ಶ್ರೇಷ್ಠವರ್ಗದ ಯೋಗಿಗಳು. ಒಂದು ದೃಷ್ಟಿಯಿಂದ ಭಾರತದ ಕಟ್ಟಕಡೆಯ ನಿಜ ಅರ್ಥದ ಯೋಗಿಗಳೆಂದೂ ಹೇಳಲಾಗುತ್ತದೆ. ಯೋಗ ಸಿದ್ಧಿ ಪಡೆದ ಇವರು ವೇದಾಂತದಲ್ಲಿ ಯೋಗವನ್ನು ಪ್ರವೇಶಗೊಳಿಸಿ ದರು. ತಮ್ಮ ಜೀವನದುದ್ದಕ್ಕೂ ಮಹಾತ್ಮರಾಗಿ, ಯೋಗಿಗಳಾಗಿ ಬೆಳಗಿದರು.

ನಾಥಮುನಿಗಳು ವರ್ಣ ಧರ್ಮ, ಆಶ್ರಮ ಧರ್ಮ ಎರಡನ್ನೂ ಒಪ್ಪಿ ದ್ದರು. ಬ್ರಹ್ಮಚರ್ಯದಲ್ಲಿ ವಿದ್ಯೆ ಕಲಿತು, ಯೌವನದಲ್ಲಿ ಸುಖವನ್ನು ಅನು ಭವಿಸಿ, ಅಪರ ವಯಸ್ಸಿನಲ್ಲಿ ಮುನಿಯಾಗಿ, ಕೊನೆಗೆ ತ್ಯಾಗಿಯಾಗಿ ಶರೀರ ತ್ಯಾಗ ಮಾಡಬೇಕು-ಎನ್ನುವುದೇ ಆಶ್ರಮ ಧರ್ಮ. ಇದೇ ರೀತಿಯಲ್ಲಿ ವರ್ಣಧರ್ಮ ವನ್ನು ಅನುಸರಿಸಬೇಕು. ಇವೆರಡೂ ಧರ್ಮಗಳೂ ಮಾನವನ ಉತ್ಕರ್ಷ, ಅಪಕರ್ಷಣಗಳಿಗೆ ಕಾರಣವಾಗಲಾರವು. ಬ್ರಾಹ್ಮಣನು ಹುಟ್ಟಿನಿಂದಲೇ ಪೂಜ್ಯ ನಲ್ಲ. ಹಾಗೆಯೇ ಸನ್ಯಾಸಿಯೂ ಕೂಡ. ಸನ್ಯಾಸಿಗಿಂತಲೂ ಗೃಹಸ್ಥನು ಅಧಿಕ ಜ್ಞಾನವಂತನಾದರೆ ಗೃಹಸ್ಥನು ಸನ್ಯಾಸಿಗೂ ಪೂಜ್ಯನಾಗುತ್ತಾನೆ. ಇಂತಹ ತತ್ತ್ವಸ್ಥಿತಿ ಭಾರತದ ಯಾವ ಮತದಲ್ಲಿಯೂ ಇಲ್ಲ. ಆದರೆ ನಾಥಮುನಿಗಳು

ಕ್ರಾಂತಿಕಾರಕವಾದ ಈ ತತ್ತ್ವ ನಿರ್ಣಯವನ್ನು ಪ್ರತಿಪಾದಿಸಿ, ತಮ್ಮ ಗ್ರಂಥ ಗಳಲ್ಲಿ ಪ್ರತಿಪಾದಿಸಿದರು.

ಇದಕ್ಕೆ ಅವರ ಜೀವನವೇ ಉದಾಹರಣೆ. ಇವರು ಚತುರ್ಥ ವರ್ಣದ ನಮ್ಮಾಳ್ವರರನ್ನು ಇವರು ಆಚಾರ್ಯರನ್ನಾಗಿ ಸ್ವೀಕರಿಸಿ, ತಮ್ಮಲ್ಲಿನ ಕ್ರಾಂತಿ ಕಾರಕ ಮನೋಭಾವವನ್ನು ಪ್ರದರ್ಶಿಸಿದರು. ಇದಕ್ಕೆ ಅವರಿಗಿದ್ದ ಆಧಾರ ಆಪ ಸ್ತಂಭ ಮಹರ್ಷಿಗಳ ಈ ಶ್ಲೋಕ–

ಪ್ರಾಪ್ಯಂ ಜ್ಞಾನಂ ಬ್ರಾಹ್ಮಣಾತ್‌ಕ್ಷತ್ರಿಯಾತ್‌ದ್ವಾ–
ವೈಶ್ಯಾಚ್ಛೂದ್ರಾ ದ್ವಾಪಿ ನೀಚಾದ ಭೀಕ್ಷ್ಣಂ ||

ಜ್ಞಾನ ಬೇಕೆನ್ನುವವನು ಬ್ರಾಹ್ಮಣನಿಂದಲೇ ಆಗಲಿ, ಇತರೇ ಯಾವ ವರ್ಣದವನಿಂದಲೇ ಆಗಲಿ ತನಗೆ ಬೇಕಾದ ತತ್ತ್ವಜ್ಞಾನವನ್ನು ಪಡೆದು ಕೊಳ್ಳ ಬೇಕು.

ಮುಂದೆ ಆಚಾರ್ಯ ರಾಮಾನುಜರು ತಮ್ಮ ಜೀವನದಲ್ಲಿ ಅನುಸರಿಸಿದ್ದು ಈ ಮೇಲ್ಪಂಕ್ತಿಯನ್ನೆ.

ಇವರಿಗೆ ಹಿಂದಿದ್ದ ಆದಿ ಶಂಕರರೂ ಕೂಡ 'ಚಂಡಾಳೋಸ್ತು ಸತು ದ್ವಿ ಜೋಸ್ತು ಗುರುರಿತ್ಯೇಷಾ ಮನೀಷಾ ಮಮ (ಮನೀಷಾ ಪಂಚಕ) ಎಂದು ಹೇಳಿ ರುವುದು ಇದೇ ದೃಷ್ಟಿಯಿಂದಲೇನೇ.

ಇವು ಉಚ್ಚನೀಚ ಭಾವನೆಗಳಿಗೆ ಪೋಷಕವೇ ಅಲ್ಲವೆಂಬುದು ಈ ಎಲ್ಲ ಹಿರಿಯರ ಅಭಿಪ್ರಾಯ.

ಈ ರೀತಿಯಲ್ಲಿ ನಾಥಮುನಿಗಳು ಕೊನೆಯವರೆಗೂ ಗೃಹಸ್ಥರಾಗಿಯೇ ಇದ್ದು, ಸಿದ್ಧಾಂತ ಪ್ರವರ್ತಕರಾಗಿ, ಮುಂದಿನ ಆಚಾರ್ಯರಿಗೆ ಪೂಜ್ಯರಾಗಿ ಆಶ್ರಮ ಧರ್ಮದ ನಿಜವಾದ ಧರ್ಮವನ್ನು ತೋರಿಸಿಕೊಟ್ಟರು.

ಜ್ಞಾನೋಪದೇಶಕ್ಕೆ ಉಚ್ಚನೀಚನೆಂಬ ಕಟ್ಟುನಿಟ್ಟು ಇಲ್ಲ. ಧರ್ಮ ವ್ಯಾಧನ ಬಳಿ ಬ್ರಾಹ್ಮಣನು ಉಪದೇಶ ಪಡೆದದ್ದು, ಕ್ಷತ್ರಿಯದವನಾದ ಕೈಕಯ ನ ಹತ್ತಿರ ಉದ್ಧಾಲಕ ಮುಂತಾದ ಬ್ರಾಹ್ಮಣರು ಉಪದೇಶ ಪಡೆದದ್ದು ಇದಕ್ಕೆ ಉದಾಹರಣೆಗಳು. ಇದನ್ನು ಮಹಾಶ್ರೋತ್ರಿಯರಾದ ನಾಥಮುನಿಗಳು ತಮ್ಮ ಜೀವನದಲ್ಲಿ ಆಚರಣೆಯಲ್ಲಿ ತಂದರು. ತಮ್ಮ ತಮ್ಮ ಕರ್ತವ್ಯಗಳನ್ನು ನೆರವೇರಿಸಿ ಕೊಳ್ಳುವುದಕ್ಕಾಗಿ ಏರ್ಪಟ್ಟ ವರ್ಣಾಶ್ರಮ ಧರ್ಮಗಳು ಯಾವ ರೀತಿಯಲ್ಲೂ

ಉಚ್ಚನೀಚ ಭಾವನೆಗಳಿಗೆ ಕಾರಣವಾಗುವುದಿಲ್ಲ ಎಂಬುದು ನಾಥಮುನಿಗಳ ಸಿದ್ಧಾಂತ.

ಈ ರೀತಿಯಲ್ಲಿ ಧಾರ್ಮಿಕವಾಗಿ ನಾಥಮುನಿಗಳು ಪ್ರಪಂಚಕ್ಕೆ ಹೊಸ ಬೆಳಕನು ನೀಡಿದಂತೆ ಸೈದ್ಧಾಂತಿಕವಾಗಿಯೂ ಇವರು ಭಾರತೀಯ ತತ್ತ್ವಶಾಸ್ತ್ರ ದಲ್ಲಿ ಒಂದು ಹೊಸ ಕ್ರಾಂತಿಯನ್ನೆ ಉಂಟುಮಾಡಿದರು.

ತಪಸ್ವಿಭ್ಯೋಽಧಿಕೋಽಯೋಗೀಜ್ಞಾಭ್ಯೋಽಪಿಮತೋಽಧಿಕಃ |
ಕರ್ಮಿಭ್ಯಶ್ಚಾಧಿಕೋಯೋಗೀ || ಗೀತಾ–6–40 ||

ಎಂಬ ಶ್ಲೋಕದಂತೆ ಜ್ಞಾನಿಗಳಿಗಿಂತಲೂ, ಕರ್ಮಿಗಳಿಗಿಂತಲೂ ಯೋಗಿಯೇ ಶ್ರೇಷ್ಠ.

ಇದೇ ಗೀತೆಯಲ್ಲಿ 'ಜ್ಞಾನೀತ್ವಾತ್ಮೈವ ಮೇಮತಃ' (7-18) ಎಂದು ಹೇಳಿರುವಂತೆ ಜ್ಞಾನಿಗಿಂತಲೂ ಯೋಗಿಯೇ ಶ್ರೇಷ್ಠ.

ಅಧ್ಯಾತ್ಮದ ಅನುಭವವನ್ನು ಹೊಂದುವವನು ಜ್ಞಾನಿ, ವಿಜ್ಞಾನಿ. ಆ ಅನುಭವದ ಒಳನೋಟವನ್ನು ಸಂಶೋಧಿಸಿ, ತಿಳಿಯುವವನು ವಿಜ್ಞಾನಿ. ಅದುದ ರಿಂದ ಯೋಗಿಯು ಜ್ಞಾನಿ, ವಿಜ್ಞಾನಿ ಎರಡೂ ಆದಾಗಲೇ ಶ್ರೇಷ್ಠನಾಗುತ್ತಾನೆ. ಅಂದರೆ ಸಿದ್ಧಾಂತ ಪ್ರತಿಪಾದನೆಯಲ್ಲಿ ವಿಜ್ಞಾನವನ್ನು ತರಬೇಕಾದುದು ಅವಶ್ಯಕ ಎಂಬುದು ನಾಥಮುನಿಗಳ ವಾದ. ಅಂತೆಯೇ ಯೋಗ ಪ್ರಣಾಳಿಕೆಯನ್ನು ಸಿದ್ಧಾಂತಗಳಲ್ಲಿ ಪ್ರವರ್ತಿಸುವ ಹಾಗೆ ಮಾಡಿದ್ದರು. ಈ ದೃಷ್ಟಿಯಿಂದ ಅವರೊಬ್ಬ 'ಅಧ್ಯಾತ್ಮ ವಿಜ್ಞಾನಿ'ಯಾಗಿದ್ದರು. ಸಮಸ್ಯೆಗಳ ಪರಿಹಾರಕ್ಕೆ ದರ್ಶನ ಕ್ಷೇತ್ರದಲ್ಲಿ ಯೋಗದ ಮಹತ್ವ, ಹಿರಿಮೆಯನ್ನು ಸಾರಿದರು. ನಾಥಮುನಿಗಳು ಸ್ವತಃ ಯೋಗಿಗಳಾಗಿದ್ದುದರಿಂದ ಇದನ್ನು ಸಾಧಿಸಿ ತೋರಿಸಿದರು. ಇದನ್ನು ತಮ್ಮ 'ನ್ಯಾಯತತ್ತ್ವ' ಹಾಗೂ 'ಯೋಗ ರಹಸ್ಯ' ದಲ್ಲಿ ವಿವರಿಸಿದ್ದಾರೆ. ಈ ರೀತಿ ಯಲ್ಲಿ ಸಿದ್ಧಾಂತ ಪ್ರವರ್ತನೆಯಲ್ಲಿ ಯೋಗದ ಪ್ರಾಮುಖ್ಯತೆಯನ್ನು ಈ ಆಚಾರ್ಯರು ತೋರಿಸಿಕೊಟ್ಟರು.

ಮುಂದೆ ಇದೇ ಪರಂಪರೆಯು ಮುಂದುವರಿಯಿತು. ಇವರು ಯೋಗಿಗಳಾಗಿದ್ದಂತೆ, ರಾಮಾನುಜರು, ಪಿಳ್ಳೈ ಲೋಕಾಚಾರ್ಯರು ಹಾಗೂ ವೇದಾಂತ ದೇಶಿಕರೂ ಕೂಡ ಯೋಗರಹಸ್ಯವನ್ನು ಅರಿತವರಾಗಿದ್ದರು. ಈ ಕಾರಣದಿಂದ ಲೇ ಅವರು ಅಷ್ಟು ವರ್ಷಗಳವರೆಗೆ ಜೀವಿಸಿರಲು ಸಾಧ್ಯವಾಯಿತು.

ಈ ರೀತಿಯಲ್ಲಿ ನಾಥಮುನಿಗಳು ಯೋಗಿಗಳಾಗಿದ್ದುದರಿಂದ ಇಂತಹ ಸಾಧನೆಯನ್ನೆಲ್ಲ ಮಾಡಲು ಸಾಧ್ಯವಾಯಿತು. ಅವರು ಶ್ರೇಷ್ಠ ದರ್ಜೆಯ ಯೋಗಿಗಳಾಗಿದ್ದರೆಂಬುದು ಅವರ ಗ್ರಂಥಗಳಿಂದ ತಿಳಿದು ಬರುವುದು. ಆದರೆ ಅವರ 'ಯೋಗರಹಸ್ಯ'ವು ಬಹಳ ಹಿಂದೆಯೇ ನಷ್ಟವಾಗಿ, 'ನ್ಯಾಯ ತತ್ತ್ವ'ವು ವೇದಾಂತ ದೇಶಿಕರ ಸಮಯದವರೆಗೂ ಲಭ್ಯವಿತ್ತು ಎಂದು ಆಧಾರಗಳಿಂದ ತಿಳಿದುಬಂದಿದೆ. ಈ ಕೃತಿಗಳ ಆಧಾರದ ಮೇಲೆ ಇವರ ಸಿದ್ಧಾಂತದ ವೈಶಿಷ್ಟ್ಯ ಯನ್ನು ಅರಿತ ನಂತರದ ವೇದಾಂತದೇಶಿಕರು ಇತ್ಯಾದಿ ಆಚಾರ್ಯರು ಇವರನ್ನು ವಿಶಿಷ್ಟಾದ್ವೈತ ಸಿದ್ಧಾಂತದ ಆದ್ಯ ಪ್ರವರ್ತಕರೆಂದು 'ನಾಥೋಪಜ್ಞಂ ಪ್ರವೃತಂ' ಎಂದು ತಿಳಿಸಿದ್ದಾರೆ. ಯಾಮುನರಂತೂ ಎಲ್ಲ ರೀತಿಯ ಸ್ಫೂರ್ತಿಯನ್ನೂ ತಾವು ತಮ್ಮ ತಾತನವರಾದ ನಾಥಮುನಿಗಳಿಂದಲೇ ಪಡೆದರೆಂದು–

ಯತ್ಪದಾಂ ಭೋರುಹಧ್ಯಾನ ವಿಧ್ವಸ್ತಾ ಶೇಷ ಕಲ್ಮಷಃ |
ವಸ್ತುತಾ ಮುಪಯಾತೋಹಂ ಯಾಮುನೇಯಂ ನಮಾಮಿಕಂ||

ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

ವೈಶಿಷ್ಟ್ಯ ರೀತಿಯಲ್ಲಿ ತಮ್ಮ ಈ ಸಿದ್ಧಾಂತವನ್ನು ಮಂಡಿಸಿದ ನಾಥಮುನಿಗಳು ಅದನ್ನು 'ಸವಿಶೇಷ ಅದ್ವೈತ ಸಿದ್ಧಾಂತ' ಎಂದು ಕರೆದರು.

ತಮಗೆ ದೊರೆತ ನಾಲಾಯಿರ ದಿವ್ಯ ಪ್ರಬಂಧಗಳನ್ನು ವಿಂಗಡಿಸಿ, ವಿಭಜಿಸುವಾಗ ನಾಥಮುನಿಗಳು ಅವನ್ನು ಆಳವಾಗಿ ಅಧ್ಯಯನ ಮಾಡತೊಡಗಿದರು. ಅದರಲ್ಲೂ ನಮ್ಮಾಳ್ವಾರರ 'ತಿರುವಾಯ್ಮೊಳಿ'ಯು ಅವರ ಮೇಲೆ ತುಂಬಾ ಪ್ರಭಾವವನ್ನು ಬೀರಿತು. ಅದರಲ್ಲಿ ಉಪನಿಷತ್ತುಗಳ, ವೇದಗಳ, ಶಾಸ್ತ್ರಗಳ ವಿಷಯಗಳು ಅಡಕವಾಗಿರುವುದನ್ನು ಗಮನಿಸಿ ವಿಸ್ಮಯಗೊಂಡರು. ಭಾರತೀಯ ತತ್ತ್ವಶಾಸ್ತ್ರದ ಗಣಿಯೇ ಅದಾಗಿದೆಯೆಂಬುದನ್ನು ಕಂಡುಕೊಂಡರು. ಅದನ್ನೆ ಅವರು ತಮ್ಮ ಗ್ರಂಥಗಳಲ್ಲಿ, ಸಿದ್ಧಾಂತಗಳಲ್ಲಿ ಭಟ್ಟಿ ಇಳಿಸಿ, ಮುಂದಿನ ಪೀಳಿಗೆಗೆ ಮಾರ್ಗದರ್ಶನ ಮಾಡಿಸಿದರು.

ಇಷ್ಟೊಂದು ಆಳವಾಗಿ ಅಭ್ಯಾಸ ಮಾಡಿ, ರಚಿಸಿದ ಇವರ ಗ್ರಂಥಗಳು ಇಂದಿಗೆ ಲಭ್ಯವಾಗಿಲ್ಲದಿದ್ದರೂ, ಅವುಗಳ ಪ್ರಭಾವ ನಂತರ ಆಚಾರ್ಯರುಗಳ ಕೃತಿಗಳ ಮೇಲೆ ಉಂಟಾಗಿರುವುದನ್ನು ಅವರು ರಚಿಸಿರಬಹುದಾದ ಸಾಲುಗಳಲ್ಲಿ ಕಾಣಬಹುದು.

ನಾಥಮುನಿಗಳು ತಮ್ಮ ಸಿದ್ಧಾಂತದಲ್ಲಿ 'ಅಚಿತ್ತು' ಎಂಬ ಜಡವಸ್ತುವು, 'ಚಿತ್' ಎಂಬ ಜೀವವು–ಇವೆರಡೂ ಪರಮಾತ್ಮನ ಶರೀರ ಎಂದು ತಿಳಿಸಿದ್ದಾರೆ. ಇದರಿಂದ 'ಜಗತ್ ಸರ್ವಂ ಶರೀರಂ ತೇ' (ಯುದ್ಧ 120–26) ಎಂದು ರಾಮಾಯಣದಲ್ಲಿ ಹೇಳಿರುವಂತೆ 'ಜಗತ್ತೆಲ್ಲವೂ ಪರಮಾತ್ಮನ ಶರೀರ' ಎಂದು ತಿಳಿಸಿರುವ ನಾಥಮುನಿಗಳು ಇದಕ್ಕೆ ಬೃಹದಾರಣ್ಯಕದ ಅಂತರ್ಯಾಮಿ ಬ್ರಾಹ್ಮಣದಲ್ಲಿನ ವಿವರಗಳನ್ನು ಉದಾಹರಣೆಯಾಗಿ ನೀಡುತ್ತಾರೆ.

ಈ ರೀತಿಯಲ್ಲಿ ಜಡಜಗತ್ತು, ಪರಮಾತ್ಮ, ಜೀವಾತ್ಮ–ಇವುಗಳನ್ನು ಯೋಗಿಯು ಪ್ರತ್ಯೇಕವಾಗಿಯೂ ನೋಡಬಲ್ಲ. ಒಟ್ಟಾಗಿಯೂ ನೋಡಬಲ್ಲ. ಪ್ರತ್ಯೇಕವಾಗಿ ನೋಡಿದಾಗ ಅವುಗಳ ಭೇದದ ಅರಿವಾಗುತ್ತದೆ. ಇದು ಯೋಗಿ ಯಾದವನಿಗೆ ಮಾತ್ರ ಸಾಧ್ಯ ಎಂದು ನಾಥಮುನಿಗಳು ತಿಳಿಸುತ್ತಾರೆ. ಇದನ್ನೇ ಮುಂದೆ ರಾಮಾನುಜರು ತಮ್ಮ ಗ್ರಂಥಗಳಲ್ಲಿ ಮಂಡಿಸಿದ್ದಾರೆ.

ಹೀಗೆ, ನಾಥಮುನಿಗಳು ವಿವರಿಸಿರುವ 'ತತ್ತ್ವದ ಸರ್ವಸಮನ್ವಯ ಭಾವ'ವು ವಿಲಕ್ಷಣವಾಗಿದ್ದು, ಪ್ರಭಾವಯುತವಾಗಿದೆ.

ಇದನ್ನೇ ರಾಮಾನುಜರು ತಮ್ಮ 'ವೇದಾರ್ಥ ಸಂಗ್ರಹ'ದಲ್ಲಿ ವಿವರಿಸಿದ್ದಾರೆ 'ನೀವು ಭೇದವನ್ನೋ, ಅಭೇದವನ್ನೋ, ಭೇದಾ ಭೇದವನ್ನೋ– ಯಾವುದನ್ನು ತತ್ತ್ವವೆಂದು ಸಮರ್ಥಿಸುವಿರಿ?' ಎಂದು ತಾವೇ ಪ್ರಶ್ನಿಸಿಕೊಂಡು, ಈ ಮೂರರೂ ಕೂಡ ತತ್ತ್ವವೆಂದು ಶ್ರುತಿ ಹೇಳಿರುವುದರಿಂದ, ಈ ಮೂರನ್ನೂ ತತ್ತ್ವವೆಂದು ನಾನು ಸಮರ್ಥಿಸುತ್ತೇನೆ'– ಎಂದು ಅವರು ತಿಳಿಸಿದ್ದಾರೆ.

'ಪೂರ್ಣ ತಿಳುವಳಿಕೆ ಇಲ್ಲದವರು ಇವು ಪರಸ್ಪರ ವಿರುದ್ಧವೆಂದು ಹೇಳು ವರೇ ಹೊರತು, ನಿಜ ಅರ್ಥದ ಯೋಗಿಯು ಇವುಗಳಲ್ಲಿ ಯಾವ ವಿರೋಧವನ್ನೂ ಕಾಣಲಾರರು, ಎಂಬ ನಾಥಮುನಿಗಳ ಅಭಿಪ್ರಾಯವನ್ನು ರಾಮಾನುಜರು ಒಪ್ಪುತ್ತಾರೆ,

ಪುರಾತನ, ನವೀನ ಯುಗದಲ್ಲಿ ಭಾರತದ ಆಗಸದಲ್ಲಿ ಕಾಣಿಸಿಕೊಂಡ ನಾಥಮುನಿ ಎನ್ನುವ ನಕ್ಷತ್ರವು ಜಗತ್ತಿಗೆ ಹೊಸಬೆಳಕನ್ನು ನೀಡಿತು. ಸೈದ್ಧಾಂ-ತಿಕವಾಗಿ, ಧಾರ್ಮಿಕವಾಗಿ ಇವರ ಸ್ಥಾನ ಹಾಗೂ ಇವರು ನೀಡಿದ ಸಂದೇಶ ಅತ್ಯಮೂಲ್ಯವಾದುದಾಗಿದೆ. ಅವರ ನಿಲುವು ಸರ್ವಜನಾದರಣೀಯವಾಗಿದ್ದು, ಸರ್ವ ಮಾನ್ಯವಾಗಿದೆ.

## 2. ಯಾಮುನಾಚಾರ್ಯರು (912-1042)

ನಾಥಮುನಿಗಳು ಶ್ರೀವೈಷ್ಣವ ಸಿದ್ಧಾಂತಕ್ಕೆ ಭದ್ರಬುನಾದಿಯನ್ನು ಹಾಕಿದರೆ, ಅವರ ಮೊಮ್ಮಕ್ಕಳಾದ ಯಾಮುನಾಚಾರ್ಯರು ಅದರ ಮೇಲೆ ಒಂದು ಭವ್ಯಮಂದಿರವನ್ನು ಕಟ್ಟಿದರು. ಅವರು ಬದುಕಿದ್ದಾಗ ಯಾಮುನರು ಇನ್ನೂ ಬಾಲಕ. ಇದರಿಂದ ಅವರ ತಾತ್ತ್ವಿಕ ಹಾಗೂ ವ್ಯಕ್ತಿತ್ವದ ಪ್ರಭಾವಗಳು ಇವರ ಮೇಲೆ ಬಿದ್ದಿದ್ದವು. ಈ ಕಾರಣದಿಂದ ಅಪಾರವಾಗಿ ಬೆಳೆಯಲು ಸಾಧ್ಯವಾಯಿತು.

ನಾಥಮುನಿಗಳ ಆಸೆ ಏನೆಂಬುದನ್ನು ತಿಳಿದಿದ್ದರೂ ಅವರ ಸಿದ್ಧಾಂತಗಳು ಹಾಗೂ ತತ್ತ್ವಗಳನ್ನು ಅವರ ಶಿಷ್ಯರಾದಪುಂಡರೀಕಾಕ್ಷ, ರಾಮಮಿಶ್ರರು ಅವರಿಗೆ ತಿಳಿಯಹೇಳಿ, ಅವರ ಜೀವನದ ಗುರಿಯನ್ನು ತಿಳಿಸಿದರು. ವಿದ್ಯಾರ್ಥಿಯಾಗಿದ್ದಲೇ ಪಂಡಿತರನ್ನು ಸೋಲಿಸಿ, ರಾಜತ್ವವನ್ನು ಪಡೆದು, ಸುಖಭೋಗಗಳಲ್ಲಿ ಮೈಮರೆತಿದ್ದ ಇವರನ್ನು, ಲೌಕಿಕ ಜಗತ್ತಿನಿಂದ ತಾತ್ತ್ವಿಕ ಜಗತ್ತಿಗೆ ಕರೆದುತಂದು, ಜಗತ್ಕಲ್ಯಾಣಕಾರಕ ವಿಶಿಷ್ಟಾದ್ವೈತ ಸಿದ್ಧಾಂತಗಳ ಪುನಸ್ಥಾಪನೆಗಾಗಿ ತೊಡಗಿಸಿ. ಪ್ರಚಾರ ಮಾಡಿಸಿದ ಕೀರ್ತಿ ರಾಮಮಿಶ್ರರಿಗೇ ಸಲ್ಲಬೇಕು.

ತಾತನವರ ನಿರ್ಮಿತ ಸಿದ್ಧಾಂಶಗಳನ್ನು ಸುವ್ಯವಸ್ಥಿತಗೊಳಿಸಿ, ಭವಿಷ್ಯದ ಚಿಂತನೆಯನ್ನು ಮಾಡಿದ ಯಾಮುನರು ತಮ್ಮ ನಂತರ ತಮ್ಮ ಸಂಬಂಧಿಯಾದ ರಾಮಾನುಜರನ್ನು ಕರೆದು ತಂದು, ಪೀಠಾಧಿಪತಿಯನ್ನಾಗಿ ಮಾಡಿ, ಸುಗಮ ದಾರಿಯಲ್ಲಿ ಶ್ರೀ ವೈಷ್ಣವ ದರ್ಶನವು ಮುಂದುವರಿಯಲು ಇವರು ತುಂಬಾ ಶ್ರಮಿಸಿದರು.

ಈ ಶ್ರಮದ ಕಾರಣ ಕೆಲವೊಂದು ಕಾರ್ಯಗಳು ಮುಗಿಯದ್ದರಿಂದ, ಅದನ್ನು ಶಿಷ್ಯರ ಮುಖಾಂತರ ಕಾರ್ಯಗತಗೊಳಿಸಲು ಬಹಳವಾಗಿ ದುಡಿದರು.

ತಮ್ಮ ತಾತನವರ ಯೋಗ ಪದ್ಧತಿಯನ್ನು ತಾವೂ ಅಭ್ಯಾಸಮಾಡಿ 130 ವರ್ಷಗಳವರೆಗೂ ಬದುಕಿ, ಸೇವೆ ಮಾಡಿದರು. ಇಷ್ಟು ದೀರ್ಘ ಸಮಯದಲ್ಲೂ ಇವರಿಗೆ ರಾಮಾನುಜರನ್ನು ಕಂಡು, ಮಾತನಾಡಿಸಿ, ತಮ್ಮ ಭವಿಷ್ಯ ಯೋಜನೆಗಳನ್ನು ತಿಳಿಸುವಲ್ಲಿ ವಿಫಲರಾದರು. ಇದಕ್ಕಾಗಿಯೇ ಇವರು ತಮ್ಮ ಪರಮ ಆತ್ಮೀಯಶಿಷ್ಯರಾದ ಮಹಾಪೂರ್ಣ, ಶ್ರೀಶೈಲಪೂರ್ಣ, ಕಾಂಚಿಪೂರ್ಣ, ಗೋಷ್ಠೀಪೂರ್ಣ, ಮಾಲಾಧರ, ವರರಂಗನಾಯಕ- ಎಂಬುವವರಿಗೆ ಆ ಜವಾಬ್ದಾರಿಯನ್ನು ವಹಿಸಿ ಹೋದರು. ಇವರಲ್ಲದೆ ಇನ್ನೂ ಹತ್ತು ಜನ ಸಚ್ಛಿಷ್ಯರಿದ್ದರು.

ಅ) ಯೋಗರಹಸ್ಯ ಪ್ರಾಪ್ತವಿಲ್ಲ : ನಾಥಮುನಿಗಳು ತಮ್ಮ ಮೊಮ್ಮಗನಿಗೆ ಯೋಗರಹಸ್ಯದ ಪರಂಪರೆಯನ್ನು ಮುಂದುವರೆಸುವಂತೆ ಮಾಡಬೇಕೆಂಬ ಇಚ್ಛೆ ತುಂಬಾ ಇತ್ತು. ಇದೇ ರೀತಿಯ ಇನ್ನೂ ಕೆಲವು ಆಶಯಗಳು ಅವರಲ್ಲಿ ಇದ್ದುವು ಇದಕ್ಕಾಗಿ ಕುರುಹೈಕ್ಕಾವಲಪ್ಪನ್ ಎನ್ನುವ ತಮ್ಮ ಶಿಷ್ಯರನ್ನು ಅವರು ತಯಾರು ಮಾಡಿ, ಅವರಿಗೆ ಉಪದೇಶಿಸಿದ ಯೋಗರಹಸ್ಯವು ಯಾಮುನರಿಗೆ ತಲುಪಿಸು ವಂತೆ ತಿಳಿಸಿದ್ದರು.

ಈ ವಿಚಾರ ನಿಧಾನವಾಗಿ ಯಾಮುನರಿಗೆ ಗೊತ್ತಾಯಿತು. ಸನ್ಯಾಸಾ ಶ್ರಮವನ್ನು ಸ್ವೀಕರಿಸಿದ್ದ ಯಾಮುನರು ತಮ್ಮ ತಾತನವರ ಈ ವಿದ್ಯೆಯನ್ನು ಕಲಿಯಲು ಕುರುಹೈಕ್ಕಾವಲಪ್ಪನ್ ಬಳಿಗೆ ಹೋದರು. ಆಗ ಅವರು ಯೋಗಾ ರೂಢರಾಗಿದ್ದರು. ಸ್ವಲ್ಪ ಸಮಯಾನಂತರ ಎಚ್ಚೆತ್ತು, ಯಾಮುನರು ಬಂದಿರು ವುದೇಕೆಂದು, ಕೇಳಿ, ತಿಳಿದುಕೊಂಡರು. ಅದು ಸೂಕ್ತ ಸಮಯವಾಗಿರಲಿಲ್ಲ. ಇದರಿಂದ ಕುರುಹೈಕ್ಕಾವಲಪ್ಪನ್‌ರವರು 'ಇದು ಸರಿಯಾದ ಸಮಯವಲ್ಲ. ನನ್ನ ಅವಸಾನ ಕಾಲವನ್ನು ಗುರ್ತು ಹಾಕಿ ಕೊಡುತ್ತೇನೆ. ಆಗ ತಪ್ಪದೆ ಬನ್ನಿ. ನಿಮ್ಮ ತಾತನವರ ಆಸ್ತಿಯನ್ನು ನಿಮಗೆ ನೀಡುವೆನು!' ಎಂದು ಹೇಳಿ, ತಾಳೆಗರಿ ಯೊಂದರಲ್ಲಿ ಆ ಸಮಯವನ್ನು ಗುರ್ತು ಮಾಡಿ ನೀಡಿದರು.

ಇದನ್ನು ಸ್ವೀಕರಿಸಿದ ಯಾಮುನರು ಹಿಂತಿರುಗಿ, ಉಳಿದ ತಮ್ಮ ತಾತನವರ ಶಿಷ್ಯನವರುಗಳಿಂದ ಜ್ಞಾನಾರ್ಜನೆ ಹಾಗೂ ಭಗವದ್ಸೇವೆ, ಗ್ರಂಥ ಕಾಲಕ್ಷೇಪ, ಪಂಡಿತರುಗಳೊಂದಿಗೆ ವಾದವಿವಾದ ಮತ್ತು ಶ್ರೀವೈಷ್ಣವ ಮತ ಪ್ರಚಾರದ ಕೈಂಕರ್ಯದಲ್ಲಿ ನಿರತರಾಗಿದ್ದು, ಯೋಗರಹಸ್ಯ ಕಲಿಕೆಯನ್ನು ಮರೆತರು.

ಒಮ್ಮೆ ತಿರುವಹೀಂದ್ರ ಪುರದ ಸ್ವಾಮಿಯ ದರ್ಶನ ಮಾಡಲು ಹೋದ ಯಾಮುನರು ಅಲ್ಲಿನ ಪುಷ್ಕರಿಣಿಯಲ್ಲಿ ಸ್ನಾನ ಮಾಡುತ್ತಿರುವಾಗ, ಕುರುಹೈ ಕ್ಕಾವಲಪ್ಪನ್‌ರವರು ತಿಳಿಸಿದ ದಿನಾಂಕ ಅಂದೇ ಎಂಬುದನ್ನು ನೆನಪಿಸಿಕೊಂಡರು ಆದರೆ ಪಶ್ಚಿಮದ ಕೇರಳದಲ್ಲಿದ್ದ ಅವರು ಪೂರ್ವ ತೀರದ ಗಂಗೈಕೊಂಡ ಚೋಳ ಪುರಕ್ಕೆ ಹೋಗುವುದಾದರೂ ಹೇಗೆ ?

ಹೀಗಾಗಿ ವಿಶಿಷ್ಟಾದ್ವೈತಕ್ಕೆ ದಕ್ಕಬೇಕಾಗಿದ್ದ ಯೋಗರಹಸ್ಯ ಪರಂಪರೆಯು ಲಭ್ಯವಾಗದೆ, ತುಂಬಾ ನಷ್ಟವಾಯಿತೆಂದೇ ಹೇಳಬೇಕು. ಕೆಲವೇ ದಿನಗಳಲ್ಲಿ ಕುರುಹೈಕ್ಕಾವಲಪ್ಪನ್‌ರವರು ಪರಮಪದಿಸಿದ ಸಮಾಚಾರವೂ ತಿಳಿಯಿತು.

ಈ ವಿಚಾರವನ್ನು ಆಲಿಸಿದಾಗ ಯಾಮುನರು ತುಂಬಾ ನೊಂದರು. ಪರಂಪರಾನುಗತವಾಗಿ ಬರಬೇಕಾಗಿದ್ದ ಒಂದು ಅಮೂಲ್ಯ ವಿದ್ಯೆಯು, ರಹಸ್ಯವು ತಮಗೆ ದಕ್ಕದಾಯಿತಲ್ಲ, ಎಂದು ಇವರು ತುಂಬಾ ನೊಂದರು. ಶ್ರೀ ವೈಷ್ಣವ ದರ್ಶನ ತತ್ತ್ವದಲ್ಲಿ ಮುಂದೆ ಯೋಗ ರಹಸ್ಯದ ಪ್ರಾಮುಖ್ಯತೆಯು ಕಾಣಿಸಿಕೊಳ್ಳಲು ಸಾಧ್ಯವಾಗದೇ ಹೋದುದಕ್ಕೆ ತಮ್ಮನ್ನು ತಾವೇ ಕಾರಣೀ ಭೂತರಾಗಿಸಿಕೊಂಡರು.

ಈ ಘಟನೆ ಯಾಮುನರ ಮನಸ್ಸಿನ ಮೇಲೆ ತುಂಬಾ ಬಲವಾದ ಗಾಯ ಮಾಡಿತು. ಇದಕ್ಕಾಗಿ ಮುನ್ನೆಚ್ಚರಿಕೆ ವಹಿಸಿದ ಅವರು, ತಮ್ಮ ನಂತರ ಶ್ರೀರಂಗದ ಪೀಠಕ್ಕೆ ತಮ್ಮ ವಂಶದ ಕುಡಿಯಾದ ಶ್ರೀರಾಮಾನುಜರೇ ಸೂಕ್ತವ್ಯಕ್ತಿಯೆಂದು ತನ್ನ ಅಂತರ್ಯ ದೃಷ್ಟಿಯಿಂದ ಅರಿತಿದ್ದರು ಆದುದರಿಂದ ಅವರನ್ನು ಕಂಡು, ಮಾತನಾಡಿ, ಅವರನ್ನು ಅನುಗ್ರಹಿಸಲು ಶಿಷ್ಯರೊಡಗೂಡಿ ಕಂಚಿಗೆ ಹೋದರು.

ಆದರೆ ಅಲ್ಲಿಯೂ ಅವರಿಗೆ ದುರದೃಷ್ಟ ಕಾದಿತ್ತು.

ಆ) ಭೇಟಿಯಿಲ್ಲ: ರಾಮಾನುಜರು ಇನ್ನೂ ತಮ್ಮ ಆಗಿನ ಗುರುಗಳಾದ ಯಾದವ ಪ್ರಕಾಶರ ರಕ್ಷಣೆಯಲ್ಲಿಯೇ ಇದ್ದರು. ಅವರ ಗುರುಕುಲದಲ್ಲಿಯೇ ಇದ್ದರು. ಹೀಗಾಗಿ ಒಂಟಿಯಾಗಿ, ನೇರವಾಗಿ, ಕಂಡು ಮಾತನಾಡಲು ಸಾಧ್ಯವಾಗದೆ ಹಿಂತಿರುಗಬೇಕಾಯಿತು. ಆದರೂ ಯಾಮುನರು ಆಜಾನುಬಾಹುವೂ, ಸುಂದರ ಶರೀರಿಯೂ, ನಕ್ಷತ್ರಗಳ ಮಧ್ಯೆ ಎತ್ತರವಾಗಿ ಚಂದ್ರನಂತೆ ಕಂಗೊಳಿಸುತ್ತಾ ಓಡಾಡಿಕೊಂಡಿದ್ದ ರಾಮಾನುಜರ ಮೇಲೆ ತಮ್ಮ ಕೃಪಾಕಟಾಕ್ಷವನ್ನು ಬೀರಿ, ಆತನು ತಮ್ಮ ಶಾಶ್ವತನಾದ ಶಿಷ್ಯನೆಂದು ಸ್ವೀಕರಿಸಿ, ತಮ್ಮ ಶಿಷ್ಯನನ್ನು ಅನುಗ್ರಹಿಸಿ, ಆಶೀರ್ವದಿಸುವಂತೆ ಈ ಕೆಳಗಿನ ಶ್ಲೋಕದಿಂದ ಅಲ್ಲಿನ ದೈವ ವರದರಾಜ ಸ್ವಾಮಿಯನ್ನು ಪ್ರಾರ್ಥಿಸಿದರು–

ಯಸ್ಯ ಪ್ರಸಾದ ಕಲಯಾ ಬಧಿರಃ ಶೃಣೋತಿ
ಪಂಗುಃ ಪ್ರಧಾವತಿ ಜವೇನ ಚ ವಕ್ತಿ ಮೂಕಃ |
ಅಂಧಃ ಪ್ರಪಶ್ಯತಿ ಸುತಂ ಲಭತೇ ಬ ವಂಧ್ಯಾ
ತಂ ದೇವ ದೇವ ವರದಂ ಶರಣಂ ಗತೋಽಸ್ಮಿ ||

ಹೀಗೆಂದು ವಿನಂತಿಸಿ, ಶ್ರೀರಂಗಕ್ಕೆ ಹಿಂತಿರುಗಿದ ಯಾಮುನರು ತಮ್ಮ

ಎಂದಿನ ಕೈಂಕರ್ಯಗಳಲ್ಲಿ ಮುಳುಗಿ ಹೋದರು.

ಆದರೆ ಕಾಲನು ಅವರ ಮೇಲೆ ತನ್ನ ಬಿಗಿ ಮುಷ್ಟಿಯನ್ನು ಮತ್ತಷ್ಟು ಬಿಗಿಗೊಳಿಸಿದ. ಅವರು ಅನಾರೋಗ್ಯಪೀಡಿತರಾದರು ದುರದೃಷ್ಟಗಳನ್ನೆ ಕಂಡಿದ್ದ ಅವರಿಗೆ ಮತ್ತೊಮ್ಮೆ ರಾಮಾನುಜರನ್ನು ಕರುಣಿಸಿ, ಕೆಲವೊಂದು ಸಂವಾದ ಗಳನ್ನು ನಡೆಸುವ ಇಷ್ಟವನ್ನು ಹೊಂದಿದ್ದು, ಅವರನ್ನು ಕರೆದು ತರುವಂತೆ ಮಹಾಪೂರ್ಣರನ್ನು ಕಂಚಿಗೆ ಕಳುಹಿಸಿದರು.

ಆದರೆ ವಾಹನ ಸೌಕರ್ಯಗಳಿಲ್ಲದ ಆ ಕಾಲದಲ್ಲಿ ಎಷ್ಟೇ ವೇಗವಾಗಿ ಹೊರಟರೂ, ನೇರ ಮಾತನಾಡುವ ಸೌಭಾಗ್ಯ ರಾಮಾನುಜರಿಗೆ ಲಭಿಸಲೇ ಇಲ್ಲ ಆದರೆ ನಮ್ಮ ಮೇಲೆ ಯಾಮುನರಿಗೆ ಅಪಾರ ಪ್ರೀತಿ, ಗೌರವಗಳು ಇದ್ದುದೇ ಅಲ್ಲದೆ ತಮ್ಮನ್ನು ಕಂಚಿ ದೇವಾಲಯದಲ್ಲಿ ಕಟಾಕ್ಷಿಸಿದರೆಂಬ ವಿಚಾರ ತಿಳಿದು ಕೊಂಡಿದ್ದ ರಾಮಾನುಜರು ಅವರನ್ನು ತಮ್ಮ ಗುರುಗಳೆಂದು ಸ್ವೀಕರಿಸಿ, ತಾವು ಅವರ ಏಕಲವ್ಯರೆಂದು ಭಾವಿಸಿ, ಅವರಲ್ಲಿ ತಮ್ಮ ಗುರುತನವನ್ನು ಜೀವನ ಪರ್ಯಂತದವರೆಗೂ ಮುಂದುವರಿಸಿದರು. ಈ ಕಾರಣಕ್ಕೇ ಕಾವೇರೀ ತೀರದಲ್ಲಿ ಯಾಮುನರ ಪಾರ್ಥಿವ ದೇಹದ ಎದುರುಗಡೆ ಪ್ರತಿಜ್ಞೆಗಳನ್ನು ಮಾಡಿದಾಗ, ಅದಕ್ಕೆ ತಮ್ಮ ಒಪ್ಪಿಗೆ ಇದೆ ಎನ್ನುವ ರೀತಿಯಲ್ಲಿ ಯಾಮುನರ ಆತ್ಮವು ಕೈ ಬೆರಳುಗಳನ್ನು ಸಡಿಲಗೊಳಿಸುವುದರ ಮುಖಾಂತರ ತಮ್ಮ ಸಮ್ಮತಿಯನ್ನು ಸೂಚಿಸಿದರು. ಅಂತೆಯೇ ಗುರುಗಳ ಐವರು ಶಿಷ್ಯರಿಂದ ಯಾಮುನರು ಜ್ಞಾನ ಸಂಪತ್ತೆಲ್ಲವನ್ನೂ ಪಡೆದರು. ಈ ಮೂಲಕ ಯಾಮುನರ ಕೋರಿಕೆಗಳನ್ನು ಪೂರ್ಣಗೊಳಿಸಿದ ಯೋಗ್ಯ ಶಿಷ್ಯರೂ ಆದರು.

ಶ್ರೀವೈಷ್ಣವ ದರ್ಶನ ಮುಂದುವರಿಯಲು ಗುರು ಕರುಣೆಯನ್ನು ಪಡೆದಿದ್ದೇ ವೆಂಬ ನಂಬಿಕೆಯಿಂದ ಅದುವರೆವಿಗೆ ಅವರು ರಚಿಸಿದ ಗ್ರಂಥಗಳ ಅಧ್ಯಯನ ಹಾಗೂ ದರ್ಶನದ ಬೆಳವಣಿಗೆಗಳನ್ನು ಗಮನಿಸಿ, ಕಾರ್ಯೋನ್ಮುಖರಾದರು.

ಯಾಮುನರು ರಾಜ್ಯಭೋಗಗಳಲ್ಲಿದ್ದೂ, ಅವನ್ನೆಲ್ಲ ತ್ಯಜಿಸುವಷ್ಟು ಪರಮ ಯೋಗಿಗಳಾಗಿದ್ದರು. ಅವರು ರಾಜರಾಗಿ ಬಾಳಿದ ಅರಮನೆಯ ಇಂದಿಗೂ ಅವರ ರಾಜತ್ವಕ್ಕೆ ಸಾಕ್ಷಿಯಾಗಿ ಇಂದಿಗೂ ಗಂಗೈಕೊಂಡ ಚೋಳ ಪುರದಲ್ಲಿನ 'ಆಳವಂದಾರ್ ಮೇಡು' ವನ್ನು ತೋರಿಸುತ್ತಾರೆ.

ಇ. ವಿರೋಧಿಗಳು : ಯಾಮುನರು ಇದ್ದ ಕಾಲದಲ್ಲಿ ಅನೇಕ ಪ್ರತಿಸ್ಪರ್ಧಿಗಳು, ವಿರೋಧಿ ಮತಗಳು ಜನಪ್ರಿಯವಾಗಿದ್ದುವು, ನಾಥಮುನಿಗಳ ಸಮಯದಲ್ಲಿ ಅವರಿಗೆ ಇವುಗಳನ್ನು ತಹಬಂದಿಗೆ ತರುವ ಪ್ರಯತ್ನ ಮಾಡಲಾಗಲಿಲ್ಲ. ಹೀಗಾಗಿ ಯಾಮುನರ ಮೇಲೆ ಈ ವಿರೋಧಿ ಮತಗಳವರನ್ನು ಅಡಗಿಸುವ ಬಹಳ ದೊಡ್ಡ ಹೊರೆ ಬಿದ್ದಿತ್ತು.

ಆಗ ಬೌದ್ಧ ಹಾಗೂ ಚಾರ್ವಾಕ ಸಿದ್ಧಾಂತಗಳ ಪ್ರಚಾರ ತುಂಬಾ ಜೋರಾಗಿತ್ತು. ಅಲ್ಲದೆ ವೈದಿಕ ಮತಗಳಲ್ಲಿಯೇ ಅಸಮಾನತೆ, ಅಸಮಂಜಸತೆ ಹಾಗೂ ಶ್ರೀವೈಷ್ಣವ ದರ್ಶನದ ವಿರೋಧಿ ವಾದಗಳು ಪ್ರಚಲಿತವಾಗಿದ್ದುವು.

ಹೀಗಾಗಿ ಶ್ರೀವೈಷ್ಣವ ದರ್ಶನವು ತುಂಬಾ ದುರ್ಬಲ ಸ್ಥಾನದಲ್ಲಿತ್ತು. ಅದರ ಪರಿಸ್ಥಿತಿಯೂ ತುಂಬಾ ಕೆಳಮಟ್ಟದಲ್ಲಿತ್ತು.

ಈ ಸನ್ನಿವೇಶವನ್ನು ಯಾಮುನರು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು. ಅಂತೆಯೇ ತಮ್ಮ ವಿರೋಧಿಗಳ ಬಗ್ಗೆ ಯಾಮುನರೇ ತಮ್ಮ 'ಆತ್ಮಸಿದ್ಧಿ' ಗ್ರಂಥದಲ್ಲಿ ಹೀಗೆ ಹೇಳಿಕೊಂಡಿದ್ದಾರೆ–

ವಿರುದ್ಧ ಮತಯೋಽನೇಕಾಃ, ಸನ್ತ್ಯಾತ್ಮ ಪರಮಾತ್ಮನೋಃ |
ಅತಃ ತತ್ಪರಿಶುದ್ಧ್ಯರ್ಥಂ ಆತ್ಮಸಿದ್ಧಿರ್ವಿಧೀಯತೇ ||

'ಆತ್ಮ–ಪರಮಾತ್ಮ' ವಿಷಯದಲ್ಲಿ ಅನೇಕ ವಿರೋಧಿ ಮತಗಳು ಹುಟ್ಟಿಕೊಂಡಿವೆ. ಆದರಿಂದ ಅವುಗಳಲ್ಲಿ ಶುದ್ಧೀಕರಿಸಲು ಆತ್ಮಸಿದ್ಧಿ ಎನ್ನುವ ಈ ಗ್ರಂಥವನ್ನು ರಚಿಸುತ್ತಿದ್ದೇನೆ ?

ಅಂತೆಯೇ ಮುಂದುವರೆದು ಯಾಮುನರು ತಿಳಿಸುತ್ತಾರೆ–'ಭಗವಾನ್ ಬಾದರಾಯಣರು ಈ ಉದ್ದೇಶಕ್ಕಾಗಿಯೇ ಬ್ರಹ್ಮಸೂತ್ರಗಳನ್ನು ರಚಿಸಿದ್ದಾರೆ. ಇವುಗಳನ್ನು ದ್ರಮಿದಾಚಾರ್ಯರೆಂಬ ಭಾಷ್ಯಕಾರರು ತಮ್ಮ ಭಾಷ್ಯದಿಂದ ವಿವರಿಸಿದ್ದಾರೆ. ಇದನ್ನು ಹೆಚ್ಚು ವಿಸ್ತಾರವಾಗಿ ಶ್ರೀವತ್ಸಾಂಕ ಮಿಶ್ರರೂ ರಚಿಸಿದ್ದಾರೆ. ಆದರೆ ಕಾಲಾನುಕ್ರಮದಲ್ಲಿ ಸಂಪ್ರದಾಯದ ಸ್ಥಿರತೆಗೆ ಕೊರತೆ ಉಂಟಾಯಿತು. ಗ್ರಾಹ್ಯಾಗ್ರಾಹ್ಯಗುಣಗಳಿಂದ ಮಿಶ್ರಿತವಾದ ಅನೇಕ ವಿವರ ಗ್ರಂಥಗಳು ಹುಟ್ಟಿಕೊಂಡವು. ಟಂಕ, ಭರ್ತೃಪ್ರಪಂಚ, ಭರ್ತೃಮಿತ್ರ, ಭರ್ತೃಹರಿ, ಬ್ರಹ್ಮದತ್ತ, ಶಂಕರ, ಭಾಸ್ಕರ–ಇತ್ಯಾದಿಯವರುಗಳಿಂದ ರಚಿಸಲ್ಪಟ್ಟ ಗ್ರಂಥಗಳು ಜಿಜ್ಞಾಸುಗಳಿಗೆ ಗೊಂದಲಮಯವಾಗಿದೆ. ಪರಿಣಾಮವಾಗಿ ಯಥಾರ್ಥ ಜ್ಞಾನ ಲಭಿಸು

ತ್ತಿಲ್ಲ. ಬದಲಾಗಿ ವಿಪರೀತಾರ್ಥಗಳನ್ನು ಮಾಡಿಕೊಂಡು, ಅದರ ಮುಖಾಂತರ ತತ್ತ್ವಗಳು ಸರಿಯಾಗಿ ಉಂಟಾಗುತ್ತಿಲ್ಲ. ಆದುದರಿಂದ ಈ ತತ್ತ್ವಗಳ ಸೂಕ್ತ ತಿಳುವಳಿಕೆಯನ್ನು ನೀಡುವುದಕ್ಕಾಗಿ ಈ ಪ್ರಕರಣ ಗ್ರಂಥವು ಪ್ರಾರಂಭಿಸಲ್ಪಟ್ಟಿದೆ

ಭಾಟ್ಟ ಮತ್ತು ಪ್ರಭಾಕರ ಇತ್ಯಾದಿಯವರ ಪೂರ್ವ ಮೀಮಾಂಸಕರ ವಿಚಾರಧಾರೆಗಳು ಪ್ರಬಲವಾಗಿದ್ದುವು. ಪರಿಣಾಮವಾಗಿ ದೇವರಿಲ್ಲ, ಸೃಷ್ಟಿಯೇ ಆಗಿಲ್ಲ ಎನ್ನುವ ವಾದಗಳೊಂದಿಗೆ ಪರಮಪದ ನಿರಾಕರಣೆ ಹಾಗೂ ಪಾಂಚ ರಾತ್ರಾಗಮದ ವಿರೋಧವು ಪ್ರಾಬಲ್ಯವನ್ನು ಪಡೆದಿತ್ತು. ಇದೊಂದು ಕಡೆ ತಲೆಯೆತ್ತಿತ್ತು.

ಮತ್ತೊಂದು ಕಡೆ ಆದಿಶಂಕರರ ಅದ್ವೈತ ಮತವು ಹೆಚ್ಚು ಪ್ರಚಾರ ದಲ್ಲಿತ್ತು. ಅಜ್ಞಾನದಿಂದ ಬ್ರಹ್ಮವಸ್ತುವು ಜೀವಾತ್ಮನಾಗುವನು, ನಿರ್ವಿಶೇಷ ಜ್ಞಪ್ತಿ ಮಾತ್ರವೇ ಪರಮಾರ್ಥವಾದ ಆತ್ಮತತ್ತ್ವ, ಜ್ಞಾತೃ ಇತ್ಯಾದಿಗಳ ಎಲ್ಲ 'ತ್ರಿಪುಟಿ' ಸಂಬಂಧಗಳು ಭ್ರಾಂತಿ ಕಲ್ಪಿತ–ಎನ್ನುವ ವಾದಗಳೂ ಹೆಚ್ಚು ಪ್ರಚಾರ ದಲ್ಲಿದ್ದುವು.

ಇದರೊಂದಿಗೆ ಬಹಳಷ್ಟು ಬದಲಾವಣೆಗಳನ್ನು ಪಡೆದು, ಶುದ್ಧ ಹಿಂದೂ ರೂಪವನ್ನು ಪಡೆಯುವ ಸನ್ನಾಹದಲ್ಲಿದ್ದ ಬೌದ್ಧ ಮತವು ಹಿಂದೂ ವೇದಾಂತ ದಲ್ಲಿ ಪ್ರವೇಶಿಸುವ ಪ್ರಯತ್ನದಲ್ಲಿತ್ತು.

ಮತ್ತೊಂದೆಡೆ ಮಾಯಾವಾದವನ್ನು ಒಪ್ಪದ ಭೇದಾಭೇದ ಸಿದ್ಧಾಂತ ಗಳು ಕೆಲವೊಂದು ಕೆಟ್ಟ ವಾದಗಳನ್ನು ಮುಂದೆ ತಂದಿದ್ದುವು.

ಇವೆಲ್ಲವುಗಳನ್ನೂ ಏಕಾಂಗಿ ವೀರರಾಗಿ ಯಾಮುನರು ಎದುರಿಸಿ, ಹೋರಾಟ ನಡೆಸಬೇಕಾಗಿತ್ತು. ಇದಕ್ಕಾಗಿಯೇ ಭಾರತ ಭೂಮಿಯಲ್ಲಿ ಯಾಮುನರು ಜನಿಸಿರಬೇಕೆಂದು ರಾಮಾನುಜರು ತಮ್ಮ 'ವೇದಾಂತ ಸಂಗ್ರಹ'ದಲ್ಲಿ

ಪರಂಬ್ರಹ್ಮೈವಾಜ್ಞಂ ಭ್ರಮ ಪರಿಗತಂ ಸಂಸರತಿ ತ–
ತ್ಪರೋಪಾಧ್ಯಾಲೀಢಂ ವಿವಶಮಶುಭಸ್ಯಾಸ್ಪದಮಿತಿ |
ಶ್ರುತಿ ನ್ಯಾಯಾಪೇತಂ ಜಗತಿ ವಿತತಂ ಮೋಹನ ಮಿದಂ
ತಮೋಯೇ ನಾಪಾಸ್ತಂ ಸಹಿ ವಿಜಯತೇ ಯಾಮುನ ಮುನಿಃ ||

ಎಂದು ಸರಿಯಾಗಿಯೇ ನಿರೂಪಿಸಿದ್ದಾರೆ.

ಇಲ್ಲಿ ಮತ್ತೊಂದು ಪ್ರಭಾವವಿರುವುದನ್ನು ವಿವರಿಸಬೇಕು. ಆಗ ಪಾಶುಪತ, ವೈಶೇಷಿಕ, ಯೋಗ, ಸಾಂಖ್ಯ ಸಿದ್ಧಾಂತಗಳು ಆಸ್ತಿಕದ ಗೋಮುಖ ವ್ಯಾಘ್ರದ ಸೋಗನ್ನು ಧರಿಸಿ, ಕುತರ್ಕದಿಂದ ಕೂಡಿದ ನಾಸ್ತಿಕವಾದವನ್ನು ಹರಡುತ್ತಿದ್ದರು.

ಅಂದಿನ ನ್ಯಾಯಶಾಸ್ತ್ರವು ಅಸ್ತಿಕ ದರ್ಶನಕ್ಕೆ ಅವಶ್ಯಕವಾದುದೇನೋ ಹೌದು. ಆದರೆ ಈ ಶಾಸ್ತ್ರಜ್ಞರು ಶಾಸ್ತ್ರಪ್ರಾಮಾಣ್ಯಕ್ಕೆ ಬೆಲೆ ಕೊಡುತ್ತಿರಲಿಲ್ಲ. ಈಶ್ವರನ ಜಗತ್ತಿನ ಉಪಾದಾನ ಕಾರಣವನ್ನು ಒಪ್ಪುತ್ತಿರಲಿಲ್ಲ. ಸ್ವತಂತ್ರರಾಗಿ ಇವರು ವೇದಾಂತದ ಸ್ಥಾನವನ್ನು ಆಕ್ರಮಿಸಲು ಪ್ರಯತ್ನಿಸುತ್ತಿದ್ದರು.

ಈ. ಮಾಡಬೇಕಾದ್ದು : ಇಷ್ಟೇ ಅಲ್ಲದೆ ಬಹಳಸಮಯದ ನಂತರ 'ನಾಲಾಯಿರ ದಿವ್ಯಪ್ರಬಂಧ'ಗಳು ನಾಥಮುನಿಗಳ ಮುಖಾಂತರ ಬೆಳಕಿಗೆ ಬಂದಿದ್ದುವು. ಆದರೆ ಅವುಗಳ ಪರಿಶೋಧನೆ, ಪರಿಷ್ಕರಣೆಯಲ್ಲೇ ಜೀವಿತದ ಹೆಚ್ಚು ಸಮಯವನ್ನು ಅವರು ಅವುಗಳ ಪ್ರಚಾರ ಮಾಡಲು ಸಮಯಾವಕಾಶವಿಲ್ಲವಾಗಿತ್ತು. ಅವರ ಜೀವನವೆಲ್ಲ ಮೇಲೆ ತಿಳಿಸಿದ ಕಾರ್ಯಕ್ಕೆ ವಿನಿಯೋಗವಾಗಿತ್ತು. ಆ ಪ್ರಬಂಧಗಳಲ್ಲಿನ ಅನುಭವಗಳ ಸಿದ್ಧಾಂತಗಳನ್ನು ನಿರ್ವಿವಾದ, ತರ್ಕಬದ್ಧ ಸಿದ್ಧಾಂತದ ಚೌಕಟ್ಟಿನಲ್ಲಿ ಅಳವಡಿಸಿ, ವಿಶಿಷ್ಟಾದ್ವೈತ ಸಿದ್ಧಾಂತದ ಪ್ರತಿಷ್ಠಾಪನಾ ಕಾರ್ಯ ಇನ್ನೂ ಆಗಿರಲಿಲ್ಲ. ತತ್ತ್ವ ಸ್ಥಾಪನೆಯ ಕಾರ್ಯ ಇನ್ನೂ ಪ್ರಾರಂಭವೇ ಆಗಿರಲಿಲ್ಲ. ಪಾಂಚರಾತ್ರಾಗಮವು ಪ್ರಮಾಣಪೂರ್ವಕವಾಗಿ ಸ್ಥಾಪಿಸಲ್ಪಡಬೇಕಾಗಿದ್ದಿತು. ಇದಿಲ್ಲದೆ ಈ ರೀತಿಯ ಭಗವದನುಭವ ಹಾಗೂ ತರ್ಕಬದ್ಧ ಸಿದ್ಧಾಂತ ಸ್ಥಾಪನೆ ಸಾಧ್ಯವಿರಲಿಲ್ಲ. ಇದಿಲ್ಲದೆ ಉಭಯವೇದಾಂತವೆನ್ನುವ ಶ್ರೀವೈಷ್ಣವ ದರ್ಶನದ ಮೂಲಸ್ವರೂಪವನ್ನು ರೂಪಿಸುವಂತಿರಲಿಲ್ಲ.

ಇವೆಲ್ಲವುಗಳೊಂದಿಗೆ ಭಗವದ್ಗೀತೆಗೆ ಅನೇಕ ಕುತರ್ಕಗಳು, ದುರ್ವಾದಗಳು ಹುಟ್ಟಿಕೊಂಡಿದ್ದುವು. ಇದರಿಂದ ರಕ್ಷಿಸಲು ಆ ಮಹಾಗ್ರಂಥಕ್ಕೆ ವಿಶಿಷ್ಟಾದ್ವೈತ ಪರವಾದ ಭಾಷ್ಯವೊಂದು ರೂಪುಗೊಳ್ಳಬೇಕಾಗಿದ್ದಿತು.

ಇವೆಲ್ಲ ಮಹಾಕಾರ್ಯಗಳನ್ನು ಒಬ್ಬಂಟಿಗರಾಗಿ ಯಾಮುನರು ನೆರವೇರಿಸಬೇಕಾಗಿತ್ತು. ಇವಲ್ಲದೆ ಶ್ರೀವೈಷ್ಣವ ದರ್ಶನದ ಪ್ರಚಾರ ಸಾಧ್ಯವಿಲ್ಲ ಎಂಬುದನ್ನು ಸರಿಯಾದ ರೀತಿಯಲ್ಲಿ ಯಾಮುನರು ಅರ್ಥಮಾಡಿಕೊಂಡಿದ್ದರು.

ಉ. ಗುರುಸ್ಮರಣೆ : ಇದಕ್ಕಾಗಿ ಅವರು ತಮ್ಮ ಶೇಷಜೀವಿತವನ್ನು ಮುಡುಪಾಗಿಟ್ಟರು. ಇದಕ್ಕೆ ತಾತ ನಾಥಮುನಿ ಹಾಗೂ ಅವರ ಶಿಷ್ಯರ ಕಡೆಯೂ

ನೋಡಿಕೊಂಡು ತಮ್ಮ ಸೂಕ್ಷ್ಮ ಹಾಗೂ ಬಲಯುತ ಬುದ್ಧಿ, ಜ್ಞಾನಗಳ ಸದುಪಯೋಗವನ್ನೂ ಪಡೆಯಬೇಕಾಯಿತು. ಇದಕ್ಕಾಗಿ ತಮ್ಮ ಗ್ರಂಥಗಳಲ್ಲಿ ಅಲ್ಲಲ್ಲಿ ನಾಥಮುನಿಗಳನ್ನು ಇವರು ಸ್ಮರಿಸಿದ್ದಾರೆ. ಆಗಮಪ್ರಾಮಾಣ್ಯದಲ್ಲಿನ ಅಂತಿಮಶ್ಲೋಕ ಹೀಗಿದೆ–

ತತ್ತ್ವಕಲ್ಪಿತಯುಕ್ತಿ ಭಿಃ ಶಕಲಶಃ ಕೃತ್ವಾ ತದೀಯಂ ಮತಂ
ಯಚ್ಛಿಷ್ಯೈಃ ಉದಮರ್ದಿಸಾತ್ತ್ವತ ಮತಸ್ಪರ್ಧಾವತಾಂ ಉದ್ಧತಿಃ |
ಯಚ್ಚೇತಃ ಸತತಂ ಮುಕುಂದ ಚರಣ ದ್ವಂದ್ವಾಸ್ಪದಂ ವರ್ತತೇ
ಜೀಯಾತ್ ನಾಥಮುನಿಃ ಸ್ವಯೋಗ ಮಹಿಮ ಪ್ರತ್ಯಕ್ಷ ತತ್ತ್ವತ್ರಯ ||

'ಸಾತ್ತ್ವತ ಮತಕ್ಕೆ ಸ್ಪರ್ಧಿಗಳಾದ ಕೆಟ್ಟರೀತಿಯ ವಾದಗಳನ್ನು ಅವುಗಳಿಗೆ ಸರಿಯಾದ ಪ್ರತಿಯುಕ್ತಿಗಳಿಂದ ಛಿದ್ರ ಮಾಡಿ, ಆ ವಿರೋಧ ಮತಗಳನ್ನು ಬೇರು ಸಹಿತ ಕಿತ್ತುಹಾಕಬಲ್ಲ ಶಕ್ತಿಯು ನಾಥಮುನಿಗಳ ಶಿಷ್ಯರಿಗೆ ಮಾತ್ರವೇ ಉಂಟು. ಹೀಗಿರುವಾಗ ಮೋಕ್ಷ ನೀಡುವ ಮುಕುಂದನ ಚರಣಾರವಿಂದಗಳನ್ನು ಸದಾಕಾಲವೂ ತಮ್ಮ ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡು, ತಮ್ಮ ಭಕ್ತಿಯೋಗ ಬಲವೊಂದರಿಂದಲೇ ತತ್ತ್ವತ್ರಯಗಳನ್ನು ಸಾಧನೆ ಮಾಡಿಕೊಂಡ ನಾಥಮುನಿಗಳಿಗೆ ಜಯವಾಗಲಿ !'

ಈ ರೀತಿಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ತಾತ ನಾಥಮುನಿಗಳು ಇವರಿಗೆ ಗುರುಗಳಾಗಿ, ಮಾರ್ಗದರ್ಶಿಗಳಾಗಿ, ಅವರ ಕನಸುಗಳನ್ನು ಪೂರ್ಣ ಮಾಡುವವರಾದರು. ಈ ಜವಾಬ್ದಾರಿಯು ತಮ್ಮ ಕೈಯಿಂದ ಸಾಧ್ಯವಾಗದಿದ್ದಾಗ ತಮ್ಮ ಶಿಷ್ಯರ ಮೂಲಕ ಆ ಭಾರವನ್ನು ರಾಮಾನುಜರಿಗೆ ರವಾನಿಸಿದರು. ರಾಮಾನುಜರು ಮಾತ್ರ ಈ ಜವಾಬ್ದಾರಿಯನ್ನು ಮುಂದೂಡದೆ ತಾವೊಬ್ಬರೇ ನಿರ್ವಹಿಸಿ, ಶ್ರೀವೈಷ್ಣವ ದರ್ಶನಕ್ಕೆ ಒಂದು ಸಮಸ್ಥಿತಿಯನ್ನು ಒದಗಿಸಿಕೊಟ್ಟರು. ಅದಕ್ಕೊಂದು ಪೂರ್ಣರೂಪ ನೀಡಿ, ಪ್ರಪಂಚಾದ್ಯಂತ ಹಾಗೂ ಮುಂದಿನ ಪೀಳಿಗೆಗೆ ಆದರ್ಶಪ್ರಾಯರಾದರು. ಭದ್ರವಾದ ಬುನಾದಿಯ ಮೇಲೆ ವಿಶಿಷ್ಟಾದ್ವೈತ ಸಿದ್ಧಾಂತವನ್ನು ತುಂಬಾ ಅಚ್ಚುಕಟ್ಟಾಗಿ ರೂಪಿಸಿದರು.

'ಸ್ತೋತ್ರರತ್ನ'ದ ಆರಂಭದ ಮೂರು ಶ್ಲೋಕಗಳು ಹಾಗೂ ಕೊನೆಯಲ್ಲಿ ನಾಥಮುನಿಗಳನ್ನು ಸ್ಮರಿಸಿದ್ದಾರೆ.

ಯಾಮುನರು ನಮ್ಮಾಳ್ವಾರರನ್ನೂ ಕೂಡ ಗುರುಸ್ಥಾನದಲ್ಲಿಟ್ಟು ಪೂಜಿಸಿದ್ದಾರೆ. 'ಸ್ತೋತ್ರರತ್ನ'ದಲ್ಲಿ ಅವರನ್ನು ಸ್ಮರಿಸಿದ್ದಾರೆ. ಎರಡೂ ಸ್ತೋತ್ರಗಳಲ್ಲಿ ಆಳ್ವಾರರನ್ನು, ತಮ್ಮ ಮೇಲಾದ ಅವರ ಪ್ರಭಾವವನ್ನು ವಿವರಿಸಿದ್ದಾರೆ. ಅವರಿಗೆ ಆಳ್ವಾರರೇ ಸಕಲವೂ ಆಗಿದ್ದು, ಅವರ ಶ್ರೀಮದ್ಪಾದಯುಗಗಳಿಗೆ ಶಿರಸಾ ನಮಿಸುತ್ತಾರೆ. ಯಾಮುನರು ತಮ್ಮ ಪ್ರತಿ ರಚನೆಯಲ್ಲೂ ನಮ್ಮಾಳ್ವಾರರನ್ನು ನೆನೆಸಿದ್ದಾರೆ. ಇದು ಎರಡು ತಲೆಗಳ ನಂತರವೂ ಕಾಣಿಸಿಕೊಂಡಿದೆ. 'ಈಡು ಮುಪ್ಪತ್ತಾರಾಯಿರಪ್ಪಡಿ' ವ್ಯಾಖ್ಯಾನದಲ್ಲೂ ಇವರ ಪರವಾಗಿ ನಮ್ಮಾಳ್ವಾರರನ್ನು ವಂದಿಸುವ ರೀತಿಯು ಮುಂದುವರೆದು 'ಆಳವಂದಾರ್ ನಿರ್ವಾಹಗಳು' ವರ್ಣನೆಯೂ ಅದರಲ್ಲಿದೆ.

ಊ. ಸಿದ್ಧಾಂತ ಪ್ರತಿಪಾದನೆ : ತಾವು ರೂಪಿಸಿದ ಸಿದ್ಧಾಂತವನ್ನು ಯಾಮುನರು ತಮ್ಮ ಗ್ರಂಥಗಳ ಮೂಲಕ ಪ್ರತಿಪಾದಿಸಿದ್ದಾರೆ. ಇವರು ಬರೆದಿರುವ ಗ್ರಂಥಗಳೆಂದರೆ–1. ಸಿದ್ಧಿತ್ರಯ, 2. ಆಗಮಪ್ರಾಮಾಣ್ಯ, 3. ಗೀತಾರ್ಥ ಸಂಗ್ರಹ, 4. ಮಹಾಪುರುಷ ನಿರ್ಣಯ, 5. ಶ್ರೀಸ್ತುತಿ (ಚತುಃ ಶ್ಲೋಕೀ), 6. ಶ್ರೀಸ್ತೋತ್ರರತ್ನ, 7. ಕಾಶ್ಮೀರಾಗಮ ಪ್ರಾಮಾಣ್ಯ.

1. ಸಿದ್ಧಿತ್ರಯ : ಯಾಮುನರ ಗ್ರಂಥಗಳಲ್ಲೆಲ್ಲ ಇದು ಪ್ರಮುಖವಾದುದು. ಇದರ ಅನೇಕ ಭಾಗಗಳು ನಷ್ಟವಾಗಿವೆ. ಉಳಿದಿರುವವುಗಳಲ್ಲೇ ಯಾಮುನರ ಪ್ರತಿಭೆಯ ಸ್ಪಷ್ಟ ಕಲ್ಪನೆ ಕಂಡುಬರುವುದು.

ಇದರಲ್ಲಿ ಮೂರು ಭಾಗಗಳಿವೆ. ಅವೆಂದರೆ ಆತ್ಮಸಿದ್ಧಿ, ಈಶ್ವರಸಿದ್ಧಿ ಹಾಗೂ ಸಂವಿತ್ಸಿದ್ಧಿ–ಉಳಿದೆರಡರ ಆದಿ ಅಂತ್ಯಗಳು ಲುಪ್ತವಾಗಿದ್ದು, ಅಪೂರ್ಣವಾಗಿದ್ದು, ಆತ್ಮಸಿದ್ಧಿ ಮಾತ್ರ ಸಂಪೂರ್ಣವಾಗಿ ದೊರೆತಿದೆ.

ಅ) ಆತ್ಮಸಿದ್ಧಿ: ಇದರ ಪ್ರಾರಂಭದಲ್ಲಿ ಯಾಮುನರು ಶ್ರಿಯಃ ಪತಿಯಾದ ಭಗವಂತನನ್ನು ಸ್ತುತಿಸಿದ್ದಾರೆ. ಈ ಮಂಗಳ ಶ್ಲೋಕದಲ್ಲೇ ಯಾಮುನರ ಸಿದ್ಧಾಂತವೆಲ್ಲ ಅಡಗಿದೆ. ಈ ಶ್ಲೋಕವೇ ಮುಂದೆ ರಾಮಾನುಜರ ಶ್ರೀಭಾಷ್ಯದ ಮಂಗಳ ಶ್ಲೋಕಕ್ಕೂ ಪ್ರೇರಣೆಯಾಗಿದೆ.

ಪ್ರಕೃತಿ ಪುರುಷ ಕಾಲವ್ಯಕ್ತ ಮುಕ್ತಾ ಯದಿಚ್ಛಾಂ
ಅನುವಿದಧತಿ ನಿತ್ಯಂ ನಿತ್ಯಸಿದ್ಧೈರನೇಕೈಃ |
ಸ್ವಪರಿಚರಣ ಭೋಗೈಃ ಶ್ರೀಮತಿ ಪ್ರೀಯಮಾಣೇ
ಭವತು ಮಮ ಪರಸ್ಮಿನ್ ಪೂರುಷೇ ಭಕ್ತಿಭೂಮಾ ||

'ಶ್ರಿಯಃ ಪತಿಯಾದ ಪರಮಪುರುಷನನ್ನು ಅನೇಕ ನಿತ್ಯಸೂರಿಗಳು ಸದಾಕಾಲದಲ್ಲೂ ಸೇವೆ ಮಾಡುತ್ತಾ, ಆ ಸೇವೆಯನ್ನೇ ಅವರು ಭೋಗ್ಯವನ್ನಾಗಿ ಸ್ವೀಕರಿಸುವರು. ಅಂತಹ ಪರಮಾತ್ಮನ ಸಂಕಲ್ಪವನ್ನು ಪ್ರಕೃತಿಯೂ, ಬದ್ಧ ಪುರುಷರೂ, ಮುಕ್ತರೂ, ಕಾಲವೂ ಸದಾಕಾಲದಲ್ಲಿಯೂ ನಿರ್ವಹಿಸುತ್ತಿರುತ್ತವೆ. ಅಂತಹ ಪ್ರೀತ್ಯಾಸ್ಪದನಾದ ಪರಮಪುರುಷ ಭಗವಂತನಲ್ಲಿ ನನಗೆ ಪರಮಭಕ್ತಿ ಎನ್ನುವ ವಿಶೇಷವು ಉಂಟಾಗಲಿ'.

ಈ ಶ್ಲೋಕದ ಕೊನೆಯ ಪಾದದಲ್ಲಿ ಹೇಳಲ್ಪಟ್ಟ (ಭಕ್ತಿಭೂಮಾ) ಭಕ್ತಿ ವಿಶೇಷವನ್ನೇ, ರಾಮಾನುಜರು 'ಶೇಮುಷಿ ಭಕ್ತಿರೂಪಾ' ಎಂದು ಪ್ರಶಂಸಿಸಿದ್ದಾರೆ.

ಸ್ವಯಂಪ್ರಯೋಜನರೂಪವಾದ, ಪರಭಕ್ತಿ, ಪರಜ್ಞಾನಗಳಿಗೆ ಮೀರಿದ ಒಂದು ಅನುಭವ ವಿಶೇಷವೆಂಬ ಹೊಸರೂಪದ ಶ್ರೀವೈಷ್ಣವ ದರ್ಶನ (ಸಿದ್ಧಾಂತ) ದ ಮೂಲಬೀಜವನ್ನು ಈ ಶ್ಲೋಕ ಹೊಂದಿರುವುದನ್ನು ಎತ್ತಿ ತೋರಿಸುತ್ತದೆ.

"ಸಮಗ್ರ ಭಕ್ತಿಯೋ ಗಾಯ" ಎಂದು ಸ್ತೋತ್ರರತ್ನದಲ್ಲಿ ಯಾಮುನರು ತಮ್ಮ ತಾತ ನಾಥಮುನಿಗಳನ್ನು ಪ್ರಶಂಸಿಸಿದ್ದಾರೆ. ಈ ಪ್ರಯೋಗದ ಮುಖಾಂತರ ಭಕ್ತಿ ಸಿದ್ಧಾಂತವನ್ನು ನಾಥಮುನಿಗಳು ಪ್ರಚಾರ ಪಡಿಸಿದರೆಂಬ ಸೂಚನೆ ಇದೆ. ಆದರೂ 'ಭಕ್ತಿ ಭೂಮಾ' ಎನ್ನುವುದೇ ಈ ಸಿದ್ಧಾಂತಕ್ಕೆ ಇದುವರೆಗಿನ ಅತಿ ಪುರಾತನ ಹಾಗೂ ಮೊಟ್ಟಮೊದಲ ನಿರೂಪಣೆಯಾಗಿದೆ.

ಆ ಭಗವಂತನು ತ್ರಿವಿಧ ಚೇತನ ಹಾಗೂ ತ್ರಿವಿಧ ಅಚೇತನರಿಗೆ-ಎರಡು ವರ್ಗಕ್ಕೂ ಸರ್ವಾವಸ್ಥೆಯಲ್ಲಿ ಒಡೆಯನು ಎಂಬುದನ್ನು ಸೂಚಿಸಿದೆ. ಇದೇ ವಿಚಾರವನ್ನು ಯಾಮುನರು ಮುಂದೆಯೂ 'ಸ್ವಾಧೀನ ತ್ರಿವಿಧ ಚೇತನಾ ಚೇತನ ಸ್ವರೂಪ ಸ್ಥಿತಿ ಪ್ರವೃತ್ತಿ ಭೇದಂ'ಎಂಬುದರ ಮುಖಾಂತರ ಸೂಚಿಸಿದ್ದಾರೆ.

ಮುಂದೆ ರಾಮಾನುಜರು ಈ ವಿಷಯವನ್ನು ತಮ್ಮ ಗದ್ಯಗಳು ಹಾಗೂ ಇತರೇ ಗ್ರಂಥಗಳಲ್ಲಿ ಒರುವ ಭಗವದ್ವರ್ಣನೆಯಲ್ಲಿ ವಿವರಿಸಿದ್ದಾರೆ.

ಪರಮಾತ್ಮನ ಪರಿಚರಣವೇ ಕೈಂಕರ್ಯವೆಂಬ ಪರಮಭೋಗ ಎಂಬುದನ್ನೂ ಇದು ಸ್ವಯಂ ಪ್ರಯೋಜನವಾದ ಪರಭಕ್ತಿ ಪ್ರೇರಿತ ಎಂಬುದನ್ನೂ, ಈ ಭಕ್ತಿಯು ವಿಶದತಮವಾದ ಭಗವಂತನ ಸಾಕ್ಷಾತ್ಕಾರ ರೂಪವಾದ ಪರಜ್ಞಾನದಿಂದ ಕೂಡಿದುದೇ 'ಭಕ್ತಿಭೂಮಾ' ಎಂಬ ಸೂಕ್ತಿಯು ಸೂಚಿಸುತ್ತದೆ.

ಇಂತಹ ಸೂಕ್ತಿಗಳ ವಿಶೇಷ ವಿವರಣೆಯು ರಾಮಾನುಜರ ಗದ್ಯತ್ರಯ ದಲ್ಲಿ ಬಹಳವಾಗಿ ಕಂಡುಬರುತ್ತದೆ

ಈ ರೀತಿಯಲ್ಲಿ ಈ ಮಂಗಳ ಶ್ಲೋಕವು ವಿಶಿಷ್ಟಾದ್ವೈತ ಸಿದ್ಧಾಂತ ಸಾರ ಸಂಗ್ರಹವಾಗಿದೆ.

ಹೀಗೆ ಯಾಮುನರು ತಮ್ಮ ಮಂಗಳಶ್ಲೋಕದಲ್ಲಿ ತಾವು ಎಂದೆಂದಿಗೂ ಭಗವಂತನ ಭಕ್ತನಾಗಿರಬೇಕೆಂಬ ತಮ್ಮ ಉತ್ಕಟ ಅಭಿಲಾಷೆಯನ್ನು ವ್ಯಕ್ತ ಗೊಳಿಸಿದ್ದಾರೆ.

'ಆತ್ಮಸಿದ್ಧಿ'ಯ ಸಂಗ್ರಹ ರೂಪವನ್ನು ಶ್ರೀ ವಿ. ಎಸ್. ಸಂಪತ್ಕುಮಾರಾ ಚಾರ್ಯರು ಹೀಗೆ ವಿವರಿಸಿದ್ದಾರೆ–

ಆತ್ಮ ಹಾಗೂ ಪರಬ್ರಹ್ಮನನ್ನು ಕುರಿತು ವಿದ್ವಾಂಸರಲ್ಲಿರುವ ಗೊಂದಲ ಮಯವಾದ ಪರಸ್ಪರ ವಿರೋಧವುಳ್ಳ ಅಭಿಪ್ರಾಯಗಳನ್ನು ತಿಳಿಸಿದ್ದಾರೆ.

ಆತ್ಮನ ಬಗ್ಗೆ 1. ದೇಹವೇ ಆತ್ಮ, 2. ಆತ್ಮವು ದೇಹದಿಂದ ಭಿನ್ನ ವಾದರೂ ಜ್ಞಾನವುಯ, 3. ಅದು ಚಿತ್, 4. ಅದು ಬೃಹದಾಕಾರವುಳ್ಳದ್ದು, 5. ಅದು ಅಣುವಿನಷ್ಟು ಚಿಕ್ಕದು, 6. ಅದು ದೇಹದಷ್ಟು ದೊಡ್ಡದು, 7. ಅದು ಕ್ಷಣಿಕವಾದದ್ದು, 8. ಅದು ದೇಹವಿರುವಷ್ಟು ಕಾಲ ಇರುತ್ತದೆ, 9. ಅದು ವಿಶ್ವವು ಇರುವವರೆಗೆ ಇರುತ್ತದೆ, 10. ಅದು ಮೋಕ್ಷ ಲಭಿಸುವ ವರೆಗೆ ಇರುತ್ತದೆ, 11. ಅದು ಅಂತ್ಯವಿಲ್ಲದ್ದು, 12. ಎಲ್ಲಾ ದೇಹಗಳಲ್ಲಿರು ವುದು ಒಂದೇ ಆತ್ಮ. 13. ಬೇರೆ ಬೇರೆ ದೇಹಗಳಲ್ಲಿ ಬೇರೆ ಬೇರೆ ಆತ್ಮಗಳಿರು ತ್ತವೆ–ಇತ್ಯಾದಿ.

ಪರಬ್ರಹ್ಮನನ್ನು ಕುರಿತು ಗೊಂದಲಮಯವಾದ ವಾದಗಳಿದ್ದುವು– 1. ಅವನು ವಿಷ್ಣು, ಬ್ರಹ್ಮ, ಶಿವ, ಸೂರ್ಯ ಇತ್ಯಾದಿಗಳ ರೂಪದಲ್ಲಿರುತ್ತಾನೆ, 2. ಅವನು ಒಂದೇ ರೂಪದಲ್ಲಿರುವವನು, 3. ಆತ್ಮನಿಗೂ, ಪರಬ್ರಹ್ಮನಿಗೂ ವ್ಯತ್ಯಾಸವೇ ಇಲ್ಲ, 4. ಆತ್ಮನಿಗೂ, ಪರಬ್ರಹ್ಮನಿಗೂ ವ್ಯತ್ಯಾಸವಿಲ್ಲದಿರುವಿಕೆ ಹಾಗೂ ವ್ಯತ್ಯಾಸವಿರುವಿಕೆ ಉಂಟು, 5. ಪರಬ್ರಹ್ಮನು ಯಜಮಾನ, ಆತ್ಮ ಅವನ ಸೇವಕ, 6. ಪರಬ್ರಹ್ಮನು ಒಡೆಯ, ಆತ್ಮನು ಅವನ ವಸ್ತು–ಇತ್ಯಾದಿ.

ಮೋಕ್ಷವನ್ನು ಕುರಿತು ಭಿನ್ನಮತಗಳಿವೆ–ಅಜ್ಞಾನವನ್ನು ನಾಶಗೊಳಿಸಿ ಆತ್ಮನು ನಿರ್ಗುಣನಾಗಿ ಬ್ರಹ್ಮನೊಂದಿಗೆ ಒಂದಾಗುತ್ತದೆ; ಅವನಂತೆಯೇ ಆಗಿ,

ಆನಂದಮಯನಾಗಿ ಎಂದೆಂದಿಗೂ ಭಗವಂತನ ಕಿಂಕರನಾಗುತ್ತಾನೆ; ಭಕ್ತಿ, ಜ್ಞಾನ ಮತ್ತು ಕರ್ಮ ಮಾರ್ಗಗಳೆಲ್ಲದರಿಂದ ಮೋಕ್ಷಸಾಧನೆಯಾಗುತ್ತದೆ ಅಥವಾ ಇವುಗಳಲ್ಲಿ ಯಾವುದಾದರೂ ಒಂದರಿಂದ ಮೋಕ್ಷ ಲಭ್ಯ.

ಈ ಭಿನ್ನಮತಗಳನ್ನೆಲ್ಲ ಆಚಾರ್ಯರು ತಿಳಿಸಿ, ಪ್ರಮಾಣಗಳ ಆಧಾರದ ಮೇಲೆ ಇವುಗಳಲ್ಲಿ ಯಾವುದು ಸರಿಯಾದುದು ಎಂಬುದನ್ನು ತಿಳಿಯಬೇಕಾದ ಅವಶ್ಯಕತೆಯನ್ನು ಮನಗಂಡು ಆತ್ಮಸಿದ್ಧಿ ಎಂಬ ಗ್ರಂಥವನ್ನು ರಚಿಸುತ್ತಿರುವುದಾಗಿ ಹೇಳಿಕೊಂಡಿದ್ದಾರೆ.

ಮೊದಲು ತಮಗೆ ಲಭ್ಯವಿದ್ದ ಹಿಂದಿನವರ ವ್ಯಾಖ್ಯಾನಗಳನ್ನು ಪರಿಶೀಲಿಸಿದ್ದಾರೆ. ಬಾದರಾಯಣರು ಆತ್ಮದ ನಿಜಸ್ವರೂಪವನ್ನು ತಿಳಿಸಲು ಬ್ರಹ್ಮಸೂತ್ರಗಳನ್ನು ರಚಿಸಿದರು; ದ್ರಮಿಡಾಚಾರ್ಯರು ಇವುಗಳನ್ನು ಕುರಿತು ಸಂಗ್ರಹವಾಗಿ ವ್ಯಾಖ್ಯಾನವನ್ನು ರಚಿಸಿದರು; ಇದನ್ನು ಶ್ರೀವತ್ಸಾಂಕ ಮಿಶ್ರರು ಬಹು ವಿಸ್ತಾರವಾಗಿ ಪ್ರತಿಪಾದಿಸಿದರು.

ಇವರಲ್ಲದೆ ಟಂಕ ಭರ್ತೃಪ್ರಪಂಚ, ಭರ್ತೃಮಿತ್ರ, ಭರ್ತೃಹರಿ, ಬ್ರಹ್ಮದತ್ತ, ಶಂಕರ, ಭಾಸ್ಕರ ಮುಂತಾದವರೆಲ್ಲರೂ ವ್ಯಾಖ್ಯಾನಿಸಿದ್ದಾರೆ. ಇವರಲ್ಲಿ ಬ್ರಹ್ಮನಂದಿನ್ ಅಥವಾ ಟಂಕರನ್ನು ಶ್ರೇಷ್ಠ ಆಚಾರ್ಯರೆಂದು ರಾಮಾನುಜಾಚಾರ್ಯರು ಗೌರವಿಸಿದ್ದಾರೆ. ಭರ್ತೃಹರಿಯು ಸ್ಫೋಟವಾದವನ್ನು ಪ್ರತಿಪಾದಿಸಿರುವ ವ್ಯಾಖ್ಯಾನಕಾರ, ಶಂಕರರು ಹೆಸರಾಂತ ಅದ್ವೈತಾಚಾರ್ಯರು, ಭಾಸ್ಕರಾಚಾರ್ಯರು ಭೇದಾಭೇದವಾದಿ.

ಯಾಮುನರು ಇವರೆಲ್ಲರ ವಾದಗಳನ್ನೂ ಚೆನ್ನಾಗಿ ಪರಿಶೀಲಿಸಿ ತಮ್ಮದೇ ಆದ ಮತವನ್ನು ನಿರೂಪಿಸಿದ್ದಾರೆ. ಸಾಂಖ್ಯ, ಮೀಮಾಂಸಾ ದರ್ಶನಗಳನ್ನು ಪರಿಶೀಲಿಸಿ, ಅವುಗಳನ್ನು ನಿರಾಕರಿಸಿದ್ದಾರೆ. ಆತ್ಮವೆಂಬುದು ದೇಹ, ಮನಸ್ಸು, ಇಂದ್ರಿಯಗಳು; ವ್ಯಾನ, ಉದಾನಗಳಿಗಿಂತ ಬೇರೆಯಾದುದು; ಇದು ಸ್ವಯಂ ಪ್ರಕಾಶ. ತನ್ನ ಅರಿವಿಗಾಗಿ ಇತರೇ ಯಾವುದನ್ನೂ ಅವಲಂಬಿಸಿಲ್ಲ; ಇದು ಶಾಶ್ವತವಾದದ್ದು ಮತ್ತು ಪ್ರತಿ ದೇಹದಲ್ಲೂ ಪ್ರತ್ಯೇಕ ಅಸ್ತಿತ್ವ ಉಳ್ಳದ್ದು; ಆನಂದರೂಪಿಯಾದದ್ದು; ಪ್ರಜ್ಞೆಗಿಂತಲೂ ಬೇರೆಯಾದದ್ದು ಎಂದು ಛಾಂದೋಗ್ಯ ಮುಂತಾದ ಉಪನಿಷತ್ತುಗಳ ಪ್ರಮಾಣಗಳಿಂದ ಪ್ರತಿಪಾದಿಸಿದ್ದಾರೆ.

2. ಈಶ್ವರ ಸಿದ್ಧಿ : ಸಿದ್ಧಿತ್ರಯಗಳಲ್ಲಿ ಇದು ಎರಡನೆಯದು. ಇದರ

ಆರಂಭ ಅಂತ್ಯಗಳು ನಷ್ಟವಾಗಿರುವುದಲ್ಲದೆ, ದೊರೆತಿರುವ ಗ್ರಂಥಭಾಗವೂ ಕೂಡ ಕಡಿಮೆ ಪ್ರಮಾಣದ್ದೇ ಆಗಿದೆ. ಈಗ ದೊರೆತಿರುವುದು 18 ಶ್ಲೋಕಗಳನ್ನು ಒಳಗೊಂಡ ಗದ್ಯಭಾಗ ಮಾತ್ರ.

ದೊರೆತಿರುವ ಭಾಗದ ಪ್ರಾರಂಭ ಶ್ಲೋಕ ಹೀಗಿದೆ–

ತತ್ರ ಕಸ್ಯ ಚಿದೇಕಸ್ಯ ವಶೇವಿಶ್ವಂ ಪ್ರವರ್ತತೇ |
ಇತಿ ಸಾಧಯಿತಂ ಪೂರ್ವಂ ಪೂರ್ವ ಪಕ್ಷಂ ಪ್ರಚಕ್ಷ್ಮಹೇ ||

ಜಗತ್ತು ನಿರುಪಾಧಿಕನಾದ ಓರ್ವ ಈಶ್ವರನ ವಶದಲ್ಲಿ ಇದೆ ಎಂಬುದೇ ಈ ಗ್ರಂಥದ ಸ್ವರೂಪ ಎಂಬುದನ್ನು ಈ ಶ್ಲೋಕ ತಿಳಿಸುತ್ತದೆ. ಈಶ್ವರನ ಅಸ್ತಿತ್ವವಾದ ವಿರೋಧಿಗಳ ವಾದವನ್ನು ನಿರೂಪಿಸಿ, ನೈಯಾಯಿಕರಿಂದ ಮೊದಲು ಉತ್ತರ ಹೇಳಿಸಿ, ಮುಂದೆ ಸಿದ್ಧಾಂತಕ್ಕೆ ಬರುವಷ್ಟರಲ್ಲಿ ಗ್ರಂಥವು ತ್ರುಟಿತವಾಗಿದೆ.

ನ್ಯಾಯ; ಮೀಮಾಂಸಾ ದರ್ಶನಗಳ ಲೋಪದೋಷಗಳನ್ನು ಎತ್ತಿ ಹಿಡಿದು ಒರೆಗೆ ಹಚ್ಚಿ ಪರಬ್ರಹ್ಮನ ಅಸ್ತಿತ್ವವನ್ನು ಯಾಮುನರು ಇದರಲ್ಲಿ ನಿರೂಪಿಸಿದ್ದಾರೆ.

ಈಶ್ವರನು ಯಾವ ಪ್ರಮಾಣದಿಂದಲೂ ಸಿದ್ಧಪಡಿಸಿಲ್ಲವೆಂಬುದು ಮೀಮಾಂಸಕರ ಪೂರ್ವ ಪಕ್ಷ. ಈಶ್ವರ ಸಾಕ್ಷಾತ್ಕಾರ ಎಂಬುದು ಅಂತರ್ಬಹಿರಿಂದ್ರಿಗಳಿಂದಲ್ಲದೇ ಕೇವಲ ಭಾವನಾಪ್ರಕರ್ಷಣರೂಪವಾದ ಭಕ್ತಿಯಿಂದಲೇ ಆಗುತ್ತದೆ ಎಂಬುದು ಅತೃಪ್ತಿಕರ ಉತ್ತರ. ಈಶ್ವರನನ್ನು ಹೇಗೆ ಸಾಧಿಸಲು ಸಾಧ್ಯವಿಲ್ಲ ಎಂಬುದನ್ನು ಮೀಮಾಂಸಕ ಪಕ್ಷದಲ್ಲಿ ವಿಸ್ತಾರವಾಗಿ ತೋರಿಸಲಾಗಿದೆ.

ಮೀಮಾಂಸಕರಲ್ಲಿನ ದೋಷಗಳನ್ನು ಹುಡುಕಿ ಪ್ರತಿಪಕ್ಷವನ್ನು ಮಾಡುವುದನ್ನು ನೈಯ್ಯಾಯಿಕರು ಸಂಕ್ಷೇಪವಾಗಿ ಅನುವಾದಿಸಿದ್ದಾರೆ. ಅನುಮಾನ ಪ್ರಮಾಣದಿಂದ ಇನರು ಈಶ್ವರನ ಅಸ್ತಿತ್ವವನ್ನು ಸ್ಥಾಪಿಸಲು ಪ್ರಯತ್ನಿಸಿರುವುದು ಚನ್ನಾಗಿ ಪ್ರತಿಪಾದಿಸಲ್ಪಟ್ಟಿದೆ. ಆರೋಗ್ಯವಾಗಿರುವ ದೇಹಕ್ಕೆ ಒಂದೇ ಚೈತನ್ಯಮಯ ಆತ್ಮನು ಯಜಮಾನನಾಗಿರುವಂತೆ ಇಡೀ ಜಗತ್ತಿಗೂ ಈಶ್ವರನೇ ಒಡೆಯ.

ನನ್ವೇಕ ಚೇತನಾಧೀನಂ ವಿವಾದಾಧ್ಯಾಸಿತಂ ಜಗತ್ |
ಅಚೇತನೇನಾರಬ್ಧತ್ವಾತ್ ಅರೋಗ ಸ್ವಶರೀರವತ್ ||

ಇಂತಹ ಈಶ್ವರನು ಸಕಲವನ್ನೂ ಸಾಕ್ಷಾತ್ಕಾರ ಮಾಡಿಕೊಳ್ಳುವ ಕೌಶಲ ವನ್ನು ಪಡೆದಿದ್ದಾನೆಂಬುದು ಅವನ ಕಾರ್ಯರೂಪವಾದ ಜಗತ್ತಿನಿಂದ ತಿಳಿದು ಕೊಳ್ಳಬಹುದು.

ತಥಾ ಸರ್ವಾರ್ಥ ನಿರ್ಮಾಣ ಸಾಕ್ಷಾತ್ಕರಣ ಕೌಶಲಂ ।
ಕಾರ್ಯತ್ವಾ ದೇವ ಜಗತಃ ತತ್ಕರ್ತುರನುಮೀಯತಾಂ ॥

ಮೀಮಾಂಸರು ಇದನ್ನು ಒಪ್ಪುವುದಿಲ್ಲ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಗಳು ಈಶ್ವರನಿಂದಾದುವಲ್ಲ, ಅದಕ್ಕೆ ಉತ್ಪತ್ತಿಯೇ ಇಲ್ಲ ಎಂದು ವಾದಿಸುತ್ತಾರೆ.

ಮಾನವನಿಗೆ ಸ್ವಾರ್ಥ, ಪರಾರ್ಥ ಭಾವವಿರಬೇಕಾದುದು ನ್ಯಾಯ. ನೀವು ಹೇಳುವ ಈಶ್ವರನಿಗೆ ಇವೆರಡೂ ಅಸಾಧ್ಯ. ಆದರಿಂದ ಅವನಿಂದ ಸೃಷ್ಟಿ ಸಾಧ್ಯವಿಲ್ಲ. ಅವನು ಅವಾಪ್ತ ಸಮಸ್ತ ಕಾಮನಾದುದರಿಂದ ಅವನಿಗೆ ಸ್ವಾರ್ಥ ವಿಲ್ಲ. ಅವನೇ ಸೃಷ್ಟಿ ಮಾಡಿದ್ದು ನಿಜವಾಗಿದ್ದರೆ ತನ್ನ ಕರುಣೆಯಿಂದ ಮಾನವ ರಿಗೆ ಸುಖವೊಂದನ್ನೆ ನೀಡುತ್ತಿದ್ದ. ಕರ್ಮಕ್ಕೆ ಅನುಸಾರ ಚೇತನರು ಹುಟ್ಟಿ, ಕಷ್ಟ, ಸುಖಗಳನ್ನು ಅನುಭವಿಸುವರೆಂದರೆ, ಪರಮಾತ್ಮನಿಗೆ ಸ್ವತಂತ್ರ ಹಾನಿ ಯಾಗುವುದು' ಎಂಬುದು ಮೀಮಾಂಸಕರ ವಾದ. ಇವನ್ನೆಲ್ಲ ನೈಯ್ಯಾಯಿಕರು ನಿರಾಕರಿಸಿ ಈಶ್ವರನ ಪರಮಪರತ್ವವನ್ನು ಸ್ಥಾಪಿಸುವ ಘಟ್ಟಕ್ಕೆ ಗ್ರಂಥ ತುಂಡಾಗಿದೆ.

ಹೀಗಾಗಿ ನೈಯ್ಯಾಯಿಕರ ಅಪೂರ್ಣ ಉತ್ತರವನ್ನೆ ಯಾಮುನರ ಸಂಪೂರ್ಣ ಸಿದ್ಧಾಂತವೆಂದು ಡಾ|| ಎಸ್. ಎನ್. ದಾಸಗುಪ್ತಾ ಮುಂತಾದವರು ತಪ್ಪಾಗಿ ವ್ಯಾಖ್ಯಾನಿಸಿದ್ದಾರೆ.

ಆದರೆ ಈಶ್ವರನಿಗೆ ಜನರ ಧರ್ಮಾಧರ್ಮ ಜ್ಞಾನವಿದ್ದು, ಇದರ ಅನುಸಾರ ಹಾಗೂ ಅವರುಗಳ ಕರ್ಮಗಳಿಗೆ ಅನುಸಾರ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವನು ಅವನಿಗೆ ಶರೀರವಿಲ್ಲ, ಆದರೂ ಸಂಕಲ್ಪ ಮಾತ್ರದಿಂದ ಜಗತ್ತನ್ನು ನಿರ್ವಹಿಸುವವನು. ಅವನು ಅಪಾರ ಜ್ಞಾನಸಂಪನ್ನನು.-ಇತ್ಯಾದಿ ನೈಯ್ಯಾಯಿ ಕರು ಮಾಡಿರುವ ಪಕ್ಷವನ್ನು ದಾಸಗುಪ್ತರು ಯಾಮುನರ ಪಕ್ಷವೆಂದೇ ದಾಸ ಗುಪ್ತರು ತಪ್ಪಾಗಿ ಗ್ರಹಿಸಿದ್ದಾರೆ. ಇದೇ ಏನಾದರೂ ಯಾಮುನರ ಸಿದ್ಧಾಂತ ವಾಗಿದ್ದರೆ ವಿಶಿಷ್ಟಾದ್ವೈತ ದರ್ಶನದ ಮುಖ್ಯ ಪ್ರತಿತಂತ್ರವಾದ ಶರೀರ-ಶರೀರಿ ರೂಪ ಸಂಬಂಧವು ಜಗತ್ತಿಗೆ ಹಾಗೂ ಈಶ್ವರನಿಗೆ ಇಲ್ಲವೆಂದೇ ಯಾಮುನರು

ಒಪ್ಪಿದಂತಾಗುತ್ತದೆ. ಇದು ಸಿದ್ಧಾಂತ, ಸಂಪ್ರದಾಯ ಹಾಗೂ ಯಾಮುನರ ಇತರೇ ಗ್ರಂಥಗಳಲ್ಲಿನ ಅಭಿಪ್ರಾಯಗಳಿಗೆ ವಿರೋಧವಾಗುವುದು. ಯಾಮುನರು ನೈಯ್ಯಾಯಿಕರ ಮತವನ್ನು ಒಪ್ಪಿಲ್ಲ ಎಂಬುದು ಆಗಮ ಪ್ರಾಮಾಣ್ಯದಲ್ಲಿನ ವಿವರಗಳು ಸ್ಪಷ್ಟಪಡಿಸಿವೆ. ಆತ್ಮಸಿದ್ಧಿಯಲ್ಲಿಯೂ ಇದೇ ಅಭಿಪ್ರಾಯವು ಪ್ರತಿಪಾದಿತವಾಗಿದೆ. ಇದಕ್ಕೆ ಆಧಾರವಾಗಿ 'ಸಂಬಂಧ ವಿಮರ್ಶ' ಎನ್ನುವ ಮುಂದಿನ ಭಾಗದಲ್ಲಿ ವಿವರಿಸಿರುವುದಾಗಿ, ಆತ್ಮಸಿದ್ಧಿಯಲ್ಲಿ ಶ್ರೀ ಯಾಮುನರೇ ಹೇಳಿಕೊಂಡಿದ್ದಾರೆ. ಆದರೆ ಆ ಭಾಗ ಲುಪ್ತವಾಗಿದೆ. ಇದರಿಂದ ದಾಸಗುಪ್ತರಿಗೆ ಭ್ರಮೆಯಾಗಿದೆ.

ಆತ್ಮಸಿದ್ಧಿಯಲ್ಲೇ ಒಂದುಕಡೆ–

'ನಾನಾತ್ವೇ ಸತ್ಯೇವ ಅಭೇದೋ ನಾಮ ಅನ್ವಯಃ
ಅಂಶಾಂಶಿ ಭಾವೆ ಲಕ್ಷಣಃ.............................
ಶೇಷ ಶೇಷಿತ್ವರೂಪಃ ಪರತಂತ್ರ ಲಕ್ಷಣಃ....ಇತಿ'

ಎಂದು ಆಚಾರ್ಯರು ಸ್ಪಷ್ಟವಾಗಿ ಬರೆದಿದ್ದಾರೆ.

ಆದುದರಿಂದ ಯಾಮುನರು ಈ ಕೃತಿಯಲ್ಲಿ ನೈಯ್ಯಾಯಿಕರ ಪಕ್ಷಕ್ಕೆ ಸೇರಿದವರು ಎಂಬುದು ಸರಿಯಲ್ಲ ಎಂದು ತೀರ್ಮಾನಿಸಬಹುದಾಗಿದೆ.

ಶ್ರೀ ರಾಮಾನುಜರು 'ಈಶ್ವರ ಸಿದ್ಧಿ'ಯನ್ನು ಆಧರಿಸಿಯೇ ಶ್ರೀಭಾಷ್ಯದಲ್ಲಿ 'ಶಾಸ್ತ್ರಯೋಗಿತ್ವಾಧಿಕರಣ'ದ ಭಾಷ್ಯದಲ್ಲಿ ಶಬ್ದ ಅನುಮಾನಕ್ಕೆ ಮೇಲೆ ಸ್ಥಾಪಿಸಿರುವುದರಿಂದ ಇಲ್ಲಿನ ನೈಯ್ಯಾಯಿಕವಾದವು ಪೂರ್ವ ಪಕ್ಷಕ್ಕೆ ಸೇರಿದ್ದುದಾಗಿದೆ. ಇದಕ್ಕೆ ಮೇಲಿನ ಸಿದ್ಧಾಂತದಲ್ಲಿ ಶರೀರ–ಶರೀರಿ ಭಾವಗಳನ್ನು ಹೇಳಿರುವುದರಿಂದ, ಈಶ್ವರ ಸಿದ್ಧಿಯ ಭಾಗದಲ್ಲಿ ಯಾಮುನರು ಎಂತಹ ಸಿದ್ಧಾಂತವನ್ನು ಮಂಡಿಸಿದ್ದರು ಎಂಬುದನ್ನು ಊಹಿಸಬಹುದು. ಇದಕ್ಕೆ ಆಧಾರ ಶ್ರೀಭಾಷ್ಯವೇ ಆಧಾರ.

ದಾಸಗುಪ್ತರ ಕೆಲವೊಂದು ವಾಕ್ಯಗಳು ಆಧಾರವಿಲ್ಲದ್ದು ಎಂಬುದಕ್ಕೆ 'ಶ್ರೀಸ್ತೋತ್ರರತ್ನ'ವೇ ಆಧಾರ.

ಒಟ್ಟಿನಲ್ಲಿ ಈ ಕೃತಿಯ ನಷ್ಟ ಭಾಗಗಳಿಂದ ನಮಗೆ ತೊಂದರೆಯಾಗಿದ್ದರೂ, ಅದರ ಭಾವವು ರಾಮಾನುಜರ ಕೃತಿಗಳಲ್ಲಿ ಸಂಗ್ರಹಿತವಾಗಿರುವುದರಿಂದ ಆ ತೊಂದರೆಯು ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ.

ಇ. ಸಂವಿತ್ಸಿದ್ಧಿ : ಈ ಗ್ರಂಥವು ಯಾಮುನರ ಗ್ರಂಥಗಳಲ್ಲೆಲ್ಲ ಹೆಚ್ಚು

ನಷ್ಟವನ್ನು ಅನುಭವಿಸಿರುವಂತಹುದು, ಪೂರ್ಣರೂಪದಲ್ಲಿ ದೊರಕದಿರುವುದು. ಆದರೆ ಇದರಲ್ಲಿ ಉಳಿದುಕೊಂಡಿರುವಷ್ಟು ಭಾಗವು ತುಂಬಾ ಸಹಾಯಕವಾಗಿದ್ದು, ಅಮೂಲ್ಯವಾದುದೂ, ಮಹತ್ವಪೂರ್ಣವಾದುದೂ ಆಗಿದೆ. ಶ್ರೀವೈಷ್ಣವ ಸಿದ್ಧಾಂತ ಹಾಗೂ ಭಾರತೀಯ ವೇದಾಂತಕ್ಕೆ ಆಚಾರ್ಯರ ಅಪೂರ್ವ ಕೊಡುಗೆ ಯಾಗಿದೆ ಇದು.

ಇದರಲ್ಲಿ ಅಂದು ಪ್ರಚಲಿತವಿದ್ದ ಇತರ ದರ್ಶನಗಳ ತತ್ತ್ವಗಳನ್ನು ಪರಿಶೀಲಿಸಿರುವುದಲ್ಲದೆ, ವಿಶೇಷವಾಗಿ ಅದ್ವೈತ ಸಿದ್ಧಾಂತವನ್ನು ವಿಶ್ಲೇಷಿಸಿ, ತಮ್ಮದೇ ಆದ ಸಿದ್ಧಾಂತ (ವೇದಾಂತ)ವನ್ನು ಆಚಾರ್ಯರು ನಿರೂಪಿಸಿದ್ದಾರೆ. ಆದುದರಿಂದ ಅದ್ವೈತ ಪರವಾದ ಅರ್ಥವನ್ನು ನಿವಾರಿಸಿ, ವಿಶಿಷ್ಟಾದ್ವೈತ ಪರವಾದ 'ತತ್ತ್ವತ್ರಯ' ಸಿದ್ಧಾಂತವನ್ನು ಪ್ರತಿಪಾದಿಸುವುದು ಈ ಕೃತಿಯ ಮುಖ್ಯ ಗುರಿಯಾಯಿತು.

ನಷ್ಟವಾಗಿರುವ ಪ್ರಾರಂಭ ಭಾಗದಲ್ಲಿ ಬೌದ್ಧ, ಜೈನ, ಸಾಂಖ್ಯ, ಮೀಮಾಂಸಾ ಪಕ್ಷಗಳ ವಾದಗಳನ್ನು ವಿಪುಲವಾಗಿ ಚರ್ಚಿಸಿರಬೇಕು ಎನ್ನುವ ಊಹೆಗೆ, ಉಳಿದಿರುವ ಭಾಗದ ಪ್ರಾರಂಭದಲ್ಲಿ ಆಧಾರಗಳು ದೊರೆತಿವೆ. ಅಲ್ಲದೆ ಈ ಭಾವನೆಗೆ ಇಂಬುಕೊಡುವ, ಸಹಾಯಕವಾಗುವ ಮತ್ತೊಂದು ಆಧಾರವು ಸುದರ್ಶನ ಸೂರಿಗಳು. ಇವರ 'ಶ್ರುತಿ ಪ್ರಕಾಶಿಕೆ' ಎನ್ನುವ ಶ್ರೀಭಾಷ್ಯ ವ್ಯಾಖ್ಯಾನ ಗ್ರಂಥದಲ್ಲಿ ಇದರ ನಷ್ಟವಾಗಿರುವ ಭಾಗಗಳಲ್ಲಿನ ಅನೇಕ ಶ್ಲೋಕ ಗಳನ್ನು ಉದಾಹರಿಸಿದ್ದಾರೆ.

ಈ ಕೃತಿಯು 'ಸಿದ್ಧಿತ್ರಯ'ಗಳಲ್ಲಿ ಮೊದಲನೆಯದು. ಇದರಲ್ಲಿನ ಅನೇಕ ವಿಷಯ-ವಿವರಗಳನ್ನು ಶ್ರೀ ರಾಮಾನುಜರು ವೇದಾರ್ಥ ಸಂಗ್ರಹ ಹಾಗೂ ಶ್ರೀಭಾಷ್ಯಗಳಲ್ಲಿ ಬಳಸಿಕೊಂಡಿದ್ದಾರೆ.

ಆಚಾರ್ಯರು ಹೇಳುತ್ತಾರೆ–'ಬ್ರಹ್ಮನೊಬ್ಬನೇ ಸತ್ಯ, ಉಳಿದುದೆಲ್ಲವೂ ಮಿಥ್ಯೆ; ಬ್ರಹ್ಮನು ನಿರ್ಗುಣನು–ಎಂಬ ವಾದವಿದೆ. ಈ ತತ್ವವನ್ನು ಎತ್ತಿಹಿಡಿ ಯಲು ಉಪನಿಷತ್ತುಗಳನ್ನು ಭೇದಶ್ರುತಿ, ಅಭೇದಶ್ರುತಿ ಹಾಗೂ ಘಟಕಶ್ರುತಿ ಎಂದು ಮೂರು ಬಗೆಗಳಾಗಿ ವರ್ಗೀಕರಿಸಲಾಗಿದೆ. ಇಂತಹ ವರ್ಗೀಕರಣಕ್ಕೆ ಉಪನಿಷತ್ತುಗಳಲ್ಲಿ ಯಾವ ಸೂಚನೆಯೂ ಇಲ್ಲ ಎಂಬುದು ಗಮನಾರ್ಹ.

ಅಂದರೆ ಕೃತಿಯು ಪ್ರಾರಂಭದಲ್ಲಿ ಅದ್ವೈತ ಪೂರ್ವಪಕ್ಷದ ಹಿನ್ನೆಲೆಯಲ್ಲಿ

ಬರುವ ನೋಲೆ ತಿಳಿಸಿದ ವರ್ಗೀಕರಣಗಳ ಏಕಾರ್ಥ ಸ್ಥಾಪನೆಯ ವಿಷಯದ ಬಗ್ಗೆ ಬಹುದೀರ್ಘವಾದ ಚರ್ಚೆ ಇದೆ.

'ಸದೇವಸೋಮ್ಯ ಇದಮಗ್ರ ಆಸೀತ್ ಏಕಮೇವಾದ್ವಿತೀಯಂ' ಎನ್ನುವ ಉಪನಿಷತ್ ವಾಕ್ಯಕ್ಕೆ ಅದ್ವೈತ ಪರವಾಗಿ ಅರ್ಥ ನೀಡಿರುವುದನ್ನು ಆಚಾರ್ಯರು ನಿರಾಕರಿಸಿದ್ದಾರೆ.

ಸತ್ ಒಂದೇ ಸೃಷ್ಟಿಗೆ ಪೂರ್ವದಲ್ಲಿ ಅದ್ವಿತೀಯವಾಗಿದ್ದಿತು. ಇದರಲ್ಲಿ 'ಅದ್ವಿತೀಯ' ಶಬ್ದಕ್ಕೆ ಬ್ರಹ್ಮನಲ್ಲದ ಸಕಲ ವಸ್ತುಗಳು ಪ್ರತಿಷೇಧ ರೂಪದಲ್ಲಿ ಸರಿಹೊಂದುವುದಿಲ್ಲ. ಇದನ್ನು ವಿಸ್ತಾರವಾಗಿ ವಿವರಿಸುತ್ತಾ,

ಯಥೈಕ ಏವ ಸವಿತಾ ನ ದ್ವಿತೀಯೋ ನಭಸ್ಥಲೇ |
ಇತ್ಯುಕ್ತ್ಯಾ ನ ಹಿ ಸಾವಿತ್ರಾಃ ನಿಷಿಧ್ಯಂತೇಽತ್ರ ರಶ್ಮಯಃ ||

ಆಕಾಶದಲ್ಲಿ ಸೂರ್ಯನು ಒಬ್ಬನೇ ಇದ್ದಾನೆ ಎಂದಾಗ ಅವನ ಕಿರಣಗಳೂ ಸೇರಿವೆ ಎಂದೇ ಅರ್ಥವಾಗುತ್ತದೆ.

ಇದೇ ರೀತಿಯಲ್ಲಿ 'ಸತ್' ಎನ್ನುವ ಭಗವಂತನು ಒಬ್ಬನೇ ಆದರೂ ಅವನೊಂದಿಗೆ ಚಿದಚಿತ್ತುಗಳೂ ಇರುತ್ತವೆ ಎಂಬುದನ್ನು ಯಾಮುನರು ಪ್ರತಿಪಾದಿಸಿದ್ದಾರೆ.

ಇಲ್ಲಿ ಸುಪ್ರಸಿದ್ಧ ಚೋಳರಾಜನ ಉದಾಹರಣೆಯನ್ನು ನೀಡುತ್ತಾರೆ–
ಯಥಾ ಚೋಳ ನೃಪಃ ಸಮ್ರಾಟ್ ಅದ್ವಿತೀಯೋಽದ್ಯ ಭೂತಲೇ ||
ಇತಿ ತತ್ತುಲ್ಯ ನೃಪತಿ ನಿವಾರಣಾಪರಂ ವಚಃ ||
ನತು ತದ್ಭೃತ್ಯ ಕಲತ್ರಾದಿ ನಿಷೇಧಕಂ ||

'ಸಮ್ರಾಟ್' ಚೋಳರಾಜ (ರಾಜ ರಾಜ ಚೋಳ 995–1012) ನು ಈಗಿನ ಭೂತಕಾಲದಲ್ಲಿ ಅದ್ವಿತೀಯನು ಎಂದರೆ ಅವನಿಗೆ ಸಮನಾದ ಬೇರೊಬ್ಬ ರಾಜನು ಇಲ್ಲ ಎಂಬುದನ್ನು ತೋರಿಸುತ್ತದೆ. ಅವನಿಗೆ ಸರಿಸಮನಾದ ಬೇರೊಬ್ಬ ದೊರೆ ಇರುವುದನ್ನು ನಿರಾಕರಿಸುತ್ತದೆ. ಆದರೆ ಅವನಿಗೆ ಮಡದಿ, ಮಕ್ಕಳು, ಭೃತ್ಯರು ಇರಲಿಲ್ಲ ಎಂಬುದರ್ಥವಲ್ಲ.

ಅದ್ದರಿಂದ ನೋಲೆ ಹೇಳಿದ ಉಪನಿಷದ್ವಾಕ್ಯವು ಪರಬ್ರಹ್ಮನಿಗೆ ಸರಿಸಮನಾದ ಬೇರೊಂದೂ ಇಲ್ಲ, ಅವನು ಅದ್ವಿತೀಯನು ಎಂದು ಹೇಳುತ್ತದೆಯೇ ಹೊರತು ಅವನಿಗೆ ಶೇಷಭೂತರಾದ ಜೀವಾತ್ಮ ಮುಂತಾದುವು ಇರುವುದೇ ಇಲ್ಲ

ಎಂದು ಹೇಳಲಾಗುವುದಿಲ್ಲ. ಅವನಿಗೆ ಸಮಾನನಾದವನು ಮತ್ತೊಬ್ಬನು ಇಲ್ಲ ಎಂಬುದೇ ಇದರರ್ಥ.

ದ್ವಿತೀಯ ಗಣನಾ ಯೋಗ್ಯಃ ನಾಸ್ತೀದಸ್ತಿ ಭವಿಷ್ಯತಿ |
ಸಮೋವಾऽಭ್ಯಧಿಕೋವಾऽಸ್ಯಯೋ ದ್ವಿತೀಯಸ್ತು ಗಣ್ಯತೇ ||

ಪರಮಾತ್ಮನಿಗೆ ಸಮನಾದವನು, ಅಧಿಕನಾದವನು ಹಿಂದೆಯೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರುವುದಿಲ್ಲ ಎಂಬುದು ಶ್ರುತ್ಯರ್ಥ.

ಒಬ್ಬ ಸೂರ್ಯನು ಆಕಾಶದಲ್ಲಿ ಪ್ರಕಾಶಿಸುತ್ತಾನೆ, ಇಬ್ಬರು ಸೂರ್ಯರಲ್ಲ ಎಂದ ಮಾತ್ರಕ್ಕೆ ಇತರೇ ಪ್ರಕಾಶಿಸುವ ವಸ್ತುಗಳು ಆಕಾಶದಲ್ಲಿ ಇಲ್ಲ ಎಂದರ್ಥವಲ್ಲ.

ಈ ರೀತಿಯಲ್ಲಿ ಯಾಮುನರು ಪರಬ್ರಹ್ಮನ ಅದ್ವಿತೀಯತ್ವವನ್ನು ಅನೇಕ ನಿದರ್ಶನಗಳಿಂದ ತೋರಿಸಿಕೊಟ್ಟಿದ್ದಾರೆ.

ಯಾವುದೇ ಸಿದ್ಧಾಂತವಾಗಲಿ ಯುಕ್ತಿ ಸಂಗತವಾಗಿಲ್ಲದಿದ್ದರೆ ಅದನ್ನು ಒಪ್ಪುವುದಕ್ಕೆ ಸಾಧ್ಯವಾಗುವುದಿಲ್ಲ ಎಂದಿದ್ದಾರೆ ಆಚಾರ್ಯರು.

ಜೀವಾತ್ಮನನ್ನು ಈಗ ಅವರು ಈ ರೀತಿ ನಿರೂಪಿಸುತ್ತಾರೆ–

ದೇಹೇಂದ್ರಿಯಃ ಮನಃ ಪ್ರಾಣ ಧೀಭ್ಯೋ ಅನ್ಯೋ ಅನನ್ಯ ಸಾಧನಃ |
ನಿತ್ಯೋವ್ಯಾಪೀ ಪ್ರತಿಕ್ಷೇತ್ರಮಾತ್ಮಾ ಭಿನ್ನಃ ಸ್ವತಃ ಸುಖೀ ||

ಜೀವಾತ್ಮನು ಪ್ರತಿ ಶರೀರದಲ್ಲೂ ಭಿನ್ನನಾಗಿರುವನು. ಅವನು ಸ್ವಭಾವತಃ ನಿತ್ಯ, ವ್ಯಾಪಿ ಮತ್ತು ಸುಖಿಃ ಆಗಿರುವನು. ಹಾಗೆಯೇ ದೇಹ, ಇಂದ್ರಿಯ, ಮನಸ್ಸು, ಪ್ರಾಣ ಮತ್ತು ಬುದ್ಧಿಗಳಿಗಿಂತ ಅವನು ಬೇರೆಯಾದವನೂ, ಅನನ್ಯ ಸಾಧನನೂ ಆಗಿದ್ದಾನೆ, ಎಂದು ಖಚಿತವಾಗಿ ಅವರು ನಿರೂಪಿಸಿದ್ದಾರೆ.

ಬ್ರಹ್ಮನ ಗುಣಗಳು ಅನಂತ, ಚಿತ್, ಅಚಿತ್ ಮುಂತಾದುವುಗಳೆಲ್ಲವೂ ಅವನ ಅಧೀನ. ಇವು ಅವನ ಆಧಾರವಿಲ್ಲದೆ ಸ್ವತಂತ್ರವಾಗಿ ವರ್ತಿಸಲಾರವು. ಮುಮುಕ್ಷುವು ಬ್ರಹ್ಮನ ಈ ಅರಿವನ್ನು ಪಡೆದಾಗಲೇ ಅವನು ಉಳಿದೆಲ್ಲದರ ಜ್ಞಾನವನ್ನು ಪಡೆಯಬಲ್ಲನು. ಇಲ್ಲದಿದ್ದರೆ ಇಲ್ಲ. ಬ್ರಹ್ಮನ ಗುಣಗಳು ಅವನ ಅದ್ವಿತೀಯತ್ವಕ್ಕೆ ಬಾಧಕವಲ್ಲ. ಆದುದರಿಂದ ಪ್ರಪಂಚವು ಸತ್ಯ ಎಂದು ಆಚಾರ್ಯರು ಸಿದ್ಧಾಂತವನ್ನು ಮಂಡಿಸುತ್ತಾರೆ.

ಅನಂತರ ತತ್ತ್ವಮಸಿ ವಾಕ್ಯದ ವಿಸ್ತಾರ ಚರ್ಚೆ ನಡೆಸಿದ ಆಚಾರ್ಯರು,

ಸಂವಿತ್ ಸ್ವರೂಪದ ಬಗೆಗಿನ ಚರ್ಚೆಯನ್ನು ಮುಂದುವರಿಸುವರು. ಇಲ್ಲಿ ಅದ್ವೈತಿಗಳ ಅವಿದ್ಯಾ ಎಂಬ ಜಗದುಪಾದಾನ ಕಾರಣವಾದವನ್ನು ಪ್ರಬಲವಾಗಿ ಖಂಡಿಸುವರು. ಈ ಸೂಕ್ತಿಗಳಿಂದ ಮುಂದೆ ಶ್ರೀ ರಾಮಾನುಜರು ಸ್ಫೂರ್ತಿಗೊಂಡು, ಏಳು ವಿಧವಾದ ಅನುಪತ್ತಿಗಳನ್ನು ಅದ್ವೈತಕ್ಕೆ ಒಡ್ಡಿ ಶ್ರೀ ಭಾಷ್ಯದಲ್ಲಿ ತೋರಿಸಿದ್ದಾರೆ. ಈ ಮಾದರಿಯ ಯಾಮುನ ಪ್ರತಿಪಾದಿತ ಅಂಶಗಳು ಶ್ರೀ ರಾಮಾನುಜರ ವೇದಾರ್ಥ ಸಂಗ್ರಹದಲ್ಲೂ ಕಾಣಿಸಿಕೊಂಡಿದೆ.

ನಂತರ ಅವಿದ್ಯಾ ಕಲ್ಪಿತ ಏಕಜೀವವಾದವನ್ನೂ, ನಾನಾ ವಿದ್ಯಾ ಕಲ್ಪಿತ ನಾನಾ ಜೀವವಾದವನ್ನೂ ನಿರಾಕರಿಸಿ. ಸಂವಿತ್ತಿನ ನಿರ್ವಿಶೇಷತ್ವ ಪ್ರತಿಪಾದನೆಯು ತಪ್ಪು ಎಂಬುದನ್ನು ತೋರಿಸಿಕೊಟ್ಟು, ಅಲ್ಲಿ ಸವಿಶೇಷತ್ವವನ್ನು ಆಚಾರ್ಯರು ಸ್ಥಾಪಿಸಿದ್ದಾರೆ.

ಪ್ರಪಂಚವು ಸದಸತ್ ವ್ಯತಿರೇಕರೂಪವಾದ ಮಿಥ್ಯೆ ಎಂಬುದನ್ನು ಅವರು ಖಂಡಿಸಿದ್ದಾರೆ. ಭೇದ ಪ್ರಪಂಚದ ಪಾರಮಾರ್ಥಿಕತೆಯ್ನು ಎತ್ತಿ ಹಿಡಿಯುವುದರ ಮೂಲಕ ಮಿತಿ, ಮಾತೃ, ಮೇಯ ಇತ್ಯಾದಿ ವ್ಯವಹಾರ ಪ್ರಪಂಚದ ಸತ್ಯತೆಯನ್ನು ಸ್ಥಾಪಿಸುವ ಮಟ್ಟದಲ್ಲಿ ಗ್ರಂಥವು ಉಪ್ತವಾಗಿದೆ.

ಆಚಾರ್ಯರು ಇದೇ ರೀತಿ ಅನೇಕಾಂತ ವಾದವನ್ನೂ, ಸಾಂಖ್ಯ ಮತ್ತು ಮೀಮಾಂಸಾ ವಾದಗಳನ್ನೂ ನಿರಾಕರಿಸಿದ್ದಾರೆ. ಈ ರೀತಿಯಲ್ಲಿ ಶಾಂಕರವಾದ ವಿವರಣೆಯು ಸೂಕ್ತವಲ್ಲ ಎಂದು ತೋರಿಸಿಕೊಟ್ಟು ಅವರು ತಮ್ಮ ವಾದವನ್ನು ಬಲವಾಗಿ ನಿರೂಪಿಸಿದ್ದಾರೆ.

ಒಟ್ಟಿನಲ್ಲಿ ಈ ಮೂರು ಸಿದ್ಧಿಗಳು ವಿಶಿಷ್ಟಾದ್ವೈತದ ಅಭಿಪ್ರಾಯಕ್ಕೆ ಅತ್ಯಂತ ಬೆಲೆಬಾಳುವ ಮೂಲ ದಾಖಲೆಗಳಾಗಿವೆ. ಮುಂದೆ ಎಲ್ಲ ಆಚಾರ್ಯರೂ ಇವರಿಂದ, ಇವುಗಳಿಂದ ಸ್ಫೂರ್ತಿಯನ್ನು ಪಡೆದಿದ್ದಾರೆ. ಮುಖ್ಯವಾಗಿ ಶ್ರೀ ರಾಮಾನುಜರು ತಮ್ಮ ಶ್ರೀಭಾಷ್ಯವನ್ನು ರಚಿಸುವಾಗ ಈ ಗ್ರಂಥದಿಂದ ಬಹಳ ಸಹಾಯ ಪಡೆದು, ಅನೇಕ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಈ ಎಲ್ಲ ದೃಷ್ಟಿಗಳಿಂದ ಯಾಮುನರ ಕೊಡುಗೆ ಅಪಾರವಾದುದು.

ಈ ಗ್ರಂಥದಲ್ಲಿನ 220 ಶ್ಲೋಕಗಳಷ್ಟೇ ದೊರೆತಿದ್ದರೂ ಅವುಗಳ ಅಗತ್ಯವೇ ಅಪಾರವಾದುದಾಗಿದೆ.

**2.** ಗೀತಾರ್ಥ ಸಂಗ್ರಹ: ಶ್ರೀಕೃಷ್ಣನು ಅರ್ಜುನನಿಗೆ ಅವನ ಕರ್ತವ್ಯ

ವನ್ನು ಬೋಧಿಸಿದ ಅಮೂಲ್ಯ ಕೃತಿ 'ಭಗವದ್ಗೀತೆ'. ಅವನ ವಿಷಾದವನ್ನು ನಿವಾರಿಸಿ, ಜ್ಞಾನ, ಭಕ್ತಿ, ಕರ್ಮಗಳನ್ನು ಶ್ರೀಕೃಷ್ಣನು ಬೋಧಿಸಿದ ಅದ್ಭುತ ಗ್ರಂಥವಿದು. 18 ಅಧ್ಯಾಯಗಳನ್ನು ಒಳಗೊಂಡ ಈ ತಾತ್ತ್ವಿಕ ಗೀತೆಯ ಸಮಾನವಾದ ಅದ್ಭುತ ಗ್ರಂಥ ಪ್ರಪಂಚದಲ್ಲಿ ಬೇರೊಂದಿಲ್ಲ. ಉಪನಿಷತ್ತುಗಳ ತತ್ತ್ವಗಳನ್ನು ಒಳಗೊಂಡ ಈ ಗ್ರಂಥವು ಭಾರತೀಯ ತತ್ವಶಾಸ್ತ್ರದ ಹೃದಯ ವಾಗಿದೆ. ಎಲ್ಲ ಆಚಾರ್ಯರುಗಳಿಗೂ ಇದು ಪ್ರಮಾಣ ಗ್ರಂಥವಾಗಿದ್ದು, ಅವರು ತಮ್ಮ ತಮ್ಮ ಸಿದ್ಧಾಂತಗಳನ್ನು ನಿರೂಪಿಸಿಕೊಳ್ಳಲು ಇದರ ಆಶ್ರಯ ಪಡೆಯು ತ್ತಾರೆ. ಆದುದರಿಂದ ಅನೇಕ ಗೀತಾ ಭಾಷ್ಯಗಳು ರಚನೆಯಾಗಿವೆ. ಇದೇ ರೀತಿ ಯಲ್ಲಿ ಯಾಮುನಾಚಾರ್ಯರೂ ಕೂಡ ತಮ್ಮ ತಾತ ನಾಥಮುನಿಯವರಿಂದ ಬೋಧಿಸಲ್ಪಟ್ಟ ತತ್ತ್ವವನ್ನು ತಮ್ಮ ಗುರು ಮಣಕ್ಕಾಲ್ ನಂಬಿಯವರಿಂದ ಪಡೆದು, ಅದರ ಆಧಾರದ ಮೇಲೆ 'ಗೀತಾರ್ಥ ಸಂಗ್ರಹ' ಕೃತಿಯನ್ನು ರಚಿಸಿ ದರು. ಶ್ರೀವೈಷ್ಣವ ಸಿದ್ಧಾಂತವನ್ನು ಆಚಾರ್ಯರು ಈ ಕೃತಿಯ ಮೂಲಕ ಪ್ರತಿಪಾದಿಸಿದ್ದಾರೆ.

ಇವರು ಗೀತೆಯನ್ನು ಒಂದು ಶಾಸ್ತ್ರವೆಂದು ಕರೆದಿದ್ದಾರೆ. ಇದು ನಾಲ್ಕಾರು ಬಾರಿ ಬಂದಿದೆ. ಉಪನಿಷತ್ತುಗಳಲ್ಲಿನ 32 ಬ್ರಹ್ಮವಿದ್ಯೆಗಳು ತಿಳಿಸುವ ಧ್ಯಾನ ವಿಧಾನಗಳನ್ನು ತಿಳಿಸುವಂತೆ, ಗೀತಾರ್ಥ ಸಂಗ್ರಹದಲ್ಲಿಯೂ 32 ಶ್ಲೋಕಗಳಿವೆ.

ಮೊದಲು ನಾಲ್ಕು ಶ್ಲೋಕಗಳು ಪೀಠಿಕೆಗಳಂತಿವೆ.

ಮೊದಲ ಶ್ಲೋಕದಲ್ಲೇ ಆಚಾರ್ಯರು ಇಡೀ ಗೀತೆಯ ಸಾರವನ್ನು ತುಂಬಿಸಿದ್ದಾರೆ–

ಸ್ವಧರ್ಮ ಜ್ಞಾನ ವೈರಾಗ್ಯ ಸಾಧ್ಯ ಭಕ್ತ್ಯೇಕಗೋಚರಃ |
ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ ಸಮಿೂರತಃ ||

'ಶ್ರೀಮನ್ನಾರಾಯಣನೇ ಪರಂಬ್ರಹ್ಮನು. ಸ್ವಧರ್ಮಾಚರಣೆಯೆಂಬ ಕರ್ಮಯೋಗದಿಂದಲೂ, ತನ್ನ ಆತ್ಮವು ಭಗವಂತನೊಡನೆ ಹೊಂದಿರುವ ಶೇಷರೂಪವಾದ ಸಂಬಂಧದ ಜ್ಞಾನಯೋಗದಿಂದಲೂ, ಭಗವಂತನಲ್ಲದ ಇತರ ವಸ್ತುಗಳನ್ನು ತ್ಯಾಜ್ಯವೆಂದು ಕಾಣುವ ವೈರಾಗ್ಯದಿಂದಲೂ ಸಾಧಿಸಲ್ಪಡುವ ಭಕ್ತಿಯೋಗವೊಂದಕ್ಕೇ ಆ ಭಗವಂತನು ಗೋಚರಿಸುವನು'. ಇದು ಗೀತೆಯ ಪರಮ ರಹಸ್ಯ.

ಗೀತೆಯ 18 ಅಧ್ಯಾಯಗಳನ್ನು ಮೂರು ಭಾಗ (ಷಟ್ಕ)ಗಳಾಗಿ ವಿಭಾಗಿಸಿ, ಆರು ಅಧ್ಯಾಯಗಳಿಗೆ ಒಂದು ಷಟ್ಕವನ್ನು ಮಾಡಿದೆ. ಅಂತೆಯೇ 2, 3, 4 ಶ್ಲೋಕಗಳಲ್ಲಿ ಮೂರು ಷಟ್ಕಗಳ ವಿವರಗಳನ್ನು ತುಂಬಿಸಲಾಗಿದೆ.

ಮೊದಲ ಷಟ್ಕವು 2ನೇ ಶ್ಲೋಕದ ವಿಷಯವಾಗಿದೆ. ಜ್ಞಾನಯೋಗ, ಕರ್ಮಯೋಗಗಳೆಂಬ ಎರಡು ಯೋಗಲಕ್ಷ್ಯವಾದ ಸುಸಂಸ್ಕೃತವಾದ ನಿಷ್ಠೆಗಳನ್ನು ಇಲ್ಲಿ ಚಿತ್ರಿಸಲಾಗಿದೆ.

ಎರಡನೇ ಷಟ್ಕವು 3ನೇ ಶ್ಲೋಕದ ವಿಷಯವಾಗಿದೆ. ಭಕ್ತಿಯೋಗವೆಂಬ ಭಗವತ್ ತತ್ತ್ವವು ಯಥಾತ್ಮ್ಯವಾಗಿರುವುದನ್ನು ಇಲ್ಲಿ ಚಿತ್ರಿಸಲಾಗಿದೆ.

ಮೂರನೇ ಷಟ್ಕವು 4ನೇ ಶ್ಲೋಕದ ವಿಷಯವಾಗಿದೆ. ಪುರುಷ-ಪ್ರಕೃತಿ, ಬದ್ಧ, ಸರ್ವೇಶ್ವರ ಸತ್ತ್ವಗಳ ವಿವೇಚನೆಯನ್ನು ಇಲ್ಲಿ ವಿವರಿಸಲಾಗಿದೆ.

5ನೇ ಶ್ಲೋಕದಲ್ಲಿ ಗೀತಾಶಾಸ್ತ್ರದ ಹಿನ್ನೆಲೆಯ ಛಾಯೆ ಇದೆ. ಇದೇ 5ರಿಂದ 22ರವರೆಗಿನ 18 ಶ್ಲೋಕಗಳಲ್ಲಿ 18 ಅಧ್ಯಾಯಗಳ ವಿಷಯ ಸಂಗ್ರಹಿತವಾಗಿದೆ. ಒಂದೊಂದು ಅಧ್ಯಾಯಕ್ಕೆ ಒಂದೊಂದು ಶ್ಲೋಕ ನಿಗದಿಯಾಗಿದೆ. ಈ ಅಧ್ಯಾಯಗಳ ಬಿಡಿ ಬಿಡಿ ವಿವರ ಈ ಶ್ಲೋಕಗಳಲ್ಲಿದೆ.

ಕಡೆಯ ಹತ್ತು ಶ್ಲೋಕಗಳಲ್ಲಿ ಹಿಂದೆ ಹೇಳಿರುವ ವಿಷಯಗಳನ್ನು ಒತ್ತಿ ಹೇಳಿದೆ. ಅದರೊಂದಿಗೆ ಅದಕ್ಕೆ ಸಂಬಂಧಪಟ್ಟ ಇತರೇ ವಿಷಯಗಳನ್ನು ಹೇಳಿದೆ. ಇವುಗಳಲ್ಲಿ ಕೆಲವು ಸಾಂಪ್ರದಾಯಿಕ ಅರ್ಥ ವಿಶೇಷಗಳ ವಿವರಣೆಯೂ ಸೇರಿದೆ. ಉದಾ: ಕರ್ಮಯೋಗ-ಹಾಗೆಂದರೆ ಯಜ್ಞಾಚರಣೆ, ದಾನ, ತೀರ್ಥಯಾತ್ರೆ, ತಪಸ್ಸು ಇತ್ಯಾದಿಗಳು ಎಂಬುದು. ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡು ಪರಿಶುದ್ಧವಾದ ಆತ್ಮಾನುಭೂತಿಯನ್ನು ಹೊಂದುವುದು ಜ್ಞಾನಯೋಗ. ಪರಮಾತ್ಮನಲ್ಲಿ ಏಕಾಂತ ಪ್ರೀತಿಯಿಂದ ಧ್ಯಾನದಿಂದ ಇರುವುದು ಭಕ್ತಿಯೋಗ. ಪರಮ ಭಕ್ತಿಯಿಂದ ಈ ಮೂರೂ ಯೋಗಗಳ ನಡುವೆ ಅನ್ಯೋನ್ಯತೆಯನ್ನು ಸಾಧಿಸಬಹುದು. ಈ ಭಕ್ತಿಯೋಗವು ಆತ್ಮಜ್ಞಾನ ಸ್ಥಿತಿಯಿಂದ ಮೋಕ್ಷವನ್ನು ಕೂಡ ಸಾಧಿಸಿಕೊಡುತ್ತದೆ. ಇದರಿಂದ ಭಗವತ್ ಪ್ರಾಪ್ತಿಯೂ ಸಾಧ್ಯ. ಭಗವಂತನನ್ನು ಹೊಂದುವುದು ಸುಖ, ಅವನಿಂದ ಅಗಲುವುದು ದುಃಖ ಎಂದು ನಿಜವಾದ ಜ್ಞಾನಿ ತಿಳಿದಿರುತ್ತಾನೆ.

ಜ್ಞಾ ಸೀತಾ ಪರವೈಕಾಂತೀ ತದಾಯತ್ತಾತ್ಮ ಜೀವನಃ |
ತತ್ಸಂಶ್ಲೇಷ ವಿಯೋಗೈಕ ಸುಖದುಃಖ ಸ್ತದೇಕಧೀಃ ||

ಸದಾ ದೇವರ ಧ್ಯಾನ, ಆತನ ಹೆಸರಿನ ಜಪ ಮತ್ತು ಸ್ತುತಿ, ವಂದನ, ಕೀರ್ತನಗಳೊಂದಿಗೆ ಆತನಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದು. ಇಂತಹ ಭಗವತ್‌ಪ್ರೀತಿಯ ಕಾರ್ಯಗಳಿಂದ ಅವನಲ್ಲಿ ಶರಣು ಹೊಂದುವುದೇ ಶರಣಾಗತಿ. ಈ ಗೀತಾಶಾಸ್ತ್ರವು ಇದನ್ನೇ ಪ್ರಧಾನವಾಗಿ ಹೊಂದಿದೆ.

ಈ ರೀತಿಯ ವಿಶಿಷ್ಟಾದ್ವೈತ ಅರ್ಥವುಳ್ಳ ಗ್ರಂಥಗಳಲ್ಲಿ ಗೀತಾರ್ಥ ಸಂಗ್ರಹವೇ ಮೊದಲನೆಯದು. ಆಚಾರ್ಯರು ಇದರಲ್ಲಿ ಭಕ್ತಿ, ಕರ್ಮ, ಜ್ಞಾನ ಗಳ ಸ್ವರೂಪವನ್ನು ನಿರ್ಣಯಿಸಿ, ನಿರೂಪಿಸಿದ್ದಾರೆ. ಆಚಾರ್ಯ ರಾಮಾನುಜರು ತಮ್ಮ 'ಗೀತಾ ಭಾಷ್ಯ'ದಲ್ಲಿಯೂ ಇದೇ ಕ್ರಮವನ್ನು ಅನುಸರಿಸಿದ್ದಾರೆ.

**3.** ಆಗಮ ಪ್ರಾಮಾಣ್ಯ : ಪಾಂಚರಾತ್ರ ಸಂಹಿತೆಗಳು ಭಗವತ್ ಶಾಸ್ತ್ರ, ವೇದಗಳಂತೆ ಅವುಗಳೂ ಕೂಡ ಪ್ರಮಾಣಗಳು. ಇವುಗಳ ಪ್ರಾಮಾಣ್ಯ ವನ್ನು, ಸಾಮಂಜಸ್ಯವನ್ನು ನಿರೂಪಿಸುವುದಕ್ಕಾಗಿಯೇ ಆಚಾರ್ಯ ಯಾಮುನರು 'ಆಗಮ ಪ್ರಾಮಾಣ್ಯ' ಎಂಬ ಗ್ರಂಥವನ್ನು ಬರೆದರು. ಅದೃಷ್ಟವಶಾತ್ ಈ ಗ್ರಂಥವು ಪೂರ್ಣರೂಪದಲ್ಲಿ ದೊರೆತಿದೆ.

ಈ ಆಗಮವು ಪುರಾತನವಾದುದು. ಆದರೂ ಅದ್ವೈತಿಗಳು, ಮೀಮಾಂಸ ಕರು ಇದನ್ನು ಪ್ರಮಾಣಗ್ರಂಥವೆಂದು ಒಪ್ಪಿರಲಿಲ್ಲ. ಅವರು ಇದನ್ನು ಅವೈದಿಕ ಎಂದು ವಿರೋಧಿಸಿದ್ದರು. ಇದಕ್ಕೆ ಪ್ರಮಾಣ ಗ್ರಂಥವೆಂಬ ಮನ್ನಣೆಯನ್ನು ನೀಡಿರಲಿಲ್ಲ.

ಕುಮಾರಿಲ ಭಟ್ಟರು ತಮ್ಮ 'ತಂತ್ರವಾರ್ತಿಕ'ದಲ್ಲಿ ಹಾಗೂ ಆದಿಶಂಕರರು ತಮ್ಮ 'ಬ್ರಹ್ಮಸೂತ್ರ'ದಲ್ಲಿನ ಪಾಂಚರಾತ್ರಾಧಿಕರಣದ ತಮ್ಮ ಭಾಷ್ಯದಲ್ಲಿ ಪಾಂಚರಾತ್ರವು ವೈದಿಕರಿಗೆ ಅಗ್ರಾಹ್ಯವಾದುದು ಎಂದು ತಿಳಿಸಿದ್ದರು.

ಆದುದರಿಂದ ಭಾಟ್ಟ, ಪ್ರಭಾಕರ ಹಾಗೂ ಅದ್ವೈತವಾದಿಗಳ ಸಂದೇಹ ಗಳು ಹಾಗೂ ವಿರೋಧಿಗಳಿಗೆ ಸೂಕ್ತ ಉತ್ತರ ನೀಡಿ, ಅವರ ಪೂರ್ವ ಪಕ್ಷವಾದ ವನ್ನು ಖಂಡಿಸಿ, ನೈಯ್ಯಾಯಿಕರನ್ನು ಪರೀಕ್ಷಿಸಿ, ಕೊನೆಯಲ್ಲಿ ಪಾಂಚರಾತ್ರದ ಪ್ರಾಮಾಣ್ಯವನ್ನು ಸರ್ವ ಪ್ರಾಕಾರಗಳಲ್ಲಿಯೂ ಸ್ಥಾಪಿಸುವುದಕ್ಕಾಗಿ ಆಚಾರ್ಯ ಯಾಮುನರು ಈ ಗ್ರಂಥವನ್ನು ರಚಿಸಿದರು. ಆ ಪ್ರಾಮಾಣ್ಯವನ್ನು ಆಚಾರ್ಯರು

ಬಲಯುತವಾಗಿ ಪ್ರತಿಪಾದಿಸಿದ್ದಾರೆ.

ತತ್ತ್ವದ ಬಗ್ಗೆ ಎರಡು ರೀತಿಗಳನ್ನು ವೇದಗಳು ಮತ್ತು ಆಗಮಗಳು ತಿಳಿಸುತ್ತವೆ. ವೇದಗಳಲ್ಲಿ ಯಜ್ಞ ಕ್ರಿಯೆಗೆ ಪ್ರಾಮುಖ್ಯತೆ ಇದ್ದರೆ, ಆಗಮಗಳಲ್ಲಿ ಅರ್ಚಾವತಾರದ ಮೂರ್ತಿ ಪೂಜೆಗೆ ಪ್ರಾಮುಖ್ಯತೆ ಇದೆ. ಶಿಲ್ಪಶಾಸ್ತ್ರ, ವಿಗ್ರಹಗಳನ್ನು ಸಿದ್ಧಗೊಳಿಸಬೇಕಾದ ವಸ್ತುಗಳು, ದೇವಾಲಯಗಳ ನಿರ್ಮಾಣ, ಅದರಲ್ಲಿ ಮುಖ್ಯದೇವರು ಮತ್ತು ಇತರೇ ದೇವತೆಗಳ ಲಕ್ಷಣಗಳು ಇತ್ಯಾದಿಗಳನ್ನು ಆಗಮಗಳು ತಿಳಿಸುತ್ತವೆ.

ಶಾಕ್ತ, ಶೈವ ಮತ್ತು ವೈಷ್ಣವಾಗಮಗಳು ಎನ್ನುವ ಮೂರು ಬಗೆಯ ಆಗಮಗಳಿವೆ. ಇವು ಶಕ್ತಿ (ದೇವಿ), ಶಿವ ಮತ್ತು ವಿಷ್ಣುವಿನ ಪೂಜೆಗೆ ಸಂಬಂಧಿಸಿದ ನಿಯಮಗಳನ್ನು ತಿಳಿಸುತ್ತವೆ.

ವೈಷ್ಣವಾಗಮಗಳಲ್ಲಿ ವೈಖಾನಸ ಮತ್ತು ಪಾಂಚರಾತ್ರ ಎಂಬ ಎರಡು ಭೇದಗಳಿವೆ.

ಇವೆರಡರಲ್ಲಿ ವೈಖಾನಸವು ಸ್ವಲ್ಪ ಹಿಂದಿನದು. ವೇದಗಳ ಒಂದು ಅಂಗವಾದ ಕಲ್ಪಸೂತ್ರಗಳನ್ನು ಆಧರಿಸಿದ ಶ್ರೌತ ಕರ್ಮಗಳ ಮುಖ್ಯ ಗುರುವಾಗಿದ್ದ ವಿಖನಸ ಋಷಿಯ ಹೆಸರಿನಿಂದ ಈ ಆಗಮಕ್ಕೆ ವೈಖಾನಸಾಗಮ ಎಂಬ ಹೆಸರು ಬಂದಿದೆ.

ಪಾಂಚರಾತ್ರವು ದ್ವಾಪರ ಯುಗದ ಕೊನೆಯ ಭಾಗಕ್ಕೆ ಸೇರಿದುದು. ಅಂದರೆ ಕ್ರಿ.ಪೂ. 3105ಕ್ಕೆ ಹಿಂದೆ. ಇದು ವಿದ್ವಾಂಸರ ಅಭಿಪ್ರಾಯ. ಆಗಮವು ವೈಖಾನಸಾಗಮದ ಪುನರ್ವಿಮರ್ಶಿತಗೊಂಡ ಆಗಮವೆಂದು ವಿದ್ವಾಂಸರ ಅಭಿಮತ.

ಆಗಮ ಪ್ರಾಮಾಣ್ಯದ ಮಂಗಳ ಶ್ಲೋಕವು
ಜಗಜ್ಜನ್ಮಸ್ಥಿತಿ ಧ್ವಂಸ ಮಹಾನಂದೈಕ ಹೇತವೇ |
ಕರಾಮಲಕವದ್ವಿಶ್ವಂ ಪಶ್ಯತೇ ವಿಷ್ಣವೇ ನಮಃ ||

ಎಂಬ ವಿಷ್ಣುಸ್ತುತಿಯಿಂದ ಕೂಡಿದೆ.

ನಂತರ ಆಚಾರ್ಯರು ಆ ಕಾಲದ ತಮ್ಮ ಸಮಕಾಲೀನ ಪಂಡಿತರನ್ನು ಹೆಸರಿಸಿ, ಅವರುಗಳಲ್ಲಿ ಕೆಲವರು ಯಾಮುನರಲ್ಲಿ ಈರ್ಷಾಸೂಯೆಯನ್ನು ಉಳ್ಳವರು, ಇನ್ನು ಕೆಲವರು ಈರ್ಷಾಸೂಯೆಯನ್ನು ಹೊಂದಿಲ್ಲದವರು ಆಗಿದ್ದ

ರೆಂಬುದನ್ನು ತಿಳಿಸುತ್ತಾರೆ. ಇವರಲ್ಲಿ ಮತ್ಸರಗ್ರಸ್ತರಾಗಿ, ದುರ್ಮಾರ್ಗಿಗಳಾಗಿ ದ್ದವರಿಗೆ ಗಂಭೀರ ಹಾಗೂ ಗುಣಸಂಪನ್ನತೆಗಳು ಹಿಡಿಸುವುದಿಲ್ಲವೆಂದು ಹೇಳಿ, ಅವರುಗಳು ಸದಾ ಇತರರನ್ನು ನಿಂದಿಸುವವರಾಗಿರುವುದರಿಂದ ಅಂತಹವರಿಂದ ತಮಗೇನೂ ನಷ್ಟವಿಲ್ಲ ಎಂದು ತಿಳಿಸುತ್ತಾರೆ.

ಅಂದರೆ ವೈಷ್ಣವಾಗಮಗಳನ್ನು ದ್ವೇಷಿಸುವ ವೈದಿಕರೂ ಇದ್ದರೆಂಬುದನ್ನು ಅವರು ತಿಳಿಸುತ್ತಾರೆ. ಅದು ತುಂಬಾ ಗಂಭೀರ ಪರಿಸ್ಥಿತಿಯಾಗಿತ್ತು. ಆದುದ ರಿಂದ ಈ ಕೆಳಕಂಡ ವಾದಗಳನ್ನು ಸಮರ್ಥವಾಗಿ ಮಂಡಿಸಿದರು–

1. ಪಾಂಚರಾತ್ರ ವಕ್ತಾರನಾದ ವಾಸುದೇವನ ವಾಣಿಯು ಶುದ್ಧ ವಾದುದು. ಅವನು ಸರ್ವಜ್ಞನೂ, ಶ್ರುತಿ ಪ್ರಣೇತನೂ, ಮಹಾ ಕಾರುಣಿಕನೂ ಆಗಿದ್ದು, ಅವನ ಮಾತುಗಳನ್ನು ನಂಬುವವರು ಅನೇಕರು ಇರುವಾಗ, ಆತನ ಕೆಲವೊಂದು ವಾಣಿಗಳು ಹೇಗೆ ಪ್ರಮಾಣವಾಗುವುದಿಲ್ಲ ಎಂದು ಆಚಾರ್ಯರು ಪ್ರಶ್ನಿಸುತ್ತಾರೆ. ಶ್ರುತಿಯ ಅಪೌರುಷ್ಯೇಯತ್ವವನ್ನು ಒಪ್ಪಿದ ಮೇಲೆ ಅದರಲ್ಲಿನ ವಾಣಿಯನ್ನು ಒಪ್ಪಲೇಬೇಕು.

2. ವೇದಗಳಿಗೆ ಸಿದ್ಧವಸ್ತು ಬೋಧನಾ ಸಾಮರ್ಥ್ಯ ಉಂಟು.

3. ಉಪನಿಷತ್ತುಗಳು ಶ್ರುತಿ ವಾಕ್ಯಗಳ ಆಧಾರದ ಮೇಲೆ ಪ್ರಮಾಣ ಬದ್ಧವಾದುದು.

4. ಈಶ್ವರನ ಅಸ್ತಿತ್ವವು ಸಿದ್ಧವಾಗುವುದರಿಂದ ಅದರಿಂದಾದ ಶಾಸ್ತ್ರವೂ ಪ್ರಮಾಣಪೂರಿತವಾದುದು.

5. ಈಶ್ವರನೇ ನಿಷ್ಣಾತನಾದುದರಿಂದ ಪಾಂಚರಾತ್ರವೂ ಪ್ರಮಾಣಪೂರಿತ ವಾದುದು. ಇದಕ್ಕೆ ಆಧಾರ–'ಅತ್ಯಲ್ಪಮೇತತ್ | ನಹ್ಯತ್ರತ್ರಯೀವಿದಃ ವಿವದಂತೇ ಯದ್ವಾಸುದೇವಃ ಪರಮಾತ್ಮಾ ಅಖಿಲ ಜಗತ್ಕಾರಣಮಿತ್ರಿ–ಎನ್ನುವ ಶ್ರುತಿ ವಾಕ್ಯ.

6. ಪಾಶುಪತಾದಿ ತಂತ್ರಾಂತರಗಳಿಗೆ ಗಟ್ಟಿ ಆಧಾರವಾದ ಪ್ರಮಾಣ ಗಳಿಲ್ಲ. ಅದರಿಂದ ಅದು ನಿರಾಕರಿಸಲ್ಪಡಲು ಯೋಗ್ಯವಾದುದು.

7. 'ಪರಮಾತ್ಮನೇ ವಿಷ್ಣುವು. ಇದನ್ನು ಪುರುಷ ನಿರ್ಣಯದಲ್ಲಿ ವಿಸ್ತಾರ ವಾಗಿ ವಿವರಿಸಿದ್ದೇನೆ' ಎನ್ನುವ ಆಚಾರ್ಯರ ಮಾತುಗಳಿಗೆ ಆಧಾರವಾದ ಆ ಗ್ರಂಥವೇ ದೊರೆತಿಲ್ಲ.

8. ಸಕಲ ವೇದಸಾರವೇ ಪಾಂಚರಾತ್ರವು–

ವೇದಾಂತೇಷು ಯಥಾಸಾನಂ ಸಂಗೃಹ್ಯ ಭಗವಾನ್ ಹರಿಃ |
ಭಕ್ತಾನುಕಂಪಯಾ ವಿದ್ವಾನ್ ಸಂಚಿಕ್ಷೇಪ ಯಥಾಸುಖಂ ||

9. ಪಾಂಚರಾತ್ರವು ವೈದಿಕವಾದುದು. ಆದುದರಿಂದ ಪಾಂಚರಾತ್ರ ದೀಕ್ಷೆಯು ಸಂಸ್ಕಾರಾಂತರ ವಿಧಾನವೆಂದು ಹೇಳುವುದು ಅನ್ಯೋನ್ಯಾಶ್ರಯ ದೋಷದಿಂದ ಕೂಡಿರುವುದು.

10. ಹದಿನಾಲ್ಕು ವಿದ್ಯಾಸ್ಥಾನಗಳಲ್ಲಿ ಪಾಂಚರಾತ್ರಗಳನ್ನು ಹೇಳದಿದ್ದ ಮಾತ್ರಕ್ಕೆ ಅದು ಅವೈದಿಕವಲ್ಲ. ಆ ಹದಿನಾಲ್ಕು ಸ್ಥಾನಗಳಲ್ಲಿ ರಾಮಾಯಣ, ಮಹಾಭಾರತಗಳನ್ನು ಹೇಳಿಲ್ಲದಿದ್ದರೂ ಅವೈದಿಕವಲ್ಲ. ಹಾಗೆಯೇ ಪಾಂಚ ರಾತ್ರವೂ ಕೂಡ.

ಪುರಾಣ ನ್ಯಾಯ ಮೀಮಾಂಸಾ ಧರ್ಮಶಾಸ್ತ್ರಾಂಗ ಮಿಶ್ರಿತಾಃ |
ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ||

11. ಬ್ರಹ್ಮಸೂತ್ರಗಳು ಹಾಗೂ ಪಾಂಚರಾತ್ರವು ಸಾಮಂಜಸ್ಯವಾದುದು ಎಂಬುದನ್ನು ದೀರ್ಘವಾಗಿ ಚರ್ಚಿಸಿ, ಅವೆರಡೂ ಸಮ ವಿರೋಧಿಗಳಲ್ಲ ಎಂದು ಸಿದ್ಧಾಂತ ಮಾಡಿ ತೋರಿಸಿದ್ದಾರೆ.

12. ಪಾಂಚರಾತ್ರವು ಶ್ರುತಿಯಂತೆ ಸ್ವತಃ ಪ್ರಮಾಣಗಳಿಂದ ಕೂಡಿರು ವಂತಹುದು. ಇದು ನಿರಪೇಕ್ಷವಾದುದಲ್ಲ.

13. ವೇದ, ಪಾಂಚರಾತ್ರಗಳೆರಡೂ ಸ್ವತಃ ಪ್ರಮಾಣಗಳು. ಆದುದ ರಿಂದ ಪಾಂಚರಾತ್ರದಲ್ಲಿ ಬರುವ ವಾಸುದೇವನೇ ಅದರ ನಿಜವಾದ ವಕ್ತೃ. ಇದನ್ನು ಸ್ಕಾಂದ ಪುರಾಣ, ಮಹಾಭಾರತಗಳೂ ತಿಳಿಸಿವೆ.

14. ಮೋಹನಶಾಸ್ತ್ರ ಶಂಕೆಯನ್ನು ನಿರಸನಗೊಳಿಸಿದ್ದಾರೆ.

15. ಇದೇ ರೀತಿಯಲ್ಲಿ ವೇದ ಬಾಹ್ಯತ್ತ್ವ ಶಂಕೆಯನ್ನು ನಿರಸನಗೊಳಿ ಸಿದ್ದಾರೆ.

16. ಭಾಗವತರು ವೈಶ್ಯವ್ರಾತರಲ್ಲ. ಭಾಗವತ, ಸಾತ್ತ್ವತ ಪದಗಳು ದೇವರಲ್ಲಿ ಅನನ್ಯ ಭಕ್ತಿಯೋಗವುಳ್ಳವರು ಎಂಬರ್ಥವಾಗುವುದರಿಂದ ಅವು 'ಪರಿವ್ರಾಜಕ' ಪದದಂತೆ ಉತ್ತಮಾರ್ಥವನ್ನು ಹೊಂದಿದೆ.

17. ಸ್ವಶಾಖಾಧ್ಯಯನ, ಗಾಯಿತ್ರಿ ಅನುಷ್ಠಾನ ಇತ್ಯಾದಿ ಸಾಮಾನ್ಯ

ನಿಯಮಗಳನ್ನು ಅನುಸರಿಸುತ್ತಾ ಭಾಗವತರು ವೃತ್ತಿಗಾಗಿ ದೇವರ ಪೂಜೆ ಸಲ್ಲಿಸುವವರೇ ಹೊರತು ಬೇರೇನೂ ಅಲ್ಲ. ಆದುದರಿಂದ ಅವರೂ ಬ್ರಾಹ್ಮಣರೇನೆ ಎಂದು ವಾದಿಸುತ್ತಾರೆ. ಈ ವಿಷಯವನ್ನೆಲ್ಲ 'ಕಾಶ್ಮೀರಾಗಮ ಪ್ರಾಮಾಣ್ಯ' ದಲ್ಲಿ ಹೆಚ್ಚು ವಿಸ್ತಾರವಾಗಿ ವಿವರಿಸಿರುವುದಾಗಿ ತಿಳಿಸಿ, ಅದನ್ನು ಪರಾಮರ್ಶಿಸ ಬೇಕೆಂದು ತಿಳಿಸಿದ್ದಾರೆ.

ಹೀಗೆ ಯಾಮುನರು ಪಾಂಚರಾತ್ರದ ವಿರುದ್ಧವಾದ ವಾದಗಳನ್ನೆಲ್ಲ ಪರಿಶೀಲಿಸಿ, ತರ್ಕಬದ್ಧವಾಗಿ, ಆಧಾರ ಸಹಿತ ಅವುಗಳನ್ನು ನಿರಾಕರಿಸಿ, ಧೂಳೀಪಟ ಮಾಡಿದ್ದಾರೆ. ಭೃಗು, ನಾರದ, ಕಶ್ಯಪ, ಭಾರದ್ವಾಜ ಮುಂತಾ ದವರು ವೈದಿಕ ಪರಂಪರೆಯನ್ನೇ ಅನುಸರಿಸಿದರು. ಇವರು ಪಾಂಚರಾತ್ರವನ್ನೇ ಒಪ್ಪಿ ನಡೆದವರು; ವೈದಿಕ ಯಜ್ಞಗಳನ್ನು ಮಾಡಿದವರು; ಆಗಮಗಳಲ್ಲಿ ಹೇಳಿ ರುವ ಆಲಯ ನಿರ್ಮಾಣ, ಅರ್ಚಾಮೂರ್ತಿ ಪ್ರತಿಷ್ಠೆ, ಉತ್ಸವ ಇತ್ಯಾದಿಗಳನ್ನು ನಿರ್ವಹಿಸಿದವರು. ಭಾಗವತರು ವೇದಮೂಲವಾದ ಯಜ್ಞಗಳನ್ನು ಆಚರಿಸು ವವರು. ತತ್ಕಾರಣ ಅವರನ್ನು ವೇದವಿಹೀನರು ಎನ್ನುವುದು ಸಾಧುವಲ್ಲ ಎಂದು ಪುರಾಣಗಳು, ಸ್ಮೃತಿಗಳು, ಉಪನಿಷತ್ತುಗಳನ್ನು ಆಧರಿಸಿ, ಸಮರ್ಥನೆ ಮಾಡಿ, ಪಾಂಚರಾತ್ರಾಗಮದ ಪ್ರಾಮಾಣ್ಯದ ಹಿರಿಮೆಯನ್ನು ಸಾಧಿಸಿ ತೋರಿಸಿದ್ದಾರೆ.

ಹೀಗೆ ಗ್ರಂಥವನ್ನು ಮುಗಿಸುವಾಗ ಕೊನೆಯ ಎರಡು ಶ್ಲೋಕಗಳಲ್ಲಿ ತಮ್ಮ ಪಿತಾಮಹ ನಾಥಮುನಿಗಳು ತಮ್ಮ ಯೋಗಶಕ್ತಿಯಿಂದ ಚಿತ್, ಅಚಿತ್ ಮತ್ತು ಈಶ್ವರ–ಈ ಮೂರು ತತ್ತ್ವಗಳನ್ನು ನೇರವಾಗಿ ಕಂಡುಕೊಂಡಿದ್ದರು. ಅವರ ಚಿತ್ತವೂ ಸಹ ಮುಕುಂದನ ಪಾದಾರವಿಂದಗಳಲ್ಲಿ ಸದಾ ನೆಟ್ಟಿರುತ್ತಿತ್ತು. ಅವರ ಶಿಷ್ಯರು ಅಪಾರ ಪಂಡಿತರಾಗಿ, ತರ್ಕಚಾತುರ್ಯ, ಬುದ್ಧಿ ಕುಶಲತೆಗಳನ್ನು ಹೊಂದಿದ್ದು ಭಾರತದ ಪದ್ಧತಿಯ ವಿರುದ್ಧವಾಗಿದ್ದ ವಾದಗಳನ್ನು ಧೂಳೀಪಟ ಮಾಡುವವರಾಗಿದ್ದರು. ಇವರೆಲ್ಲರ ಕೀರ್ತಿ ಅಮರವಾಗಲಿ ಎಂದಿದ್ದಾರೆ. ಪಾಂಚರಾತ್ರ ಪ್ರಾಮಾಣ್ಯಕ್ಕೆ ಇಂತಹ ರಕ್ಷಕರಿರುವಾಗ ಅದಕ್ಕೆ ಯಾವ ಕೊರತೆಯೂ ಇರುವುದಿಲ್ಲ ಎನ್ನುತ್ತಾರೆ ಯಾಮುನರು.

ಆ ಶ್ಲೋಕಗಳು ಈ ರೀತಿ ಇವೆ–

ತತ್ತಾತ್ಕಲ್ಪಿತ ಯುಕ್ತಿಭಿಃ ಶಕಲಶಃ ಕೃತ್ವಾ ತದೀಯಂ ಮತಂ |
ಯಚ್ಛಿಷ್ಯೈಃ ಉದಮರ್ದಿ ಸಾತ್ತ್ವತಮತ ಸ್ಪರ್ಧಾ ಮತಾಂ ಉದ್ಧತಿಃ |

ಯಚ್ಛ್ರೀತಃ ಸತತಂ ಮುಕುಂದ ಚರಣ ದ್ವಂದ್ವಾಸ್ಪದಂ ವರ್ತತೇ |
ಜೀಯಾತ್ ನಾಥಮುನಿಃ ಸ್ವಯೋಗಮಹಿಮ ಪ್ರತ್ಯಕ್ಷ ತತ್ತ್ವತ್ರಯಃ ||
ಆಕಲ್ಪಂ ವಿಲಸತುಂ ಸಾತ್ತ್ವತ ಮತ ಪ್ರಸ್ಪರ್ಧಿಮುಸ್ಪದ್ಧತಿ
ವ್ಯಾಮುಗ್ಧೋದ್ಧತ ದುರ್ವಿದಗ್ಧ ಪರಿಷದ್ವೈದಗ್ಧ ವಿಧ್ವಂಸಿನಃ |
ಶ್ರೀಮನ್ನಾಥ ಮುನೀಂದ್ರವಧಿಃ ತಥಿಯೋ ನಿರ್ಧೂತ ವಿಶ್ವಾಶಿವಾ
ಸಂತಃ ಸತತ ಗದ್ಯಪದ್ಯ ಪದವೀಹೃದ್ಯಾರ್ತ್ವನರ್ಘ್ಯೋಕ್ತಯಃ ||

**4. ಚತುಶ್ಲೋಕೀ :** ಆಚಾರ್ಯ ಯಾಮುನರು ತಾವು ಅನುಭವಿಸಿದ ಭಗವದ್ದರ್ಶನಾನಂದವನ್ನು ಎಲ್ಲರೂ ಅನುಭವಿಸಿ ಉದ್ಧಾರವಾಗಬೇಕೆಂದು ಚತುಶ್ಲೋಕೀ ಮತ್ತು ಸ್ತೋತ್ರರತ್ನ ಎಂಬ ಪ್ರಸಿದ್ಧವಾದ ಸ್ತೋತ್ರಗಳನ್ನು ರಚಿಸಿದರು. ಸಂಸ್ಕೃತ ಸ್ತೋತ್ರ ಪರಂಪರೆಯನ್ನು ಶ್ರೀವೈಷ್ಣವರಲ್ಲಿ ತೊಡಗಿಸಿದ ಮೊದಲ ಆಚಾರ್ಯರಿವರು. ಮುಂದಿನ ಹಲವರು ಇವರ ಶೈಲಿ ಹಾಗೂ ರಚನಾ ವೈಖರಿಯನ್ನು ಅನುಸರಿಸಿ ಅನೇಕ ಸ್ತೋತ್ರಗಳನ್ನು ರಚಿಸಿದ್ದಾರೆ.

ಇದು ನಾಲ್ಕು ಶ್ಲೋಕಗಳಿರುವ ಸ್ತೋತ್ರ. ಆಚಾರ್ಯ ರಾಮಾನುಜರು ನೆಲೆನಿಂತ ಮೇಲೆ ಮೊದಲು ಶ್ರೀರಂಗನಾಯಕೀ ಅಮ್ಮನವರ ಸನ್ನಿಧಿಯಲ್ಲಿ ಲಕ್ಷ್ಮೀ ಪ್ರಪತ್ತಿರೂಪವಾಗಿ ರಚಿಸಿದ ಸ್ತೋತ್ರವಿದು. ಇದು ಚಿಕ್ಕದಾಗಿದ್ದರೂ ಭವ್ಯವಾದ ಸ್ತೋತ್ರವಿದು. ತುಂಬಾ ಅರ್ಥಗರ್ಭಿತವಾದ ಸ್ತೋತ್ರವಿದು. ವೇದಾಂತ ದೇಶಿಕರು ಇದಕ್ಕೆ ಭಾಷ್ಯ ಬರೆದಿದ್ದಾರೆ.

ಭಗವಂತನು ಈಕೆಯನ್ನು ಒಂದು ನಿಮಿಷವೂ ಬಿಟ್ಟಿರಲಾರ. ಚೇತನರ ಶರಣಾಗತಿ ಕಾಲದಲ್ಲಿ ಈಕೆ ಪುರುಷಾಕಾರಳಾಗಿ ಭಗವಂತನ ಕ್ಷಮಾಗುಣವನ್ನು ಚೇತನರ ಕಡೆ ಹರಿಯುವಂತೆ ಮಾಡುವಳು. ಈಕೆಯ ಮಹಿಮೆಯು ಈಕೆಯ ಪತಿಗೂ ತಿಳಿಯದಷ್ಟು ದೊಡ್ಡದೆನ್ನಬಹುದು. ಆದರಿಂದ ಆ ಮಹಿಮಾ ವರ್ಣನೆ, ಆಕೆಯಿಂದ ಜಗತ್ತಿನ ಉದ್ಧಾರಕ್ಕೆ ಉಂಟಾಗುವ ಉಪಕಾರ, ಆಕೆಯ ಸಂಗ, ಸೌಭಾಗ್ಯ, ಕರ್ತವ್ಯಗಳ ಹಿರಿಮೆಯನ್ನು ಈ ಸ್ತೋತ್ರದಲ್ಲಿ ಕಾಣಬಹುದು. ಶ್ರೇಯೋರೂಪ ಮೋಕ್ಷ, ಅಕ್ಷರ ರೂಪವಾದ ಆತ್ಮಾನುಭೂತಿ, ಐಹಿಕ ಐಶ್ವರ್ಯ ಇವು ಯಾವುವೂ ಈಕೆಯ ಕೃಪೆಯಿಲ್ಲದೆ ಚೇತನರಿಗೆ ಲಭಿಸುವುದಿಲ್ಲ. ಇದರಲ್ಲಿ ಈಕೆಯ ಗುಣಸ್ವರೂಪ ಹಾಗೂ ಭಗವದ್ಗುಣಗಳು ಒಂದಕ್ಕೊಂದು ಬೆರೆತು ಕೊಂಡಿರುವುದನ್ನು ಕಾಣುವೆವಲ್ಲದೆ, ಈಕೆಗೂ ಮಾನವಕೋಟಿಗೂ ಇರುವ

ಸತ್ಸಂಬಂಧವನ್ನು ನಿರೂಪಿಸಲಾಗಿದೆ. ಶ್ರೀವೈಷ್ಣವ (ವೈಷ್ಣವ) ಸಂಪ್ರದಾಯದ ಲಕ್ಷ್ಮೀ ಸ್ತೋತ್ರಗಳಲ್ಲೇ ಮೊಟ್ಟಮೊದಲನೆಯದು. ಮಿಕ್ಕೆಲ್ಲವು ಎಷ್ಟೋ ಕಾಲಾನಂತರ ಇದರಿಂದ ಸ್ಫೂರ್ತಿಗೊಂಡು ರಚಿತವಾದ ಲಕ್ಷ್ಮೀ ಸ್ತೋತ್ರಗಳು. ಶ್ರೀ ರಾಮಾನುಜರ ಶರಣಾಗತಿ ಗದ್ಯದ ಆರಂಭ, ಕೂರೇಶರ ಶ್ರೀಸ್ತವ, ಪರಾಶರ ಭಟ್ಟರ ಶ್ರೀಗುಣ ರತ್ನಕೋಶ, ವೇದಾಂತ ದೇಶಿಕರ ಶ್ರೀಸ್ತುತಿ ಇತ್ಯಾದಿಯವುಗಳು ಈ ಜಗನ್ಮಾತೆಯ ಮಹಿಮೆಯನ್ನು ವಿಪುಲವಾಗಿ ವರ್ಣಿಸಿವೆ.

ಚತುಃಶ್ಲೋಕಿಯನ್ನು ಪ್ರತಿನಿತ್ಯ ಪಠಿಸುವ ಪರಿಪಾಠವಿದೆ. ಲಕ್ಷ್ಮೀಕಟಾಕ್ಷ ಇದರಿಂದ ಲಭ್ಯವಾಗುವುದು ಎನ್ನುವ ಅನುಭವವೇದ್ಯ ನಂಬಿಕೆಯಿಂದ ಪ್ರತಿದಿನ ಸಂಜೆ ದೇವರ ಸನ್ನಿಧಿಯಲ್ಲಿ ಸ್ತ್ರೀಯರು ಇದನ್ನು ಪಠಿಸುವ ರೂಢಿ, ಸಂಪ್ರದಾಯಗಳಿವೆ. ಹೀಗೆ ಮಾಡುವಾಗ ಶರಣಾಗತಿ ಗದ್ಯದ ಪ್ರಾರಂಭ ಭಾಗ, ಶ್ರೀಗುಣ ರತ್ನಕೋಶದ ಒಂದು ಶ್ಲೋಕ ಶ್ರೀಸ್ತುತಿಯ ಒಂದು ಶ್ಲೋಕವನ್ನು ಪಠಿಸುವುದು ರೂಢಿ ಇದೆ.

5. ಸ್ತೋತ್ರರತ್ನ : ಇದು ಅನ್ವರ್ಥನಾಮ. 61 ಶ್ಲೋಕಗಳ ಇಡೀ ಸ್ತೋತ್ರವು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸಂಪೂರ್ಣವಾಗಿ ಚಿತ್ರಿಸುತ್ತದೆ. ಇದು ಭಗವದನುಭೂತಿ, ತತ್ಪ್ರಾಪ್ತಿ ಪ್ರಪತ್ತಿಯೆಂಬ ಅನುಭೂತಿಯ ಸಾಕಾರ ರೂಪವಾಗಿದೆ. ಇದು ಬರೀ ಸ್ತೋತ್ರವೇ ಅಲ್ಲ ಕಾವ್ಯವೂ ಆಗಿದೆ. ಇದು ಆಚಾರ್ಯರ ಕವಿತಾ ಸಾಮರ್ಥ್ಯವನ್ನು ಪ್ರತಿಬಿಂಬಿಸುವ ಶ್ರೇಷ್ಠ ಕಾವ್ಯ. ಅವರ ಭಕ್ತಿಸುಧೆ, ರಹಸ್ಯಾರ್ಥದ ರಸಾಯನಗಳು ಭಕ್ತಿ ಸಾಹಿತ್ಯರೂಪದಲ್ಲಿ ಜನ್ಮ ತಳೆದಿವೆ. ಇದರಲ್ಲಿ ವಿಶಿಷ್ಟಾದ್ವೈತ ತತ್ತ್ವವನ್ನೆಲ್ಲ ಸುಂದರವಾಗಿ, ಸುಲಲಿತವಾಗಿ, ಭಗವಂತನೊಡನೆ ಸಂಭಾಷಿಸುವಂತೆ ಗಂಭೀರಾರ್ಥಗಳನ್ನು ಒಳಗೊಂಡಂತೆ ರಚಿಸಲ್ಪಟ್ಟ ಕಾವ್ಯಶೈಲಿಯು ಮುಂದಿನ ಆಚಾರ್ಯರಿಗೆ ಮಾದರಿಯಾಯಿತು.

ಭಗವಂತನ ಸ್ವರೂಪ, ರೂಪ, ಗುಣ, ವಿಭೂತಿ, ಮಹಿಷೀ, ಪರಿಜನ, ವೈಕುಂಠಲೋಕ, ಜೀವಾತ್ಮ ಸ್ವರೂಪ, ಬಂಧಕಾರಣ, ಮೋಕ್ಷೋಪಾಯ, ಜೀವಾತ್ಮನ ಅನನ್ಯ ಶೇಷತ್ವ, ನೈಚ್ಯಾನುಸಂಧಾನ ಪ್ರಕಾರ, ಆಚಾರ್ಯ ನಿಷ್ಠೆಯ ಅವಶ್ಯಕತೆ, ಭಗವಂತನ ಲೀಲಾಚೇಷ್ಟಿತಗಳ ಅನುಭವ ಪ್ರಕಾರ, ಶರಣಾಗತಿ– ಈ ಎಲ್ಲ ತತ್ತ್ವಗಳನ್ನೂ ಸುಲಲಿತವಾಗಿ ಸುಂದರವಾಗಿ, ಗೇಯಗುಣ ಸಂಪನ್ನ ರೂಪದಲ್ಲಿ ಆಚಾರ್ಯರು ಈ ಸ್ತೋತ್ರದಲ್ಲಿ ತುಂಬಿಸಿದ್ದಾರೆ. ನಾಲಾಯಿರ

ದಿವ್ಯಪ್ರಬಂಧದ ಸಾರ ಇದರಲ್ಲಿದೆ.

ಆಚಾರ್ಯರು ಭಗವಂತನನ್ನು ಪ್ರತ್ಯಕ್ಷೀಕರಿಸಿಕೊಂಡು, ಆತನ ಮೇಲೆ ತಮ್ಮ ಭಾರವನ್ನೆಲ್ಲ ಹಾಕಿದರು. ಆಗ ಸಹಜವಾಗಿ ಕೃತಕೃತ್ಯತೆಯ ಭಾವ ಅವರಲ್ಲಿ ಉದಯಿಸಿ, ಅವರ ಹೃದಯಾಂತರಾಳದಿಂದ ಉಕ್ಕಿಬಂದ ಭಾವವಿಶೇಷವೇ ಈ ಸ್ತೋತ್ರ. ಇದರ ಭಾಷೆ ಗಂಭೀರ, ಮಧುರ ಮತ್ತು ಹೃದಯಂಗಮ. ಇದು ಆಚಾರ್ಯರ ಆತ್ಮನಿವೇದನಾರೂಪದ ಸ್ತೋತ್ರವಾದುದರಿಂದ ಪಂಡಿತ, ಪಾಮರ ರೆಲ್ಲರಿಗೂ ಪ್ರಿಯವಾಗಿದೆ. ಈ ಸ್ತೋತ್ರದ ಕಾವ್ಯ ಮಾಧುರ್ಯವು ಆಲಂಕಾರಿಕ ರನ್ನೂ ಮುಗ್ಧರನ್ನಾಗಿಸಿದೆ. ಪ್ರಸಿದ್ಧ ಆಲಂಕಾರ ಶಾಸ್ತ್ರಜ್ಞರಾದ ಅಪ್ಪಯ್ಯ ದೀಕ್ಷಿತರು ತಮ್ಮ 'ಕುವಲಯಾನಂದ' ಕೃತಿಯಲ್ಲಿ ಇದನ್ನು ಉದಾಹರಿಸಿದ್ದಾರೆ. ಇದೇ ರೀತಿಯಲ್ಲಿ ಜಗನ್ನಾಥ ಪಂಡಿತನು ತನ್ನ 'ರಸಗಂಗಾಧರ' ಎನ್ನುವ ಕೃತಿ ಯಲ್ಲಿ ಇದನ್ನು ಬಹುವಾಗಿ ಪ್ರಶಂಸಿಸಿದ್ದಾನೆ. ಶ್ರೀ ವೇದಾಂತ ದೇಶಿಕರಂತೆ ಅನೇಕ ವಿದ್ವಾಂಸರು ವ್ಯಾಖ್ಯಾನ, ಟಿಪ್ಪಣಿಗಳನ್ನು ರಚಿಸಿದ್ದಾರೆ.

'ಸಾಮಾನ್ಯರಿಗೆ ಸ್ತೋತ್ರರತ್ನವು ಬರೀ ಸ್ತೋತ್ರ; ಸಾಹಿತಿಗಳಿಗೆ ಭಕ್ತಿರಸ ಪ್ರಧಾನವಾದ ಕಾವ್ಯ; ಜಿಜ್ಞಾಸುಗಳಿಗೆ ತತ್ತ್ವಹಿತ ಪುರುಷಾರ್ಥ ಪ್ರತಿಪಾದನೆ; ಮುಮುಕ್ಷುಗಳಿಗೆ ಆತ್ಮನಿವೇದನ ರೂಪವಾದ ಪ್ರಪದನ; ಕೃತಕೃತ್ಯರಾದ ಪ್ರಪನ್ನರಿಗೆ ನಿತ್ಯಾನುಸಂಧೇಯ; ಶ್ರೀವೈಷ್ಣವ ಸಮುದಾಯಕ್ಕೆ 'ಪರಮ ಪವಿತ್ರ ಗ್ರಂಥ'-(ಪ್ರೊ|| ಎಸ್. ರಂಗಾಚಾರ್).

ಸ್ತೋತ್ರರತ್ನವು ನಾರಾಯಣೀಯಂ ಇತ್ಯಾದಿಗಳಂತೆ ಗೇಯಗುಣವನ್ನು ಹೊಂದಿರುವ ಗ್ರಂಥ. ಇದರ ಒಂದು ಶ್ಲೋಕವನ್ನು ಭಗವದಾರಾಧನೆ ಮಾಡು ವವರು ಪಠಿಸುವುದು ರೂಢಿ.

ನ ಧರ್ಮ ನಿಷ್ಠೋಸ್ಮಿ ನ ಚ ಆತ್ಮವೇದೀ |
ನ ಭಕ್ತಿಮಾನ್ ತ್ವತ್ ಚರಣಾರವಿಂದೇ |
ಅಕಿಂಚನಃ ಅನನ್ಯಗತಿಃ ಶರಣ್ಯ
ತ್ವತ್ ಪಾದಮೂಲಂ ಶರಣಂ ಪ್ರಪದ್ಯೆ ||

'ನಾನು ಕರ್ಮಯೋಗನಿಷ್ಠನೂ ಅಲ್ಲ; ನಿನ್ನ ಅಡಿದಾವರೆಗಳಲ್ಲಿ ಭಕ್ತಿ ಉಳ್ಳವನೂ ಅಲ್ಲ; ನನಗೆ ನಿನ್ನನ್ನು ಬಿಟ್ಟು ಬೇರೆ ಯಾವ ಸಾಧನವೂ ಇಲ್ಲ; ನಿನ್ನನ್ನು ಬಿಟ್ಟು ನನಗೆ ಬೇರಿನ್ನಾವ ಗತಿಯೂ ಇಲ್ಲ. ಇಂತಹ ನಾನು, ರಕ್ಷಕನೂ

ಪ್ರಾಪಕನೂ ಆದ, ಸ್ವಾಮಿಯಾದ ನಿನ್ನ ಪಾದಮೂಲವನ್ನು ಶರಣು ಹೊಂದು ತ್ತೇನೆ'.

ಇದಕ್ಕೆ ಶ್ರೀ ವೇದಾಂತ ದೇಶಿಕರ ಭಾಷ್ಯವಲ್ಲದೆ, ಪೆರಿಯವಾಚ್ಚಾನ್ ಪಿಳ್ಳೈರವರ ವ್ಯಾಖ್ಯಾನವೂ ಇದೆ.

ಈ ಸ್ತೋತ್ರವು 'ದಯಾನುಸಂಧಾನ ಸಿಂಧು ಪರಿವಾಹಃ' ಆಗಿದೆ. ಪ್ರಾಪ್ಯನೂ, ಪ್ರಾಪಕನೂ ಆದ ಭಗವಂತನ ಪಾದಗಳಲ್ಲಿ ಪ್ರಪತ್ತಿಯನ್ನು ಅನುಷ್ಠಾನ ಮಾಡುವ ಅನುಭವ ಈ ಸ್ತೋತ್ರದಲ್ಲಿ ರೂಪಿತವಾಗಿದೆ. ಇದು 'ಯದುಪತಿ ಚರಣಾರ್ಹಮಿದಂ ಯಾಮುನ ತೀರ್ಥಮಿದ ಯಾಮುನ ಸ್ತೋತ್ರ' ವಾಗಿದೆ.

ಗ್ರಹಿಸಲಾಗದ ಕಷ್ಟವಾದ ವೇದಾಂತಾರ್ಥಗಳು ಪಂಡಿತ ಪಾಮರರಿಗೆ ಅರ್ಥವಾಗುವಂತೆ ವರ್ಣಿಸುವ ಸ್ತೋತ್ರವಿದೆಂದು ತನಿಯನ್ ಶ್ಲೋಕ ಹೇಳುತ್ತದೆ-

ಸ್ವಾದಯನ್ನಿಹ ಸರ್ವೇ ಪ್ರಾಂತ್ರ-
ಯ್ಯಂತಾರ್ಥಂ ಸುದುರ್ಗ್ರಹಂ |
ಸ್ತೋತ್ರಯಾಮಾಸ ಯೋಗೀಂದ್ರಃ
ತಂ ವಂದೇ ಯಾಮುನಾಹ್ವಯಂ ||

ಈ ರೀತಿಯಲ್ಲಿ ಆಚಾರ್ಯ ಯಾಮುನರು ಈ ಸ್ತೋತ್ರದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ಸಾರವನ್ನೆಲ್ಲ ತಿಳಿಯಾದ ಅನುಭವದಲ್ಲಿ ಚಿತ್ರಿಸಿದ್ದಾರೆ.

6. ಇತರೇ ಗ್ರಂಥಗಳು: ಮೇಲೆ ತಿಳಿಸಿರುವ ಗ್ರಂಥಗಳಲ್ಲದೆ 'ಪುರುಷ ನಿರ್ಣಯ' ಹಾಗೂ 'ಕಾಶ್ಮೀರಾಗಮ ಪ್ರಾಮಾಣ್ಯ' ಗ್ರಂಥಗಳನ್ನೂ ಇವರೇ ರಚಿಸಿದರೆಂದು, ಅವರದೇ ಗ್ರಂಥಗಳಲ್ಲಿ ತಿಳಿಸಲಾಗಿದೆ. ಆದರೆ ಇವೆರಡೂ ಇದು ವರೆವಿಗೆ ಸಿಕ್ಕಿಲ್ಲ.

'ಆಗಮ ಪ್ರಾಮಾಣ್ಯ' ಗ್ರಂಥದಲ್ಲಿ ಪಾಶುಪತ ತಂತ್ರಾಂತರ ಪ್ರಾಮಾಣ್ಯ ವನ್ನು ನಿರಾಕರಿಸುವಾಗ, ಪರಮಾತ್ಮನು ವಿಷ್ಣುವೇ ಎಂಬುದನ್ನು ತಮ್ಮ 'ಪುರುಷ ನಿರ್ಣಯ' ಎಂಬ ಗ್ರಂಥದಲ್ಲಿ ವಿಸ್ತಾರವಾಗಿ ವಿವರಿಸಿರುವುದರಿಂದ ಇಲ್ಲಿ ಅದನ್ನು ಬೆಳೆಸುವುದಿಲ್ಲವೆಂದು ಬರೆದಿದ್ದಾರೆ. ಇದೇ ರೀತಿಯಲ್ಲಿ ಆಗಮ ಪ್ರಾಮಾಣ್ಯದಲ್ಲಿಯೂ ಕೂಡ 'ಯಥಾ ಚ ಏಕಾಯನ ಶಾಖಾಯಾಃ ಅಪೌರುಷೇ ಯತ್ವಂ ತಥಾ ಕಾಶ್ಮೀರಾಗಮ ಪ್ರಾಮಾಣ್ಯೇ ಏವ ಪ್ರಪಂಚಿತಂ ಇತಿ ನೇಹ

ಪ್ರಸ್ತೂಯತೇ' ಎಂದೂ, 'ಸರ್ವಂ ಚೈತತ್ ಪುರುಷ ನಿರ್ಣಯೋ ನಿಪುಣತರಂ ಉಪಪಾದಿತಮಿತಿ ನೇಹ ಪ್ರಸಂಚ್ಯತೇ' ಎಂದಿರುವುದರಿಂದ ಇವೆರಡರ ಕರ್ತೃವೂ ಇವರೇ ಎಂದು ನಂಬಬಹುದಾಗಿದೆ.

'ಕಾಶ್ಮೀರವು ಬದರೀ ಕ್ಷೇತ್ರವನ್ನು ಹೃದಯವನ್ನಾಗಿ ಹೊಂದಿತ್ತು, ಭಗವಂತನ ನರನಾರಾಯಣನ ಅವತಾರ, ಶ್ರೀಮದಷ್ಟಾಕ್ಷರೀ ಮಂತ್ರದ ಉಗಮ. ಪಾಂಚರಾತ್ರದ ಹಲವಾರು ಗ್ರಂಥಗಳು ಕಾಶ್ಮೀರದಲ್ಲೇ ಅವತರಿಸಿರುವುದರಿಂದ 'ಕಾಶ್ಮೀರಾಗಮ ಪ್ರಾಮಾಣ್ಯ'ವು ಇದಕ್ಕೆ ಸರಿಸಮನಾಗಿ ಆ ಕಾಲದಲ್ಲಿ ರಚಿಸಿದ್ದರು ಎಂಬುದು ತರ್ಕಬದ್ಧವಾಗಿದ್ದು, ಈ ಕೃತಿಯ ರಚನೆ ಆಗಿದ್ದಿರಬಹುದೆಂದು ನಂಬಲಾಗಿದೆ.

ಈ ರೀತಿಯಲ್ಲಿ ಬಹುಮುಖವಾಗಿ ಯಾಮುನಾಚಾರ್ಯರು ಶ್ರೀವೈಷ್ಣವ ದರ್ಶನಕ್ಕೆ ಸೇವೆ ಸಲ್ಲಿಸಿದ್ದಾರೆ. 'ಶ್ರೀವೈಷ್ಣವ ಜಗತ್ತು ಇವರಿಗೆ ಸದಾ ಋಣಿ. ತತ್ತ್ವ ನಿರ್ವಹಣೆ, ಭಗವದನುಭೂತಿ'-ಎಂಬ ಎರಡಂಶದ ಆಧ್ಯಾತ್ಮ ಗ್ರಂಥ ರೂಪಗಳಲ್ಲೂ ಆಚಾರ್ಯರು ಬಹುದೊಡ್ಡ ಕೊಡುಗೆಗಳನ್ನು ನೀಡಿದ್ದಾರೆ. ಸಂಪ್ರದಾಯ, ಸಿದ್ಧಾಂತಗಳನ್ನು ಮುಂದಿನವರು ಬೆಳೆಸಲು ಇವರು ಹಾಕಿಕೊಟ್ಟ ಮಾರ್ಗ ಬಹು ಉಪಯುಕ್ತವಾದುದಾಗಿತ್ತು. ಮುಂದೆ ಬಂದುದೆಲ್ಲ ಇವರ ಪರೋಕ್ಷ ಕೊಡುಗೆಯೇನೆ ! ಶ್ರೀ ರಾಮಾನುಜರನ್ನು ಈ ದರ್ಶನಕ್ಕೆ ಕೊಟ್ಟವರೂ ಇವರೇನೇ ! ಸ್ತೋತ್ರ ಪರಂಪರೆಗೆ ಕಾರಣರಾಗಿ, ಶ್ರೀಭಾಷ್ಯ, ನ್ಯಾಯ ಸಿದ್ಧಾಂಜನಂಗಳಂತಹ ಉದ್ಗ್ರಂಥಗಳಿಗೆ ಸ್ಫೂರ್ತಿದಾಯಕರಾಗಿ, ದ್ರವಿಡ ವೇದಾಂತದ ಸಂರಕ್ಷಕರಾಗಿ, ಪುರಾಣ ಪ್ರಸ್ಥಾನದ ರಕ್ಷಕರಾಗಿ, ರಹಸ್ಯತ್ರಯಗಳ ಸತ್ ಪ್ರವರ್ತಕರಾಗಿ, ಆಗಮ ಪರಿಪಾಲಕರಾಗಿ, ಅರ್ಚಾವತಾರದ ರುಚಿಯನ್ನು ಶ್ರೀವೈಷ್ಣವರಲ್ಲಿ ಬೆಳೆಸಿದವರಾಗಿ, ಶ್ರುತಿ, ನ್ಯಾಯ, ಅನುಭೂತಿಗಳ ಸಾಮಂಜಸ್ಯ ಸ್ಥಾಪಕರಾದ, ಸಕಲ ಪೂರ್ವಾಚಾರ ಪರಂಪರೆಯ ಉದ್ಧಾರಕರಾಗಿ ಬೆಳಗಿದ ಈ ಮಹಾಪುರುಷರನ್ನು ಸರ್ವದಾ ನೆನೆಯುವುದೊಂದೇ ಕೃತಜ್ಞತೆಯಾದೀತು'.*

---

* ಪ್ರೊ॥ ಕೆ. ಎಸ್. ನಾರಾಯಣಾಚಾರ್ಯ-ವಿಶಿಷ್ಟಾದ್ವೈತ ದರ್ಶನಕ್ಕೆ ಶ್ರೀಮದ್ಯಾಮುನ ಮುನಿಗಳ ಕೊಡುಗೆ.

ಸ್ವಾದಯನ್ನಿಹ ಸರ್ವೇಷಾಂ
ತ್ರಯ್ಯಂತಾರ್ಥ ಸುದುರ್ಗ್ರಹಂ |
ಸ್ತೋತ್ರಯಾಮಾಸ ಯೋಗೀಂದ್ರಃ
ತಂ ವಂದೇ ಯಾಮುನಂ ಮುನಿಂ ||

ನಮೋ ನಮೋ ಯಾಮುನಾಯ
ಯಾಮುನಾಯ ನಮೋ ನಮಃ |
ನಮೋ ನಮೋ ಯಾಮುನಾಯ
ಯಾಮುನಾಯ ನಮೋ ನಮಃ ||



## 3. ಆಚಾರ್ಯ ರಾಮಾನುಜರು

## (ಕ್ರಿ.ಶ. 1017-1137)

ವೇದವು ತತ್ತ್ವ, ಹಿತ, ಪುರುಷಾರ್ಥಗಳನ್ನು ತಿಳಿಸುವ ಶಾಸ್ತ್ರ. ಕರ್ಮ ಕಾಂಡ, ಜ್ಞಾನಕಾಂಡಗಳು ಇದರಲ್ಲಿನ ಎರಡು ಭಾಗಗಳು. ಇದರಲ್ಲಿ ಉಪನಿಷತ್ತು ಗಳು ಜ್ಞಾನಕಾಂಡವೆನಿಸಿಕೊಂಡವು. ಬ್ರಹ್ಮವಿಚಾರವು ಇರುವುದರಿಂದ ಇವು ಗಳನ್ನು ಬ್ರಹ್ಮಕಾಂಡವೆಂದೂ ಕರೆದರು. ಇವುಗಳ ತಾತ್ಪರ್ಯವನ್ನು ಯಥಾ ರೀತಿಯಲ್ಲಿ ಸೂಚಿಸಲು ಬಾದರಾಯಣ (ವ್ಯಾಸ ಮಹರ್ಷಿ)ರು 545 ಸೂತ್ರ ಗಳನ್ನು ರಚಿಸಿದರು. ಇವನ್ನು ಬ್ರಹ್ಮಸೂತ್ರಗಳು (ಶಾರೀರಿಕ ಮೀಮಾಂಸ) ಎಂದು ಕರೆದರು. ಆದರೆ ಈ ಬ್ರಹ್ಮಸೂತ್ರಗಳ ಸಹಾಯದಿಂದ ಉಪನಿಷತ್ತುಗಳ ಅರ್ಥವನ್ನು ತಿಳಿಯಲು ಕಷ್ಟವಾದಾಗ ಆಪಸ್ತಂಭ, ಆಶ್ವಲಾಯನರಂತೆ ಬೋಧಾಯನರೂ ಅವುಗಳಿಗೆ ವಿಸ್ತಾರವಾದ ವ್ಯಾಖ್ಯಾನ ಬರೆದರು. ಇದೇ 'ವೃತ್ತಿ'ಗ್ರಂಥವೆನಿಸಿಕೊಂಡಿತು. ಮುಂದೆ ಗುಹದೇವ, ಟಂಕ, ದ್ರಮಿಡರು ಈ ವೃತ್ತಿಗ್ರಂಥದ ವಿಸ್ತೃತವಾದ ವಿವರಗಳನ್ನು ನೀಡಿ ಕೃತಿ ರಚನೆ ಮಾಡಿದರು. ಒಂದು ರೀತಿಯಲ್ಲಿ ಇದು ಬೋಧಾಯನರ ಅಭಿಪ್ರಾಯ ಸಂಗ್ರಹಣೆಯೂ ಆಗಿತ್ತು.

ಆದರೆ ಮುಂದೆ ಬೌದ್ಧ, ಜೈನ ಮತಗಳು ಪ್ರಬಲಗೊಂಡಾಗ, ಈ ಬ್ರಹ್ಮ ಸೂತ್ರಗಳನ್ನು ಅಧ್ಯಯನ ಮಾಡುವವರು ಕಡಿಮೆಯಾದರು. ಪ್ರಾಚೀನ ಕೃತಿ ಗಳನೇಕವು ನಷ್ಟವಾದುವು. ಅವುಗಳೊಂದಿಗೆ ಈ ದಿವ್ಯಕೃತಿಗಳೂ ನಷ್ಟವಾದುವು. ಈ ಸೂತ್ರಾರ್ಥಗಳನ್ನು ತಿಳಿಯಪಡಿಸುವ ಗ್ರಂಥಗಳೇ ಇಲ್ಲವಾದುವು.

ಇಂತಹ ಸನ್ನಿವೇಶದಲ್ಲಿ ಕೆಲವು ಮೇಧಾವಿಗಳೂ, ಸೂಕ್ಷ್ಮಮತಿಗಳೂ ಆದವರು ಬ್ರಹ್ಮಸೂತ್ರಗಳಿಗೆ ಭಾಷ್ಯಗಳನ್ನು ಬರೆದರು. ಇವರಲ್ಲಿ ಆದಿ ಶಂಕರಾ ಚಾರ್ಯರು ಮೊದಲಿಗರು. ಇವರು ರಚಿಸಿದ ಭಾಷ್ಯವು ಕೆಲವು ಕಾಲ ಜನಾದರ ಣೀಯವಾಯಿತು.

ನಂತರ ಭಾಸ್ಕರ ಎಂಬುವರು ಆದಿಶಂಕರರ ಅರ್ಥವನ್ನು ಒಪ್ಪಲಿಲ್ಲ. ಅವರು ಭೇದಾಭೇದ ಪರವಾಗಿ ಸೂತ್ರಗಳಿಗೆ ಅರ್ಥವನ್ನು ನೀಡಿದರು. ಈ ರೀತಿ

ಯಲ್ಲಿ ಇವರು ನೀಡಿದ ಭಾಷ್ಯವೂ ಕೆಲವು ಕಾಲ ತನ್ನ ಪ್ರಭಾವವನ್ನು ಉಳಿಸಿಕೊಂಡಿತ್ತು.

ಕೆಲವು ಕಾಲದ ನಂತರ ಯಾದವ ಪ್ರಕಾಶರು ರಂಗದ ಮೇಲೆ ಕಾಣಿಸಿಕೊಂಡರು. ಇವರು ಶಂಕರ ಹಾಗೂ ಭಾಸ್ಕರರ ಅಭಿಪ್ರಾಯಗಳನ್ನು ಒಪ್ಪಲಿಲ್ಲ. ಅವರೂ ಭೇದಾಭೇದವಾದಿಗಳೇ ಆದರೂ ಭಾಸ್ಕರರ ಅಭಿಪ್ರಾಯಗಳನ್ನು ಒಪ್ಪಲಿಲ್ಲ. ಶಂಕರ, ಭಾಸ್ಕರರ ಭಾಷ್ಯಗಳ ನ್ಯೂನತೆಗಳನ್ನು ಕಂಡುಹಿಡಿದ ಯಾದವ ಪ್ರಕಾಶರು ಬೇರೆಯೇ ಆದ ತಮ್ಮ ಭಾಷ್ಯವನ್ನು ರಚಿಸಿದರು.

ಬ್ರಹ್ಮಸೂತ್ರಗಳಿಗೆ ಈ ಮೂವರೂ ಅದ್ವೈತ ಪರವಾದ ಭಾಷ್ಯಗಳನ್ನು ಬರೆದರೂ, ಈ ಭಾಷ್ಯಗಳಲ್ಲಿ ಪರಸ್ಪರ ಒಗ್ಗಟ್ಟು ಇರಲಿಲ್ಲ. ಹೀಗಾಗಿ ಈ ಮೂರೂ ಬೇರೆ ಬೇರೆಯೇ ಆದ ಸಂಪ್ರದಾಯಗಳಾದುವು. ಇವರಲ್ಲಿ ಏಕರೂಪತೆ ಕಂಡು ಬರದೆ ಇದ್ದುದರಿಂದ ಹೊಸ ಮಾರ್ಗದ ಹಾದಿಗೆ ದಾರಿಯಾಯಿತು.

ಈ ಮಧ್ಯೆ ವಿಶಿಷ್ಟಾದ್ವೈತ ಸಂಪ್ರದಾಯವು ಬೇರೆ ಮತಗಳ ಪ್ರಭಾವದಿಂದ ಕುಗ್ಗಿಹೋಗಿತ್ತು. ಬಲವಾಗತೊಡಗಿದ್ದ ಈ ಸಂಪ್ರದಾಯವು ಅಲ್ಲಿ ಇಲ್ಲಿ ಮಾತ್ರ ಉಳಿದುಕೊಂಡಿತ್ತು.

ಇಂತಹ ಸನ್ನಿವೇಶದಲ್ಲೇ ನಾಥಮುನಿಗಳು ಅವತರಿಸಿದರು. ಇವರು ಈ ಸಂಪ್ರದಾಯದ ಪ್ರಾಚೀನತೆ, ಶ್ರೇಷ್ಠತೆಯನ್ನು ಮನಗಂಡು ಈ ಮತದ ಸಂಘಟನೆಗೆ ಬಹಳವಾಗಿ ಶ್ರಮಿಸಿದರು. ಆದರೆ ಪ್ರಾರಂಭದ ದೆಸೆಯಾದುದರಿಂದ ಅವರ ಶ್ರಮ ಶ್ರಮವಾಗಿಯೇ ಉಳಿಯಿತು.

ಇವರ ಮೊಮ್ಮಕ್ಕಳಾದ ಯಾಮುನರು ಇದನ್ನು ಪುಷ್ಟಿಗೊಳಿಸಲು ತೀರ್ಮಾನಿಸಿ, ಅದಕ್ಕಾಗಿ ಕಾರ್ಯೋನ್ಮುಖರಾದರು ಅದರ ಪ್ರಾಚೀನ ವೈಭವವನ್ನು ಹೊಂದುವ ಹಿರಿಯಾಸೆಯಿಂದ ಲೋಕಾದ್ಯಂತ ಬೆಳಗಬೇಕೆಂಬ ಗುರಿಯನ್ನು ಹೊಂದಿ, ಶ್ರಮಿಸಿದಂತೆಲ್ಲ, ಇವರಿಗೆ ವಯಸ್ಸಾದುದರಿಂದ, ಮಹಾ ಮಹಿಮರೋರ್ವರ ನಿರೀಕ್ಷೆಯಲ್ಲಿರತೊಡಗಿದರು.

ಇಂತಹ ಸಮಯದಲ್ಲೇ ಶ್ರೀಪೆರಂಬುದೂರಿನಲ್ಲಿ ಆಸೂರಿ ವಂಶದ ರಾಮಾನುಜರ ಅವತಾರವಾಯಿತು. ಈ ಮಹಾಮಹಿಮರು ಅತಿ ವಿಲಕ್ಷಣ ಮೇಧಾವಿಯೂ, ಅತಿ ತೇಜಸ್ವಿಯೂ, ತೀಕ್ಷ್ಣಮತಿಯೂ ಆಗಿರುವ ವಿಷಯ ತಿಳಿದ ಯಾಮುನರು ತಮ್ಮ ಗುರಿ ಸಾಧನೆಗೆ ಇವರೇ ಯೋಗ್ಯರೆಂದು ತೀರ್ಮಾನಿಸಿ,

ಪರೋಕ್ಷವಾದ ಶಿಷ್ಯತ್ವವನ್ನು ಅನುಗ್ರಹಿಸಿದರು. ಅವರಿಗೆ ವಿಶಿಷ್ಟಾದ್ವೈತ ಪರವಾದ ಅರ್ಥವನ್ನು ಗ್ರಹಿಸುವಿಕೆ, ವಿಮರ್ಶನ ಹಾಗೂ ಗ್ರಂಥ ನಿರ್ಮಾಣ ಸಾಮರ್ಥ್ಯವಿರುವುದನ್ನು ಆಲಿಸಿ ಯಾಮುನರಿಗೆ ತುಂಬಾ ಸಂತಸವಾಯಿತು.

ರಾಮಾನುಜರಿಗೆ ಯಾದವ ಪ್ರಕಾಶರ ಬ್ರಹ್ಮಸೂತ್ರಗಳ ಅರ್ಥಗಳು ಸರಿಯಾದುವಲ್ಲ ಎಂಬುದು ತಿಳಿದಿತ್ತು. ಅವುಗಳ ಅರ್ಥದಲ್ಲಿನ ಭಿನ್ನಾಭಿಪ್ರಾಯ ಗಳು ಯುಕ್ತವಲ್ಲದುವು ಎಂದು ಅವರು ಭಾವಿಸಿದರು. ಬಾದರಾಯಣರ ಬ್ರಹ್ಮ ಸೂತ್ರಗಳ ನಿಜವಾದ ಆಶಯ ಏನೆಂಬುದನ್ನು ತಿಳಿದುಕೊಳ್ಳಬೇಕೆಂಬ ಆಸೆ ಅಂಕುರಿಸಿತು. ಅಂತೆಯೇ ಅವರು ಯಾಮುನರ ಗ್ರಂಥಗಳ ಅಧ್ಯಯನ ಮಾಡಿ, ಅವರನ್ನು ತಮ್ಮ ಗುರುಗಳಾಗಿ ಸ್ವೀಕರಿಸಿದರು. ತಾವೂನು ನಾಥಮುನಿಗಳ ವಂಶದವರು ಎಂಬ ಸತ್ಯವನ್ನು ಅರಿತು, ಅವರ ಹಾಗೂ ಗುರುಗಳ ಗುರಿಯನ್ನು ಸಫಲಗೊಳಿಸುವ ಪ್ರತಿಜ್ಞೆಗೈದರು. ಆ ಪ್ರತಿಜ್ಞೆ ನೆರವೇರಿಸುವಿಕೆಯಲ್ಲಿ ಸಫಲರೂ ಆದರು.

ಎಲ್ಲದಕ್ಕಿಂತ ಮೊದಲು ನಾಥಮುನಿ, ಯಾಮುನರು ನಿರ್ಧರಿಸಿದ ಸಿದ್ಧಾಂತ ವನ್ನು ಕ್ರೋಢೀಕರಿಸುವ ಕಾರ್ಯವನ್ನು ಇವರು ಕೈಗೊಂಡರು. ವಿಶಿಷ್ಟಾದ್ವೈತ ಸಿದ್ಧಾಂತವೆಂದು ನಂತರದಲ್ಲಿ ಕರೆಯಲ್ಪಟ್ಟ ಶ್ರೀವೈಷ್ಣವ ದರ್ಶನದ ಚೌಕಟ್ಟು, ರೂಪರೇಷೆಗಳನ್ನು ವ್ಯವಸ್ಥಿತಗೊಳಿಸಲು ಪ್ರಯತ್ನಗಳನ್ನು ನಡೆಸತೊಡಗಿದರು. ಇದಕ್ಕೆ ಮುಖ್ಯವಾಗಿ ಬ್ರಹ್ಮಸೂತ್ರಗಳ ವಿಶಿಷ್ಟಾದ್ವೈತ ಪರವಾದ ಭಾಷ್ಯವನ್ನು ಬರೆಯಬೇಕೆಂದು ನಿರ್ಧರಿಸಿದರು.

ಈ ಮಧ್ಯೆ ರಾಮಾನುಜರ ಜೀವನದಲ್ಲೂ ಅನೇಕ ಬದಲಾವಣೆಗಳಾದುವು. ಯಾಮುನರು ಪರಮಪದಿಸಿದ್ದು, ಅವರ ಪಂಚಶಿಷ್ಯರಿಂದ ಯಾಮುನರ ಭಾವನೆ ಗಳು, ಉದ್ದೇಶ್ಯಗಳನ್ನು ಅರಿತಿದ್ದು, ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದು, ಶ್ರೀರಂಗದಲ್ಲಿ ನೆಲೆಸಿದ್ದು–ಇತ್ಯಾದಿ ಘಟನೆಗಳೆಲ್ಲ ರಾಮಾನುಜರ ಜೀವನದಲ್ಲಿ ಘಟಿಸಿದುವು. ಸಿದ್ಧಾಂತದ, ದರ್ಶನದ ಗ್ರಂಥಗಳನ್ನು ಬರೆಯುವುದೊಂದೇ ಈಗ ರಾಮಾನುಜರಿಗೆ ಇದ್ದ ಮುಂದಿನ ಗುರಿಯಾಯಿತು.

ಇದರ ಅನುಸಾರ ತಾವು ಅಂದುಕೊಂಡ ಸಿದ್ಧಾಂತದ ಪ್ರತಿಪಾದನೆಗಾಗಿ ಒಂಭತ್ತು ಗ್ರಂಥಗಳನ್ನು ಇವರು ರಚಿಸಿದರು. ಇವು ಶ್ರೇಷ್ಠ ಗ್ರಂಥಗಳಾದುದರಿಂದ 'ನವರತ್ನ'ಗಳು ಎನ್ನುವ ಅನ್ವರ್ಥ ಹೆಸರನ್ನು ಪಡೆದುವು. ಇವುಗಳಲ್ಲಿ ಬಹು

ಮುಖ್ಯವಾದುದು 'ಶ್ರೀಭಾಷ್ಯ'. ಈ ಕೃತಿಯ ರಚನೆಗಾಗಿ ಇವರು ಪಟ್ಟ ಶ್ರಮ, ನಡೆಸಿದ ಅಧ್ಯಯನ, ಬುದ್ಧಿಮತ್ತತೆಯ ಪ್ರತೀಕತೆಗಳು ಅನನ್ಯವಾದುದು. ಪ್ರಪಂಚದ ಸಿದ್ಧಾಂತ ಗ್ರಂಥಗಳಲ್ಲೇ ಇದು ಮೇರು ಕೃತಿಯಾಯಿತು.

ಬ್ರಹ್ಮಸೂತ್ರಗಳ ಹಿಂದಿನ ಭಾಷ್ಯಗಳನ್ನೆಲ್ಲ ಇವರು ಪರಿಶೀಲಿಸಿದರು. ಅವುಗಳ ಅರ್ಥದಲ್ಲೇ ಭಿನ್ನಾಭಿಪ್ರಾಯಗಳಿದ್ದುವು. ಹೀಗಾದರೆ ಉಪನಿಷತ್ತುಗಳ ಅರ್ಥ ನಿರ್ಣಯ ಹೇಗೆ ಮಾಡುವುದು ಎಂಬ ಸಂಶಯ ರಾಮಾನುಜರಿಗೆ. ಮೇಧಾಶಕ್ತಿಯ, ತರ್ಕದ ಪ್ರಭಾವದಿಂದ ಕಲ್ಪಿಸುವ ಅರ್ಥಗಳು ಎಲ್ಲ ಕಾಲಕ್ಕೂ ಸಮ್ಮತವಾಗಿರುವುದಿಲ್ಲ. ಮೂಲಕಾರರ ಆಶಯವನ್ನು ತಿಳಿಯಲು ಪರಂಪರಾನುಗತವಾಗಿ ಬಂದ ಸಂಪ್ರದಾಯವನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಆದರೆ ಸಂಪ್ರದಾಯ ನಷ್ಟವಾದಾಗ ಅವುಗಳ ಸರಿಯಾದ ಅರ್ಥ ಅರಿಯುವುದು ಅಶಕ್ಯ. ಇದಕ್ಕಾಗಿ ಮೂಲಕ್ಕೇ ಹೋಗಬೇಕು

ಆದರಿಂದ ಬೋಧಾಯನರ 'ವೃತ್ತಿ'ಗ್ರಂಥವನ್ನೇ ನೋಡಬೇಕಾಯಿತು. ಇದು ದೊರೆಯಲಿಲ್ಲ. ಇವರ ನಂತರದ ಟಂಕ, ದ್ರಮಿಡ, ಗುಹದೇವ ಇತ್ಯಾದಿ ಪೂರ್ವಾಚಾರ್ಯರ ವ್ಯಾಖ್ಯಾನಗಳನ್ನು ಸಂಗ್ರಹಿಸಿ, ಅವುಗಳ ಪರಿಶೀಲನೆ ಮಾಡಿದರು. ಅವುಗಳಲ್ಲಿನ ಸೂತ್ರಾರ್ಥಗಳ ವರ್ಣನಾರೀತಿ ಸಮಂಜಸವಾಗಿರುವುದನ್ನು ಕಂಡು ಅವರಿಗೆ ಸಂತೋಷವಾಯಿತು. ಆದರೆ ಇವೆಲ್ಲವೂ ಬೋಧಾಯನರ 'ವೃತ್ತಿ'ಯನ್ನೇ ಅವಲಂಬಿಸಿದ್ದುವು. ಹಾಗಿದ್ದರೆ ಅದನ್ನು ಪರಿಶೀಲಿಸುವುದು ಒಳ್ಳೆಯದಲ್ಲವೆ ? ಎನ್ನಿಸಿತು ಅವರಿಗೆ. ಇದರಿಂದ ಒಂದು ಸ್ಪಷ್ಟ ಚಿತ್ರ ಅವರಿಗೆ ದೊರೆಯುತ್ತಿತ್ತು. ಆದರೆ ಅದು ದೊರೆಯುವುದಾದರೂ ಎಲ್ಲಿ ?

ಇಂತಹುದೊಂದು ಗ್ರಂಥದ ಪ್ರತಿಯು ಕಾಶ್ಮೀರದಲ್ಲಿ ಇರುವುದಾಗಿ ತಿಳಿದು ಬಂದಿತು. ಅಂತೆಯೇ ತಮ್ಮ ಪರಮಾಪ್ತ ಶಿಷ್ಯರಾದ ಮಹಾಮೇಧಾವಿ ಕೂರೇಶರೊಂದಿಗೆ ಅಲ್ಲಿಗೆ ತೆರಳಿದರು. ಅಲ್ಲಿ ಹಳೆಯ ಗ್ರಂಥಗಳ ರಾಶಿಯಲ್ಲಿದ್ದ ಆ ಗ್ರಂಥವನ್ನು ಪಡೆದು ಆಮೂಲಾಗ್ರ ಅವಲೋಕಿಸಿದರು. ಆಗ ರಾಮಾನುಜರಿಗೆ ಅಪಾರ ತೃಪ್ತಿ ಉಂಟಾಯಿತು ಸಂಪ್ರದಾಯವಾಗಿ ತಾವು ತಿಳಿದುಕೊಂಡಿದ್ದ ಅರ್ಥಗಳಿಗೆ ಬೋಧಾಯನರ ಸಮ್ಮತಿ ಇರುವುದನ್ನು ಅರಿತು ಸಮಾಧಾನಗೊಂಡರು

ಅಂತೆಯೇ ಬೋಧಾಯನರ ಸಮಂಜಸ ಹಾಗೂ ಹೃದಯಂಗಮ ಸೂತ್ರಾರ್ಥಗಳ ಆಧಾರದ ವಿಸ್ತಾರ ವಿವರಣೆಗಳು ಹಾಗೂ ಟಂಕ–ದ್ರಮಿಡರ

ಕಠಿಣ ಶೈಲಿ–ಇವೆರಡರ ನಡುವಣ ಕಾಲಾನುಗುಣ ಸರಳ ಶೈಲಿಯಲ್ಲಿ ಅತಿ ವಿಸ್ತಾರವೂ ಅಲ್ಲದ ಅತಿ ಸಂಕ್ಷೇಪವೂ ಅಲ್ಲದ ರೀತಿಯಲ್ಲಿ ಸೂತ್ರಗಳ ಅರ್ಥವನ್ನು ಪ್ರತಿಪಾದಿಸುವ ಭಾಷ್ಯದ ರಚನೆಯ ಕಾರ್ಯವನ್ನು ಆಚಾರ್ಯರು ಕೈಗೊಂಡರು.

ಹೀಗೆ ಮಾಡುವಾಗ ರಾಮಾನುಜರು ಕೆಲವೊಂದು ಅಂಶಗಳನ್ನು ಗಮನದಲ್ಲಿ ಇರಿಸಿಕೊಂಡಿದ್ದರು–

1. ಸೂತ್ರಕಾರರ ಅಭಿಪ್ರಾಯಕ್ಕೆ ವಿರೋಧ ಬಾರದಂತೆ ಅರ್ಥ ಮಾಡುವುದು.

2. ಪರಂಪರೆಯಾಗಿ ಬಂದಿರುವ ಸಂಪ್ರದಾಯಕ್ಕೆ ಪುರಸ್ಕಾರ ಕೊಡುವುದು.

3. ಸೂತ್ರಕಾರರ ಸಮಕಾಲೀನರ ಅರ್ಥ ದೊರೆತರೆ ಅದಕ್ಕೆ ಮನ್ನಣೆ ಕೊಡುವುದು.

4. ಸ್ಮೃತಿ ಹಾಗೂ ಇತಿಹಾಸ ಗ್ರಂಥಗಳ ಸಹಾಯ ಪಡೆಯುವುದು.

5. ಆಳ್ವಾರರುಗಳ ದಿವ್ಯಸೂಕ್ತಿಗಳ ಉಪಯೋಗವನ್ನು ಪಡೆಯುವುದು.

6. ಪ್ರಮುಖವಾಗಿ ತತ್ತ್ವದ ಕಡೆ ಗಮನ ಕೊಡುವುದು.

'ಭಗವದ್ ಭೋದಾಯನ ಕೃತಾಂ ವಿಸ್ತೀರ್ಣಂ ಬ್ರಹ್ಮಸೂತ್ರ ವೃತ್ತಿಂ ಪೂರ್ವಾಚಾರ್ಯಃ ಸಂಚಿಕ್ಷಿಪುಃ ತನ್ಮತಾನುಸಾರೇಣ ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯಂತಿ' ಎಂದು ಭಾಷ್ಯದ ಆರಂಭದಲ್ಲಿ ರಾಮಾನುಜರು ಸೂಚಿಸಿದ್ದಾರೆ.

ಬಾದರಾಯಣರ ಕಾಲದಿಂದ ತಮ್ಮ ಕಾಲದವರೆಗೆ ಹುಟ್ಟಿಕೊಂಡ ಅಭಿಪ್ರಾಯಗಳನ್ನು ವಿಮರ್ಶಿಸಿ, ಪರಸ್ಪರ ವಿರೋಧಕ್ಕೆ ಆಸ್ಪದವಿಲ್ಲದಂತೆ ಸೂತ್ರಗಳಿಗೆ ಆಚಾರ್ಯರು ಭಾಷ್ಯವನ್ನು ರಚಿಸಿದರು.

ಸರಳ ನೇರ ಶೈಲಿ, ರಮ್ಯರೀತಿಯಲ್ಲಿ ವಿಷಯ ಪ್ರತಿಪಾದನೆ ಕ್ಲುಪ್ತ ಮಾತುಗಳಿಂದ ವಿಷಯಗಳನ್ನು ನೇರವಾಗಿ ತಿಳಿಸುವ ವಿಧಾನ, ಇವುಗಳನ್ನು ಸಮರ್ಥಿಸಲು ಯುಕ್ತಿ, ಉದ್ವೇಗರಹಿತ ತಾರ್ಕಿಕ ರೀತಿ ಇವು ಸೂತ್ರಗಳಿಗೆ ಅನುರೂಪ ಅರ್ಥ ನೀಡುವಂತೆ ಮಾಡಿವೆ. ಪೂರ್ವಪಕ್ಷದ ವಿಷಯಗಳಲ್ಲಿನ ನ್ಯೂನತೆಗಳನ್ನು ತೋರಿಸುವಾಗ, ಅದರ ಹೃದಯಂಗಮ ರೀತಿಗೆ ಪೂರ್ವಪಕ್ಷವೇ ಸಮಂಜಸವೆನ್ನುವ ಭಾವನೆ ಬರುವುದು. ಆದರೆ ಸಿದ್ಧಾಂತದ ಪ್ರತಿಪಾದನೆಯ

ರೀತಿಯನ್ನು ಗಮನಿಸಿದ ನಂತರ ಪೂರ್ವಪಕ್ಷ ಎಷ್ಟೊಂದು ನ್ಯೂನತೆಗಳಿಂದ ಕೂಡಿದೆ ಎಂದು ತಿಳಿದುಬರುವುದು. ಹೇಳುವ ಪ್ರಮಾಣಗಳು ಸಂಪ್ರದಾಯ ಬದ್ಧವಾಗಿದ್ದು, ಸೂತ್ರಾರ್ಥಗಳು ವೃತ್ತಿಕಾರನಿಗೆ ಒಪ್ಪಿಗೆಯಾಗಿರುವುದನ್ನು 'ತದಾಹ ವೃತ್ತಿಕಾರಃ' ಎಂದು ಬೋಧಾಯನರನ್ನು ಉದಾಹರಿಸುತ್ತಾರೆ.

ಭಾಷ್ಯ ಗ್ರಂಥವು ಪೂರ್ತಿಯಾದ ಮೇಲೆ ಅದು ಜ್ಞಾನಿಗಳ, ವಿಮರ್ಶಕರ ಅಂಗೀಕಾರ ಪಡೆಯಲು ರಾಮಾನುಜರು ಕಾಶ್ಮೀರದ ಶಾರದಾ ಪೀಠಕ್ಕೆ ಹೋದರು. ವಾದ ಮಾಡಿದ ವಿದ್ವಾಂಸರು ಅವರ ಜ್ಞಾನ ಪ್ರತಿಭೆಗಳಿಗೆ ಮನ ಸೋತು, ಶಾರದಾ ಪೀಠದ ದ್ವಾರವನ್ನು ತೆರವು ಮಾಡಿದರು. ಭಾಷ್ಯ ಗ್ರಂಥವನ್ನು ಶಾರದೆಯ ಸನ್ನಿಧಿಯಲ್ಲಿ ಅರ್ಪಿಸಿದಾಗ, ಆಕೆಯು 'ಕಪ್ಯಾಸಂ ಪುಂಡರೀಕಂ' ಎಂಬುದರ ಅರ್ಥವನ್ನು ತಿಳಿಯಬಯಸಿದಳು. ಅದರಂತೆ ಅವರು ಸುಂದರ, ಮಂಗಳಕರ ಅರ್ಥ ನೀಡಿದರು. ಆದರಿಂದ ಸಂತೋಷಗೊಂಡ ಆಕೆಯು, 'ನೀನೇ ನಿಜವಾದ ಭಾಷ್ಯಕಾರ. ನಿನ್ನ ಭಾಷ್ಯ 'ಶ್ರೀಭಾಷ್ಯ' ಎಂಬ ಹೆಸರಿನಿಂದ ಲೋಕದಲ್ಲಿ ಬೆಳಗಲಿ' ಎಂದು ಆಶೀರ್ವದಿಸಿದಳು. ಭಾರತೀಯ ತತ್ತ್ವಶಾಸ್ತ್ರದ ಇತಿಹಾಸದಲ್ಲೇ ಇದೊಂದು ಕೃತಿಗೇ 'ಶ್ರೀಭಾಷ್ಯ' ಎಂಬ ಹೆಸರು ಬಂದಿರುವುದು, ಅಂತೆಯೇ ರಾಮಾನುಜರೊಬ್ಬರಿಗೇ 'ಭಾಷ್ಯಕಾರ' ಎಂಬ ಹೆಸರಿರುವುದು. ಈ ರೀತಿಯಲ್ಲಿ ಪರಂಪರಾಗತವಾಗಿ ಬಂದಿರುವ ವಿಶಿಷ್ಟಾದ್ವೈತ ಸಿದ್ಧಾಂತವು ಈ ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟು, ಪರಿಷ್ಕರಣ ರೀತಿಯಲ್ಲಿ ಸುಸ್ಥಿರವಾಗಿ, ಸುಭದ್ರವಾಗಿ ನೆಲೆಗೊಂಡಿದೆ.

ಉಪನಿಷದ್ ವಾಕ್ಯಗಳಲ್ಲಿ ಎಲ್ಲದಕ್ಕೂ ಸಮಾನ ಸ್ಥಾನ. ವಾಕ್ಯಗಳು ಒಂದಕ್ಕೊಂದು ಅನುರೂಪವಾಗಿರುತ್ತವೆ. ವಿರೋಧ ತೋರುವ ವಾಕ್ಯಗಳು ಇದ್ದರೂ, ಅವುಗಳ ನಡುವೆ ಸಾಮಂಜಸ್ಯ ತೋರಲು ಘಟಕ ಶ್ರುತಿವಾಕ್ಯಗಳಿರುತ್ತವೆ. ಇವು ಭೇದಾಭೇದ ವಾಕ್ಯಗಳನ್ನು ಸಮನ್ವಯಗೊಳಿಸಿ, ಎಲ್ಲ ವಾಕ್ಯಗಳಿಗೂ ಮುಖ್ಯಸ್ಥಾನವನ್ನು ಕೊಟ್ಟು, ಸರಶುಪ್ರಾಮುಖ್ಯವನ್ನು ಉಳಿಸಿರುವುದು ರಾಮಾನುಜರ ಕೃತಿಗಳಲ್ಲಿನ ವೈಶಿಷ್ಟ್ಯ. ಅಲ್ಲದೆ ವೇದದ ಪೂರ್ವಭಾಗ (ಕರ್ಮಕಾಂಡ)ಕ್ಕೂ, ಉತ್ತರ ಭಾಗ (ಜ್ಞಾನಕಾಂಡ)ಕ್ಕೂ ಉಪನಿಷತ್ತುಗಳಿಗೂ ಸಾಮರಸ್ಯ ಹಾಗೂ ಐಕ್ಯಮತ್ಯಗಳನ್ನು ಕಲ್ಪಿಸಿರುವುದು ಆಚಾರ್ಯರ ಮತ್ತೊಂದು ವೈಶಿಷ್ಟ್ಯ.

ಹೀಗೆ ಎಲ್ಲ ವೇದವಾಕ್ಯಗಳನ್ನೂ ಪುರಸ್ಕರಿಸಿ, ಎಲ್ಲದಕ್ಕೂ ಮಾನ್ಯತೆ ನೀಡಿರುವ ರಾಮಾನುಜರಿಂದ ಮತ್ತೆ ಬೆಳಕಿಗೆ ತರಲ್ಪಟ್ಟ ವಿಶಿಷ್ಟಾದ್ವೈತ ಸಿದ್ಧಾಂತವು ಪರಮ ವೈದಿಕ ಸಿದ್ಧಾಂತವೆಂದು ಎಲ್ಲ ವಿದ್ವಾಂಸರಿಂದ ಪರಿಗಣಿಸಲ್ಪಟ್ಟಿದೆ.

## ಶ್ರೀ ರಾಮಾನುಜರ ದರ್ಶನ

ಈ ದರ್ಶನವನ್ನು ವಿಶಿಷ್ಟಾದ್ವೈತ ದರ್ಶನ (ವೇದಾಂತ) ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಆ ಸಮಯದಲ್ಲಿ ಇದನ್ನು 'ಸಾತ್ತ್ವತ ತತ್ತ್ವ' ಎಂದು ಕರೆಯುತ್ತಿದ್ದು ನಂತರದಲ್ಲಿ 'ವಿಶಿಷ್ಟಾದ್ವೈತ' ಎಂಬ ಹೆಸರು ಪಡೆಯಿತು. ವಿಶಿಷ್ಟ, ಅದ್ವೈತ-ಎಂಬ ಎರಡು ಪದಗಳಿಂದ ಕೂಡಿದ ವಿಶಿಷ್ಟವಾದ ಚಿತ್, ಅಚಿತ್‌ಗಳೆನ್ನುವ ಪರಬ್ರಹ್ಮನ ಶರೀರವೇ ಈ ದರ್ಶನದ ಮೂಲಸತ್ವ. ಇವನನ್ನು ರಾಮಾನುಜರು ಚಿದಚಿದ್ವಿಷ್ಟ ಬ್ರಹ್ಮ (ಅಶೇಶ ಚಿದಚಿದ್ವಸ್ತು ಪ್ರಕಾರಕಂ ಬ್ರಹ್ಮ) ಎಂದು ಕರೆದರು ಈತನೇ ಪರಮಾತ್ಮ; ಈತನೇ ಶ್ರೀಮನ್ನಾರಾಯಣ. ಈ ಚಿತ್, ಅಚಿತ್, ಈಶ್ವರ-ಎನ್ನುವವುಗಳ ವಿವರವೇ ತತ್ತ್ವತ್ರಯ.

ಅ) ತತ್ತ್ವತ್ರಯ : ಈ ಪರಬ್ರಹ್ಮ ಏಕಮೇವಾದ್ವಿತೀಯ ತತ್ತ್ವ (ನ ತತ್ಸಮಶ್ಚಾಭ್ಯಾಧಿಕಶ್ಚ ದೃಶ್ಯತೆ). ಇದಕ್ಕೆ ಸಮನಾದುದು, ಮೀರಿಸುವಂತಹುದು ಯಾವುದೂ ಇಲ್ಲದಿರುವುದರಿಂದಲೇ ಇದು ಪರತತ್ತ್ವ. ಈತನು ನಿತ್ಯ, ಸತ್ಯ, ಜ್ಞಾನಾನಂದಮಯ, ಸರ್ವವ್ಯಾಪಿ, ಸರ್ವಜ್ಞ, ಪರಬ್ರಹ್ಮನು. ಈತನಲ್ಲಿ ದೋಷವೇ ಇಲ್ಲ. ಈತನು ಜಗತ್ತಿನ ಸರ್ವವಿಧ, ಉಪಾದಾನ, ನಿಮಿತ್ತ, ಸಹಕಾರಿ ಕಾರಣನು.

ಈತನಿಗೆ 'ಏಕಂ ಸದ್ವಿಪ್ರಾಃ ಬಹುಧಾ ವದಂತಿ' ಎನ್ನುವ ಅನೇಕ ಹೆಸರುಗಳಿವೆ-ಆತ್ಮ, ಬ್ರಹ್ಮ, ಈಶ್ವರ, ನಾರಾಯಣ, ಪುರುಷೋತ್ತಮ, ವಾಸುದೇವ ಇತ್ಯಾದಿ.

ಅಚಿತ್, ಚಿತ್‌ಗಳು ಈ ಪರಬ್ರಹ್ಮನಿಂದ ಬಿಡಿಸಲಾರದ (ಅಪೃಥಕ್ಸಿದ್ಧ) ವಿಶೇಷಣಗಳು. ಇವುಗಳಿಂದ ಬ್ರಹ್ಮನು ವಿಶಿಷ್ಟ ಸ್ವರೂಪವನ್ನು ಹೊಂದಿದ್ದರೂ, ಸ್ವತಂತ್ರನು. ಇವುಗಳು ಬ್ರಹ್ಮನಿಗೆ ಪರತಂತ್ರ ಮತ್ತು ಅವನ ಶರೀರ. ಅಂದರೆ ಚಿತ್, ಅಚಿತ್‌ಗಳು ಹಾಗೂ ಬ್ರಹ್ಮನಿಗೂ ವಿಶೇಷಣ, ವಿಶೇಷ್ಯ ಹಾಗೂ ಶರೀರ-

ಶರೀರಿ ಸಂಬಂಧ. ಚಿತ್, ಅಚಿತ್ ಹಾಗೂ ಈಶ್ವರ–ಇವುಗಳ ನಡುವೆ ಆಧಾ ರಾಧೇಯ ಸಂಬಂಧವಿದ್ದರೂ, ಪ್ರತಿಯೊಂದು ವಿಶಿಷ್ಟ ಲಕ್ಷಣಗಳನ್ನು ಹೊಂದಿದೆ. ಈ ಲಕ್ಷಣಗಳನ್ನು ತೋರಿಸಲು ಶ್ರುತಿ, ಸ್ಮೃತಿಗಳು ಸಹಾಯಕವಾಗಿವೆ. 'ಜ್ಞಾಜೌ ದ್ವಾವಜೌ ಈಶನೀಶೌ' ಎನ್ನುವ ಶ್ವೇತಾಶ್ವತರ ಉಪನಿಷತ್ತಿನಂತೆ ಚಿತ್ ಮತ್ತು ಈಶ್ವರ ತತ್ತ್ವಗಳು–ಎರಡಕ್ಕೂ ಅಜತ್ವವಿದೆ. ಇವೆರಡಕ್ಕೂ ಸಮಾನ ಲಕ್ಷಣಗಳಿದ್ದರೂ ಚಿತ್ ಈಶ್ವರನಿಗೆ ಅಧೀನ. ಆದರಿಂದಲೇ ಈಶ್ವರ ಅನಂತ, ವಿಶ್ವರೂಪೀ.

ವಿಶ್ವದಲ್ಲಿ ಕ್ಷರ, ಅಕ್ಷರ–ಎಂಬ ಇಬ್ಬರು ಪುರುಷರಿದ್ದಾರೆ. ಅಕ್ಷರನು ಪರಮಾತ್ಮ, ಪುರುಷೋತ್ತಮ, ಮೂರೂ ಲೋಕಗಳ ವ್ಯಾಪಕ. 'ಶರೀರಂ ತೇ ಜಗತ್ ಸರ್ವಂ' ಎಂದು ಜಗತ್ತು ಈತನಿಗೆ ಹೇಳುತ್ತದೆ.

ಈ ಈಶ್ವರನು ವಿಶಿಷ್ಟನು–'ವಿಶಿಷ್ಟಾಂತರ್ಭಾವ ಏವ ಐಕ್ಯಂ'. ಐಕ್ಯವಸ್ತು ವಾಗಿರುವ ಈಶ್ವರನು ಅಂತರ್ಯಾಮಿಯಾಗಿದ್ದು, ಪರಾತ್ಪರ ತತ್ತ್ವವಾಗಿರು ವನು. ಈ ತತ್ತ್ವತ್ರಯವನ್ನು ರಾಮಾನುಜರೂ, ನಂತರದಲ್ಲಿ ಪಿಳ್ಳೈ ಲೋಕಾ ಚಾರ್ಯರೂ ಪ್ರತಿಪಾದಿಸಿದ್ದಾರೆ.

ಅಚಿತ್, ಚಿತ್ ಹಾಗೂ ಈಶ್ವರ–ಇವುಗಳ ನಡುವೆ ಶರೀರ–ಶರೀರಿ ಸಂಬಂಧವೆಂದು ತಿಳಿಸಿದೆ. ಅಂದರೆ ಯಾವುದು ಆತ್ಮನಿಗೆ ವಿಧೇಯವಾಗಿ, ಆತ್ಮ ನಿಂದ ನಡೆಸಲ್ಪಟ್ಟು, ಆತ್ಮನಿಗಾಗಿ ಇರುವುದೋ ಅದು ಶರೀರ–'ನಿಯಮೇನ ಆಧೇಯತ್ವಂ, ನಿಯಮೇನ ವಿಧೇಯತ್ವಂ, ನಿಯಮೇನ ಶೇಷತ್ವಂ'. ಅಂದರೆ ಚಿತ್, ಅಚಿತ್‌ಗಳು ಪರಮಾತ್ಮನ ಪ್ರಕಾರಗಳು; ಈಶ್ವರನು ಅವುಗಳ ಪ್ರಕಾರೀ. ಚಿತ್, ಅಚಿತ್‌ಗಳು ಈಶ್ವರನಿಂದ ನಿಯಮ್ಯಗೊಂಡು, ಅವನಿಗೆ ಅಂಶಭೂತ ವಾದುವು, ಶೇಷಭೂತವಾದುವು. ಆದರೆ ಈಶ್ವರನು ಅವುಗಳಿಗೆ ಆಧಾರ, ಶೇಷೀ. ಅವು ಈಶ್ವರನಿಗೆ ಬಾಹ್ಯವಾದುದಲ್ಲ.

ಈಶ್ವರನಲ್ಲಿ ಸ್ವಗತ ಭೇದ (ಅವನೊಳಗೆ ಇರುವ ಭೇದ) ವಿದೆ. ಕಾರಣ ಅವನಲ್ಲೇ ಚಿತ್, ಅಚಿತ್ ಎನ್ನುವ ಭಿನ್ನ ತತ್ತ್ವಗಳಿವೆ. ಅವನು ಜಗತ್ತಿನ ಉಪಾದಾನ, ಸಹಕಾರೀ ಕಾರಣನಾಗಿದ್ದಾನೆ. ಅವನು ಸನಾತನ, ಪರಮ ಪುರುಷ, ಪೂರ್ಣಪುರುಷ, ಸಚ್ಚಿದಾನಂದ, ಸಕಲ ಕಲ್ಯಾಣ ಗುಣಾಕಾರ, ಸರ್ವಶಕ್ತ.

ಆದರಿಂದಲೇ ಅವನನ್ನು ರಾಮಾನುಜರು 'ಏವಂ ವಿಧ ಚಿದ ಚಿದಾತ್ಮಕ ಪ್ರಪಂಚಸ್ಯ ಉದ್ಭವ, ಸ್ಥಿತಿ, ಲಯ, ಸಂಸಾರ ನಿವರ್ತನೈಕ ಹೇತು ಭೂತಃ ಸಮಸ್ತ ಹೇಯ ಪ್ರತ್ಯನೀಕತಯಾ ಚ ಸ್ವೇತರ ಸಮಸ್ತ ವಸ್ತು ವಿಲಕ್ಷಣ ಸ್ವರೂಪಃ, ಅನವಧಿಕಾ ನತಿಶಯಾ ಸಂಖ್ಯೇಯ ಕಲ್ಯಾಣಗುಣಗಣಃ, ಸರ್ವಾತ್ಮಾ ಪರಮಾತ್ಮಾ, ಪರಬ್ರಹ್ಮ-ಪರಜ್ಯೋತಿಃ, ಪರಮಾತ್ಮ ಪರತತ್ತ್ವ ಶಬ್ದಭೇದೈ ರ್ನಿಖಿಲ ವೇದಾಂತ ವೇದ್ಯೋ ಭಗವಾನ್ ನಾರಾಯಣಃ, ಪುರುಷೋತ್ತಮ ಇತ್ಯನ್ತರ್ಯಾಮಿ ಸ್ವರೂಪಮ್. ತಸ್ಯ ಚ ವೈಭವ ಪ್ರತಿಪಾದನ ಪರಾಶ್ರುತಯಃ, ಸ್ವೇತರ ಸಮಸ್ತ ಚಿದಚಿದ್ವಸ್ತು ಜಾತಾನ್ತರಾತ್ಮತಯ ನಿಖಿಲ ನಿಯಮನಂ ತಚ್ಛಕ್ತಿ ತದಂಶ ತದ್ವಿಭೂತಿ ತದ್ರೂಪ ತಚ್ಛರೀರ ತತ್ತನು ಪ್ರಭೃತಿಭಿಶ್ಶಬ್ದೈಃ ತತ್ಸಮಾನಾಧಿಕರಣ್ಯೇವ ಚ ಪ್ರತಿಪಾದಯಂತಿ' ಎಂದು ತಮ್ಮ ಶ್ರೀ ವೇದಾರ್ಥ ಸಂಗ್ರಹದಲ್ಲಿ ವರ್ಣಿಸಿದ್ದಾರೆ.

ಆ) ಪ್ರಮಾಣಗಳು : ತತ್ತ್ವತ್ರಯಾತ್ಮಕವಾದ ಈ ಪರತತ್ತ್ವವನ್ನು ಪ್ರತಿಪಾದಿಸಲು ರಾಮಾನುಜರು ಉಪನಿಷತ್ತುಗಳ ವಾಕ್ಯಗಳ ಸಹಾಯವನ್ನು ಪಡೆದಿದ್ದಾರೆ–

'ಭೋಕ್ತಾ ಭೋಗ್ಯಂ ಪ್ರೇರಿತಾತಾಂ ಚ
ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮ ಏತತ್ | '
(ಶ್ವೇತಾಶ್ವರ)

'ಸಮ್ಯಕ್ ಮೇತತ್............ವಿಂದತೇ ಬ್ರಹ್ಮ ಏತತ್'
(ಶ್ವೇತ್ವತರ)

'ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವ
ಭೂತಾಂತರಾತ್ಮಾ ತೇನೇದಂ ಪೂರ್ಣಂ ಪುರುಷೇಣ ಸರ್ವಮ್ ||'

ಈಶ್ವರನು ಅತೀತನು. ಜಗತ್ತು, ಆತ್ಮಗಳೆಲ್ಲವನ್ನೂ ಒಂದುಗೂಡಿಸುವ ಸೂತ್ರ ಅವನು. ಅಚಿತ್ತು ಅವನನ್ನು ಅರಿಯದು, ಆದರೂ ಅದು ಅವನ ಶರೀರ. ಅವನು ಆತ್ಮ ಅಂತರ್ಯಾಮಿ ಅಮೃತ. ಇದನ್ನು

'ತತ್ ಸೂತ್ರಂ-ಯಸ್ಮಿನ್ ಅಯಂ ಚ ಲೋಕೇ........ಏಷತ ಆತ್ಮಾ ಅಂತರ್ಯಾಮಿ ಅಮೃತಃ'

ಎಂದು ಬೃಹದಾರಣ್ಯಕ ತಿಳಿಸುತ್ತದೆ.

ಚಕ್ರದ ಅರೆಗಳು ಚಕ್ರದಲ್ಲಿ ಒಂದುಗೂಡಿವೆ. ಹಾಗೆಯೇ ಎಲ್ಲ ಆತ್ಮಗಳೂ ಅವನಲ್ಲಿ ಒಂದುಗೂಡಿವೆ.

'ಅಸ್ಮಿನ್ ಸರ್ವಾಣಿ ಭೂತಾನಿ........ವಿವಾತ್ಮಾನಃ ಸಮರ್ಪಿತಾಃ ||'

'ತಸ್ಯ ಉಪನಿಷತ್ ಸತ್ಯಸ್ಯ ಸತ್ಯಮಿತಿ
ಪ್ರಾಣಃ ವೈಸತ್ಯಂ ತೇಷಾಮೇವ ಸತ್ಯಃ ||'

ರಾಮಾನುಜರು ತಮ್ಮ ಸಿದ್ಧಾಂತದ ಪ್ರತಿಪಾದನೆಗೆ ಪಾಂಚರಾತ್ರವನ್ನು ಪ್ರಮಾಣವನ್ನಾಗಿ ತೆಗೆದುಕೊಂಡಿದ್ದಾರೆ. ಯಾಮುನರ 'ಆಗಮ ಪ್ರಾಮಾಣ್ಯ' ಕೃತಿಯು ಅವರಿಗೆ ದಾರಿದೀಪವಾಗಿತ್ತು. ಇದರೊಂದಿಗೆ ಋಗ್ವೇದದ ಪುರುಷ ಸೂಕ್ತವೂ ಮುಖ್ಯ ಆಧಾರ. ಶ್ರೀವೈಷ್ಣವರನ್ನು ಪಾಂಚರಾತ್ರರು, ಭಾಗವತರು, ಸಾತ್ವಿಕರು ಎಂದು ಕರೆದಿದೆ. ವೇದಕ್ಕೂ, ಪಾಂಚರಾತ್ರಾಗಮಗಳಿಗೂ ಶ್ರೀಮನ್ನಾರಾಯಣನೇ ಉಗಮಸ್ಥಾನ.

ಇದೇ ರೀತಿಯಲ್ಲಿ ಶ್ರೀ ರಾಮಾನುಜರಿಗೆ ಸ್ಫೂರ್ತಿ ನೀಡಿದ, ಅವರ ದರ್ಶನಕ್ಕೆ ಆಧಾರವಾದ ಪ್ರಾಮಾಣ್ಯವೆಂದರೆ ಆಳ್ವಾರರ ಕೃತಿಗಳು. ಇವರು ದ್ರಾವಿಡ ವೇದ ಹಾಗೂ ಸಂಸ್ಕೃತದ ವೇದಾಂತವನ್ನು ಸಮನ್ವಯಗೊಳಿಸಲು ಪ್ರಯತ್ನಿಸಿದರು. ಇದರಿಂದಲೇ ಅವರನ್ನು 'ಉಭಯ ವೇದಾಂತ ಪ್ರವರ್ತಕರು' ಎಂದು ಕರೆದರು. ಆಳ್ವಾರರ ಭಕ್ತಿ, ಪ್ರಪತ್ತಿಗಳು ರಾಮಾನುಜರ ಹೃದಯವನ್ನು ಸೂರೆಗೊಂಡಿತು. ಆದರಿಂದ ಇವರ ಮಂಗಳ ಶ್ಲೋಕಗಳಲ್ಲಿ ಭಕ್ತಿರೂಪಾಪನ್ನ ಜ್ಞಾನ ಹಾಗೂ ಇವರ ಕೃತಿಗಳಲ್ಲಿ ಅದನ್ನು ಪ್ರತಿಪಾದಿಸಿದ್ದಾರೆ.

ಅಖಿಲ ಭುವನ ಜನ್ಮಸ್ಥೇಮ ಭಂಗಾದಿ ಲೀಲೇ ವಿನುತ
ವಿವಿಧ ವ್ರಾತ ರಕ್ಷೈಕ ದೀಕ್ಷೇ |
ಶ್ರುತಿ ಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ ಭವತು
ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ ||

'ಎಲ್ಲ ಲೋಕಗಳನ್ನೂ ಸೃಷ್ಟಿಸಿದವನೂ, ಅವನ್ನು ಉಳಿಸಿ, ಅವುಗಳ ಸೃಷ್ಟಿ, ಸ್ಥಿತಿ, ಲಯಗಳನ್ನು ತನ್ನ ಲೀಲೆಯನ್ನಾಗಿ ಮಾಡಿಕೊಂಡು ತನ್ನನ್ನು ಆಶ್ರಯಿಸಿದ ಸಮಸ್ತ ಭೂತ ಸಮುದಾಯಗಳನ್ನೂ ರಕ್ಷಿಸುತ್ತೇನೆಂದು ದೀಕ್ಷೆ ತಾಳಿದವನು, ಶ್ರುತಿಯ ಶಿರದಲ್ಲಿ ಬೆಳಗಿದವನು, ಅಂತಹ ಪರಮಾತ್ಮನಾದ ಶ್ರೀ ಶ್ರೀನಿವಾಸನಲ್ಲಿ ನನ್ನ ಜ್ಞಾನವು ಭಕ್ತಿರೂಪವನ್ನು ಪಡೆಯಲಿ.'

ರಾಮಾನುಜ ದರ್ಶನವನ್ನು ಈ ಮಂಗಳ ಶ್ಲೋಕದ ದೃಷ್ಟಿಯಲ್ಲಿ ನೋಡಿದ್ದೇ ಆದರೆ ಆ ದರ್ಶನದ ಮೂಲ ಆಶಯ ಅರ್ಥವಾಗುವುದು. ಅವರು ಪ್ರತಿಪಾದಿಸಿರುವ ತತ್ತ್ವವು ತರ್ಕಬದ್ಧ, ಶುಷ್ಕ ವೇದಾಂತವಲ್ಲ ಎನ್ನುವುದು ಅರ್ಥವಾಗುವುದು. ಇಲ್ಲಿ ಧರ್ಮ ಹಾಗೂ ದರ್ಶನಗಳೆರಡೂ ಸಮನ್ವಯ ಗೊಂಡಿವೆ. ಜ್ಞಾನವು ಭಕ್ತಿಯ ರೂಪವನ್ನು ಪಡೆದಿದೆ.

ತೈತ್ತರೀಯ ಉಪನಿಷತ್ತಿನಲ್ಲಿ 'ಅಧೀ ಹಿ ಭಗವೋ ಬ್ರಹ್ಮೇತಿ' (ಬ್ರಹ್ಮ ನನ್ನು ನನಗೆ ತಿಳಿಸು) ಎಂಬ ಪ್ರಶ್ನೆಗೆ 'ಯಾವುದರಿಂದ ಎಲ್ಲ ಭೂತಗಳೂ ಹುಟ್ಟಿ, ಜೀವಿಸಿ, ಅದರಲ್ಲೇ ಲೀನವಾಗುವುದೋ ಅದನ್ನೇ ಬ್ರಹ್ಮವೆಂದು ತಿಳಿ' ಎಂಬ ಉತ್ತರವಿದೆ. ಅಂದರೆ ಆನಂದಮಯ ಬ್ರಹ್ಮಜ್ಞಾನ ಪಡೆಯುವುದು ಎಲ್ಲ ತತ್ತ್ವ ಜ್ಞಾನದ ಪರಾಕಾಷ್ಠೆ, ಇಂತಹ ಜ್ಞಾನವು ದರ್ಶನದಲ್ಲಿ ಪರ್ಯವಸಾನ ಪಡೆಯು ವುದು ನಿಜವಾದ ವೇದಾಂತದ ಗುರಿ. ಇದೇ ಭಗವತ್ಪ್ರಾಪ್ತಿ. ಇದರಿಂದ ಪಡೆದ ಅತಿಶಯ ಪ್ರೀತಿಯೇ ಭಕ್ತಿ.

ಈ ರೀತಿಯ ದರ್ಶನ ಪ್ರಾಪ್ತಿಗೆ ಪ್ರತ್ಯಕ್ಷ, ಅನುಮಾನ ಹಾಗೂ ಶಬ್ದ ಪ್ರಮಾಣ (ಶ್ರುತಿ) ಎನ್ನುವ ಪ್ರಮಾಣತ್ರಯ ಅಗತ್ಯ ಎಂಬುದು ರಾಮಾನುಜರ ಅಭಿಮತ. ಇವುಗಳಲ್ಲಿ ಪ್ರತ್ಯಕ್ಷ (ಅವು ನಿರ್ವಿಕಲ್ಪಕವಾಗಲಿ, ಸವಿಕಲ್ಪಕವಾಗಲಿ)ವು ಸ್ಮೃತಿಯಂತೆ ಜ್ಞಾನ. ಶಬ್ದ ಪ್ರಮಾಣಕ್ಕೆ ಪಾಂಚರಾತ್ರ ಆಗಮಗಳ ಪ್ರಾಮಾಣ್ಯ ಉತ್ತಮ. ಇದನ್ನೇ ರಾಮಾನುಜರು 'ಕರ್ಮ ಜ್ಞಾನ ಸಮು ಚ್ಚಯ' ಎಂದರು. ಇವೆಲ್ಲವೂ ಪರಸ್ಪರ ಪೂರಕವಾಗಬೇಕೆಂಬುದು ರಾಮಾನುಜರ ಜ್ಞಾನಮೀಮಾಂಸೆಯ ತಾತ್ಪರ್ಯ.

ಈ ದೃಷ್ಟಿಯಿಂದ ರಾಮಾನುಜರ ವೇದಾಂತ ದರ್ಶನವನ್ನು ತತ್ವ, ಹಿತ, ಪುರುಷಾರ್ಥ ಎಂಬ ಮೂರು ಭಾಗಗಳಾಗಿ ವಿಂಗಡಿಸಬಹುದು. ಇವೆಲ್ಲವಕ್ಕೂ ಆಧಾರ ಬ್ರಹ್ಮ. ಈ ಬ್ರಹ್ಮಸಾಕ್ಷಾತ್ಕಾರ ಪಡೆಯುವ ಸಾಧನೋಪಾಯಕ್ಕೆ 'ಹಿತ' ಎಂದು ಹೆಸರು ಇದಕ್ಕೆ ಸಂಬಂಧಪಟ್ಟಂತೆ ಇರುವ ಜೀವನದ ಕಟ್ಟಕಡೆಯ ಗುರಿ 'ಮೋಕ್ಷ'. ಇದೇ ಪುರುಷಾರ್ಥ.

ಇ) ಈಶ್ವರ : ಈಗಾಗಲೇ ತತ್ತ್ವತ್ರಯ ಹಾಗೂ ಈಶ್ವರದ ಬಗ್ಗೆ ಪ್ರಸ್ತಾಪಿಸಲಾಗಿದೆ. ಇದಕ್ಕೆ ಸಂಬಂಧಪಟ್ಟಂತೆ ಚಿತ್, ಅಚಿತ್‌ಗಳ ಬಗ್ಗೆಯೂ, ಶರೀರ–ಶರೀರಿಗಳ ಬಗ್ಗೆಯೂ ತಿಳಿಸಲಾಗಿದೆ.

ಈ ಈಶ್ವರ ತತ್ತ್ವ ವಿವರಣೆಯ ಬಗ್ಗೆ ಮೂರು ಅಂಶಗಳನ್ನು ತಿಳಿಯ ಬೇಕಾಗಿದೆ.

1. ಈಶ್ವರ ಬ್ರಹ್ಮ ಒಂದೇನೇ. ಆದರಿಂದ ಈಶ್ವರನೇ ಬ್ರಹ್ಮ. ಅವನಿಂದ ವ್ಯಕ್ತವಾದ ಈ ಜಗತ್ತು ಸ್ಥೂಲ, ಸೂಕ್ಷ್ಮ, ವ್ಯಕ್ತ, ಅವ್ಯಕ್ತ–ಎಂಬ ಎರಡೆರಡು ಅವಸ್ಥೆಗಳಲ್ಲಿರುತ್ತದೆ. ಕಾರಣಾವಸ್ಥೆಯಲ್ಲಿ (ಪ್ರಳಯ ಇತ್ಯಾದಿ) ಈಶ್ವರ ಸೂಕ್ಷ್ಮ ನಾಗಿ, ಕಾರ್ಯಾವಸ್ಥೆಯಲ್ಲಿ ಸ್ಥೂಲವಾಗಿರುತ್ತಾನೆ. ಮೊದಲನೆಯದರಲ್ಲಿ ಜಗತ್ತು ಅವ್ಯಕ್ತವಾಗಿ, ಎರಡನೆಯದರಲ್ಲಿ ವ್ಯಕ್ತವಾಗಿರುತ್ತಾನೆ. ಸೃಷ್ಟಿಯಲ್ಲಿ ನಿತ್ಯ, ಮುಕ್ತ ಆತ್ಮರ ಹೊರತು, ಮಿಕ್ಕೆಲ್ಲ ಆತ್ಮರು ಅವರವರ ಕರ್ಮಾನುಸಾರ ದೇಹ ಗಳನ್ನು ಹೊಂದುತ್ತಾರೆ.

2. ಈಶ್ವರ ಅಂತರ್ಯಾಮಿ. ಅವನು ವಿಶೇಷ್ಯನಾದುದರಿಂದ ಯಾವ ವಿಕಾರವನ್ನೂ ಹೊಂದನು. ಸೃಷ್ಟಿಯ ಪರಿಣಾಮಗಳು ಅವನನ್ನು ಮುಟ್ಟವು. ಆದರೆ ಅವನ ವಿಶೇಷಣ (ಪ್ರಾಕಾರ)ಗಳಿಗೆ ಅನ್ವಯಿಸುತ್ತವೆ. ಚಿತ್, ಅಚಿತ್ ಅವನಿಗೆ ಶೇಷಭೂತವಾದವು. ಜಗತ್ತಿನ ಪರಿಣಾಮಗಳು ಅವನ ಮೇಲೆ ಪ್ರಭಾವ ಬೀರುವುದಿಲ್ಲ. ಅಂತೆಯೇ ದೇಹದಲ್ಲಿನ ಜೀವಾತ್ಮವು ಅನುಭವಿಸುವ ಸುಖದುಃಖ ಗಳು ಈಶ್ವರನನ್ನು ಮುಟ್ಟುವುದಿಲ್ಲ. ಈ ಸ್ಥೂಲ, ಸೂಕ್ಷ್ಮ ಅಂಶವನ್ನು ರಾಮಾನುಜರು ಶ್ರೀಭಾಷ್ಯದಲ್ಲಿ ವಿವರಿಸಿದ್ದಾರೆ.

3. ಈಶ್ವರನು ಅತೀತನು. ಅವನು ಪರಮ (ಪೂರ್ಣ)ಪುರುಷ. ಅವನು 'ಅಪ್ರಾಕೃತ ದೇಹ ವಿಶಿಷ್ಟ'. ಅವನ ದೇಹ ಕರ್ಮಬಂಧವಿಲ್ಲ; ಅವನು ಕರ್ಮಾ ತೀತ. ಅವನು ಜಗತ್ಪತಿ. ಹೀಗೆ ಉಪನಿಷತ್ತಿನ ಅಂತರ್ಯಾಮಿತ್ವವನ್ನು ಈಶ್ವರನಲ್ಲಿ ಒಂದುಗೂಡಿಸಿದ್ದಾರೆ.

ಶ್ರಿಯಾಸಾರ್ಥಂ ಜಗತ್ಪತಿಃ ಆಸ್ತೆ
ವಿಷ್ಣೋರ ಚಿಂತ್ಯಾತ್ಮ ಭಕ್ತ್ಯೈ ಭಾಗವತೈಃ ಸಹ–

ಎಂಬಂತೆ ಶ್ರೀಯೊಡನೆ ಇರುವುದರಿಂದ ಅವನು ಶ್ರೀಮನ್ನಾರಾಯಣ. 'ಶ್ರೀ'ಯು ಶಕ್ತಿಸ್ವರೂಪಿಣಿ, ಕೃಪೆಯ ಪ್ರತೀಕ.

ಪರಮಪದವೇ ವೈಕುಂಠ (ಯಾವ ರೀತಿಯ ಕುಂದೂ ಇಲ್ಲದುದು.) ಅದು ಶುದ್ಧ ಸತ್ವಮಯ, ನಿತ್ಯ ವಿಭೂತಿ. ಇದು ಮತ್ತು ಲೀಲಾ ವಿಭೂತಿ (ಪರಿಣಾ ಮಕ್ಕೆ ಒಳಗಾದ ಜಗತ್ತು)ಗಳಿಗೆ ಈಶ್ವರನು ಒಡೆಯ. ಆ ಭಗವಂತನು ಜ್ಞಾನ,

ಬಲ, ಶಕ್ತಿ, ಐಶ್ವರ್ಯ, ವೀರ್ಯ, ತೇಜಸ್ಸು–ಎನ್ನುವ ಷಡ್ಗುಣಗಳು ಎನ್ನುವ ಐಶ್ವರ್ಯದ ಸಂಪನ್ನನು.

ಹೀಗೆ ಮೂರು ಅಂಶಗಳ ಈಶ್ವರನು ತನ್ನ ಭಕ್ತರಿಗಾಗಿ ಐದು ರೂಪಗಳಲ್ಲಿ ವ್ಯಕ್ತನಾಗುತ್ತಾನೆ. ಅವು ಯಾವುವೆಂದರೆ–ಅಂತರ್ಯಾಮಿ, ಪರತತ್ವ, ವ್ಯೂಹ, ವಿಭವ ಮತ್ತು ಅರ್ಚಾವತಾರ.

ಇದರಲ್ಲಿನ ಅರ್ಚಾವತಾರವು ಪರಮಾತ್ಮನ ಸೌಲಭ್ಯವನ್ನು ಕಾಣುವ ವಿಶೇಷತೆಯಾಗಿದೆ. ಇದೇ ರಾಮಾನುಜ ದರ್ಶನದ ವೈಶಿಷ್ಟ್ಯ. ಇಲ್ಲಿ ಪರಮಾತ್ಮನ ಅರ್ಚಕ ಪರಾಧೀನನಾಗಿ, ಸರ್ವಸಹಿಷ್ಣುವಾಗುತ್ತಾನೆ. ತನ್ನ ಭಕ್ತರಿಗೆ ಉಪಾಸ್ಯನೂ, ಪ್ರಾಪ್ಯನೂ ಆಗುತ್ತಾನೆ. ಜೀವಾತ್ಮನ ಉದ್ಧಾರಕ್ಕೆ ಅಗತ್ಯವಾದದ್ದು ಪರತ್ವದೊಡನೆ ಕೂಡಿದ ಸೌಲಭ್ಯ. ಇದರಿಂದ ಪರಮಾತ್ಮನು ಭಕ್ತ ಪರಾಧೀನನಾಗಿ, ತನ್ನ ಕಾರುಣ್ಯವನ್ನು ಮೆರೆಯುತ್ತಾನೆ. ಭಕ್ತರ ಅಪರಾಧಗಳನ್ನು ಮರೆತು, ಅವರಲ್ಲಿ ದಯೆ ತೋರುತ್ತಾನೆ. ಈ ರೀತಿಯಲ್ಲಿ ಭಗವಂತನು 'ಸೌಲಭ್ಯತೋ ಜಗತ್ ಸ್ವಾಮಿ ಸುಲಭೋಹ್ಯತ್ತುರೋತ್ತರಃ' ನಾಗುತ್ತಾನೆ. ಇದನ್ನೇ ರಾಮಾನುಜರು ತಮ್ಮ ಭಗವದ್ಗೀತಾ ಭಾಷ್ಯದಲ್ಲಿ–

'ಶ್ರಿಯಃಪತಿಃ ನಿಃಖಿಲ ಹೇಯ ಪ್ರತ್ಯನೀಕ........ಪರಮ ಪುರುಷಾರ್ಥ ಲಕ್ಷಣ ಮೋಕ್ಷ ಸಾಧನತಯಾ ವೇದಾಂತೋದಿತಂ ಸ್ವವಿಷಯಂ ಜ್ಞಾನ ಕರ್ಮಾನುಗೃಹೀತಂ ಭಕ್ತಿಯೋಗಂ ಅವತಾರಯಾಮಾಸ'

ಎಂದು ತಿಳಿಸಿದ್ದಾರೆ.

ಈ ರೀತಿಯಲ್ಲಿ ರಾಮಾನುಜರ ಈಶ್ವರ ಸ್ವರೂಪವು ಧ್ಯಾನ–ಆರಾಧನೆಗಳಿಗೂ ಅಗೋಚರವಾಗಿ ಭಕ್ತಿಯೋಗಕ್ಕೆ ನಿಲುಕುತ್ತದೆ.

ರಾಮಾನುಜರಿಗೆ ಸ್ಫೂರ್ತಿ ನೀಡಿದ ಪರಮಾತ್ಮನ ಗುಣಗಳಲ್ಲಿ ಸೌಶೀಲ್ಯ, ಸೌಂದರ್ಯಗಳೇ ಬಹುಮುಖ್ಯವಾದುದಾಯಿತು. ಇವು ಅವರ ಹೃದಯವನ್ನು ಸೂರೆಗೊಂಡವು. ಈ ಸೌಂದರ್ಯಾನುಭವದಲ್ಲಿ ರಾಮಾನುಜರು ಮುಳುಗಿ ಹೋದರು. ಇದು ಅವರ ದರ್ಶನಕ್ಕೆ ಒಂದು ಕಳೆ ನೀಡಿತು. ಜಗತ್ತಿನಲ್ಲಿ ಕಾಣುವ ಸತ್ಯ, ಸೌಶೀಲ್ಯ, ಸೌಂದರ್ಯಗಳಲ್ಲಿ ಸ್ವಲ್ಪ ಕೆಟ್ಟದ್ದು ಸೇರಿರುತ್ತದೆ. ಆದರೆ ಪರಮಾತ್ಮನಲ್ಲಿ ಪೂರ್ಣ ಸತ್ಯ, ಪೂರ್ಣ ಸೌಶೀಲ್ಯ, ಪೂರ್ಣ ಸೌಂದರ್ಯವಿರುತ್ತದೆ. ಇದರಿಂದ ರಾಮಾನುಜರಲ್ಲಿ ಕವಿಯ, ಸೌಂದರ್ಯೋಪಾಸಕನ

ರಸಾನುಭವ ಸಾಮರ್ಥ್ಯವಿರುವುದನ್ನು ಕಾಣಬಹುದು. ಇದರಿಂದ ಅವರ ಜ್ಞಾನವು ಭಕ್ತಿರೂಪಾಪನ್ನ ಜ್ಞಾನವಾಯಿತು. ಅವರ ವಿಶಿಷ್ಟಾದ್ವೈತ (ವೈಷ್ಣವ ಧರ್ಮ) ದಲ್ಲಿ ಭಗವದ್ ಜ್ಞಾನ ಹಾಗೂ ಭಗವತ್ ಪ್ರೇಮಗಳು ಸಮನ್ವಯಗೊಂಡು, 'ಆಚಾರ್ಯರ ಜ್ಞಾನ, ಆಳ್ವಾರರ ಪ್ರೇಮ' ಇವರಲ್ಲಿ ಸಮನ್ವಿತಗೊಂಡವು.

ಪರಮಾತ್ಮನು ಪರಮಪುರುಷ. ರಾಮಾನುಜರ ವಿಶಿಷ್ಟಾದ್ವೈತ ದರ್ಶನ ದಂತೆ ಭಗವಂತನು ತ್ರಿಪಾದ್ವಿಭೂತಿನಾಯಕ, ಅಖಿಲ ಜಗದುದಯ, ಸಮಸ್ತ ಚೇತನಾಚೇತನ ವಸ್ತುದಾತ, ಸಕಲ ವಿಧ ಬಂಧು, ಸರ್ವಾಂತರ್ಯಾಮಿ, ಸರ್ವೋಪಾಸ್ಯ ಎಂಬುದಾಗಿ ಆತನನ್ನು ವಿವರಿಸಲಾಗಿದೆ. ಇವನ್ನೆಲ್ಲ ಶ್ರುತಿ, ಸ್ಮೃತಿ, ವಾಕ್ಯಗಳಿಂದ ಸಮರ್ಥಿಸಲಾಗಿದೆ. ಇದಕ್ಕೆ ಅನೇಕ ಉಪನಿಷತ್ತುಗಳ ವಾಕ್ಯಗಳನ್ನು ರಾಮಾನುಜರು ಉದಾಹರಿಸಿದ್ದಾರೆ–ಮುಖ್ಯವಾಗಿ ಬೃಹದಾರಣ್ಯಕ ಹಾಗೂ ಛಾಂದೋಗ್ಯೋಪನಿಷತ್ತು.

ಈ) ಜೀವಾತ್ಮ : ವಿಶಿಷ್ಟಾದ್ವೈತ ದರ್ಶನದಲ್ಲಿ ಜೀವಾತ್ಮವು ಪರ ಬ್ರಹ್ಮನ ಅಂಶ ಇಚ್ಛಾಕ್ರಿಯೆ, ನಿರ್ವಿಕಾರ, ಅಗೋಚರ, ಅಣುಸ್ವರೂಪವಿದೆ ಇದಕ್ಕೆ. ದೇಹ, ಇಂದ್ರಿಯ, ಪ್ರಾಣ, ಬುದ್ಧಿಗಳಿಂದ ಇದು ಬೇರೆಯಾದದ್ದು. ಇವು ಜೀವಾತ್ಮನ ಉಪಕರಣಗಳು. ಇವುಗಳ ಸಹಾಯದಿಂದ ಬಾಹ್ಯ ವಿಷಯ ಜ್ಞಾನವನ್ನು ಮನಸ್ಸು, ಆತ್ಮನಿಗೆ ಒದಗಿಸುತ್ತದೆ. ಬುದ್ಧಿ, ಅಹಂಕಾರ, ಚಿತ್ತ–ಇವು ಮೂರು ಮಾನಸಿಕ ವೃತ್ತಿಗಳು. ಜೀವಾತ್ಮವು ಅಣುರೂಪಿಯಾಗಿ ಹೃದಯ ದಲ್ಲಿರುತ್ತದೆ. ಸುಷುಪ್ತಿ ಕಾಲದಲ್ಲಿಯೂ ಇದು ಪರಮಾತ್ಮನ ಸಂಪರ್ಕವನ್ನು ಹೊಂದಿರುತ್ತದೆ. ದೇಹದಲ್ಲಿನ ಜೀವಾತ್ಮನ ಇರುವನ್ನು ರಾಮಾನುಜರು ಒಂದು ದೀಪಕ್ಕೆ ಹೋಲಿಸಿದ್ದಾರೆ. ಈ ಜೀವಾತ್ಮವು ವ್ಯಾಪ್ತಿ ಸಂಕೋಚ ಶಕ್ತಿಯಿಂದ ದೇಹವನ್ನೆಲ್ಲ ವ್ಯಾಪಿಸಿರುತ್ತದೆ. ಇದಕ್ಕೆ ಪೂರ್ವಕರ್ಮಾದಿ ದೋಷಗಳಿಂದ ತಾತ್ಕಾಲಿಕವಾಗಿ ಸುಖದುಃಖಗಳ ಅನುಭವವು ಉಂಟಾಗುತ್ತದೆ. ಇದರ ಲಕ್ಷಣ ಗಳನ್ನು ಜನನ ಮರಣಗಳು ಬದಲಾಯಿಸುವುದಿಲ್ಲ. ಎಷ್ಟೇ ಸಲ ದೇಹದೊಂದಿಗೆ ಹುಟ್ಟಿದರೂ ಚೇತನ ಜಗತ್ತಿನಲ್ಲಿ ಜೀವಾತ್ಮನ ವಿಶಿಷ್ಟ ಲಕ್ಷಣ ಕಣ್ಮರೆಯಾಗು ವುದೇ ಹೊರತು, ಅದು ಮಾತ್ರ ಅವಿನಾಶಿಯಾಗಿ ಉಳಿಯುತ್ತದೆ. ಮೋಕ್ಷ ಪ್ರಾಪ್ತಿಯಾಗುವವರೆಗೂ ಅದಕ್ಕೆ ದೇಹ ಸಂಬಂಧವಿದ್ದು, ಕರ್ಮಾನುಸಾರ ಮತ್ತೆ ಮತ್ತೆ ಜನ್ಮವೆತ್ತುತ್ತಲೇ ಇರುತ್ತದೆ. ಪ್ರಳಯ ಸಮಯದಲ್ಲಿ ಸೂಕ್ಷ್ಮ

ರೂಪವನ್ನು ಪಡೆದಿರುತ್ತವೆ. ಇವಕ್ಕೆ ಸ್ಮರಣಶಕ್ತಿ ಇರುವುದಿಲ್ಲ; ದೇಹಕ್ಕೆ ಮಾತ್ರ ಇರುತ್ತದೆ.

ಜೀವನಿಗೆ 'ಅಹಂ ಬುದ್ಧಿ' ಇದ್ದು, ಅದೇ ಮುಖ್ಯ ಲಕ್ಷಣವಾಗಿರುತ್ತದೆ. ಬಂಧ, ಮೋಕ್ಷಾವಸ್ಥೆ–ಇವೆರಡರಲ್ಲೂ ಜೀವಾತ್ಮನು ಜ್ಞಾತೃತ್ವವನ್ನು ಹೊಂದಿರುತ್ತಾನೆ. ಕರ್ಮದ ಫಲವನ್ನು ಸ್ವತಃ ಅನುಭವಿಸುತ್ತಾನೆ. ಅವನ ಕರ್ಮ ಅಸ್ವತಂತ್ರ. ದೇಹ ಸಂಬಂಧವಿಲ್ಲದಾದಾಗ ಮೋಕ್ಷಪ್ರಾಪ್ತಿಯ ನಂತರ ಸಂಕಲ್ಪ ಮಾತ್ರದಿಂದ ಕೋರಿಕೆಗಳು ಸಿದ್ಧಿಸುವುವು. ಈ ಜೀವಾತ್ಮನಿಗೆ ಸಂಭವಿಸುವ ಸುಖದುಃಖಗಳು ಅವನ ವಿಶೇಷಣ ರೂಪದ ಬ್ರಹ್ಮನಿಗೆ ಸಂಭವಿಸುವುದಿಲ್ಲ.

ತನ್ನ ಮುಂದಿನ ಸ್ಥಿತಿಯ ನಿರ್ಮಾಣಕ್ಕೆ ಜೀವನಿಗೆ ಸ್ವಾತಂತ್ರ್ಯವಿದೆ. ಆದರೆ ಇರುವುದು ಪರಿಮಿತ ಸ್ವಾತಂತ್ರ್ಯ; ಸಂಪೂರ್ಣ ಸ್ವಾತಂತ್ರ್ಯವಲ್ಲ. ಸಂಪೂರ್ಣ ಸ್ವಾತಂತ್ರ್ಯವಿರುವುದು ಭಗವಂತನಿಗೆ ಮಾತ್ರ. ಇದನ್ನೇ ರಾಮಾನುಜರು 'ದತ್ತ ಸ್ವಾತಂತ್ರ್ಯ' ಎಂದು ಕರೆದಿದ್ದಾರೆ. ಭಗವಂತನು 'ಶೇಷಿ' ಹಾಗೂ ಜೀವಾತ್ಮನು 'ಶೇಷ'. ಇದನ್ನೇ ರಾಮಾನುಜರು 'ಶೇಷ–ಶೇಷಿ ಭಾವ' ಎಂದು ಕರೆದಿದ್ದಾರೆ. ಭಗವಂತನು ಶೇಷಿತ್ವವ (ಸಮಗ್ರ ಶಕ್ತಿಯ)ನ್ನು ಹೊಂದಿದ್ದಾನೆ.

ದೇಹದಲ್ಲಿ ಜೀವವಿರುವ ಮಾನವನ ಸ್ವಾತಂತ್ರ್ಯ ಮತ್ತು ಭಗವಂತನ ಪ್ರಭುತ್ವಗಳ ಸಮಸ್ಯೆಗಳಿಗೆ ರಾಮಾನುಜರ ದರ್ಶನದಲ್ಲಿ ವಿಶೇಷ ಪ್ರಾಮುಖ್ಯತೆ ಇದೆ.

ಜೀವಾತ್ಮನು ಸಂಪೂರ್ಣವಾಗಿ ಭಗವಂತನ ಮೇಲೆ ಆಧಾರಪಟ್ಟಿದ್ದರೂ, ಒಳ್ಳೆಯದು, ಕೆಟ್ಟದ್ದನ್ನು ನಿರ್ಣಯಿಸುವ ಅಧಿಕಾರ ಭಗವಂತನಿಗೇ ಇದೆ. ಆದರೆ ಲೋಕದ ದುಃಖ ಯಾತನೆಗಳಿಗೆ ಆತನು ಬಾಧ್ಯನಲ್ಲ. ಕಾರಣ ಒಳ್ಳೆಯದು, ಕೆಟ್ಟದ್ದರ ವಿವೇಕ ಮಾನವನಿಗೆ ಇದೆ. ಆದರೆ ಕರ್ಮಾನುಸಾರ ಮಾನವನು ದೈವ ಸಂಕಲ್ಪಕ್ಕೆ ವಿರೋಧವಾಗಿ ವರ್ತಿಸಬಲ್ಲ. ಇದು ಕರ್ಮಸೂತ್ರ. ಇದನ್ನು ಪರಮಾತ್ಮನೇ ಸೃಷ್ಟಿಸಿದ್ದರೂ, ಇದರ ವಿವೇಚನೆ ಮಾನವನಿಗೆ ಸೇರಿದ್ದು. ಪರಿಣಾಮವಾಗಿ ಭಗವಂತನು ಧರ್ಮಮಾರ್ಗದಲ್ಲಿ ನಡೆಯುವವರನ್ನು ಪೋಷಿಸಿ, ದುರ್ಮಾರ್ಗಿಗಳನ್ನು ಶಿಕ್ಷಿಸುತ್ತಾನೆ. ಈ ಕರ್ಮಸೂತ್ರವನ್ನು ಅವನು ಭಂಗಗೊಳಿಸಲಾರ. ಚೇತನನ ಉಜ್ಜೀವನಕ್ಕಾಗಿ ಭಗವಂತನು ಈ ರೀತಿಯ ನಿಯಮ

ವನ್ನು ಏರ್ಪಡಿಸಿದ್ದಾನೆಂದು ರಾಮಾನುಜರು ಭಾವಿಸುತ್ತಾರೆ. ದೈವೀ ಕಾರ್ಯಕ್ಕಾಗಿ ಮಾನವನು ತನ್ನ ಸ್ವಾತಂತ್ರ್ಯವನ್ನು ಉಪಯೋಗಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ಆತನು ಮಾಡುವ ಪಾಪ, ಪುಣ್ಯಗಳಿಗೆ ಆತನೇ ಬಾಧ್ಯನಾಗುತ್ತಾನೆ ಮತ್ತು ಒಳ್ಳೆಯದು, ಕೆಟ್ಟದ್ದಕ್ಕೆ ಅರ್ಹವಿಲ್ಲದ್ದಾಗುತ್ತದೆ. ಇದನ್ನು ರಾಮಾನುಜರು 'ಕರ್ತಾ ಶಾಸ್ತ್ರಾರ್ಥವತ್ವಾತ್' ಎನ್ನುವ ವೇದಾಂತ ಸೂತ್ರದ ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ.

ನಿತ್ಯ, ಮುಕ್ತ, ಬದ್ಧ ಎನ್ನುವ ಮೂರು ರೀತಿಯ ಜೀವರುಗಳು ಇದ್ದಾರೆ ಎಂದು ರಾಮಾನುಜರ ದರ್ಶನ ತಿಳಿಸುತ್ತದೆ.

ನಿತ್ಯ ಜೀವರುಗಳು ಕರ್ಮಬಂಧನದಿಂದ ದೂರವಾಗಿ ವೈಕುಂಠದಲ್ಲಿ ಆನಂದವನ್ನು ಅನುಭವಿಸುತ್ತಿರುವವರು.

ಭಕ್ತಿ ಕರ್ಮ ಜ್ಞಾನಗಳಿಂದ ಬಂಧ ವಿಚ್ಛೇದನ ಮಾಡಿಕೊಂಡವರು 'ಮುಕ್ತ ಜೀವರು'ಗಳು ಎಂದೆನಿಸುವರು.

ಅವಿದ್ಯಾಪರರಾಗಿ, ಸ್ವಾರ್ಥಿಗಳಾಗಿ ಸಂಸಾರ ಸಾಗರದಲ್ಲಿ ಮುಳುಗಿ ಪಶುತ್ವ ಪಡೆದು, ತೊಳಲಾಡುತ್ತಿರುವವರು 'ಬದ್ಧ ಜೀವರು'ಗಳಾಗಿರುತ್ತಾರೆ.

ದೇಹಗಳ ಭಿನ್ನತೆಯಿಂದ ಜೀವರುಗಳು ಭಿನ್ನರಾಗುತ್ತಾರೆ. ಮೋಕ್ಷ ಪಡೆಯುವವರೆಗೂ ಅವರು ಹುಟ್ಟುತ್ತಲೇ ಇರುತ್ತಾರೆ. ದೈವ ಪ್ರಕೃತಿಯಿಂದ ಊರ್ಧ್ವಗತಿ ಹೋಗುವವರು ತಮ್ಮ ಸಾಧನೆಗಳಿಂದ ಮೋಕ್ಷ ಪಡೆಯುವರು.

ಜೀವನಿಗೆ 'ಪ್ರತ್ಯಗಾತ್ಮನ್' ಎನ್ನುವ ಹೆಸರೂ ಉಂಟು. ಇಪ್ಪತ್ನಾಲ್ಕು ತತ್ವಗಳಿಂದ ಪ್ರತ್ಯೇಕನಾದವನು ಪುರುಷ. ವಿಶ್ವವು ಈ ಇಪ್ಪತ್ನಾಲ್ಕು ತತ್ವಗಳಿಂದ ಕೂಡಿದೆ. ಅಪ್ರಾಕೃತವಾದ ಅಹಂ (ನಾನು) ಎನ್ನುವುದೇ ಇಪ್ಪತ್ತೈದನೆಯ ತತ್ವ. ಜೀವಾತ್ಮನು ಜ್ಞಾನಾಶ್ರಯನು. ಇವನು ಪರಮಾತ್ಮನಿಂದ ನಿಯಮ್ಯನು ಹಾಗೂ ಧಾರ್ಯನು ಮತ್ತು ಆತನಿಗೆ ಶೇಷಭೂತನಾದವನು. ರಾಮಾನುಜರು ಪ್ರತ್ಯಗಾತ್ಮನ್‌ನ ಈ ಸ್ವ-ಸ್ವರೂಪ ಲಕ್ಷಣಗಳನ್ನು 'ವಿನಿಯೋಗಾರ್ಹತ್ವ' ಎಂದು ಕರೆದಿದ್ದಾರೆ.

ಇಂತಹ ಜೀವಾತ್ಮನು ಲೀಲಾವಿಭೂತಿಯಲ್ಲಿ ಜನಿಸಿದಾಗ ಪಾಪಬದ್ಧನಾಗುತ್ತಾನೆ. ಇವನು ಬ್ರಹ್ಮಚಕ್ರದಲ್ಲಿ ತಿರುಗುವ ಹಂಸದಂತೆ, ದೇಹದಿಂದ ದೇಹಕ್ಕೆ ಸಂಚರಿಸುವ ಕರ್ಮಕರ್ತೃವಾಗುತ್ತಾನೆ. ಇವನು ಮೋಹಕ್ಕೆ ಒಳಗಾಗಿ

ಮುಹ್ಯಮಾನನಾಗಿ ಕರ್ಮಾನುಗುಣ ಫಲವನ್ನು ಅನುಭವಿಸುತ್ತಾ ಪುಣ್ಯ-ಕರ್ಮಗಳಾದರೆ ಸಾಧುವಾಗಿ, ಪಾಪಕರ್ಮವಾದರೆ ಪಾಪಿಷ್ಟನಾಗುತ್ತಾನೆ. ಈ ಜೀವನು ದೇಹದಿಂದ ದೇಹಕ್ಕೆ ಉತ್ಕ್ರಮಣ ಮಾಡುವ ಕಾಲದಲ್ಲಿ ಅವನ ವಿದ್ಯಾ, ಕರ್ಮ. ಪೂರ್ವಪ್ರಜ್ಞೆಗಳು ಮಾತ್ರವೇ ಅವನನ್ನು ಅನುಸರಿಸುವಂತಹವು

ಜೀವನು ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಸೇರುವಾಗ ತನ್ನ ಕರ್ಮಫಲವನ್ನು ಅದು ಅನುಭವಿಸಬೇಕು. ಹಾಗೆ ಅನುಭವಿಸುವಾಗ ದೇವ, ಪಿತೃ, ಗಂಧರ್ವ, ಪ್ರಜಾಪತಿ ಮತ್ತಿತರ ಲೋಕಗಳನ್ನು ಸೇರಿ, ಅಲ್ಲಿ ಅನುಭವಿಸಬೇಕಾದುದನ್ನು ಅನುಭವಿಸಬೇಕು. ನಂತರ ಈ ಲೋಕಕ್ಕೆ ಹಿಂತಿರುಗಬೇಕು. ಈ ಭ್ರಮಣದಿಂದ ಜೀವನು ತಪ್ಪಿಸಿಕೊಳ್ಳಲು ಸಾಧ್ಯ, ಅದಕ್ಕೆ ಅವನು ಸ್ವಸ್ವರೂಪ, ಪರಸ್ವರೂಪ, ಉಪಾಯಸ್ವರೂಪ, ಉಪೇಯ ಸ್ವರೂಪ ಹಾಗೂ ವಿರೋಧಿ ಸ್ವರೂಪ-ಎನ್ನುವ ಅರ್ಥಪಂಚಕಗಳ ಸಾಧನೆ ಮಾಡಬೇಕು.*

ಜೀವ-ಈಶ್ವರ ಸಂಬಂಧದ ಬಗ್ಗೆ ಆಳ್ವಾರಾಚಾರ್ಯರು ತಮ್ಮ ತತ್ವಗಳನ್ನು ಪ್ರತಿಪಾದನೆ ಮಾಡಿದ್ದಾರೆ. ಇದನ್ನು ನವವಿಧ ಸಂಬಂಧಗಳು ಎನ್ನಲಾಗುತ್ತದೆ. ಅದೆಂದರೆ ಪಿತಾ-ಪುತ್ರ, ರಕ್ಷ್ಯ-ರಕ್ಷಕ, ಶೇಷ-ಶೇಷಿ, ಭರ್ತೃ-ಭಾರ್ಯಾ, ಜ್ಞಾತೃ-ಜ್ಞೇಯ, ಸ್ವಸ್ವಾಮಿ, ಆಧಾರಾಧೇಯ, ಶರೀರ-ಶರೀರಿ, ಭೋಕ್ತೃ-ಭೋಗ್ಯ ಸಂಬಂಧಗಳು.**

ಜೀವನು ತನಗೂ ಭಗವಂತನಿಗೂ ಇರುವ ಸಂಬಂಧಜ್ಞಾನವನ್ನು ಅರಿಯಲು ಗುರೂಪದೇಶ ಪಡೆಯಬೇಕಾಗುತ್ತದೆ. ಆತನ ಮಾರ್ಗದರ್ಶನ ಅಗತ್ಯ. ಸಂಬಂಧ ಜ್ಞಾನವನ್ನು ಪಡೆಯುವ ಬಗೆಗೆ ರಾಮಾನುಜರು ಶ್ರೀಭಾಷ್ಯದಲ್ಲಿ ಕಳೆದು ಹೋದ ರಾಜಕುಮಾರನು ವೃದ್ಧ ವಿಪ್ರನೊಬ್ಬನ ಸಹಾಯದಿಂದ ತನ್ನ ತಂದೆ (ರಾಜ)ಯನ್ನು ಸೇರುವ ಕಥೆಯನ್ನು ತುಂಬಾ ಸೊಗಸಾಗಿ, ಮನಮುಟ್ಟುವಂತೆ

---

* ನೋಡಿ-ಪಿಳ್ಳೈ ಲೋಕಾಚಾರ್ಯರು (ರಘುಸುತ) ಕೃತಿಯ ಅರ್ಥಪಂಚಕವ್ ಅಧ್ಯಾಯ-ಪುಟ 79-91.

** ನೋಡಿ-ಪಿಳ್ಳೈ ಲೋಕಾಚಾರ್ಯರು (ರಘುಸುತ) ಕೃತಿಯ ನವವಿಧ ಸಂಬಂಧವ್ ಅಧ್ಯಾಯ-ಪುಟ 102-100.

ಹೇಳಿದ್ದಾರೆ. ಈ ಸಂಬಂಧ ಜ್ಞಾನವೇ ಗುರೂಪದೇಶದ ತಿರುಳೆಂದು ಶ್ರೀವೈಷ್ಣವ ಪಂಥವು ಅನೇಕ ರೀತಿಗಳಲ್ಲಿ ವರ್ಣಿಸುತ್ತದೆ.

ಇಲ್ಲಿಂದ ಮುಂದೆ ಅಚಿತ್ ತತ್ವದ ಸ್ವರೂಪವನ್ನು ವಿವರಿಸುವ ರಾಮಾನುಜರು ಅಚೇತನ ದ್ರವ್ಯಗಳೆಲ್ಲ ಈಶ್ವರೇಚ್ಛಾನುವರ್ತಿಗಳು ಎಂದು ಸಾಧಿಸಿ ತೋರಿಸಿದ್ದಾರೆ. ಪ್ರತಿಯೊಂದು ಕಾರ್ಯಕ್ಕೂ ಒಂದು ಉಪಾದಾನ ಕಾರಣ ಇದೆ. ಜಗತ್ ಕಾರ್ಯವು ಬಂಧರಹಿತವಾದ ಜೀವರ ಅಸ್ತಿತ್ವವನ್ನೂ, ಸೂಕ್ಷ್ಮ ಪದಾರ್ಥಗಳ ಅಸ್ತಿತ್ವವನ್ನೂ ಸೂಚಿಸುತ್ತವೆ ಎಂದು ರಾಮಾನುಜರ ಅಭಿಮತ. ಈಶ್ವರನ ಇಚ್ಛೆಯಂತೆ ಪ್ರಕೃತಿಯು ಜೀವರುಗಳ ಕರ್ಮಫಲಗಳನ್ನು ನಿರ್ಣಯಿಸುತ್ತದೆ. ಆ ಕರ್ಮಫಲವನ್ನು ಅನುಭವಿಸುವುದಕ್ಕಾಗಿ ಸೃಷ್ಟಿಯ ಕಾರ್‍ಯವು ನಡೆಯುತ್ತದೆ ಎಂಬುದು ರಾಮಾನುಜರ ಅಭಿಮತ. ಈ ದೃಷ್ಟಿಯಿಂದ ಈಶ್ವರನ ಸೃಷ್ಟಿ ಕಾರ್ಯವು ಸಂಪೂರ್ಣವಾಗಿ ಸ್ವತಂತ್ರವಾದುದಲ್ಲ.

ಪಾಂಚರಾತ್ರದ ಅನುಸಾರ ಸೃಷ್ಟಿಯು ಎರಡು ವಿಧ–ಶುದ್ಧ ಮತ್ತು ಸ್ಥೂಲ. ವ್ಯೂಹ, ವಿಭವಗಳು ಶುದ್ಧ ಸೃಷ್ಟಿಯವು. ಪ್ರಕೃತಿಯಿಂದ ಈಶ್ವರನಿಂದ ಉಂಟಾಗುವುದು ಸ್ಥೂಲಸೃಷ್ಟಿ.

ಉ) ಹಿತ : ಇದುವರೆವಿಗೂ ಈಶ್ವರ ತತ್ವದ ಸ್ವರೂಪದ ಬಗ್ಗೆ ತಿಳಿದುದಾಯಿತು. ರಾಮಾನುಜರ ದರ್ಶನದ ಎರಡನೇ ಭಾಗವಾದ 'ಹಿತ'ದ ಬಗ್ಗೆ ಈಗ ತಿಳಿಯುವ. ಈ ತತ್ವಸ್ವರೂಪದ ಸಾಕ್ಷಾತ್ಕಾರ ಮಾಡಿಕೊಳ್ಳಲು ನಾವು ಅನುಸರಿಸುವ ಉಪಾಯ (ಸಾಧನ ಕ್ರಮ)ಕ್ಕೆ 'ಹಿತ' ಎಂದು ಹೆಸರು. ಇದನ್ನು ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ, ಆಚಾರ್ಯಾಭಿಮಾನದಿಂದ ಪಡೆಯ ಬಹುದು.

ಪೂರ್ವಜನ್ಮ ಸಂಸ್ಕಾರದಿಂದ ಜೀವನು ಸಂಸಾರ ಬಂಧನದಲ್ಲಿ ಸಿಲುಕಿ, ಭಗವಂತನಿಂದ ಪರಾಙ್ಮುಖನಾಗುತ್ತಾನೆ. ಅವನ ಪತನವಾಗಿ, ನೀಚ ಸ್ಥಿತಿಯನ್ನು ತಲುಪುತ್ತಾನೆ. ದೈವಕ್ಕೆ ದ್ರೋಹ ಬಗೆಯುತ್ತಾನೆ. ಆಗ ಪರಮಾತ್ಮನು ಅವನನ್ನು ಸೂಕ್ತ ರೀತಿಯಲ್ಲಿ ಶಿಕ್ಷಿಸಿ, ಜೀವಾತ್ಮನು ತನ್ನ ದೋಷವನ್ನು ಗುರ್ತಿಸಿಕೊಳ್ಳುವಂತೆ ಮಾಡುತ್ತಾನೆ. ಹೀಗೆ ಪಾಪದ ಬಾಧ್ಯತೆ ಮಾನವನದ್ದೆ ಎನ್ನುವದನ್ನು ರಾಮಾನುಜರು ಒತ್ತಿ ಹೇಳುತ್ತಾರೆ.

ಜ್ಞಾನ, ಕರ್ಮಗಳಿಗಿಂತ ಭಕ್ತಿ ಪ್ರಸಾದಗಳಿಂದ ಮೋಕ್ಷ ಸಾಧ್ಯವೆಂದು ರಾಮಾನುಜರು ತಿಳಿಸುತ್ತಾರೆ. ನಿಷ್ಕಾಮಕರ್ಮದಿಂದ ಹಿಂದಿನ ಕರ್ಮ ಕ್ಷೀಣಿಸುತ್ತದೆ. ಇದರಿಂದ ಸತ್ವಗುಣದ ವೃದ್ಧಿಯಾಗಿ, ಭಕ್ತಿಯು ಹೊಸ ಬಲವನ್ನು ನೀಡುತ್ತದೆ.

ಉಪಾಸನೆಯಿಂದ ಎಲ್ಲ ರೀತಿಯ ಆರಾಧನೆಯ ಮುಖಾಂತರ ಈಶ್ವರ ಸಾಕ್ಷಾತ್ಕಾರ ಪಡೆಯುವ ಮಾರ್ಗವೇ ಭಕ್ತಿಮಾರ್ಗ. ಪ್ರಶಾಂತ ಧ್ಯಾನದ ಮೂಲಕ ಈಶ್ವರ ಸಾನ್ನಿಧ್ಯ ಪಡೆಯುವ ಮಾರ್ಗವೇ ರಾಮಾನುಜರು ತಿಳಿಸಿರುವ ಭಕ್ತಿಮಾರ್ಗ. 'ಜ್ಞಾನ ಕರ್ಮಾನು ಗೃಹೀತಮ್ ಭಕ್ತಿಯೋಗಮ್' ಎಂದು ಅವರು ಗೀತಾಭಾಷ್ಯದಲ್ಲಿ ಹೇಳಿದ್ದಾರೆ.

ವಿವೇಕ, ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಸತ್ಯ, ಆರ್ಜವ, ದಯಾ, ಅಹಿಂಸಾ, ದಾನ, ಅನವಸಾದ–ಎನ್ನುವವು ಭಕ್ತಿಯ ಅಂಗಗಳು. ಜ್ಞಾನ ಸಹಿತವಾದ ಭಕ್ತಿಯೇ (ಧೀ ಪ್ರತಿರೂಪಾ ಭಕ್ತಿಃ) ಎನ್ನುವುದೇ ರಾಮಾನುಜರ ದೃಷ್ಟಿಯಲ್ಲಿ ನಿಜವಾದ ಭಕ್ತಿ. ಹೃದಯ, ಮನಸ್ಸುಗಳನ್ನು ಸಂಪೂರ್ಣವಾಗಿ ಭಗವಂತನಲ್ಲಿ ಅರ್ಪಿಸುವುದೇ ಭಕ್ತಿ. ಇದು ಸಾಕ್ಷಾತ್ಕಾರದಲ್ಲಿ ಸಮಾಪ್ತಿಯಾಗುತ್ತದೆ.

ಭಕ್ತಿಯನ್ನು ಸಾಧನಭಕ್ತಿ, ಪರಾಭಕ್ತಿ ಎಂಬ ಎರಡು ರೀತಿಯ ಭಕ್ತಿಗಳನ್ನು ರಾಮಾನುಜರು ವೇದಾರ್ಥ ಸಂಗ್ರಹದಲ್ಲಿ ತಿಳಿಸಿದ್ದಾರೆ. ಭಕ್ತಿಯ ಪರಿಣಾಮವೇ ಮೋಕ್ಷವಾದುದರಿಂದ ಇದೇ ಶ್ರೇಷ್ಠ ಸಾಧನೆ. ಭಗವಂತನಲ್ಲಿ ಜೀವನು ಇದರಿಂದ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡು, ಸಾರ್ಥಕ ಜೀವನ ನಡೆಸುತ್ತಾನೆ. 'ನಾನಲ್ಲ, ಎಲ್ಲವೂ ನೀನೇ' ಎನ್ನುವ ಮಟ್ಟ ತಲುಪುತ್ತಾನೆ.

ಅಲ್ಲದೆ ಭಕ್ತಿಯಲ್ಲಿ ಮತ್ತೂ ಎರಡು ವಿಧಗಳಿವೆ–ವೈಧೀಭಕ್ತಿ ಮತ್ತು ಮುಖ್ಯಭಕ್ತಿ ಎಂದು. ಪ್ರಾರ್ಥನೆ, ಪೂಜೆ, ವಿಗ್ರಹಾರಾಧನೆಯು ವೈಧೀ ಭಕ್ತಿ ಎನಿಸಿಕೊಂಡಿದೆ. ಇವು ಆತ್ಮನ ಪುರೋಭಿವೃದ್ಧಿಗೆ ಸಹಾಯ ಮಾಡಬಲ್ಲವಷ್ಟೇ ಹೊರತು, ಅವನನ್ನು ಉದ್ಧಾರ ಮಾಡುವುದಿಲ್ಲ.

ಪರಮಾತ್ಮನನ್ನು ಅರ್ಚಿಸುವ ಭಕ್ತಿಯೇ ಚರಮಸೋಪಾದ ಪರಮ ಸ್ನೇಹರೂಪದ ಭಕ್ತಿಯೇ ಮುಖ್ಯಭಕ್ತಿ.

ಭಗವಂತನಲ್ಲಿ ಸಂಪೂರ್ಣ ಸಮರ್ಪಣೆ ಮಾಡಿಕೊಳ್ಳುವುದೇ ಪ್ರಪತ್ತಿ (ಶರಣಾಗತಿ). ಶ್ರೀವೈಷ್ಣವ ದರ್ಶನದಲ್ಲಿನ ಮುಖ್ಯ (ಚರಮ) ಶ್ಲೋಕವೆಂದರೆ–

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |
ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ||

ಪ್ರಪತ್ತಿಯ ಆರು ಅಂಗಗಳನ್ನು ವಿವರಿಸುವ ಶ್ಲೋಕವೊಂದಿದೆ–

ಆನುಕೂಲಸ್ಯ ಸಂಕಲ್ಪಃ ಪ್ರಾತಿಕೂಲಸ್ಯ
ವರ್ಜನಮ್, ರಕ್ಷಿಷ್ಯತೀತಿ ವಿಶ್ವಾಸಃ |
ಗೋಪ್ತೃತ್ವ ವರಣಂ ತಥಾ, ಆತ್ಮನಿಕ್ಷೇಪ
ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ||

ಮೊದಲಿನ ಐದು ಸಾಧನರೂಪದ್ದು; ಕಡೆಯದು ಆತ್ಮಸಮರ್ಪಣ. ಈ ಆರನೇಯದೇ ಅಂತಿಮ, ನಿಜವಾದ ಪ್ರಪತ್ತಿ (ಸಿದ್ಧಿ) ಅಥವಾ ಶರಣಾಗತಿ. 'ಭಗವತ್ ಪ್ರವೃತ್ತಿ ವಿರೋಧಿ ಸ್ವಪ್ರವೃತ್ತಿ ನಿವೃತ್ತಿಃ ಪ್ರಪತ್ತಿಃ' ಎಂದರೆ ಪರಮಾತ್ಮನ ಪ್ರವೃತ್ತಿಗೆ ವಿರೋಧವಾದ ಸ್ವಪ್ರವೃತ್ತಿಯನ್ನು ನಿವೃತ್ತಿಗೊಳಿಸುವುದು ಪ್ರಪತ್ತಿ.

ದೈವಭಕ್ತ (ಶ್ರೀವೈಷ್ಣವ)ರಲ್ಲಿ ವರ್ಣಭೇದ ಮಾಡಬಾರದೆಂದು ರಾಮಾನುಜರು ತಿಳಿಸುತ್ತಾರೆ. ವರ್ಣಾಶ್ರಮ ಧರ್ಮಕ್ಕೆ ಒಳಪಡದವರೂ ಕೂಡ ಬ್ರಹ್ಮಜ್ಞಾನಕ್ಕೆ ಅರ್ಹರಾಗಿರುತ್ತಾರೆ ಎಂದು ಅವರು ಹೇಳುತ್ತಾರೆ. ಔದಾರ್ಯ, ಹೃದಯ ವೈಶಾಲ್ಯಗಳು ರಾಮಾನುಜರ ಭಕ್ತಿ, ಪ್ರಪತ್ತಿಗಳ ಮುಖ್ಯ ಲಕ್ಷಣವಾಗಿದ್ದುದಲ್ಲದೆ ಅವರ ಅನುಷ್ಠಾನದಲ್ಲಿಯೂ ಇವನ್ನು ಕಾಣುತ್ತೇವೆ. ಅವರ ವೈಷ್ಣವ ಧರ್ಮದ ದೃಷ್ಟಿಯಲ್ಲಿ ಈ ಅಂಶಗಳನ್ನು ಕಾಣುತ್ತೇವೆ. ಮುಖ್ಯವಾದ ಅಂಶಗಳೆಂದರೆ–ಭಕ್ತಿ ಪ್ರಪತ್ತಿಗಳಿಗೆ ಮಧ್ಯವರ್ತಿ ಪುರೋಹಿತ ಅನಗತ್ಯ, ಪ್ರೇಮ ಸಮರ್ಪಣಕ್ಕೆ ಶ್ರುತಿ, ಪ್ರಮಾಣ ಅನಗತ್ಯ, ದೈವಕೃಪೆ ಸಕಲರ ಸ್ವತ್ತು, ಗಾಢ ಭಕ್ತಿಯುಳ್ಳವರಿಗೆ ಶಾಸ್ತ್ರನಿಯಮ ಅನವಶ್ಯಕ, ಭಕ್ತಿಯಲ್ಲಿ ಸರ್ವ ಸಮತ್ವವಿರಬೇಕು, ಭಕ್ತಿ ಎಲ್ಲ ವರ್ಣದವರನ್ನೂ ಮೀರಿದುದು ಈ ಭಾವನೆಗಳನ್ನೆಲ್ಲ ಅವರು ಆಳ್ವಾರರಿಂದ ಸ್ಫೂರ್ತಿ ಪಡೆದರು. ಆಳ್ವಾರರಲ್ಲಿ ಅನೇಕ ಜಾತಿಯವರಿದ್ದರು. ಅವರಲ್ಲಿ ಒಬ್ಬಿಬ್ಬರು ಶೂದ್ರರು, ಮತ್ತೊಬ್ಬರು ಹರಿಜನರು. ಅವರ ವಿಗ್ರಹಗಳನ್ನು ಇಂದಿಗೂ ಭಾರತದ ಶ್ರೀವೈಷ್ಣವ ದೇವಾಲಯಗಳಲ್ಲಿ ಪೂಜಿಸುತ್ತಾರೆ.

ರಾಮಾನುಜರ ಕಾಲದಲ್ಲಿ ಪ್ರಾರಂಭವಾದ ಹರಿಜನರ ದೇವಾಲಯ ಪ್ರವೇಶ ಇಂದಿಗೂ ಮೇಲುಕೋಟೆ, ಬೇಲೂರು ಮುಂತಾದ ಸ್ಥಳಗಳಲ್ಲಿ ಆಚರಣೆಯಲ್ಲಿದೆ. ಇವೆಲ್ಲವೂ ರಾಮಾನುಜರ ಭಕ್ತಿ ಪ್ರಪತ್ತಿ ಮಾರ್ಗಗಳಿಂದ ಸಾಧಿಸಿದ ಸಾಮಾಜಿಕ ಪರಿವರ್ತನೆಗಳು.

ಊ) ಪುರುಷಾರ್ಥ : ಧರ್ಮಾರ್ಥ ಕಾಮ ಮೋಕ್ಷಗಳು ಚತುರ್ವಿಧ ಪುರುಷಾರ್ಥಗಳು. ಧರ್ಮ, ಅರ್ಥ, ಕಾಮಗಳ ಅನುಷ್ಠಾನದಿಂದ ಪರಮ ಪುರುಷಾರ್ಥವಾದ ಮೋಕ್ಷಸಾಧನೆಯಾಗುವಂತಿರಬೇಕು. 'ಧರ್ಮಾವಿರುದ್ಧೋ ಭೂತೇಷು ಕಾಮೋಸ್ಮಿ ಭರತರ್ಷಭ' ಎನ್ನುವ ಗೀತಾವಾಕ್ಯವು ಇದಕ್ಕೆ ಆಧಾರ.

ಜೀವಾತ್ಮನನ್ನು ಬಂಧಿಸಿರುವ ಪಾಶಗಳಿಂದ ಅದನ್ನು ವಿಮುಕ್ತಿಗೊಳಿಸು ವುದೇ ಮೋಕ್ಷ ಎಂಬುದು ರಾಮಾನುಜರ ಅಭಿಪ್ರಾಯ. ಮಾನವ ಎಷ್ಟೇ ಉನ್ನತ ಸ್ಥಿತಿಯನ್ನು ತಲುಪಿದರೂ ಈಶ್ವರ ಶಕ್ತಿಯನ್ನು ಅರ್ಚಿಸಿ, ಪೂಜಿಸಿ, ಭೂಷಿಸಲೇಬೇಕು. ಮುಕ್ತಜೀವಿಗೆ ಸಾರೂಪ್ಯವೇ ಹೊರತು, ಸಾಯುಜ್ಯವಿಲ್ಲ. ಮುಕ್ತಜೀವಿಯು ನಿತ್ಯ ಸಾಕ್ಷಾತ್ಕಾರವನ್ನು ದಿವ್ಯಜ್ಞಾನದ ಮುಖಾಂತರ ಪಡೆದು ಪರಿಪೂರ್ಣ ಬ್ರಹ್ಮಾನುಭವಿಯಾಗುತ್ತಾನೆ. ಈ ಸನ್ನಿವೇಶದಲ್ಲಿ ಜೀವಾತ್ಮನಲ್ಲಿ ನೆರವೇರುವ ಯಾವ ಕೋರಿಕೆಯೂ ಇರುವುದಿಲ್ಲ. 'ಅಹಂ' ಮೋಕ್ಷಕ್ಕೆ ಕಂಟಕ. ಸಹಜವಾದ ಚಿದಾನಂದ ಲಕ್ಷಣಗಳ ನಿರಾತಂಕ ವ್ಯಕ್ತಿತ್ವದ ವಿಕಾಸವೇ ಮೋಕ್ಷ. ದೇಹ ಸಂಬಂಧದಿಂದ ಹುಟ್ಟಿದ ವ್ಯಕ್ತಿತ್ವ ಅಸ್ಥಿರ ಹಾಗೂ ಅದು ನಾಶವಾಗುವುದ ರಿಂದ ಜೀವಾತ್ಮವು ಬ್ರಹ್ಮನ ಲಕ್ಷಣಗಳನ್ನು ಪಡೆದು, ಸ್ವಸ್ವರೂಪ ಹೊಂದು ತ್ತಾನೆ. ಈ ಸ್ವಸ್ವರೂಪಾವಿರ್ಭಾವವೇ ಮೋಕ್ಷ. 'ಪರಂಜ್ಯೋತಿರುಪ ಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೆ' ಎನ್ನುವ ಶ್ರುತಿ ವಾಕ್ಯವು ರಾಮಾನುಜರ ಮೋಕ್ಷ ಕಲ್ಪನೆಗೆ ಮುಖ್ಯ ಆಧಾರ.

ಮುಕ್ತಾವಸ್ಥೆಯಲ್ಲಿನ ಜೀವರಿಗೆ ಬ್ರಹ್ಮನ ಲಕ್ಷಣಗಳು ಪ್ರಾಪ್ತವಾಗುತ್ತವೆ. ಭಗವಂತನಿಂದ ಸೃಷ್ಟಿಸಲ್ಪಟ್ಟ ಲೋಕಗಳನ್ನು, ದೇಹಗಳನ್ನು ಪ್ರವೇಶಿಸಬಲ್ಲರೇ ಹೊರತು, ಈಶ್ವರನಂತೆ ಸೃಷ್ಟಿ ಮಾಡಲಾರರು. ವೈಕುಂಠದಲ್ಲಿರುವ ಜೀವರು ವಿಶುದ್ಧ ಸತ್ವದ ರೂಪವನ್ನು ಹೊಂದಿರುತ್ತಾರೆ. ಇವು ವಿಶ್ವಾಭ್ಯುದಯ ಕೋರಿ, ಕಾರ್ಯ ಮಾಡುತ್ತವೆ.

ವಿಶಿಷ್ಟಾದ್ವೈತದ ತತ್ವದ ಪ್ರಕಾರ ಎರಡು ರೀತಿಯ ಮುಕ್ತರಿದ್ದಾರೆ. (1) ಇಹಲೋಕದಲ್ಲಿ ಪರಮಾತ್ಮನ ಸೇವೆ ಮಾಡುವ ಅಭ್ಯಾಸವಿರುವ ಜೀವಿಗಳು ಮುಕ್ತಿ ಸ್ಥಿತಿಯಲ್ಲಿಯೂ ಮುಂದುವರಿಸುತ್ತವೆ. (2) ಕೇವಲರು ನಿರಂತರ ಆತ್ಮ ಧ್ಯಾನದಿಂದ ಕೃತಾರ್ಥರಾದವರು. ಸ್ವರ್ಗಧಾಮದಲ್ಲಿರುವ ಇವರು ಪರಮಾತ್ಮನ ನಿತ್ಯ ಸಾಕ್ಷಾತ್ಕಾರದಲ್ಲಿ ತೃಪ್ತರಾಗಿರುತ್ತಾರೆ. ಇಲ್ಲಿ ಮೋಕ್ಷ ಸಾರೂಪ್ಯವೇ ಹೊರತು ಸಾಯುಜ್ಯವಲ್ಲ. ಇದು ರಾಮಾನುಜರ ಅಭಿಮತ.

ಪರಮಪದವು ಜ್ಞಾನಾನಂದಮಯ ಲೋಕ. ಇಲ್ಲಿ ಸರ್ವರಸನಾದ, ಸರ್ವಗಂಧನಾದ ಪರಮಾತ್ಮನ ಸಾನ್ನಿಧ್ಯದಿಂದ ಜೀವ ಪಡೆಯುವ ಆನಂದಕ್ಕೆ ಸಮನಾದ ಆನಂದ ಮತ್ತೊಂದಿಲ್ಲ. ಇಂತಹ ಲೋಕದಲ್ಲಿನ ಪರಮಾತ್ಮನ ಅಪ್ರಾಕೃತ ಸೌಂದರ್ಯವನ್ನು ರಾಮಾನುಜರು ತಮ್ಮ ವೈಕುಂಠ ಗದ್ಯದಲ್ಲಿ ವಿವರಿಸಿದ್ದಾರೆ. ಇಲ್ಲಿನ ವೈಕುಂಠನಾಥ ಪರಮಾತ್ಮನನ್ನು ಬ್ರಹ್ಮ ಭುವನ ಸುಂದರ ನೆಂದು ಅದೇ ವೈಕುಂಠಗದ್ಯದಲ್ಲಿ ವರ್ಣಿಸಿದ್ದಾರೆ. ಅಂತಹ ಸೌಂದರ್ಯಾನು ಭವವನ್ನು ಆಚಾರ್ಯರು ಅನುಭವಿಸಿ, ಇಲ್ಲಿ ವರ್ಣಿಸಿದ್ದಾರೆ. ಅಂತಹ ಪರ ಮಾತ್ಮನನ್ನು 'ಸಾಕ್ಷಾತ್ ಮನ್ಮಥ ಮನ್ಮಥಃ' ಎಂದು ಬಣ್ಣಿಸಿದ ರಾಮಾನುಜರು, ಆತನ ಅಪ್ರಾಕೃತ ದಿವ್ಯಮಂಗಳ ವಿಗ್ರಹದಲ್ಲಿ ತನ್ಮಯರಾಗಿರುತ್ತಿದ್ದರು. ಇಡೀ ಜಗತ್ತು ಅಂತಹ ಭಗವಂತನ ಸುಂದರ ಶರೀರ ಎನ್ನುವ ಭಾವನೆಯನ್ನು ಅವರು ಹೊಂದಿದ್ದರು.

ಇಂತಹ ಪರಮಾತ್ಮನ ರಸಾಸ್ವಾದದಿಂದ ನಮ್ಮ ಸ್ವಭಾವವು ಪರಿವರ್ತಿತ ಗೊಳ್ಳಬೇಕು ಎನ್ನುವ ತತ್ತ್ವ ಶ್ರೀವೈಷ್ಣವ ಧರ್ಮದಲ್ಲಿದೆ.

ನಿಷ್ಕಾಮ ಸೇವೆಯೇ ಕೈಂಕರ್ಯ. ಇದರಲ್ಲಿ ಭಗವದ್ ಕೈಂಕರ್ಯ, ಭಾಗವತ ಕೈಂಕರ್ಯ ಮತ್ತು ಆಚಾರ್ಯ ಕೈಂಕರ್ಯಗಳು ಒಳಗೊಂಡಿವೆ. ಇದು ರಾಮಾನುಜರ ಪ್ರಾಯೋಗಿಕ ದರ್ಶನದ ಬೀಜಾಕ್ಷರ. ಈ ಮೂರರಿಂದಲೂ ಮೋಕ್ಷಪ್ರಾಪ್ತಿ ಸಾಧ್ಯ. ಶೇಷತ್ವೈಕ ನಿರೂಪಣೀಯವಾದ ಆತ್ಮವಸ್ತುವಿಗೆ ಪುರುಷಾರ್ಥವೇ ಕೈಂಕರ್ಯ. ದಯೆ, ಧರ್ಮದ ಮೂಲವೆಂಬುದನ್ನು ಶ್ರೀವೈಷ್ಣವ ಧರ್ಮವೂ ನಂಬುತ್ತದೆ. ಇದಕ್ಕೆ ಆಚಾರ್ಯ, ಭಗವದ್ ಹಾಗೂ ಭಾಗವತ ಕೈಂಕರ್ಯಗಳು ಮೂರು ಪರ್ವಗಳು.

ಕೈಂಕರ್ಯ ಪರರಾದ ರಾಮಾನುಜರು ನಿತ್ಯಕೈಂಕರ್ಯ ಪ್ರಾಪ್ತಿಗಾಗಿ

ಆಳ್ವಾರರಂತೆ, ಭಗವಂತನಿಗೆ ಆಳುಗಳಾಗಿ ಆತನನ್ನು ಅನುಸಂಧಾನ ಮಾಡ ಬೇಕು. ಆಗಲೇ ಆ ಕೈಂಕರ್ಯ ಸಾಧ್ಯ.

ಶ್ರೀವೈಷ್ಣವ ದರ್ಶನವು ವಿಶಿಷ್ಟಾದ್ವೈತ ತತ್ವದ ಮೇಲೆ ಆಧಾರಪಟ್ಟಿದೆ. ಈ ಪ್ರಕ್ರಿಯೆಯಲ್ಲಿ ಮೂರು ರಹಸ್ಯಗಳಿವೆ–ಇದೇ ರಹಸ್ಯತ್ರಯ. ಈ ರಹಸ್ಯ ತ್ರಯದ ಜ್ಞಾನವನ್ನು ತಮ್ಮ ಗುರುಗಳಿಂದ ಪಡೆದು, ನಂತರ ದೇವಾಲಯದ ಗೋಪುರವೇರಿ ಆ ಗುಟ್ಟನ್ನು ರಟ್ಟುಮಾಡಿ, ಲೋಕೋದ್ಧಾರ ಮಾಡಿದರು. ತಿರುಮಂತ್ರ, ದ್ವಯ, ಚರಮಶ್ಲೋಕಗಳೇ ಈ ರಹಸ್ಯತ್ರಯ. ಇದರಲ್ಲಿ ಸಂಪೂರ್ಣ ಶರಣಾಗತಿಯ ಧರ್ಮ ಅಡಗಿದೆ. ಇದು ಸ್ವರೂಪ, ಉಪಾಯ, ಪುರುಷಾರ್ಥಗಳನ್ನು ಸೂಚಿಸುತ್ತವೆಯೆಂದು ರಾಮಾನುಜರು ವಿವರಿಸುತ್ತಾರೆ. 'ಸ್ವಜ್ಞಾನಂ ಪ್ರಾಪಕಜ್ಞಾನಂ ಪ್ರಾಪ್ಯಜ್ಞಾನಂ ಮುಮುಕ್ಷುಭಿಃ ಜ್ಞಾನತ್ರಯಂ ಉಪಾದೇಯಂ' ಎನ್ನುವ ಸಾಲು ಈ ಮೂರೂ ರಹಸ್ಯಗಳನ್ನು ವಿವರಿಸುತ್ತದೆ.

## ಇತರೇ ಪಂಥಗಳ ಮೇಲೆ ರಾಮಾನುಜರ ಪ್ರಭಾವ

ರಾಮಾನುಜರಿಗೆ ಇತರ ಪಂಥಗಳ ಮೇಲೆ ಔದಾರ್ಯ ಭಾವನೆ ಇತ್ತು. ಇದಕ್ಕೆ ಬೇಲೂರು ಚನ್ನಕೇಶವ ದೇವಸ್ಥಾನದ ಶಾಸನದಲ್ಲಿ ತಿಳಿಸಿರುವ 'ಯಂ ಶೈವಾಃ ಸಮುಪಾಸತೇ....' ಎನ್ನುವ ಭಗವದ್ಗೀತೆಯ ವಾಕ್ಯವು ಇವರ ಅಂತರಿಕ ಭಾವವನ್ನು ವ್ಯಕ್ತಪಡಿಸುತ್ತದೆ.

1. ದ್ವೈತಮತ : ಈ ವಿಶಾಲ ಭಾವನೆಯು ಅನೇಕರನ್ನು ಆಕರ್ಷಿಸಿ ದಂತೆ ಇತರೇ ಪಂಥ, ಸಂಪ್ರದಾಯಗಳ ಮೇಲೂ ಪ್ರಭಾವ ಬೀರಿತು. ಈ ರೀತಿ ಯಲ್ಲಿ ರಾಮಾನುಜರಿಂದ ಪ್ರವರ್ತಿತವಾದ ವೈಷ್ಣವ ಸಂಪ್ರದಾಯಕ್ಕೆ ಹೆಚ್ಚಿನ ಪುಷ್ಟಿ ಬಂದುದು ಮಧ್ವಾಚಾರ್ಯರಿಂದ. ರಾಮಾನುಜರು ಪರಮಪಡಿಸಿದ 101 ವರ್ಷಗಳ ನಂತರ ಅವತರಿಸಿದ ಮಧ್ವಾಚಾರ್ಯರು ದ್ವೈತ ಪಂಥದ ಪ್ರವರ್ತಕರಾದರು. ಕ್ರಿ.ಶ. 1276ರಲ್ಲಿ ಇವರು ತಮ್ಮ 79ನೇ ವಯಸ್ಸಿನಲ್ಲಿ ಹರಿಚರಣಾರವಿಂದವನ್ನು ಸೇರಿದರು. ಇದೇ ಸಂಪ್ರದಾಯವು ಮುಂದೆ ಹರಿದಾಸ ಪರಂಪರೆಯನ್ನು ನೀಡಿತು.

ಮಧ್ವಾಚಾರ್ಯರು ರಾಮಾನುಜರ ಗ್ರಂಥಗಳನ್ನು ಅಧ್ಯಯನ ಮಾಡಿದ್ದರು. ಈ ಕಾರಣದಿಂದ ರಾಮಾನುಜರಿಂದಲೇ ಆದಿಶಂಕರರು ಪ್ರತಿಪಾದಿಸಿದ

ಜಗನ್ಮಿಥ್ಯಾ ವಾದವನ್ನು ಜೀವೇಶ್ವರರ ಅದ್ವೈತ ವಾದವನ್ನು ನಿಶ್ಚಿತವಾಗಿ ಖಂಡಿಸಿದರು. ಉಪನಿಷತ್ತುಗಳ ವಿವಿಧ ಪ್ರಮಾಣಗಳನ್ನು ಮುಂದುಮಾಡಿ, ರಾಮಾನುಜರಂತೆ ಇವರೂ ಕೂಡ ತಮ್ಮ ಸಿದ್ಧಾಂತವನ್ನು ಉಪಭ್ರಂಶವಾಗಿ ಸ್ವೀಕರಿಸಿದರು. ಇವರು ರಾಮಾನುಜರಂತೆ ಪ್ರಕಾರ-ಪ್ರಕಾರೀ ವೈಶಿಷ್ಟ್ಯವನ್ನು ಕೂಡ ಅಂಗೀಕರಿಸದೆ ಸರ್ವಾತ್ಮನಾ ಭೇದವನ್ನೇ ಪ್ರತಿಷ್ಠಾಪಿಸಿದರು.

ಮುಕ್ತಿಸಾಧನಗಳಲ್ಲಿ ಈ ದ್ವೈತಮತಕ್ಕೆ ಅತ್ಯಂತ ಮುಖ್ಯವಾದುದು. ಮಹಾವಿಷ್ಣುವಿನಲ್ಲಿ ಅನನ್ಯವಾದ ಭಕ್ತಿ. ರಾಮಾನುಜದರ್ಶನದಲ್ಲಿರುವಂತೆ ಈ ಪಂಥದಲ್ಲಿಯೂ ಮಹಾವಿಷ್ಣುವಿನ ಅವತಾರಗಳು, ತದರ್ಚಾನಾಮಮೂರ್ತಿಗಳ ಆರಾಧನೆಯನ್ನು ಒಪ್ಪಿಕೊಂಡಿದೆ. ವಿಷ್ಣು ಪಾರಮ್ಯವನ್ನು ಪ್ರಚುರ ಪಡಿಸುವ ವೈದಿಕ ವಾಙ್ಮಯ, ಪುರಾಣಗಳು. ಭಗವದ್ಗೀತೆ, ಬ್ರಹ್ಮಸೂತ್ರಾದಿಗಳನ್ನು ಈ ಮತೀಯರಿಗೆ ಪ್ರಮಾಣಗಳಾಗಿವೆ. ಇವರು ಗೋಪೀಚಂದನದೊಂದಿಗೆ ಊರ್ಧ್ವ ರೇಖೆಗಳು, ಅಕ್ಷತೆ, ಶಂಖ, ಚಕ್ರಾದಿ ಮುದ್ರೆಗಳನ್ನು ಧರಿಸುವರು.

ರಾಮಾನುಜರು 74 ಪೀಠಾಧಿಪತಿಗಳ್ನು ಸ್ಥಾಪಿಸಿದಂತೆ, ಮಧ್ವಾಚಾರ್ಯ ರೂ ಕೂಡ ಉಡುಪಿಯಲ್ಲಿ ಅಷ್ಟಮಠಗಳನ್ನು ಸ್ಥಾಪಿಸಿ, ಭಾರತಾದ್ಯಂತ ಮಧ್ವ ಸಿದ್ಧಾಂತವನ್ನು ಹರಡುವ ಪ್ರಯತ್ನ ಮಾಡಿದರು. ಅಂತೆಯೇ ತಮ್ಮ ಶಿಷ್ಯ ರಲ್ಲಿ ಒಬ್ಬರಾದ ನರಹರಿ ತೀರ್ಥರನ್ನು ದ್ವೈತ ಮತ ಪ್ರಚಾರಕ್ಕಾಗಿ ಒರಿಸ್ಸಾ (ಒಢ್ರ) ರಾಜ್ಯಕ್ಕೆ ಕಳುಹಿಸಿದ್ದಕ್ಕೆ ಇತಿಹಾಸ ದಾಖಲೆಗಳಿವೆ ಭಾರತಾದ್ಯಂತ ಮತಪ್ರಚಾರಕ್ಕಾಗಿ ಮಧ್ವಾಚಾರ್ಯರು ವಿಜಯಯಾತ್ರೆಯನ್ನು ಕೈಗೊಂಡರು. ಇಂದು ಈ ಮಧ್ವ ವೈಷ್ಣವರು ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ಬಹಳಷ್ಟು ಸಂಖ್ಯೆಯಲ್ಲಿದ್ದಾರೆ.

2. ರಾಮಾನಂದ ಸಂಪ್ರದಾಯ : ಉತ್ತರ ಭಾರತದ ಭಕ್ತಿಪಂಥಗಳಿಗೆ ರಾಮಾನುಜರ ದರ್ಶನ ಸ್ಫೂರ್ತಿದಾಯಕವಾಗಿತ್ತು. ಉತ್ತರಭಾರತದಲ್ಲಿ ವಿಸ್ತಾರ ಗೊಂಡ ವೈಷ್ಣವ ಶಾಖೆಗಳಲ್ಲಿ ಖ್ಯಾತನಾಮವಾದುದು ರಾಮಾನಂದಸ್ವಾಮಿ (1360–1467) ಯವರ ರಾಮಭಕ್ತಿ ಸಂಪ್ರದಾಯ. ಇವರು ಕರ್ನಾಟಕದ ಮೇಲುಕೋಟೆ (ತಿರುನಾರಾಯಣಪುರ)ಯಲ್ಲಿ ಜನಿಸಿದರೂ, ಈ ಸಂಪ್ರದಾಯ ಉತ್ತರ ಭಾರತದಲ್ಲಿ ಹರಡಿದುದರಿಂದ ಇವರು ಪ್ರಯಾಗದಲ್ಲಿ ಜನಿಸಿದರೆಂದು ಹೇಳಲಾಗುತ್ತದೆ. ಈತನ ತಂದೆ ಕನ್ಯಕುಬ್ಜ ಬ್ರಾಹ್ಮಣ ಶಾಖಾ ಪಂಡಿತನಾದ

ಪುಣ್ಯಸದನ (ಈತನ ಹೆಸರೂ ಬೇರೆಯೇ ಇದೆ) ಮತ್ತು ತಾಯಿ ಸುಶೀಲ. ಈ ಶಿಶುವು ಜನಿಸಿದ ಕೂಡಲೇ ಉತ್ತರಭಾರತ ಯಾತ್ರೆ ಕೈಗೊಂಡು ಅಲ್ಲಿಯೇ ನೆಲೆಸಿದರಂತೆ.

ರಾಮಾನಂದರ ಪ್ರಾರಂಭಿಕ ವಿದ್ಯಾಭ್ಯಾಸ ಕಾಶಿಯಲ್ಲಾಯಿತು. ಆಧ್ಯಾತ್ಮಿಕ ವಿದ್ಯಾಭ್ಯಾಸವನ್ನು ರಾಘವಾನಂದ ಎನ್ನುವ ವಿಶಿಷ್ಟಾದ್ವೈತ ಆಚಾರ್ಯರನ್ನು ಆಶ್ರಯಿಸಿದರು. ಈ ರಾಘವಾನಂದರು ಶ್ರೀ ರಾಮಾನುಜರ ಶಿಷ್ಯರಲ್ಲಿ ಒಬ್ಬರಾಗಿ, ಉತ್ತರಭಾರತದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರಮಾಡುವುದಕ್ಕಾಗಿ ನಿಯಮಿಸಲ್ಪಟ್ಟ ಪ್ರಖ್ಯಾತರಾದ ಶ್ರೀದೇವಾಚಾರ್ಯರ ಶಿಷ್ಯರು. ಹೀಗಾಗಿ ರಾಮಾನಂದರು ಆಶ್ರಯ ಪಡೆದದ್ದು ವಿಶಿಷ್ಟಾದ್ವೈತ ಸಿದ್ಧಾಂತವನ್ನೇ. ಉತ್ತರ ಭಾರತದ ನಾಭಾಜಿಯ ಭಕ್ತಮಾಲೆಯಲ್ಲಿ ಇದರ ಉಲ್ಲೇಖವಿದ್ದು, ಅವರ 'ಹರಿಭಕ್ತ ಸಿಂಧುವೇಲಾ' ಎನ್ನುವ ಗ್ರಂಥದಲ್ಲಿ ಈ ಶ್ಲೋಕವಿದೆ–

'ವಂದೇ ಶ್ರೀ ರಾಘವಾಚಾರ್ಯಂ ರಾಮಾನುಜ ಕುಲೋದ್ಭವಂ |
ಯೋಸ್ಯದುತ್ತರ ಮಾಗತ್ಯ ರಾಮಮಂತ್ರ ಪ್ರಚಾರಕಮ್ ||'

ರಾಮಾನಂದರು ತಮ್ಮ 'ರಾಮಾರ್ಚನ ಪದ್ಧತಿ' ಎನ್ನುವ ಗ್ರಂಥದಲ್ಲಿ ತಮ್ಮ ಗುರು ಪರಂಪರೆಯನ್ನು ಈ ರೀತಿ ವರ್ಣಿಸಿದ್ದಾರೆ–ರಾಮಚಂದ್ರ, ಸೀತಾಜೀ, ವಿಷ್ವಕ್ಸೇನ, ಶಠಕೋಪಸ್ವಾಮಿ, ಶ್ರೀ ನಾಥಮುನಿ, ಪುಂಡರೀಕಾಕ್ಷ ಆಚಾರ್ಯ, ರಾಮ ಮಿಶ್ರ, ಯಾಮುನಾಚಾರ್ಯ, ಮಹಾಪೂರ್ಣಾಚಾರ್ಯ, ಶ್ರೀ ರಾಮಾನುಜ, ಕೂರೇಶ, ಮಾಧವಾಚಾರ್ಯ, ಬೋಪದೇವಾಚಾರ್ಯ, ದೇವಾಧಿಪ, ಪುರುಷೋತ್ತಮ, ಗಂಗಾಧರ, ರಾಮೇಶ್ವರ, ದ್ವಾರಾನಂದ, ದೇವಾನಂದ, ಶ್ರೀಯಾನಂದ, ಹರಿಯಾನಂದ, ರಾಮಾನಂದ ಶಿಷ್ಯರು ಸೇನಾನಾಈ, ಸೀಪಾಜೀ, ಸಂತರೈದಾಸ, ಕಬೀರ ಮೊದಲಾದವರು.

ರಾಮಾನಂದರೂ ಕೂಡ ತತ್ತ್ವತ್ರಯ, ಈಶ್ವರ ಚಿದಚಿದ್ವಿಶಿಷ್ಟತ್ವ ರಹಸ್ಯ ತ್ರಯವನ್ನು ಒಪ್ಪಿಕೊಂಡರು. ಇವರಲ್ಲಿಯೂ ಮೂಲಮಂತ್ರ, ದ್ವಯಮಂತ್ರ, ಚರಮ ಮಂತ್ರವಿದೆ. ಇವರ ಮೂಲಮಂತ್ರ 'ಶ್ರೀರಾಂ ರಾಮಾಯ ನಮಃ'; ದ್ವಯ–'ಶ್ರೀರಾಮಚಂದ್ರ ಚರಣೌ ಶರಣಂ ಪ್ರಪದ್ಯೆ, ಶ್ರೀಮತೇ ರಾಮ ಚಂದ್ರಾಯ ನಮಃ'; ಚರಮಶ್ಲೋಕವು ರಾಮಾಯಣದ, 'ಸಕೃದೇವ ಪ್ರಪನ್ನಾಯ....ದದಾಮೇತದ್ವ್ರತಂ ಮಮ'ಎಂಬುದು.

ಇವರಿಗೂ ರಾಮಾನುಜರಂತೆ ಶರಣಾಗತಿಯೇ ಪರಮಹಿತ. 'ಒಂದು ವ್ಯಕ್ತಿಯ ಜಾತಿ ವರ್ಣಗಳನ್ನು ಕೇಳಬಾರದು. ರಾಮಚಂದ್ರ ಸ್ವಾಮಿಯನ್ನು ಅರ್ಚಿಸುವವರೆಲ್ಲ ದೈವಸಂಬಂಧಿ' ಎಂದು ಇವರು ಹೇಳುತ್ತಿದ್ದರು.

ರಾಮಾನಂದರಿಗೂ ಮುಕ್ತಿಯ ಸಾಧನ ಭಕ್ತಿ, ಅವಿಚ್ಛಿನ್ನ–

'ತೈಲಧಾರಾವತ್ ಅವಿಚ್ಛಿನ್ನ ಸಂತತ ಧಾರೆಯಾದ ಭಕ್ತಿ'. ರಾಮಾನುಜರು ಹೇಳಿದ ವಿವೇಕ, ವಿಮೋಕ ಎನ್ನುವ ಮುಕ್ತಿಯ ಸಪ್ತಸಾಧನಗಳನ್ನು ರಾಮಾನಂದರೂ ಒಪ್ಪಿಕೊಂಡಿದ್ದಾರೆ. ಇದನ್ನು ಅವರ 'ವೈಷ್ಣವ ಮತಾಬ್ಜ ಭಾಸ್ಕರ' ಎನ್ನುವ ಗ್ರಂಥದಲ್ಲಿ ಒಪ್ಪಿಕೊಂಡಿದ್ದಾರೆ. ಇದರ ಮುಖಾಂತರ ರಾಮಾನುಜರ ವಿಶೇಷ, ಸಂಪೂರ್ಣ ಪ್ರಭಾವವು ರಾಮಾನಂದರ ಮೇಲೆ ಬಿದ್ದಿತೆಂದು ಸ್ಪಷ್ಟವಾಗುತ್ತದೆ.

ಇವರ ರಾಮಭಕ್ತಿ ಸಂಪ್ರದಾಯ ಉತ್ತರ ಭಾರತಾದ್ಯಂತ ಹರಡಿತು. ರಾಮನಾಮವು ಸಹಸ್ರ ಭಗವನ್ನಾಮಗಳಿಗೆ ಸಮಾನವೆಂಬಂತೆ ಅಸಾಧಾರಣ ರಾಮನಾಮ ಮಹಿಮೆಯನ್ನು ಇವರು ವಿವರಿಸಿದ್ದಾರೆ. ಇದು ಸರ್ವಪಾಪಹರವಾದುದು. ರಾಮಭಕ್ತನು ಪರಮಪವಿತ್ರನು. ಇಂತಹ ರಾಮಭಕ್ತನು ಯಾವ ಜಾತಿಯವನಾದರೂ ಪೂಜನೀಯನೆ. ಇವರಿಗೆ ರಾಮಾಯಣವು ಪ್ರಾಮಾಣಿಕ ಮೂಲಗ್ರಂಥ. ಭಾಗವತರಿಗೆ ಎಲ್ಲ ಭಕ್ತರೂ ಶಿರೋಧಾರ್ಯರೆ. ರಾಮಾನುಜರ ಗುಣಗಳು, ಜಾತ್ಯಾತೀತತೆ, ಕಾರುಣ್ಯ, ದಯೆ, ಹೃದಯವಂತಿಕೆಗಳ ಉದಾಹರಣೆಗಳನ್ನು ರಾಮಾನಂದರು ಪ್ರಚಾರ ಮಾಡಿದರು. ಇವರು ತಮ್ಮ ಶಿಷ್ಯರಾದ ಅನಂತಾನಂದ, ಸುರಸದಾನಂದ, ಸುಖಾನಂದ–ಇತ್ಯಾದಿಯವರುಗಳೊಂದಿಗೆ ರಾಮಭಕ್ತಿ ಪ್ರಚಾರ ಮಾಡಿದರು. ರಾಮಾನುಜರಿಗೆ ಇದ್ದಂತೆ ಇವರಿಗೂ ಎಲ್ಲ ಜಾತಿಯ ಶಿಷ್ಯರೂ ಇದ್ದರು; ಎಲ್ಲರನ್ನೂ ಸಮಭಾವದಿಂದ ಕಾಣುತ್ತಿದ್ದರು. ಈ ರೀತಿಯಲ್ಲಿ ಇವರು ತಮ್ಮ ಶಿಷ್ಯವೃಂದದೊಂದಿಗೆ ಉತ್ತರ ಭಾರತಾದ್ಯಂತ ಪರ್ಯಟನೆ ಮಾಡಿ, ತೀರ್ಥಯಾತ್ರೆ ನೆರವೇರಿಸುತ್ತಾ, ಅಲ್ಲಲ್ಲಿ ಪಂಡಿತ ಗೋಷ್ಠಿಗಳಲ್ಲಿ ಅದ್ವೈತ, ಮಾಯಾವಾದ, ನಾಸ್ತಿಕರಾದ ಜೈನ ಬೌದ್ಧಾದಿಗಳೊಂದಿಗೆ ವಾದ ಮಾಡಿ, ಅವರನ್ನು ಖಂಡಿಸುತ್ತಾ ಶ್ರೀವೈಷ್ಣವಧರ್ಮ ಹಾಗೂ ದರ್ಶನವನ್ನು ಪ್ರಚಾರ ಮಾಡಿದರು. 1467ರಲ್ಲಿ ಪರಮಪದಿಸಿದ ಇವರಿಂದ ಪ್ರಚಾರ ಮಾಡಲ್ಪಟ್ಟ ರಾಮಭಕ್ತಿ ಸಂಪ್ರದಾಯ ಉತ್ತರ ಭಾರತಾದ್ಯಂತ ಹರಡಿತು. ತದನಂತರ ಕಬೀರ್, ತುಳಸೀರಂತಹ ರಾಮಭಕ್ತಿ ಕವಿಗಳು ಉದ್ಬೋಧಕಗೊಂಡರು.

3. ಕಬೀರ್‌ದಾಸ್-ರಾಮಭಕ್ತಿ : ರಾಮಾನಂದರ ಶಿಷ್ಯರಲ್ಲಿ ವಿಶೇಷ ಖ್ಯಾತಿ ಹೊಂದಿದಾತ ಕಬೀರ್. ಈತನು 1455ರಲ್ಲಿ ಕಾಶೀನಗರದಲ್ಲಿ ಜನಿಸಿದನು. ಓರ್ವ ಬ್ರಾಹ್ಮಣ ವಿತಂತುವು ತನ್ನ ಶಿಶುವನ್ನು ಗಂಗಾನದಿ ತೀರದಲ್ಲಿ ಬಿಟ್ಟು ಹೋಗಲು, ಅಲ್ಲಿ ನಡೆದುಕೊಂಡು ಹೋಗುತ್ತಿದ್ದ ಮಹಮ್ಮದೀಯ ದಂಪತಿಗಳು ಆ ಮಗುವಿನ ಮೇಲೆ ಕನಿಕರಗೊಂಡು, ಭಗವತ್ಪ್ರಸಾದಿತವಾದ ಆ ಕುಮಾರ ರತ್ನವನ್ನು ಎತ್ತಿಕೊಂಡು ಹೋಗಿ, ಪ್ರೀತಿಯಿಂದ ಬೆಳೆಸಿದರು. ಆ ಆ ಮಗುವಿಗೆ ಕಬೀರ್ ಎಂದು ಹೆಸರಿಟ್ಟರು. ಬೆಳೆದು ದೊಡ್ಡವನಾದ ಕಬೀರನು ತಂದೆಯ ವೃತ್ತಿಯಾದ ನೇಯ್ಗೆಯನ್ನು ಕೈ ಹಿಡಿದು, ಅದನ್ನು ಅನುಸರಿಸಲಾರದವನಾದನು.

ಅದು ಕಾಶೀಕ್ಷೇತ್ರ, ಪುರಾಣ ಪ್ರವಚನಗಳು, ಕಥಾ ಕಾಲಕ್ಷೇಪಗಳು ಬಹಳವಾಗಿ ನಡೆಯುತ್ತಿದ್ದುವು. ಅವುಗಳಿಂದ ಆಕರ್ಷಿತನಾಗಿ, ಕಾಲಾನುಕ್ರಮದಲ್ಲಿ ಶ್ರೀರಾಮಭಕ್ತಿಯು ಆತನನ್ನು ಸಂಪೂರ್ಣವಾಗಿ ಆವರಿಸಿತು. ರಾಮಾನಂದರ ಪ್ರವಚನಗಳಿಂದ ಆಕರ್ಷಿತನಾಗಿ ಅವರ ಶಿಷ್ಯನಾಗಲು ಪ್ರಯತ್ನಿಸಿದನು. ಆದರೆ ತಾನು ಮಹಮ್ಮದೀಯನಾದುದರಿಂದ, ಆ ಮಹಾತ್ಮರು ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸುವರೊ ಇಲ್ಲವೊ ಎಂಬ ಸಂಶಯದಲ್ಲಿದ್ದನು.

ಅಂತೆಯೇ ಒಂದು ದಿನ ಕತ್ತಲಾಗಿರುವಾಗಲೇ ರಾಮಾನಂದರು ಗಂಗಾಸ್ನಾನಕ್ಕೆ ಬರುವರು ಎಂಬುದನ್ನು ತಿಳಿದಿದ್ದ ಕಬೀರನು ನದೀತೀರದ ಮೆಟ್ಟಿಲ ಮೇಲೆ ಬೋರಲಾಗಿ ಮಲಗಿದ್ದನು. ಸ್ನಾನ ಮಾಡಿದ ನಂತರ ಮೆಟ್ಟಿಲೇರುತ್ತಿದ್ದಂತೆ ರಾಮಾನಂದರ ಪಾದವು ಕಬೀರನನ್ನು ಸೋಕಿತು. ತಿಳಿಯದೆ ಯಾರನ್ನೊ ತುಳಿದೆನೆಂದು ಅವರು 'ರಾಮ ! ರಾಮ !' ಎಂದರು.

ಕೂಡಲೇ ಮೇಲೆದ್ದ ಕಬೀರನು, ಕೈಜೋಡಿಸಿ ನಿಂತು, 'ಧನ್ಯನಾದೆ ಗುರುದೇವಾ ; ಶ್ರೀರಾಮಮಂತ್ರವನ್ನು ಉಪದೇಶಿಸಿ, ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿದಿರಿ ! ' ಎಂದ ನಮ್ರನಾಗಿ.

ವಿಷಯವನ್ನು ಗ್ರಹಿಸಿದ ರಾಮಾನಂದರು ಆತನ ಮೇಲೆ ಮಂದಹಾಸ ಬೀರಿ, ಆತನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು.

ಮಹಾಭಕ್ತನಾದ ಕಬೀರನು ತನ್ನ ಆಚಾರ್ಯರ ಎಲ್ಲ ಉಪದೇಶಗಳನ್ನು ಗ್ರಹಿಸಿ, ಪ್ರಜೆಗಳಲ್ಲಿ ರಾಮಭಕ್ತಿಯನ್ನು ಹರಡಲು ಬಹಳವಾಗಿ ಶ್ರಮಿಸಿದನು.

ಜನಸಾಮಾನ್ಯರಿಗೆ ಅರ್ಥವಾಗುವ ಸ್ಥಳೀಯ ಭಾಷೆಯಾದ ಹಿಂದಿಯಲ್ಲಿ ಗೇಯ ಗಳನ್ನು ರಚಿಸಿ, ವೇದಾಂತ ಸಾರವನ್ನು ಸಂಗ್ರಹಿಸಿ, ತಿಳಿಸಿದನು. ಸರ್ವಮತ ಸಾಮರಸ್ಯ ಸಂಧಾಯಕವಾಗುವ, ಸರ್ವಮಾನಸ ಸಾಭ್ರಾತ್ರಾ ಸಂಪಾದನೆ ಯನ್ನು ಸಕಲ ಲೋಕಕಲ್ಯಾಣಕ್ಕಾಗಿ ಪ್ರಚಾರ ಮಾಡಿದ ಕಬೀರ್‌ದಾಸನದ್ದನ್ನು 'ಕಬೀರ್ ಸಂಪ್ರದಾಯ (ಕಬೀರ್ ಪಂಥಾ)' ಎಂದೇ ಖ್ಯಾತಿ ಪಡೆದಿದೆ. ಈತನ ಕವಿತೆಗಳು ನಮ್ಮ ಪುರಂದರದಾಸರ ಕೀರ್ತನೆಗಳಂತೆ ತುಂಬಾ ಜನಪ್ರಿಯ ವಾದವು. ಈತನ ಒಂದು ದೋಹೆ (ಸಾಖಿ)ಯಲ್ಲಿ ಗುರು ರಾಮಾನಂದರ ಬಗ್ಗೆ

ಭಕ್ತಿ ದ್ರಾವಿಡ ಉಪಜೀ, ಲಾಯೇ ರಾಮಾನಂದ
ಕಬೀರ ನೇ ಪರಗತಿ ಕರೀ, ಸಾತದೀಪ ನವಖಂಡ ||

ಎಂದು ಹೇಳಿದ್ದಾನೆ.

**4. ನಿಂಬಾರ್ಕ ಸಂಪ್ರದಾಯ :** ತನ್ನ ಪೂರ್ವಜರಾದ ರಾಮಾನುಜರಂತೆ ಜಗತ್ ಮಿಥ್ಯಾವಾದವನ್ನು ಖಂಡಿಸುವುದರಲ್ಲಿ ಉತ್ಸಾಹವನ್ನು ತೋರಿ, ಪ್ರಸಿದ್ಧಿಯನ್ನು ಪಡೆದ ಮತ್ತೊರ್ವ ಸಿದ್ಧಾಂತ ಪ್ರವರ್ತಕನೆಂದರೆ ನಿಂಬಾರ್ಕ ಸ್ವಾಮಿ. ಈತನು ತನ್ನ ಸಂಪ್ರದಾಯ ಪ್ರಚಾರಕ್ಕಾಗಿ ಉತ್ತರ ಭಾರತವನ್ನೇ ಆರಿಸಿಕೊಂಡರೂ ಈತನು ಜನಿಸಿದ್ದು ಬಳ್ಳಾರಿ ಜಿಲ್ಲೆಯಲ್ಲಿನ ನಿಂಬ ಎನ್ನುವ ಹಳ್ಳಿ. ಇದೇ ಹೆಸರಿನ ಹಳ್ಳಿಯೊಂದು ಆಂಧ್ರಪ್ರದೇಶದಲ್ಲಿನ ವೇಮುಲಪಲ್ಲಿ ಇರ ಬಹುದೇನೊ ಎನ್ನುವ ಅನುಮಾನವೂ ಇದೆ. ಓರ್ವ ವೈದಿಕ ಬ್ರಾಹ್ಮಣ ದಂಪತಿ ಗಳಾದ ಜಗನ್ನಾಥ ಭಟ್ಟಾರಕ ಮತ್ತು ಸರಸ್ವತಿಯರ ಪುತ್ರನಾಗಿ ಕ್ರಿ. ಶ. 13ನೇ ಶತಮಾನದ ಆದಿಯಲ್ಲಿ ಜನಿಸಿದನು. ಈತನು ಸುದರ್ಶನ ಚಕ್ರಾಯುಧ ಅಂಶ ದಿಂದ ಜನಿಸಿದಾತನು ಎಂದು ಈತನ ಅನುಯಾಯಿಗಳು ನಂಬಿದ್ದಾರೆ. ಈತನು ವೇದ, ವೇದಾಂತ ಪಾರಂಗತನಾದ ವಿದ್ವಾಂಸನಾಗಿದ್ದುದೇ ಅಲ್ಲದೆ ಕವಿ ಹಾಗೂ ಮಹಾಭಕ್ತನಾಗಿಯೂ ಇದ್ದನು. ರಾಮಾನುಜರ ಮತ ಸಿದ್ಧಾಂತವನ್ನು ತನ್ನ ಸಂಪ್ರದಾಯಕ್ಕೆ ಮೂಲ ಧಾತುವಾಗಿ ಮಾಡಿಕೊಂಡ ಈತನು ಅವರಂತೆ ತಾನೂನು ಬ್ರಹ್ಮ ಸೂತ್ರಗಳ 'ವೇದಾಂತ ಪಾರಿಜಾತ ಸೌರಭ' ಎನ್ನುವ ಒಂದು ಭಾಷ್ಯವನ್ನು ರಚಿಸಿದನು. ಈತನ ಇನ್ನೊಂದು ಕೃತಿ 'ಸಿದ್ಧಾಂತ ರತ್ನ'. ಈತನ ಸಿದ್ಧಾಂತಸಾರವು ಹತ್ತು ಶ್ಲೋಕಗಳಲ್ಲಿ ಇದರಲ್ಲಿ ಸಂಗ್ರಹಿತವಾಗಿದೆ. ಈ ಶ್ಲೋಕ ಸಂಖ್ಯೆಯ ಅನುಸಾರ ಇದನ್ನು 'ದಶಶ್ಲೋಕೀ' ಎಂದು ಕರೆಯಲಾಗು

ತ್ತದೆ. 'ಸವಿಶೇಷ, ನಿರ್ವಿಶೇಷ ಶ್ರೀಕೃಷ್ಣಸ್ತವರಾಜ' ಈತನು ರಚಿಸಿದ ಮತ್ತೊಂದು ಸ್ತುತಿ ರಚನೆ.

ಚಿದಚಿದೀಶ್ವರ ಸ್ವರೂಪ ನಿರೂಪಣೆಯ ವಿಷಯಗಳಲ್ಲಿ ನಿಂಬಾರ್ಕ ಸ್ವಾಮಿಗೆ ರಾಮಾನುಜ ಸಿದ್ಧಾಂತವೇ ಆದರ್ಶವಾದರೂ, ಸಾಧನ ಸಾಮಗ್ರಿಗಳ ಉಪಾಸನೆಗೆ ಪ್ರಾಮುಖ್ಯತೆ ನೀಡಲಿಲ್ಲ. ಬದಲಾಗಿ ಭಕ್ತಿ, ಪ್ರಪತ್ತಿಗಳಿಗೇ ಪ್ರಾಧಾನ್ಯತೆ ನೀಡಿದನು. ಚಿದಚಿದೀಶ್ವರರಿಗೆ ಭೇದವನ್ನು ಸ್ಥಾಪಿಸುತ್ತಲೇ ಕಾರ್ಯ ಕಾರಣಗಳಿಗೆ ಅಭೇದ ಎನ್ನುವ ಹೇತುವನ್ನು ಅಭೇದವನ್ನು ಸಾಧಿಸಿದನು. ಉಪಾಸ್ಯ ವಿಷಯದಲ್ಲಿ ಪರ ವ್ಯೂಹಾಧಿಕವಾದ ಪರಮಾತ್ಮ ಮೂರ್ತಿಗಳಲ್ಲಿ ಈ ಆಚಾರ್ಯನು ವಿಭವ ಮೂರ್ತಿಗೆ ವಿಶೇಷ ಪ್ರಾಮುಖ್ಯತೆಯನ್ನು ನೀಡಿದನು. ಅದರಲ್ಲೂ ಶ್ರೀಕೃಷ್ಣನನ್ನೇ ಪರಬ್ರಹ್ಮನಾಗಿ ಉಪಾಸ್ಯನೆನಿಸಿದನು.

ಈ ಸಂಪ್ರದಾಯದಲ್ಲಿ ರಾಧಾಕೃಷ್ಣಾರ್ಚನೆಯೇ ಮುಖ್ಯವಾದುದು. ಶ್ರೀಕೃಷ್ಣಾನುಗ್ರಹವೆ ಮೋಕ್ಷ ಹೇತುವು. ಶ್ರೀಕೃಷ್ಣಲೀಲಾ ವಿಹಾರರಂಗವಾದ ಮಥುರೆ-ಬೃಂದಾವನಾದಿ ಪ್ರದೇಶಗಳನ್ನು ನಿಂಬಾರ್ಕಾಚಾರ್ಯನು ತನ್ನ ಸಂಪ್ರದಾಯದ ಪ್ರಚಾರ ಭೂಮಿಯನ್ನಾಗಿ ಆರಿಸಿಕೊಂಡು, ಅಲ್ಲಿಯೇ ಒಂದು ಪೀಠವನ್ನೂ ಸ್ಥಾಪಿಸಿದನು. ಈತನ ಭಕ್ತಿಮಾರ್ಗವು ಅಚಿರಕಾಲದಲ್ಲೆ ಮೇಲೆ ತಿಳಿಸಿದ ಪ್ರದೇಶಗಳಲ್ಲೆಲ್ಲ ಬಹಳವಾಗಿ ವ್ಯಾಪಿಸಿತು.

ಉತ್ತರ ಭಾರತದಲ್ಲೆ ಅಲ್ಲದೆ ನಿಧಾನವಾಗಿ ವಂಗದೇಶದಾಚೆಗೂ, ಅಲ್ಲಿನ ಪ್ರದೇಶಗಳಿಗೂ ಈತನ ವೈಷ್ಣವ ಸಂಪ್ರದಾಯವು ಹರಡಿತು.

ನಿಂಬಾರ್ಕಾಚಾರ್ಯನ ನಂತರ ಆತನ ಶಿಷ್ಯ, ಪ್ರಶಿಷ್ಯರು ಈ ಸಂಪ್ರದಾಯ ಪರಂಪರೆಯನ್ನು ಪ್ರಚುರ ಪಡಿಸಿದರು. ಇವರಲ್ಲಿ ಕೆಲವು ಆಚಾರ್ಯರು ನಿಂಬಾರ್ಕನ ತರಹವೆ ಬ್ರಹ್ಮಸೂತ್ರಗಳ ಮೇಲೆ ಸ್ವತಂತ್ರವಾದ ವ್ಯಾಖ್ಯಾನಗಳನ್ನು ರಚಿಸಿದರು. ಅಂತಹವರಲ್ಲಿ ದೇವಾಚಾರ್ಯ ಹಾಗೂ ಕಾಶ್ಮೀರಿ ಎನ್ನುವವರುಗಳು ಪ್ರಖ್ಯಾತಿ ಪಡೆದಿದ್ದರು.

ಒಟ್ಟಿನಲ್ಲಿ ನಿಂಬಾರ್ಕನ ದ್ವೈತಾದ್ವೈತವು ಯಾದವರ ಭೇದಾ-ಭೇದ ಹಾಗೂ ರಾಮಾನುಜರ ವಿಶಿಷ್ಟಾದ್ವೈತಗಳ ನಡುವಣ ಮಾರ್ಗವಾಗಿದೆ. ಜೀವನು ಭೋಕ್ತಾ ಎಂದೂ, ಜಡವು ಭೋಗ್ಯವೆಂದು ಈ ಸಂಪ್ರದಾಯ ಹೇಳುತ್ತದೆ. ಇವೆರಡರ ಒಡೆಯನು ಈಶ್ವರನೆಂದೂ ಅದು ತಿಳಿಸುತ್ತದೆ. ಜೀವವು ಬ್ರಹ್ಮನ ಅಂಶವೆಂದು ಈ ಸಿದ್ಧಾಂತ ತಿಳಿಸುತ್ತದೆ.

**5. ವಲ್ಲಭ ಸಂಪ್ರದಾಯ :** ರಾಧಾಕೃಷ್ಣ ಭಕ್ತಿಪ್ರಧಾನವಾದ ವೈಷ್ಣವ ಮತ ಸಂಪ್ರದಾಯವನ್ನು ಪ್ರವರ್ತಿಸಿದವರಲ್ಲಿ ವಲ್ಲಭಾಚಾರ್ಯನು ತುಂಬಾ ಪ್ರಸಿದ್ಧನು. ಈತನು ರಾಮಾನುಜರ ಸಿದ್ಧಾಂತಗಳಿಂದ ಪ್ರೇರಣೆ ಪಡೆದರೂ ತನ್ನದೇ ಆದ 'ಶುದ್ಧಾಶುದ್ಧ' ಸಿದ್ಧಾಂತ (ವೇದಾಂತ) ಎಂಬ ಹೆಸರಿನ ಸಿದ್ಧಾಂತ ವನ್ನು ಸ್ಥಾಪಿಸಿದನು. ಈತನು ಬಹಳಷ್ಟು ಅಭಿಪ್ರಾಯಗಳನ್ನು ವಿಶಿಷ್ಟಾದ್ವೈತ ವೇತಾಂತದಿಂದ ಪಡೆದಿದ್ದಾನೆ.

ಕೃಷ್ಣ ಯಜುರ್ವೇದೀಯ ಶಾಖೆಯವನಾದ ಲಕ್ಷ್ಮಣಭಟ್ಟ ಈತನ ತಂದೆ ಎಲ್ಲಮ ಈತನ ತಾಯಿ. ಕ್ರಿ. ಶ. 1479 ರಲ್ಲಿ ಆಂಧ್ರಪ್ರದೇಶದಲ್ಲಿ ಜನಿಸಿದನು.

ಸುಪ್ರಸಿದ್ಧ ವಿದ್ವಾಂಸನಾದ ಈತನು ಕೃಷ್ಣಭಕ್ತಿ ಪ್ರೇರಿತನಾಗಿ, ಶ್ರೀಕೃಷ್ಣ ನ ಜನನ, ನಿವಾಸ, ಸಂಚಾರ, ರಾಸಲೀಲೆಗಳ ರಂಗಸ್ಥಳವಾಗಿದ್ದ ಮಥುರಾ, ಬೃಂದಾವನ, ಯಮುನಾ ತೀರದ ಪ್ರದೇಶಗಳನ್ನು ದರ್ಶಿಸಬೇಕೆಂಬ ಮಹದಿಚ್ಛೆ ಯಿಂದ ಉತ್ತರ ಭಾರತಕ್ಕೆ ಹೋದನು, ಆ ಪ್ರದೇಶಗಳಲ್ಲಿ ಇರತೊಡಗಿದನು.

ಒಂದು ದಿನ ರಾತ್ರಿ ಕನಸಿನಲ್ಲಿ ಶ್ರೀಕೃಷ್ಣನು ಈತನಿಗೆ ಕಾಣಿಸಿಕೊಂಡು, ತಾನು ಗೋವರ್ಧನ ಗಿರಿಯ ಮೇಲೆ ದೇವದಮನ ಹೆಸರಿನಲ್ಲಿ ಅರ್ಚಾಮೂರ್ತಿ ಯಾಗಿ ನೆಲೆಸಿರುವೆನೆಂದೂ, ಆದರಿಂದ ಅಲ್ಲಿಗೆ ಬಂದು ತನ್ನನ್ನು ಸೇವಿಸಿ, ಆಲಯ ಗೋಪುರ ಪ್ರಾಕಾರಾದಿಗಳನ್ನು ನಿರ್ಮಿಸಬೇಕೆಂದೂ, 'ನೀನು ಬೋಧಿಸುವ ಸಂಪ್ರದಾಯವೆ ನಿನ್ನನ್ನು ಗೋಲೋಕಕ್ಕೆ ತಲುಪಿಸುವ ಸಾಧನವಾಗುತ್ತದೆ' ಎಂಬುದಾಗಿ ಆಜ್ಞಾಪಿಸಿದನು.

ಈ ರೀತಿಯ ಭಗವಂತನ ಆದೇಶಾನುಸಾರ ವಲ್ಲಭಾಚಾರ್ಯನು ಸಪರಿ ವಾರನಾಗಿ, ಗೋವರ್ಧನಗಿರಿಯನ್ನು ತಲುಪಿ, ಅಲ್ಲೆಲ್ಲ ಹುಡುಕಾಡಲು, ಅಲ್ಲಿ ಒಂದು ಸುಂದರವಾದ, ಪುರಾತನವಾದ ಶ್ರೀಕೃಷ್ಣನ ವಿಗ್ರಹವೊಂದು ದೊರೆಯಿತು.

ಪರಮಾನಂದ ಭರಿತನಾದ ವಲ್ಲಭಾಚಾರ್ಯನು ಆ ಶ್ರೀಕೃಷ್ಣದೇವನಿಗೆ ಭವ್ಯವಾದ ದೇವಾಲಯವೊಂದನ್ನು ಕಟ್ಟಿಸಿ, ನಿತ್ಯಪೂಜಾ ಹಾಗೂ ವಿವಿಧ ಪೂಜೆಗಳಿಗೆ ಕಟ್ಟಳೆ ಹಾಗೂ ಏರ್ಪಾಡುಗಳನ್ನು ಮಾಡಿದನು. ಈ ದೇವದಮನ ಸ್ವಾಮಿಯನ್ನು ತದನಂತರದಲ್ಲಿ 'ಶ್ರೀನಾಥಜೀ' ಎನ್ನುವ ಹೆಸರಿನಿಂದ ಕರೆಯ ತೊಡಗಿದರು.

ನಾಭಾಜೀಯು ರಚಿಸಿದ 'ಭಕ್ತಿಮಾಲಾ' ಗ್ರಂಥದ ಅನುಸಾರ ಮಹಾರಾಷ್ಟ್ರದ ಪ್ರಸಿದ್ಧ ಭಕ್ತರಾದ ಶ್ರೀ ಜ್ಞಾನದೇವ, ನಾಮದೇವ, ತ್ರಿಲೋಚನರು ಕ್ರಮವಾಗಿ ವಿಷ್ಣುಸ್ವಾಮಿ ಎನ್ನುವ ಶ್ರೀವೈಷ್ಣವಾಚಾರ್ಯನ ಶಿಷ್ಯರಾಗಿ, ಅದೇ ಪೀಠಕ್ಕೆ ಸೇರಿದವರಾಗಿದ್ದರೆಂದೂ, ಅವರ ನಂತರ ವಿಷ್ಣುಸ್ವಾಮಿ ಸಂಪ್ರದಾಯಕ್ಕೆ ಆಚಾರ್ಯತ್ವವನ್ನು ವಲ್ಲಭಾಚಾರ್ಯನು ವಹಿಸಿದನೆಂದೂ ತಿಳಿದುಬರುತ್ತದೆ.

ವಲ್ಲಭಾಚಾರ್ಯನ ಶುದ್ಧಾದ್ವೈತ ಸಿದ್ಧಾಂತವು ಜೀವ, ಬ್ರಹ್ಮರಿಗೆ ಅಂಶ-ಅಂಶೀ ರೂಪದ ಏಕತ್ವವನ್ನು ಪ್ರತಿಪಾದಿಸುತ್ತದೆ. ಬ್ರಹ್ಮಕ್ಕೆ ಮಾಯಾ ಸಂಬಂಧವಿಲ್ಲ. ಅದು ಶುದ್ಧರೂಪದ ಬ್ರಹ್ಮ. ಅಗ್ನಿ ಮತ್ತು ಅದರಿಂದ ಜನಿಸಿದ ಸ್ಫುಲಿಂಗಗಳಿಗೆ ಇರುವ ಸಂಬಂಧವೆಂತಹುದೋ ಅಂತಹುದೇ ಜೀವ-ಬ್ರಹ್ಮರಿಗೆ ಇರುವ ಸಂಬಂಧವಾಗಿದೆ. ಕಾರ್ಯರೂಪ ಸಂಬಂಧವಾಗಿ ಬೇರೆಯಾಗಿರುವಂತೆ ಕಂಡುಬಂದರೂ ಕಾರಣ ರೂಪದಲ್ಲಿ ಇವೆರಡೂ ಒಂದೇನೆ. ಆದುದರಿಂದಲೇ ಈ ತತ್ತ್ವವನ್ನು ಶುದ್ಧಾದ್ವೈತ ತತ್ತ್ವ ಎಂದು ಕರೆಯಲಾಯಿತು.

ಇದರ ಉಪಾಸ್ಯ ದೈವ ಶ್ರೀಕೃಷ್ಣ. ಎಲ್ಲ ಊರ್ಧ್ವಲೋಕಗಳ ಮೇಲೆ 'ಗೋಲೋಕ'ವಿದೆ. ಅಲ್ಲಿ ಪರಬ್ರಹ್ಮನಾದ ಶ್ರೀಕೃಷ್ಣನಿರುವನು. ಸೃಷ್ಟಿ, ಸ್ಥಿತಿ, ಲಯಗಳು ಈತನ ಲೀಲೆಗಳು. ಈ ಲೋಕದ ಪ್ರಾಪ್ತಿಯೇ-ಮುಕ್ತಿ. ಅದು ಈ ಶ್ರೀಕೃಷ್ಣನ ಅನುಗ್ರಹಾಧೀನ. ಸದಾಚಾರ, ವಿನಯ, ತತ್‌ಪಾದ ಭಕ್ತಿ-ಇವುಗಳಿಂದ ಆ ಭಗವಂತನ ಅನುಗ್ರಹ ಪ್ರಾಪ್ತವಾಗುವುದು. ಶ್ರೀಕೃಷ್ಣಾನುಗ್ರಹ ಪ್ರಾಪ್ತಿಯ ಈ ವಿಶೇಷ ಭಕ್ತಿಗೆ 'ಪುಷ್ಟಿ ಭಕ್ತಿ' ಎಂಬ ಹೆಸರೂ ಇದೆ. ಅದೇ ಸಂಕೇತ. ಪ್ರವಾಹ ಪುಷ್ಟಿ ಭಕ್ತಿ, ಮರ್ಯಾದಾ ಪುಷ್ಟಿ ಭಕ್ತಿ, ಪುಷ್ಟಿ-ಪುಷ್ಟಿ ಭಕ್ತಿ, ಶುದ್ಧ ಪುಷ್ಟಿ ಭಕ್ತಿ-ಎನ್ನುವ ಬೇರೆ ಬೇರೆ ಹೆಸರುಗಳು ಈ ಭಕ್ತಿವೃಂದಕ್ಕೆ ಇದೆ.

ಮರ್ತ್ಯಾನಾಂ ಕ್ಷೀಣ ಪಾಪಾನಾಂ
ಕೃಷ್ಣೇ ಭಕ್ತಿಃ ಪ್ರಜಾಯತೇ |

ಎಂಬಂತೆ ಕ್ಷೀಣಪಾಪಿಗಳಾದವರಿಗೆ

ಬಹೂನಾಂ ಜನ್ಮನಾ ಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ |
ವಾಸುದೇವಸ್ಸರ್ವ ಮಿತಿ ಸ ಮಹಾತ್ಮಾ ಸುದುರ್ಲಭಃ ||

ಎನ್ನುವಂತೆ ವಾಸುದೇವ (ಶ್ರೀಕೃಷ್ಣ)ನೇ ಸರ್ವವೆಂದು ಭಾವಿಸುವ ಮಹಾತ್ಮನು

ದುರ್ಲಭನಾಗಿರುವನು. ಶ್ರೀಕೃಷ್ಣ ಭಕ್ತಿಸಂಪನ್ನನು ಭವಬಂಧ ವಿಮುಕ್ತನಾಗಿ, ಗೋಲೋಕವನ್ನು ಸೇರಿ, ಶ್ರೀಕೃಷ್ಣ ಸಾಯುಜ್ಯವನ್ನು ಹೊಂದುವನು.

ವಲ್ಲಭಾಚಾರ್ಯನು ಬ್ರಹ್ಮಸೂತ್ರಗಳ ಮೇಲೆ 'ಅಣು ಭಾಷ್ಯ' ಎನ್ನುವ ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ಇದೇ ವಲ್ಲಭಾಚಾರ್ಯನ ಮಗನು ವಿಠಲೇಶ್ವರನು. ಈ ತಂದೆ, ಮಕ್ಕಳಿಬ್ಬರೂ ಈ ಸಂಪ್ರದಾಯಕ್ಕೆ ಕ್ರಮವಾಗಿ ಆಚಾರ್ಯ, ಗೋಸ್ವಾಮಿ ಪದಗಳಿಂದ ಪೂಜನೀಯರಾಗಿದ್ದಾರೆ. ವಿಠಲನಾಥ, ವ್ರಜನಾಥ, ಪುರುಷೋತ್ತಮ-ಇತ್ಯಾದಿ ಇವರ ನಂತರ ಬಂದ ಆಚಾರ್ಯರು ತಮ್ಮ ಮೂಲ ಆಚಾರ್ಯನ ಭಾವನೆಗಳು, ಬೋಧನೆಗಳನ್ನು ವಿವರಿಸುವ ಗ್ರಂಥಗಳನ್ನು ರಚಿಸಿದರು.

ಗಿರಿಧರಾಚಾರ್ಯನು 'ಶುದ್ಧಾದ್ವೈತ ಮಾರ್ತಾಂಡ', ಬಾಲಕೃಷ್ಣ ಭಟ್ಟನು 'ಪ್ರಮೇಯ ರತ್ನಾಕರ' ಎನ್ನುವ ಗ್ರಂಥಗಳನ್ನು ರಚಿಸಿದರು. ಇವು ಶುದ್ಧಾದ್ವೈತ ಸಿದ್ಧಾಂತದ ಸ್ವರೂಪ, ನಿರೂಪಕಗಳನ್ನು ವಿವರಿಸುವ ಗ್ರಂಥಗಳಾಗಿವೆ.

ವಲ್ಲಭನ ಪುಷ್ಟಿಮಾರ್ಗ ವೈಷ್ಣವತ್ವವು ಉತ್ತರ ಭಾರತದಲ್ಲಿ ಅದರಲ್ಲೂ ಮುಖ್ಯವಾಗಿ ಗುಜರಾತ್, ಮಧ್ಯಪ್ರದೇಶಗಳಲ್ಲಿ ವಿಸ್ತಾರವಾಗಿ ವ್ಯಾಪಿಸಿದೆ.

**6. ಗೋಸ್ವಾಮಿ ತುಳಸೀದಾಸರು :** ಶ್ರೀರಾಮ ಭಕ್ತರಲ್ಲಿ ತುಳಸೀದಾಸರು ಪ್ರಖ್ಯಾತರಾದವರು. ಇವರು ರಾಮಾನಂದರ ಪ್ರಭಾವಕ್ಕೆ ಒಳಗಾದವರು. ಇವರ 'ರಾಮಚರಿತ ಮಾನಸ'ದಲ್ಲಿ ಶ್ರೀವೈಷ್ಣವ ಭಾವನೆಯಿಂದ ಇವರು ಪ್ರೇರಿತವಾದಂತೆ ಕಾಣುತ್ತದೆ. ಇವರು ಹಿಂದೀ ಸಾಹಿತ್ಯ ಹಾಗೂ ಓದುಗರ ಲೋಕಕ್ಕೆ ಶ್ರೀರಾಮಭಕ್ತಿ ಸುಧಾ ಕಳಸವನ್ನು ನೀಡಿದ ಮಹಾಕವಿಯೆಂದು ಇವರು ಖ್ಯಾತನಾಮರಾಗಿದ್ದಾರೆ. ಇವರು ಸರಯೂ ಪಾರೀಣ ಶಾಖೆಗೆ ಸೇರಿದ ಬ್ರಾಹ್ಮಣ ವಂಶದ ಆತ್ಮಾರಾಮ ಶುಕ್ಲ ದೂಬೆ, ಹುಲಸಿ ದಂಪತಿಗಳ ಪುತ್ರರಾಗಿ ಕ್ರಿ. ಶ. 1532 ರಲ್ಲಿ ಜನಿಸಿದರು. ಇವರ ಪತ್ನಿ ರತ್ನಾವಳಿ, ಮಗ ತಾರಕನು, ಇವರ ಗ್ರಂಥವಾದ 'ರಾಮಚರಿತ ಮಾನಸ'ವು ರಾಮಾಯಣದ ರಸಪಾಕದ ಸಂಗ್ರಹವಿನಿಸೆ. ರಾಮಚಂದ್ರನ ಶೀಲ, ಸೌಂದರ್ಯ, ಶಕ್ತಿಗಳು ಇವರ ಮನಸ್ಸು ಹೃದಯಗಳನ್ನು ಸೂರೆಗೊಂಡವು. ಇವರಲ್ಲಿ ರಾಮಭಕ್ತಿಯ ನಿರ್ಮಲ ರೂಪ ಮೂಡಿದೆ. ಭಗವಂತನ ದಿವ್ಯಮನೋಹರ ರೂಪದ ಧ್ಯಾನದಲ್ಲಿ ಇವರು ಸದಾ ಮುಳುಗಿರುತ್ತಿದ್ದರು. ಇವರು ತಮ್ಮ ವೈಷ್ಣವ ಸಿದ್ಧಾಂತವನ್ನು 'ಸೇವಕ-ಸೇವ್ಯ'

ಭಾವ್ಯವೆಂದು ವರ್ಣಿಸಿದ್ದಾರೆ.

**7.** ಮೂಲಕ್ ದಾಸ್, ರಾಯ್ ದಾಸ್ : ರಾಮಾನಂದ ವೈಷ್ಣವ ಪ್ರಚಾರಕರಲ್ಲಿ ಎಣಿಕೆಗೆ ತೆಗೆದುಕೊಳ್ಳುವ ಕೆಲವೇ ಕೆಲವರಲ್ಲಿ ಮೂಲಕ್‌ದಾಸ್ ಒಬ್ಬನು. ಈತನು 16ನೇ ಶತಮಾನಕ್ಕೆ ಸೇರಿದವನು. ನಾಮಜಪ ಭಕ್ತಿಗೆ ಪ್ರಾಧಾನ್ಯತೆ ನೀಡಿದ ಈತನು ಶ್ರೀರಾಮ ಮಂತ್ರ ಜಪವೇ ಸರ್ವಾಭೀಷ್ಟಪ್ರದ ವಾದುದು ಎಂದು ಪ್ರಚಾರ ಮಾಡಿದನೀತ.

ರಾಯ್‌ದಾಸನು ಇದೇ ರೀತಿಯ ಮತ್ತೋರ್ವ ಭಕ್ತನು. ಈತನೂ ಕೂಡ ರಾಮಾನಂದರ ಶಿಷ್ಯಕೋಟಿಗೆ ಸೇರಿದವನೆ. ಈ ಭಕ್ತಾಗ್ರೇಸರನು ಸ್ವಕುಲಾಚಾರ ಧರ್ಮಾಧರ್ಮ ಇಲ್ಲದವನಾಗಿದ್ದು, ವಿದ್ಯೆಯ ಗಂಧವೂ ಇಲ್ಲದವನಾಗಿ, ದಾರಿದ್ರ್ಯ ದಲ್ಲಿ ತೊಳಲಾಡುತ್ತಾ, ಸಮಾಜದ ಕೆಳಸ್ತರದ ಜನತೆಯ ಉದ್ಧಾರಕ್ಕಾಗಿ ವಿಶೇಷವಾಗಿ ಶ್ರದ್ಧೆ ವಹಿಸಿ, ಅವರಿಗೆ ಬಾಹ್ಯಾಭ್ಯಂತರ ಶೌಚ ಧರ್ಮಾದಿಗಳನ್ನು ತಿಳಿಸಿ, ರಾಮಭಕ್ತಿಯ ಬೋಧನೆ ಮಾಡಿ, ಪ್ರಚಾರ ಮಾಡಿ, ಅವರನ್ನು ಉದ್ಧರಿಸಿದನು.

**8.** ಶ್ರೀಕೃಷ್ಣ ಚೈತನ್ಯ : ಕ್ರಿ.ಶ. 1485ರಲ್ಲಿ ವಂಗದೇಶದಲ್ಲಿ ಜನಿಸಿದ ಕೃಷ್ಣಚೈತನ್ಯ ಸ್ವಾಮಿಯು ಶ್ರೀಕೃಷ್ಣ ಭಕ್ತಿ ಸಂಪ್ರದಾಯವನ್ನು ಪ್ರಚಾರ ಮಾಡಿದನು. ಇದರ ಸಿದ್ಧಾಂತವನ್ನು 'ಅಚಿಂತ್ಯ ಭೇದಾಭೇದ'ವಾದವೆಂದು ಹೆಸರು ಪಡೆದಿದೆ.

ಜೀವ, ಪ್ರಕೃತಿ, ಪರಮಾತ್ಮ–ಇವರ ನಡುವೆ ಇರುವ ಭೇದಾಭೇದ ಸಂಬಂಧವು, ದೀಪ–ಆದರ ಪ್ರಭೆಗಳ ತರಹ ಬೇರೆ ಬೇರೆ ಎಂಬುದಾಗಿ ಕಂಡು ಬಂದರೂ ಕೂಡ ಅವು ಬೇರೆಯಾಗಲಾರವು. ಇವುಗಳ ಸಂಬಂಧವು ಸಾಧಾರಣ ಬುದ್ಧಿಗೆ ಎಟುಕುವಂತಹುದಲ್ಲ. ಆದುದರಿಂದ ಅಚಿಂತ್ಯವಾದುದು. ಇದರ ಫಲಿತ ವಾಗಿ ಈ ಸಿದ್ಧಾಂತವು ಅಚಿಂತ್ಯ–ಭೇದಾಭೇದ ಸಿದ್ಧಾಂತವೆನ್ನುವ ಹೆಸರನ್ನು ಪಡೆಯಿತು.

ಪರಮಾತ್ಮನು ಸರ್ವಶಕ್ತನು; ಸತ್ಯಸಂಕಲ್ಪನು. ತಾನು ಜಗದ್ರೂಪ ವನ್ನು ಹೊಂದಿದ್ದರೂ, ವಿಕಾರವನ್ನು ಹೊಂದುವುದಿಲ್ಲ. ಇದುವೇ ಆತನ ಅಚಿಂತ್ಯ ಶಕ್ತಿ. ಆತನಿಗೆ ಮಾಯೆಯು ಅಂಟದು. ಮಾಯೆಯಿಂದ ಜೀವನಿಗೆ ಜ್ಞಾನ ಸಂಕೋಚವು ಉಂಟಾಗುತ್ತದೆ.

ಪರಮ ಕಾರುಣಿಕನಾದ ಸರ್ವೇಶ್ವರನು ಜೀವರನ್ನು ಉದ್ಧರಿಸಲು ವೇದಾದಿಗಳನ್ನು ಅನುಗ್ರಹಿಸಿದನು. ವ್ಯಾಸ ರೂಪದಲ್ಲಿ ಅವತರಿಸಿ ತನ್ನ ಸಾರೂಪ್ಯವನ್ನು ಪುರಾಣಾದಿ ರೂಪಗಳಲ್ಲಿ, ಬ್ರಹ್ಮಸೂತ್ರಗಳ ರೂಪದಲ್ಲಿ ಪ್ರಕಾಶಗೊಳಿಸಿದನು. ಗೀತಾಚಾರ್ಯನಾಗಿ ಧರ್ಮವನ್ನು ಉಪದೇಶಿಸಿದನು. ಶ್ರೀಕೃಷ್ಣನೇ ಪರಮಾತ್ಮನೆಂಬ ಸಂಪೂರ್ಣ ವಿಶ್ವಾಸದೊಂದಿಗೆ, ಅನನ್ಯ ಭಕ್ತಿಯೊಂದಿಗೆ ಆ ಸ್ವಾಮಿಯನ್ನು ಭಜಿಸುವುದು ಜೀವನ ಕರ್ತವ್ಯ.

ಬಹಳಷ್ಟರವರೆಗೆ ಇದೆಲ್ಲ ಶ್ರೀವೈಷ್ಣವ, ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿರೂಪವೆ; ರಾಮಾನುಜರ ಪ್ರಭಾವವೆ. ಭಾಗವತ ಸಂಪ್ರದಾಯದ ಹೆಜ್ಜೆಯ ಗುರುತುಗಳಲ್ಲಿ ಮುಂದೆ ಸಾಗಿದ ಭಕ್ತಿ ಪಂಥವೆ; ಅದರ ಶಾಖೆಯೆ !

ಶ್ರೀಕೃಷ್ಣ ಚೈತನ್ಯನ ಮೊದಲ ಹೆಸರು ವಿಶ್ವಂಭರ ಮಿಶ್ರನೆಂದು; ಈತನ ತಂದೆಯ ಹೆಸರು ಜಗನ್ನಾಥ ಮಿಶ್ರ; ತಾಯಿ ಶಚೀದೇವಿ; ಅಣ್ಣ ವಿಶ್ವರೂಪ. ಈ ವಂಗೀಯ ಬ್ರಾಹ್ಮಣ ಕುಟುಂಬದವರು ಮೊದಲು ಪೂರ್ವ ಬಂಗಾಳಾ (ಬಾಂಗ್ಲಾ ದೇಶ)ದ 'ಸಿಲ್ಹೆಟ್' ನಗರದಲ್ಲಿ ವಾಸ್ತವ್ಯ ಹೂಡಿದ್ದರು. ನಂತರ ಇವರು ನವದ್ವೀಪಕ್ಕೆ ಬಂದು ಅಲ್ಲಿ ವಾಸ್ತವ್ಯ ಸ್ಥಿರಪಟ್ಟರು. ಶ್ರೀಕೃಷ್ಣನೇ ಈ ವಿಶ್ವಂಭರ ಮಿಶ್ರನಾಗಿ ಅವತರಿಸಿದನೆಂದು ತತ್ಸಂಪ್ರದಾಯ, ನಂಬಿಕೆ. ಆದುದರಿಂದಲೇ ಈತನನ್ನು ಶ್ರೀಕೃಷ್ಣ ಚೈತನ್ಯಸ್ವಾಮಿ ಎಂದು ಕರೆಯುತ್ತಿದ್ದರು. ಗೌರಾಂಗ ಸ್ವಾಮಿ, ಗೌರಾಂಗ ಚಂದ್ರ ಮುಂತಾದುವು ಈ ಪರ್ಯಾಯ ಹೆಸರುಗಳು, ರೂಢಿಯಲ್ಲಿ ಬಂದಂತಹವು. ಈತನ ಅಣ್ಣನಾದ ವಿಶ್ವರೂಪನು ಬಲರಾಮನ ಅವತಾರ ಎನ್ನುವುದು ಈ ಸಿದ್ಧಾಂತದವರ ನಂಬಿಕೆ.

ಚೈತನ್ಯನು ತನ್ನ ಅಣ್ಣನೊಂದಿಗೆ ಕೂಡಿಕೊಂಡು ಶ್ರೀಕೃಷ್ಣ ಭಕ್ತಿ ಸಂಪ್ರದಾಯವನ್ನು ವಿಪುಲವಾಗಿ ಪ್ರಚಾರ ಮಾಡಿದರು. ಈತನು ತನ್ನನ್ನಾಶ್ರಯಿಸಿದವರಿಗೆ ಭಕ್ತಿಯನ್ನೇ ಮುಖ್ಯವೆಂದು ಉಪದೇಶಿಸಿದನು. ಎಲ್ಲ ಕುಲದವರನ್ನೂ ಈತ ತನ್ನ ಶಿಷ್ಯರನ್ನಾಗಿ ಸ್ವೀಕರಿಸಿ, ಅವರನ್ನು ಉದ್ಧಾರ ಮಾಡಿದನು.

ಈ ಚೈತನ್ಯ ಸಂಪ್ರದಾಯವು ವಂಗದೇಶ, ಅಸ್ಸಾಂ, ಒರಿಸ್ಸಾ ದೇಶಗಳಲ್ಲಿ ಹರಡಿತು. ಜಯದೇವನ ಗೀತಗೋವಿಂದ, ಚೈತನ್ಯನ ಗೀತಾವಳಿ, ಈತನ ಅನುಯಾಯಿಗಳಾದ ರೂಪ ಗೋಸ್ವಾಮಿ, ಸನಾತನ ಗೋಸ್ವಾಮಿ ಇತ್ಯಾದಿಯವರ ಕೃತಿಗಳು–ಈ ಮಧುರ ಭಕ್ತಿಮಾರ್ಗದ ವ್ಯಾಪ್ತಿಗೆ ಒಳಪಡುತ್ತದೆ.

**9. ಮರಾಠಾ ವೈಷ್ಣವ ಸಂತರು :** ಮಹಾರಾಷ್ಟ್ರದಲ್ಲಿ ವ್ಯಾಪ್ತಿ ಹೊಂದಿದ ವೈಷ್ಣವತ್ವಕ್ಕೆ ಮುಖ್ಯ ಕೇಂದ್ರ ಪಾಂಡುರಂಗ ಕ್ಷೇತ್ರವನ್ನು ಹೊಂದಿರುವ ಪಂಡರಾಪುರ. ಹಿಂದೊಮ್ಮೆ ಕರ್ನಾಟಕಕ್ಕೆ ಸೇರಿದ್ದ ಈ ಕ್ಷೇತ್ರದಲ್ಲಿನ ಪಾಂಡುರಂಗ ವಿಠಲ (ವಿಷ್ಣು)ನು ಮಹಾರಾಷ್ಟ್ರದ ಎಲ್ಲ ಧಾರ್ಮಿಕ ಚಟುವಟಿಕೆಗಳ ಕೇಂದ್ರ ಬಿಂದುವಾಯಿತು. ಭೀಮಾನದಿಯ ದಡದ ಮೇಲಿದೆ.

ಶ್ರೀಕೃಷ್ಣ ಭಗವಾನನ ಅರ್ಚಾಮೂರ್ತಿಯೇ ಇಲ್ಲಿನ ಪ್ರಸಿದ್ಧ ವಿಠಲನು. ಈತನ ಭಕ್ತನಾದ ಪುಂಡರೀ (ಲೀ)ಕನನ್ನು ಅನುಗ್ರಹಿಸಿ, ಅವನು ನೀಡಿದ ಇಟ್ಟಿಗೆಯ ಮೇಲೆ ಈ ಕೃಷ್ಣ (ವಿಠಲ) ಪರಮಾತ್ಮನು ನಿಂತಿರುವನು. ಕೃಷ್ಣನ ಪತ್ನಿ ರುಕ್ಮಿಣಿಯೇ ರುಕ್ಮಾಬಾಯಿ.

ರುಕ್ಮಾಬಾಯಿಯೊಂದಿಗೆ ಕೂಡಿದ ವಿಠೋಬನನ್ನು ಭಕ್ತಿಯಿಂದ ಸೇವಿಸಿ, ಆತನ ನಾಮ ಜಪಮಾಡಿ, ಆತನಲ್ಲಿ ಶರಣಾಗತಿ ಪಡೆಯುವುದೇ ಈ ವಿಠಲ, ಸಂಪ್ರದಾಯದವರ ಧ್ಯೇಯ. ಶ್ರೀಕೃಷ್ಣನ ಸಂಪ್ರದಾಯದ ಎಲ್ಲ ಧಾರ್ಮಿಕಾಚರಣೆಗಳನ್ನೂ ಅನುಸರಿಸುವ ಈ ಭಕ್ತಿಯು ಸಾಮಾನ್ಯರಿಗಾಗಿ ರೂಪುಗೊಂಡ ಭಕ್ತಿ ಪಂಥವಾಗಿದೆ. ಇದರ ಭಕ್ತರಿಗೆ 'ವಾರಕೇರಿ' ಎಂದು ಕರೆಯುತ್ತಾರೆ.

ಈ ಸಂಪ್ರದಾಯದ ಮೂಲಾಚಾರ್ಯನು ರಾಮಾನಂದಸ್ವಾಮಿಯ ಶಿಷ್ಯವರ್ಗಕ್ಕೆ ಸೇರಿದ ಪುಂಡರೀಕ ವಿಠಲನು. ಪಾಪ ಜೀವಿತದಲ್ಲಿದ್ದ ಈತನು ಅದರ ಮೇಲೆ ಬೇಸರ ಹುಟ್ಟಿ, ಗುರುವನ್ನು ಆಶ್ರಯಿಸಿ, ವಿಠೋಬಾ ದೇವರ ಭಕ್ತನಾದನು.

ಭಗವದನುಗ್ರಹದಿಂದ ನಾಮದೇವನಿಗೆ ಬುದ್ಧಿಯೋಗವು ಲಭಿಸಿತು. ಸಾಮಾನ್ಯ ರೈತ ಕುಟುಂಬಕ್ಕೆ ಸೇರಿದ, ದರ್ಜಿ ಉದ್ಯೋಗಸ್ಥನ ಮಗನಾದ ಈತನು ಬಹಳ ತುಂಟನಾಗಿದ್ದು, ನಂತರ ಯಾವುದೋ ಸಂಘಟನೆಯೊಂದರಿಂದ ಜ್ಞಾನೋದಯವನ್ನು ಪಡೆದು ಯೋಗಿಯಾದನು. ಬಹಳಷ್ಟು ಕಾಲ ತೀರ್ಥಯಾತ್ರೆ ಮಾಡಿ, ಪಂಡರಪುರಕ್ಕೆ ಬಂದು, ಅಲ್ಲಿನ ವಿಠಲನನ್ನು ದರ್ಶಿಸಿ, ತನ್ನ ಇಷ್ಟದೈವವಾದ ಶ್ರೀರಾಮಚಂದ್ರನೇ ಈ ವಿಠಲನೆಂದು ಎಲ್ಲರಿಗೂ ಬೋಧನೆ ಮಾಡಿದನು. ಅಖಂಡ ಭಗವನ್ನಾಮ ಜಪ ಮಾಡಿ, ಜ್ಞಾನಸುಧಾ ತರಂಗಗಳಾದ ಅಸಂಖ್ಯಾತ ಅಭಂಗ (ಪಾಂಡುರಂಗ ಸ್ತೋತ್ರ)ಗಳನ್ನು ಜನರ ಆಡುಭಾಷೆಯಾದ ಮರಾಠಿಯಲ್ಲಿ ರಚಿಸಿದನು. ಇವು ಈತನ ಬೋಧನೆಯ ಸಾರಾಂಶಗಳಾಗಿದ್ದುವು.

ಮಹಾರಾಷ್ಟ್ರದಲ್ಲಿ ಶ್ರೀರಾಮ ಭಕ್ತಿಮಾರ್ಗವನ್ನು ಬೋಧಿಸಿದ ಯೋಗಿವರ್ಯನು ಸಮರ್ಥ ರಾಮದಾಸು. ಈತನು ಕ್ರಿ.ಶ. 1530ರಲ್ಲಿ ಶ್ರೀರಾಮ ನವಮಿಯಂದು ಜನಿಸಿದನು. ಬಾಲ್ಯದಲ್ಲಿಯೇ ಈತನಿಗೆ ವೈರಾಗ್ಯ ಹುಟ್ಟಿ, ಮದುವೆ ಮಣೆಯಿಂದ ಎದ್ದು ಹೋಗಿಬಿಟ್ಟನು. ಗೋದಾವರೀ ತೀರದ ನಾಸಿಕ ಕ್ಷೇತ್ರದಲ್ಲಿ ಹನ್ನೆರಡು ವರ್ಷ ರಾಮಮಂತ್ರವನ್ನು ಜಪಿಸಲು, ಶ್ರೀರಾಮನು ಪ್ರತ್ಯಕ್ಷವಾಗಿ, ಸ್ವಯಂ ಆಚಾರ್ಯನಾಗಿ, ಆತನಿಗೆ ಸನ್ಯಾಸಾಶ್ರಮವನ್ನು ಅನುಗ್ರಹಿಸಿದನೆಂದು ಈತನು ತನ್ನ 'ದಾಸಬೋಧ' ಗ್ರಂಥದಲ್ಲಿ ವಿವರಿಸಿದ್ದಾನೆ.

ಈತನ ಮಕ್ಕಳಾದ ಜ್ಞಾನದೇವ, ಏಕನಾಥ ಮುಂತಾದವರು ಮಹಾರಾಷ್ಟ್ರದಲ್ಲಿ ಆಧ್ಯಾತ್ಮಿಕಭಾವ ಪ್ರಚಾರವನ್ನು ಕೈಗೊಂಡರು.

ನಂತರದಲ್ಲಿ ವಿಠಲ ಭಕ್ತಿಮಾರ್ಗವನ್ನು ಪ್ರವರ್ತನಗೊಳಿಸಿದ ಮಹನೀಯರಲ್ಲಿ ಅಧಿಕ ಸಂಖ್ಯೆಯವರು ವೇದಾದಿಗಳನ್ನಾಗಲಿ, ಶಾಸ್ತ್ರ ಪಾಂಡಿತ್ಯವನ್ನಾಗಲಿ ಅಭ್ಯಾಸ ಮಾಡದ ಸಾಧಾರಣ ವ್ಯಕ್ತಿಗಳು. ಕುಲವನ್ನು ಅನುಸರಿಸಿ, ಇವರು ಕೆಳಸ್ತರಕ್ಕೆ ಸೇರಿದವರಾದರೂ, ಇವರ ಜನ್ಮಾಂತರ ಸಂಸ್ಕಾರ ವಿಶೇಷದಿಂದಾಗಿ ಸಂಸಾರದ ಮೇಲೆ ವೈರಾಗ್ಯ ತಾಳಿ, ವಿಠೋಭಾರ ಮೇಲೆ ನಿಶ್ಚಲವಾದ ಭಕ್ತಿಯನ್ನು ಹೊಂದಿ, ತಮ್ಮ ಜೀವನಗಳನ್ನು ಭಗವದರ್ಪಿತ ಮಾಡಿಕೊಂಡ ಧನ್ಯರು. ತಮ್ಮ ತಮ್ಮ ಅನುಭವ ಜ್ಞಾನವನ್ನು ಅನುಸರಿಸಿ, ತಮ್ಮ ಮಾತೃಭಾಷೆಯಾದ ಮರಾಠಿಯಲ್ಲಿ ಗೇಯಗಳನ್ನು ನೇಯುತ್ತಾ, ಭಕ್ತಿ, ಪ್ರಪತ್ತಿ, ಧರ್ಮಗಳನ್ನು ತಮ್ಮ ಜೊತೆಯವರೊಂದಿಗೆ ಹಂಚಿಕೊಂಡರು.

ವಿನೋಬಾ ಖೇಚಾರು, ಗೋರಾ ಕುಂಬಾರ, ಸಂಪತ್ತು, ನರಹರಿ ಘೋಶ್ಕಾ, ಜನಾಬಾಯಿ, ಸೇನ, ಕಾನ್ಹೋಪಾತ್ರಾ, ತುಕಾರಾಮ್ ಮುಂತಾದ ಧನ್ಯಾತ್ಮರು ವಿಠಲ ಭಕ್ತಿ ರಸಾಮೃತವನ್ನು ಸಾಮಾನ್ಯ ಜನತೆಗೆ ಪಾನ ಮಾಡಿಸಿದರು. ಅಭಂಗಗಳೆನ್ನುವ ಮರಾಠೀ ಗೇಯಗಳಲ್ಲಿ ಅಮೂಲ್ಯವಾದ, ಉಪಯುಕ್ತವಾದ ರತ್ನಗಳನ್ನು ಹೊಂದಿಸಿದ ಸ್ತೋತ್ರಮಾಲೆಗಳನ್ನು ವಾಡಿ ವಾಡಿಗಳಲ್ಲಿ ತಿರುಗಾಡಿ, ಆ ಹಾಡುಗಳನ್ನು ರಾಗ ತಾಳಯುಕ್ತವಾಗಿ ಮನೋಹರವಾಗಿ ಹಾಡಿ, ಸಾಮಾನ್ಯ ಜನರಲ್ಲಿ ಸದಾಚಾರವನ್ನು, ಭಕ್ತಿಯನ್ನು ಪ್ರಚಾರ ಮಾಡಿದರು.

ಈ ವಿನೋಬಾ–ನಾಮದೇವರುಗಳು ಕ್ರಿ.ಶ. 13ನೇ ಶತಮಾನದ

ಮಧ್ಯಭಾಗಕ್ಕೆ ಸೇರಿದವರು. ವಿನೋಬಾಗೆ ಜ್ಞಾನಭಿಕ್ಷೆ ಇಟ್ಟವನು ಜ್ಞಾನ ದೇವನು. ನಾಮದೇವನಿಗೆ ಗುರುವಾಗುವ ಭಾಗ್ಯವನ್ನು ಹೊಂದಿದ್ದವನು ವಿನೋಬಾ. ಈತನ ಅನುಗ್ರಹದಿಂದಲೇ ವೇದಾಂತ ಜಗತ್ತಿಗೆ ಮೇಲೆ ತಿಳಿಸಿದ ನಾಮದೇವನು ಲಭಿಸಿದುದು.

ಒಮ್ಮೆ ನಾಮದೇವನು ವಿನೋಬಾನನ್ನು ನೋಡಲು ಹೋದನಂತೆ. ಆಗ ಆತನು ಒಂದು ದೇವತಾ ವಿಗ್ರಹದ ಮೇಲೆ ತನ್ನ ಕಾಲನ್ನು ಇಟ್ಟದ್ದನಂತೆ. ಇದನ್ನು ಕಂಡು ನಾಮದೇವನು, 'ಇದೇನು ಸ್ವಾಮಿ, ಇದು ಅಪರಾಧವಲ್ಲವೆ ?' ಎಂದನಂತೆ. 'ಹೋಗಲಿಬಿಡು ! ಬೇರೆಡೆ ಇದನ್ನು ಇಡುತ್ತೇನೆ' ಎಂದ ವಿನೋಬಾ ತನ್ನ ಕಾಲನ್ನು ಮತ್ತೊಂದೆಡೆ ಇಡಹೋಗಲು, ಅಲ್ಲಿ ಒಂದು ದೇವತಾ ವಿಗ್ರಹ ಕಂಡುಬಂತಂತೆ ! ಅದನ್ನು ನೋಡಿ ವಿನೋಬಾ, 'ನನ್ನನ್ನೇನು ಮಾಡೆನ್ನುವೆ ! ಎಲ್ಲೆಲ್ಲೂ ಆ ಸ್ವಾಮಿಯೇ ನೆಲೆಸಿರುವನಲ್ಲ !' ಎಂದನಂತೆ. ನಗುತ್ತಾ ಈ ದೃಶ್ಯವು ನಾಮದೇವನ ಹೃದಯದಲ್ಲಿ ಭದ್ರವಾದ ನೆಲೆಯಲ್ಲಿ ನೆಲೆಸಿತು.

ಕ್ರಿ.ಶ. 1598ರಲ್ಲಿ ಜನಿಸಿದ ತುಕಾರಾಮನು ವೃತ್ತಿಯಲ್ಲಿ ವ್ಯಾಪಾರಿ. ಒಮ್ಮೆ ಕ್ಷಾಮ ಉಂಟಾಗಿ, ವ್ಯಾಪಾರದಲ್ಲಿ ಭಾರಿ ನಷ್ಟವಾಯಿತು. ಅದರಲ್ಲೆ ಹೆಂಡತಿ ಮಗ ಮರಣಿಸಿದರು. ಇದರಿಂದ ವೈರಾಗ್ಯಗೊಂಡ ತುಕಾರಾಮನಿಗೆ ಕೇಶವ ಚೈತನ್ಯ ಎಂಬ ನಾಮಾಂತರವನ್ನು ಹೊಂದಿದ ಬಾಬಾಜಿ ಎಂಬಾತನ ಅನುಗ್ರಹದಿಂದ ಆಧ್ಯಾತ್ಮಿಕ ಕಡೆ ತಿರುಗಿದನು. ಜ್ಞಾನದೇವ ! ಜ್ಞಾನೇಶ್ವರಿ, ನಾಮದೇವನ ಕೀರ್ತನಾವಳಿ, ಕಬೀರದಾಸನ ದೋಹೆ ಎನ್ನುವ ಕೀರ್ತನೆಗಳು, ಇವುಗಳೊಂದಿಗೆ ಇನ್ನೂ ಅನೇಕ ಗ್ರಂಥಗಳು, ಕೀರ್ತನೆಗಳು ಅವನ ಹೃದಯ ದಲ್ಲಿ ಮನೆ ಮಾಡಿದುವು. ವರ್ಷಾನುಗಟ್ಟಲೆ ಮಾಡಿದ ನಾಮಜಪದಿಂದ ವಿಶೇಷ ವಾಗಿ ಭಗವದನುಗ್ರಹಕ್ಕೆ ಪಾತ್ರನಾದನು. ಜಗತ್ತೆಲ್ಲ ಆತನಿಗೆ ವಿಠೋಬಾ ರೂಪದಲ್ಲಿ ಕಾಣಿಸಿಕೊಂಡಿತು.

ಪರಿಣಾಮವಾಗಿ ಈ ಯೋಗಿವರ್ಯನ ಹೃದಯದಿಂದ ಭಕ್ತಿ ಪ್ರವಾಹವು ಕವಿತಾ ರೂಪದಲ್ಲಿ ಧುಮುಕತೊಡಗಿತು. ಅಸಂಖ್ಯಾತ ಅಭಂಗಗಳು ಈತನ ವಾಣಿಯಿಂದ ಹೊರಬಂದುವು.

ಸಂತಾಜಿ, ಗಂಗಾರಾಮ್, ರಾಮೇಶ್ವರ ಭಟ್ಟ, ಮಹಾದಾಜೀ ಪಂತ್, ನೀಳೋಬಾ, ಬಹಿಣಾಬಾಯಿ–ಇತ್ಯಾದಿ ಎಷ್ಟೋ ಭಕ್ತರು ಈ ಮಹಾತ್ಮನ

ಶಿಷ್ಯರಾಗಿದ್ದರು.

ಛತ್ರಪತಿ ಶಿವಾಜಿಯು ತುಕಾರಾಮನಿಗೆ ಅಮೂಲ್ಯವಾದ ಮಣಿಹಾರಗಳನ್ನು ಕಳುಹಿಸಿದನು. ಆದರೆ ಅವುಗಳನ್ನು ತುಕಾರಾಮನು ಹಿಂತಿರುಗಿಸಿ ಸಮರ್ಥ ರಾಮದಾಸರಂತಹ ಯೋಗಿಗಳನ್ನು ಆಶ್ರಯಿಸುವಂತೆ ಬೋಧಿಸಿದನು.

ಈ ರಾಮದಾಸರ ಮೇಲೆ ಛತ್ರಪತಿ ಶಿವಾಜಿಗೆ ಅಪಾರವಾದ ಭಕ್ತಿ. ತನ್ನ ಸಾಮ್ರಾಜ್ಯವನ್ನೆ ಆತನು ಗುರುದಕ್ಷಿಣೆಯಾಗಿ ಅರ್ಪಿಸಿದನು. ಆದರೆ ರಾಮದಾಸರು ಶಿವಾಜಿಯನ್ನು ಆಶೀರ್ವದಿಸಿ, ರಾಮರಾಜ್ಯದಂತೆ ಪ್ರಜೆಗಳನ್ನು ಪಾಲಿಸಬೇಕೆಂದು ಆಜ್ಞಾಪಿಸಿ, ಸಾಮ್ರಾಜ್ಯವನ್ನು ಹಿಂತಿರುಗಿಸಿದನು. ಶೀಲಸಂಪನ್ನನಾದ ಶಿವಾಜಿಯು ಗುರುವಾಜ್ಞೆಯನ್ನು ನಿರಾಕರಿಸಲಾಗದೆ, ತನ್ನ ಗುರುವಿನ ಚಿಹ್ನೆಯಾದ ಕಾಷಾಯ ಪತಾಕೆಯನ್ನು ತನ್ನ ಸಾಮ್ರಾಜ್ಯದ ಬಾವುಟವನ್ನಾಗಿ ಪ್ರಕಟಿಸಿ, ಗುರುದೇವರ ಅಣತಿಯಂತೆ, ಧರ್ಮ ಪರಿಪಾಲನೆಯ ದೀಕ್ಷೆಯನ್ನು ವಹಿಸಿಕೊಂಡನು.

ಕುಂಬಾರನಾದ ಗೋರನು ತಾನು ನಿರ್ಮಿಸಿದ ಒಂದೊಂದು ಮಡಿಕೆಯಲ್ಲೂ ವಿಠಲನನ್ನೆ ಕಾಣುತ್ತಿದ್ದನಂತೆ. ಒಮ್ಮೆ ಎಷ್ಟೋ ಭಕ್ತರು ಬಂದಾಗ, ಅವರೊಂದಿಗಿದ್ದ ನಾಮದೇವನನ್ನು ನೋಡಿ 'ಈ ಮಡಿಕೆ ಮಾತ್ರ ಗಟ್ಟಿಯಾದುದು; ಮಿಕ್ಕವೆಲ್ಲ ಒಡಕಲೇ !' ಎಂದನಂತೆ.

ಅರಂಗಾವ ನಿವಾಸಿಯಾದ ಸಂಪತ್ ಯೋಗಿ ಓರ್ವ ತೋಟಮಾಲಿ. ವಿಠೋಬಾ ಭಕ್ತಿಯನ್ನು ಬೆಳೆಸಿಕೊಂಡ ಓರ್ವ ಸುಕೃತಿ. ತನ್ನ ತೋಟದಲ್ಲಿನ ಪ್ರತಿ ಹೂವಿನಲ್ಲೂ, ಪ್ರತಿ ಎಲೆಯಲ್ಲೂ ವಿಠೋಬಾನನ್ನೆ ಕಾಣುತ್ತಿದ್ದನಂತೆ.

ಇದೇ ರೀತಿಯಲ್ಲಿ ಸ್ವರ್ಣಕಾರನಾದ ನರಹರಿ, ಚರ್ಮಕಾರನಾದ ಛೋಕಾ ಮೇಳ–ಮೊದಲಾದ ಭಕ್ತಶ್ರೇಷ್ಠರು ವಿಠಲನ ಭಕ್ತಿಮಾರ್ಗದ ಜ್ಯೋತಿಗಳಾಗಿ ಬೆಳಗಿದರು.

ಈ ರೀತಿಯಲ್ಲಿ ರಾಮಾನುಜರು ಕಂಡ ಸಾಮಾನ್ಯರಲ್ಲೂ ವಿಷ್ಣುಭಕ್ತಿಯ ಕನಸು ಈ ರೀತಿಯಲ್ಲಿ ಮರಾಠಾ ಸಂತರಲ್ಲಿ ಎಲ್ಲ ಜಾತಿಯವರಲ್ಲೂ ಕಂಡುಬಂದು ನನಸಾಯಿತು.

ಮಹಾರಾಷ್ಟ್ರದ ಶ್ರೀವೈಷ್ಣವ ಸಂಪ್ರದಾಯವು ಪ್ರಜೆಗಳ ಜೀವನದಲ್ಲಿ ಒಂದಾಗಿ, ಅದನ್ನು ತಿದ್ದಿ, ಸರಿಪಡಿಸಿ, ಚಿರಕಾಲದವರೆಗೆ ಅವರ ಹೃದಯಗಳನ್ನು ಬೆಳಗಿತು.

**10.** ಇತರೇ ಪಂಥಗಳ ಮೇಲೆ ವಿಶಿಷ್ಟಾದ್ವೈತ ತತ್ವದ ಪ್ರಭಾವ :

ರಾಮಾನುಜರು ಕರ್ನಾಟಕವನ್ನು ಪ್ರವೇಶಿಸಿದ ಐವತ್ತು ವರ್ಷಗಳ ನಂತರ ಉತ್ತರಾರ್ಧ ಕರ್ನಾಟಕದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಕಾಣಿಸಿಕೊಂಡ ವೀರಶೈವ ಧರ್ಮವು ಪರೋಕ್ಷವಾಗಿ ವಿಶಿಷ್ಟಾದ್ವೈತದಿಂದ ಸಾಕಷ್ಟು ಪ್ರಭಾವಗೊಂಡಿತು. ರಾಮಾನುಜರ ದಯೆ, ಕಾರುಣ್ಯ, ಹೃದಯವಂತಿಕೆ, ಜಾತ್ಯಾತೀತತೆ, ಮೇಲ್ವರ್ಗ-ಕೆಳವರ್ಗಗಳ ಸಮಾನತೆ, ಸರ್ವಜನ ಹಿತಾಯ ಇತ್ಯಾದಿ ಜನಪರ ಭಾವನೆಗಳು ಬಸವಣ್ಣನವರ ಜೀವನ, ವಚನಗಳು ಹಾಗೂ ಇತರೇ ಶಿವಶರಣರ ವಚನಗಳಲ್ಲಿಯೂ ಕಂಡುಬಂದಿದೆ. ಆದರೆ ಇವರೀರ್ವರ ಸಂವಹನ ಕಾರ್ಯಗಳಿಗೆ ಸೂಕ್ತ ಶಾಸನಾಧಾರಗಳು ಇದುವರೆವಿಗೂ ದೊರೆತಿಲ್ಲ.

ಸಿಖ್ ಮತದಲ್ಲಿ ಗುರುಕೃಪೆಗೆ ನೀಡಿರುವ ಮಹತ್ವ ಶ್ರೀವೈಷ್ಣವ ಮತದ ಆಚಾರ್ಯಾಭಿಮಾನ, ಆಚಾರ್ಯ ಪ್ರಪತ್ತಿಗಳನ್ನು ಜ್ಞಾಪಕಕ್ಕೆ ತರುತ್ತದೆ. ಶ್ರೀವೈಷ್ಣವ ಮತದಲ್ಲಿನ ದೇವತಾಂತರ ಪರಿತ್ಯಾಗ, ಭಗವಂತನಲ್ಲಿ ಅನನ್ಯ ಭಕ್ತಿಗಳು ಸಿಖ್ ಧರ್ಮದಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

ಭಾರತದಲ್ಲಿ ಹತ್ತೊಂಬತ್ತನೇ ಶತಮಾನದಲ್ಲಿ ಬ್ರಹ್ಮಸಮಾಜ ಪಂಥವು ಕಾಣಿಸಿಕೊಂಡಿತು. ಇದರಲ್ಲಿ ವಿಶಿಷ್ಟಾದ್ವೈತದ ಕಲ್ಯಾಣ ಪರಿಪೂರ್ಣ ಭಗವಂತನ ಕಲ್ಪನೆ ಮುಖ್ಯವಾಗಿ ಕಂಡುಬರುತ್ತದೆ. ಈ ಪಂಥ ವಿಶಿಷ್ಟಾದ್ವೈತದಂತೆ ಮಾಯಾವಾದವನ್ನು ಖಂಡಿಸಿದೆ. ಬ್ರಹ್ಮಧರ್ಮದ ಬ್ರಹ್ಮನು ಸಗುಣೇಶ್ವರನು. ಆದರೆ ವಿಗ್ರಹ ಪೂಜೆಯ ಮುಖಾಂತರ ಇದು ಸಾಧ್ಯವಿಲ್ಲ. ಸ್ವಾಮಿ ದಯಾನಂದ ಸರಸ್ವತಿಯವರು ಮಾಯಾವಾದವನ್ನು ಖಂಡಿಸಿದ್ದಾರೆ. ಜಗತ್ತು, ಜೀವನಗಳ ಸತ್ಯತೆ, ಅವುಗಳ ವಾಸ್ತವಿಕತೆಯನ್ನು ಎತ್ತಿ ಹಿಡಿದಿದೆ.

ಶ್ರೀ ರಾಮಕೃಷ್ಣ ಪರಮಹಂಸರಿಗೆ ರಾಮಾನುಜ ಪಂಥದ ಪರಿಚಯ ಚೆನ್ನಾಗಿತ್ತು. ಇದು ಅವರ ಸಂಭಾಷಣೆಗಳಿಂದ ಸ್ಪಷ್ಟವಾಗುತ್ತದೆ. ಇವರ ಸಮನ್ವಯ ದರ್ಶನದಲ್ಲಿ ಅದ್ವೈತ, ವಿಶಿಷ್ಟಾದ್ವೈತದ ಮನೋಹರ ಸಮನ್ವಯವಿದೆ. ಶ್ರೀ ರಾಮಕೃಷ್ಣರ ಪಾರಮಾರ್ಥಿಕ ಅನುಭಾವದಲ್ಲಿ ನಮ್ಮಾಳ್ವಾರರ ಸಂಶ್ಲೇಷ, ವಿಶ್ಲೇಷಣಗಳಿವೆ. ಅರವಿಂದ ಘೋಷರೂ ಕೂಡ ರಾಮಾನುಜರ ಸಿದ್ಧಾಂತಗಳನ್ನು ಒಪ್ಪಿದ್ದಾರೆ.

ಸ್ವಾಮಿ ವಿವೇಕಾನಂದರಿಗೆ ಮದ್ರಾಸ್‌ನಲ್ಲಿ ಮಿತ್ರರಾದ ಅಳಸಿಂಗ

ಪೆರುಮಾಳರಿಂದ ವಿಶಿಷ್ಟಾದ್ವೈತ ತತ್ವದ ವಿಪುಲ ಪರಿಚಯವಾಗಿ, ಅವರ ಉಪದೇಶಗಳಲ್ಲಿ ಈ ತತ್ವದ ಉದಾರ ಮನೋಭಾವ ಕಂಡುಬರುತ್ತದೆ. ಪರಿಣಾಮವಾಗಿ ರಾಮಾನುಜರನ್ನು ಕುರಿತಾದ ಗ್ರಂಥಗಳು. ಶ್ರೀವೈಷ್ಣವ ಧರ್ಮದ ಕೃತಿಗಳು ಬಹುಸಂಖ್ಯೆಯಲ್ಲಿ ವಿವಿಧ ರಾಮಕೃಷ್ಣ ಮಠಗಳಿಂದ ವಿವಿಧ ಭಾಷೆಗಳಲ್ಲಿ ಪ್ರಕಟವಾಗಿವೆ.

ಗಾಂಧೀಜಿಯವರ ಪ್ರಿಯ ಹಾಡು ನರಸಿಂಹ ಮೆಹ್ತಾನ 'ವೈಷ್ಣವ ಜನತೋ ತೇನೇ ಕಹಿಯೇ' ಎಂಬುದು ವೈಷ್ಣವ ಧರ್ಮದ ಪ್ರತೀಕವಾಗಿದೆ.

## ರಾಮಾನುಜರಿಂದ ಶ್ರೀವೈಷ್ಣವ ದರ್ಶನದ ಪ್ರಚಾರ

ರಾಮಾನುಜರು ತಾವು ಪ್ರತಿಪಾದಿಸಿದ ತತ್ತ್ವಗಳನ್ನು, ಪಂಥವನ್ನು ಎಲ್ಲರಿಗೂ, ಎಲ್ಲ ಕಡೆಗಳಿಗೂ ತಲುಪಲಿ, ಪ್ರಚಾರವಾಗಲಿ ಎಂದು ಅನೇಕ ರಚನಾತ್ಮಕ ಯೋಜನೆಗಳನ್ನು ಪ್ರವರ್ತಿಸಿದರು.

ಹಿಂದಿನಿಂದಲೂ ಬಂದ ಕ್ರಮದಂತೆ ತಮ್ಮ ಆಚಾರ್ಯ ಪದವಿಯನ್ನು ತಮ್ಮ ಮುಖ್ಯ ಶಿಷ್ಯರಲ್ಲಿ ಒಬ್ಬರಿಗೆ ವಹಿಸದೆ, ನಾಡಿನಾದ್ಯಂತ 74 ಮಠ ಹಾಗೂ ಮಠಪೀಠಗಳನ್ನು ಸ್ಥಾಪಿಸಿ, ಅವುಗಳ ನಿರ್ವಹಣೆಗೆ ಪೀಠಾಧಿಪತಿಗಳನ್ನು ನೇಮಿಸಿದರು. ಇವರುಗಳ ಮುಖಾಂತರ ದರ್ಶನ–ಸಿದ್ಧಾಂತಗಳ ಪ್ರಚಾರ ಮಾಡುವಂತೆ ಆಜ್ಞೆ ನೀಡಿದರು. ಇಷ್ಟೇ ಅಲ್ಲದೆ 700 ಜೀಯರ್‌ಗಳು, 1200 ಏಕಾಂತಿಗಳು, 7 ಕೋಟಿ ಅಮ್ಮೈಗಳು ಶ್ರೀವೈಷ್ಣವ ದರ್ಶನದ ಪ್ರಚಾರದಲ್ಲಿ ತೊಡಗುವಂತೆ ಮಾಡಿದರು.

ಇದೇ ರೀತಿಯಲ್ಲಿ ರಾಮಾನುಜರು ತಮ್ಮ ಪ್ರಮುಖ ಶಿಷ್ಯರನ್ನು ಮರುವಿಂಗಡಣೆ ಮಾಡಿ, ಕೆಲವರು ಶ್ರೀಭಾಷ್ಯವನ್ನು ವೈದಿಕ ನೆಲೆಯಲ್ಲಿಯೇ ಬೋಧಿಸುವುದಕ್ಕೆ ನಿಯಮಿಸಿದರು. ಕೆಲವರು ರಹಸ್ಯಾರ್ಥ ಪರಂಪರೆಯನ್ನು ಅನುಸರಿಸುವಂತೆ ಮಾಡಿದರು. ಇನ್ನು ಕೆಲವರು ಭಗವದ್ವಿಷಯ ಪರಂಪರೆಯನ್ನು ಅನುಸರಿಸುವಂತೆ ಮಾಡಿದರು. ಹೀಗೆ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನಾಡಿನಾದ್ಯಂತ ಹರಡುವ ಏರ್ಪಾಡು ಮಾಡಿದರು. ತಮ್ಮ ದೂರದೃಷ್ಟಿಯಿಂದ ಇಂತಹ ವ್ಯವಸ್ಥೆ ಮಾಡಿದ ಇವರ ಭವಿಷ್ಯ ಚಿಂತನೆಯ ಬಗೆಗಿನ ಕಳಕಳಿಯನ್ನು ಅರ್ಥಮಾಡಿಕೊಳ್ಳಬಹುದು.

## 4. ಪಿಳ್ಳೈ ಲೋಕಾಚಾರ್ಯರು
(ಕ್ರಿ.ಶ. 1228-1327)

ಶ್ರೀ ರಾಮಾನುಜರು ಪರಮಪದಿಸಿದ ಸುಮಾರು ಒಂದು ನೂರು ವರ್ಷಗಳ ನಂತರ, ಅವರ ದರ್ಶನ ಪ್ರಚಾರ, ಸಿದ್ಧಾಂತ ಪ್ರತಿಪಾದನೆಯಲ್ಲಿ ಖ್ಯಾತರಾದವರೆಂದರೆ ಪಿಳ್ಳೈ ಲೋಕಾಚಾರ್ಯರು. ಇವರ ಜೀವನ ಪೂರ್ತಿ ಅನೇಕ ಏರು ಪೇರುಗಳಿಂದ ಕೂಡಿದ್ದಿತು. ಅಲ್ಲದೆ ಇವರ ಕಾಲದಲ್ಲೆ ಮೊಹಮ್ಮದೀಯರ ದಾಳಿಯೂ ಶ್ರೀರಂಗದ ಮೇಲೆ ನಡೆದು, ಧರ್ಮಕ್ಷೋಭೆ ಉಂಟಾಯಿತು. ದೇವಸ್ಥಾನಗಳು ನೆಲಸಮವಾದುವು; ಸಾವಿರಾರು ಶ್ರೀವೈಷ್ಣವರ ಕೊಲೆಯಾಗಿ, ರಕ್ತದ ಕೋಡಿ ಎಲ್ಲೆಡೆ ಹರಿಯಿತು. ಲೋಕಾಚಾರ್ಯರು ಶ್ರೀರಂಗದ ಉತ್ಸವ ವಿಗ್ರಹಗಳ ಸಮೇತ, ಕರ್ನಾಟಕಕ್ಕೆ ಬಂದು, ಬಹಳ ವರ್ಷಗಳ ದೇಶಾಂತರ ವಾಸದ ನಂತರ, ಪರಮಪದ ಸೇರಿದರು.

ಲೋಕಾಚಾರ್ಯರು ತಮ್ಮ ಗುರುಗಳಿಂದ ಹಾಗೂ ಸ್ವಂತ ಅಧ್ಯಯನದಿಂದ ಸಂಪಾದಿಸಿ ಪಡೆದ ಜ್ಞಾನವನ್ನು ಶ್ರೀವೈಷ್ಣವ ಧರ್ಮ ಪ್ರಚಾರಕ್ಕಾಗಿ, ಚೇತನರನ್ನು ಪರಮಾತ್ಮನೆಡೆಗೆ ಕೊಂಡೊಯ್ಯುವುದರಲ್ಲಿ ಸಹಾಯ ಮಾಡುವುದಕ್ಕಾಗಿ ವಿನಿಯೋಗಿಸಿದರು. ಭಗವಂತನ ಹಿರಿಮೆಯನ್ನು ಜನರಿಗೆ ತಿಳಿಯಹೇಳಲು ಸತತ ಪ್ರಯತ್ನ ಮಾಡಿದರು. ಇದರಲ್ಲಿ ಅವರು ಸಫಲರೂ ಆದರು.

ಇವರ ಪ್ರವಚನ ಸಭೆಗಳಿಗೆ, ಮಾಡುವ ಪಾಠಗಳಿಗೆ ಅನೇಕರು ಬರುತ್ತಿದ್ದರು. ಆಸಕ್ತಿಯಿಂದ ಆಲಿಸುತ್ತಿದ್ದರು. ಚೇತನರ ಮೇಲಿನ ಕರುಣೆಯಿಂದಲೇ ಅವರಿಗೆಲ್ಲ ಉಪದೇಶ ಮಾಡುವರು. ಶಾಸ್ತ್ರದ ಅರ್ಥ ಮತ್ತು ಅದರ ತತ್ತ್ವಗಳನ್ನು ಬಹಳ ಸುಂದರ ಹೋಲಿಕೆ, ಉದಾಹರಣೆಗಳಿಂದ ವಿವರಿಸುವರು. ಎಲ್ಲರ ಮನಸ್ಸಿಗೂ ಇದು ನಾಟುತ್ತಿತ್ತು. ಅವರಿಗೆ ಚೆನ್ನಾಗಿ ಅರ್ಥವಾಗುತ್ತಿತ್ತು. ಈ ಒಂದು ಸೂಕ್ಷ್ಮತೆ ಅವರಲ್ಲಿತ್ತು.

### ಉಪದೇಶಗಳು

ದೇವರನ್ನು ಜ್ಞಾನಿಗಳು ಅರಿಯುತ್ತಾರೆ. ಅವರ ಮುಖಾಂತರ ಇದು ಜನರಿಗೆ ತಿಳಿದುಬರುತ್ತದೆ. ಹೀಗೆ ಜನಸಾಮಾನ್ಯರೂ ದೇವರನ್ನು ಅರಿತು, ಅವನಲ್ಲಿ ಭಕ್ತಿ, ಪ್ರಪತ್ತಿಗಳನ್ನು ತೋರಿ, ಉಜ್ಜೀವಿತರಾಗಬೇಕು.

ದೇವರು ಅನೇಕ ಅವತಾರಗಳನ್ನು ಎತ್ತುತ್ತಾನೆ. ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆಯೇ ಇದಕ್ಕೆ ಕಾರಣ. ಅವನನ್ನು ಯಾವ ರೀತಿಯಲ್ಲಿ, ಯಾವ ರೂಪದಲ್ಲಿ ಪೂಜಿಸಿದರೂ ಅವನು ಒಬ್ಬನೇ. ಊರು–ಕೇರಿ–ಜಾತಿ–ಗುಂಪುಗಳಿಂದ ಬರುವ ಹೆಸರು ಕೆಟ್ಟದ್ದು. ನಿಜವಾದ ವಿಷ್ಣುಭಕ್ತನಿಗೆ ಈ ಜಗತ್ತೆ ತನ್ನ ನಾಡು, ವಿಷ್ಣುವೇ ತಂದೆ, ಲಕ್ಷ್ಮಿಯೇ ತಾಯಿ. ಎಲ್ಲರಿಗೂ ಇವರು ಜನಕರು. ಆದುದರಿಂದ ಅವರ ದೃಷ್ಟಿಯಲ್ಲಿ ಮಕ್ಕಳಾದ ನಾವೆಲ್ಲರೂ ಸಮಾನರು. ಹೀಗಿರುವಾಗ ಮೇಲು ಕೀಳು ಎಂಬ ಭೇದವೇಕೆ ? ಇತರರಲ್ಲಿನ ದೋಷಗಳನ್ನು ಹುಡುಕುವುದಕ್ಕಿಂತ, ಅವರಲ್ಲಿನ ಒಳ್ಳೆಯ ಗುಣಗಳನ್ನು ಗುರುತಿಸುವುದು ಉತ್ತಮ ವ್ಯಕ್ತಿಯ ಲಕ್ಷಣ. ಇದು ಅಭ್ಯಾಸವಾಗಬೇಕು.

ಬೇರೆಯವರು ನಿಮಗೆ ಕೇಡುಂಟು ಮಾಡಿದರೂ, ಅವರಿಗೆ ನೀವು ಕೇಡು ಮಾಡಬೇಡಿ, ಇದು ನಮ್ಮ (ಹಿಂದೂ) ಧರ್ಮ. ನಮ್ಮ ಧರ್ಮವನ್ನು ನಾವು ರಕ್ಷಿಸಬೇಕು, ಇತರರಿಗೆ ಒಳ್ಳೆಯದನ್ನು ಮಾಡಬೇಕು. ಹಾಗೆ ಒಳ್ಳೆಯದಾಗಲಿ ಎಂದು ಭಗವಂತನನ್ನು ಪ್ರಾರ್ಥಿಸಬೇಕು.

ಊರು–ಜಾತಿ ಮುಖ್ಯವಲ್ಲ, ಮಾನವನೇ ಮುಖ್ಯ.

ಈ ಉಪದೇಶಗಳು ಸರ್ವಕಾಲೀಕವಾದುದು. ಎಲ್ಲರೂ ಇದನ್ನು ಒಪ್ಪುವರು. ಜಗತ್ತಿನ ಎಲ್ಲ ಧರ್ಮಗಳು ಬೋಧಿಸುವುದೂ ಇದನ್ನೇ.

ಇದನ್ನು ಗಮನಿಸಿದ ಶ್ರೀರಂಗನಾಥನು ಅರ್ಚಕರ ಮುಖಾಂತರ ತಾನು ಇದನ್ನು ಒಪ್ಪಿರುವುದಾಗಿ ತಿಳಿಸಿ, ಇವರನ್ನು ನಿಜ ಅರ್ಥದ ಲೋಕಾಚಾರ್ಯರು ಜಗದ್ಗುರುಗಳು ಎಂದು ತಿಳಿಸಿದನು.

ಹೀಗೆ ತಾವು ಬೋಧಿಸಿದ ತತ್ವಗಳನ್ನು, ಉಪದೇಶಗಳನ್ನು ಗ್ರಂಥ ರೂಪದಲ್ಲಿ ಬರೆದಿಟ್ಟ ಆಚಾರ್ಯರು ಲೋಕಕ್ಕೇ ಮಹೋಪಕಾರ ಮಾಡಿದ್ದಾರೆ. ಇವುಗಳೇ 'ಅಷ್ಟಾದಶ ರಹಸ್ಯ'ಗಳು ಎನ್ನುವ ಹದಿನೆಂಟು ಗ್ರಂಥಗಳು. ಧರ್ಮ ಸಂರಕ್ಷಣೆಗಾಗಿ ಪಟ್ಟ ಕಷ್ಟದ ಕೋಟಲೆಗಳಿಗೆ ಸಿಲುಕದೆ, ಮಾನಸಿಕ ಹಾಗೂ ದೈಹಿಕ ಹಿಂಸೆಗಳಿಗೆ ಇವರು ಗುರಿಯಾಗದೆ ಇದ್ದಿದ್ದರೆ ಶ್ರೀ ವೇದಾಂತ ದೇಶಿಕರಂತೆ ಇನ್ನೂ ಅನೇಕ ಗ್ರಂಥಗಳನ್ನು ರಚಿಸುತ್ತಿದ್ದರೊ ಏನೋ ! ನಮಗೆ ಆ ಅದೃಷ್ಟವಿಲ್ಲದಾಯಿತು.

ಶ್ರೀರಂಗದ ಮೇಲೆ ಮೊದಲ ಪರಕೀಯರ ಪ್ರಹಾರ ಬೀಳುವಷ್ಟು ಹೊತ್ತಿಗೆ

ಶ್ರೀರಂಗದ ಪೀಠಾಧಿಪತಿ ಸಮಾನ ಜ್ಞಾನಿಗಳಾದ ನಂಪಿಳ್ಳೈರವರು 1302ರಲ್ಲಿ ಪರಮಪದಿಸಿದ್ದರು. 1302ರಲ್ಲಿ ಅದರ ಪೀಠಾಧಿಪತಿಗಳಾಗಿದ್ದ ಪೆರಿಯ ವಾಚ್ಚಾನ್ ಪಿಳ್ಳೈರವರು 1321ರಲ್ಲಿ ವೈಕುಂಠ ವಾಸಿಗಳಾದರು. ತದ ನಂತರ ದಲ್ಲಿ ಅಂದರೆ 1321ರಲ್ಲಿ ಪೀಠಾಧಿಪತಿಗಳಾದ ಪಿಳ್ಳೈ ಲೋಕಾಚಾರ್ಯರು ಶ್ರೀರಂಗದ ಪೀಠಾಧಿಪತಿಗಳಾಗಿ, ತಮ್ಮ ಅಂತ್ಯದವರೆಗೆ ಆ ಸ್ಥಾನವನ್ನು ಹೊಂದಿ ದ್ದರು. ಆದರೆ ವಿಧಿಯ ವೈಪರೀತ್ಯವೆಂದರೆ ಪೀಠದ ಕೇಂದ್ರವಾದ ಶ್ರೀರಂಗದಲ್ಲಿ ಅವರು ಇರಲೇ ಇಲ್ಲ. ಕಷ್ಟಗಳ ನಡುವೆ ಊರೂರು ಅಲೆಯುತ್ತಿದ್ದರು.

'ಶಬ್ದ ಸೂತ್ರದ ಪಾಣಿನಿ, ಬ್ರಹ್ಮ ಸೂತ್ರದ ವ್ಯಾಸ, ರಹಸ್ಯ ಸೂತ್ರದ ಪಿಳ್ಳೈ ಲೋಕಾಚಾರ್ಯ-ಈ ಮೂವರು ಮಹರ್ಷಿಗಳ ಸೂತ್ರಗಳಿಗೆ ಸಾವಿರ ಹೆಡೆಯ ಆದಿಶೇಷನ ಅವತಾರಿ ಎನಿಸಿದ ಪತಂಜಲಿ, ರಾಮಾನುಜ, ಮಣವಾಳ ಮಾಮುನಿ-ಈ ಮೂವರು ಭಾಷ್ಯಕಾರ'ರಾದರು ಎಂಬ ನಂಬಿಕೆ ವಿದ್ವಜ್ಜನ ರಲ್ಲಿದೆ.

ವಾರಣಸದೃಶರೆಂಬ ಹೆಸರಿದ್ದ ಇವರಿಗೆ ದ್ವಿತೀಯ ಲೋಕಾಚಾರ್ಯ, ಉಲಹಾರಿಯನ್, ಸರ್ವಜ್ಞ, ಭಟ್ಟರ್, ಉಭಯ ವೇದಾಂತ ನಿರ್ವಾಹಕರ್ ಎಂಬ ಹೆಸರುಗಳೂ ಇದ್ದುವು. ಇವರು ನಮ್ಮಾಳ್ವಾರ್ ಅವತಾರವೆಂದು ಕೆಲವರೂ, ಕಂಚಿಯ ವರದರಾಜಸ್ವಾಮಿಯ ಅವತಾರ ಎಂದು ಇನ್ನು ಕೆಲವರು ನಂಬುತ್ತಾರೆ.

ಚಿತ್, ಅಚಿತ್, ಈಶ್ವರ ಹಾಗೂ ಶ್ರೀ ತತ್ವಗಳ ಪ್ರತಿಪಾದನೆ ಮಾಡಿದ ಇವರು ಪ್ರಪತ್ತಿ ಮಾರ್ಗವನ್ನು ಉತ್ತಮವಾಗಿ ಹಾಗೂ ವಿಶದವಾಗಿ ಪ್ರತಿಪಾದಿಸಿ ತನ್ಮೂಲಕ ತೆಂಗಲೈ ಪಂಥದ ಪ್ರಧಾನ ಪ್ರತಿಪಾದಕರೆನಿಸಿದರು. ಮುಖ್ಯವಾಗಿ ಆಚಾರ್ಯ ಪ್ರಪತ್ತಿಯೇ ಪಂಚಮೋಪಾಯ (ಚರಮೋಪಾಯ)ವೆಂದು ತಿಳಿಸಿ, ಅದಕ್ಕೆ ಪ್ರಾಮುಖ್ಯತೆಯನ್ನು ನೀಡಿರುವರು.

ಗುರುಗಳಲ್ಲಿ ವಿಧೇಯತೆ, ಭಕ್ತಿಯಿಂದ ಭಗವಂತನಿಗೆ ಫಲ-ಪುಷ್ಪಗಳ ಅರ್ಪಣೆ, ದೇವಸ್ಥಾನಗಳ ಪ್ರದಕ್ಷಿಣೆ-ಪ್ರಣಾಮಗಳು; ವಿಷ್ಣು-ಲಕ್ಷ್ಮೀ ಸಹಸ್ರ ನಾಮ ಪಠಣ; ದಿವ್ಯ ಪ್ರಬಂಧಗಳ ಪ್ರತಿದಿನದ ಪಾರಾಯಣ; ಪ್ರವಚನ ಕಾಲಕ್ಷೇಪ ಗೋಷ್ಠಿಗಳಲ್ಲಿ ಭಾಗವಹಿಸಿ ಭಗವಂತನ ವೈಭವವನ್ನು, ಆ ಸಮಯ ದಲ್ಲಿ ವೈಮರೆತು ಆಲಿಸುವುದು, ಭಗವಂತನ ಭಕ್ತರ ಹಾಗೂ ಭಾಗವತರ ಸೇವೆ

ಇವು ಪ್ರತಿ ಶ್ರೀವೈಷ್ಣವನ ಆದ್ಯ ಕರ್ತವ್ಯಗಳೆಂದೂ, ಈ ನಿಟ್ಟೆಸಲ್ಲಿನ ಕರ್ತವ್ಯ ಲೋಪ ಶ್ರೀವೈಷ್ಣವನಿಗೆ ತರವಾದುದಲ್ಲವೆಂದು ಲೋಕಾಚಾರ್ಯರು ಸೂಚಿಸಿದ್ದಾರೆ.

ಅಭಿಪ್ರಾಯ ಭೇದದಿಂದ ದೂರ ಸಿಡಿಯಬಾರದು, ಶ್ರೀವೈಷ್ಣವರಾದ (ಇನ್ನೂ ವಿಶಾಲ ಅರ್ಥದಲ್ಲಿ ಹಿಂದೂಗಳು) ನಾವುಗಳೆಲ್ಲ ಒಟ್ಟಾಗಿ, ಒಗ್ಗಟ್ಟಾಗಿ ಇರಬೇಕೆನ್ನುವ ವಿಶಾಲ ಭಾವನೆಯಿಂದಲೇ, ನಾವೆಲ್ಲ ಒಂದೇ ಎನ್ನುವ ಸದಭಿಪ್ರಾಯದಿಂದಲೇ ವಿಶಾಲ ಹೃದಯಿಗಳಾದ ಪಿಳ್ಳೈ ಲೋಕಾಚಾರ್ಯರು ಕಂಚಿಯಲ್ಲಿದ್ದ ವೇದಾಂತ ದೇಶಿಕರನ್ನು ಶ್ರೀರಂಗಕ್ಕೆ ಆಹ್ವಾನಿಸಿದುದೇ ಅಲ್ಲದೆ, ಶ್ರೀರಂಗನಾಥನ ಆಜ್ಞೆ ಯಂತೆ 'ವೇದಾಂತಾಚಾರ್ಯ' ಎಂಬ ಬಿರುದನ್ನು ನೀಡಿ, ಲೋಕಾಚಾರ್ಯರ ನಂತರ ಅವರು ಶ್ರೀವೈಷ್ಣವ ಸಿದ್ಧಾಂತದ ಮಾರ್ಗದರ್ಶಕರಾಗಲು ಸೂಕ್ತ ಶಿಕ್ಷಣ ನೀಡಿದರು. ಇಷ್ಟೇ ಅಲ್ಲದೆ ತಮಗಿಂತ ಕಿರಿಯರಾದ ವೇದಾಂತ ದೇಶಿಕರನ್ನು ಹೊಗಳಿ, ಶ್ಲೋಕವನ್ನೂ ಅವರು ರಚಿಸಿದ್ದಾರೆ. ಶ್ರೀವೈಷ್ಣವ ಧರ್ಮದ ಅಭಿವೃದ್ಧಿಗಾಗಿ, ದೇವಾಲಯಗಳ, ವಿಗ್ರಹಗಳ ರಕ್ಷಣೆಗಾಗಿ ಹೇಗೆ ಎಲ್ಲ ಶ್ರೀವೈಷ್ಣವರೂ ಒಗ್ಗಟ್ಟಾಗಿ ಸೇವಾ ಕೈಂಕರ್ಯಗಳನ್ನು ಮಾಡಿ, ಶ್ರಮಿಸಬೇಕೆಂಬುದನ್ನು ತಮ್ಮ ಜೀವನವನ್ನೇ ದೃಷ್ಟಾಂತವನ್ನಾಗಿಸಿದ್ದಾರೆ. ಶ್ರೀ ರಾಮಾನುಜರು ತೋರಿದ ವಿಶ್ವಮಾನವತ್ವವನ್ನು ಹೇಗೆ ಎಲ್ಲ ಶ್ರೀವೈಷ್ಣವರೂ ಅನುಸರಿಸಬೇಕೆಂದು ಈ ಆಚಾರ್ಯರು ತಮ್ಮ ಜೀವನದ ಮುಖಾಂತರ ತೋರಿಸಿ, ಇತರರಿಗೆ ಆದರ್ಶರಾಗಿದ್ದಾರೆ.

ಇವರು ಸಿದ್ಧಾಂತ ಪ್ರವರ್ತಕರಾದ ನಂತರ ಇವರನ್ನಾಶ್ರಯಿಸಿದ ಸಾವಿರಾರು ಶಿಷ್ಯರಿಗೆ ಶ್ರೀಭಾಷ್ಯ, ಭಗವದ್ವಿಷಯಾದಿ ಶಾಸ್ತ್ರಗಳನ್ನು ಪ್ರಸಾದಿಸುತ್ತಾ, ಶ್ರೀರಂಗನಾಥನನ್ನು ಸೇವಿಸುತ್ತಲೇ ಕಾಲಕ್ಷೇಪ ಮಾಡುತ್ತಿದ್ದರು. ಆಗ ಇವರಿಗೆ ಒಂದು ನೂತನ ಸ್ಫೂರ್ತಿಯು ಹುಟ್ಟಿತು. ಶಾಸ್ತ್ರಗಳು, ಸಿದ್ಧಾಂತಗಳಾದರೂ ಅನಂತವೂ ಬಾಹುಳ್ಯವೂ ಆದುದು. ನಿಧಾನವಾಗಿ ಕಲಿಯುಗ ಪ್ರಭಾವದಿಂದ ಅನೇಕರಿಗೆ ಅವು ಅರ್ಥವಾಗುವುದು ಕಷ್ಟ. ಪೂರ್ವಾಚಾರ್ಯರು ಅನುಗ್ರಹಿಸಿದ ಸಾಂಪ್ರದಾಯಿಕ ಮಹದರ್ಥಗಳನ್ನು ಸೂತ್ರ ರೂಪದಲ್ಲಿ, ಗ್ರಂಥ ರೂಪದಲ್ಲಿ ಭದ್ರಪಡಿಸಿದಲ್ಲಿ ಬಹುಜನ ಹಿತಾಯ ಆಗುವುದಿಲ್ಲವೆ ಎಂದನ್ನಿಸಿತು. ಅಂತೆಯೇ ಸೂತ್ರರೂಪದಲ್ಲಿ ಆ ಜ್ಞಾನವೆಲ್ಲವನ್ನೂ ಮಣಿ ಪ್ರವಾಳ ಭಾಷೆಯಲ್ಲಿ

ಸರಳ-ಸುಂದರ ಶೈಲಿಯಲ್ಲಿ 18 ರಹಸ್ಯ ಗ್ರಂಥಗಳಲ್ಲಿ ರಚಿಸಿದರು.

ಇವರ ಗ್ರಂಥಗಳನ್ನು ಪೂರ್ವಾಚಾರ್ಯರು ಈ ಶ್ಲೋಕ ರೂಪದಲ್ಲಿ ಸೂತ್ರೀಕರಿಸಿ, ಕ್ರೋಢೀಕರಿಸಿದ್ದಾರೆ-

ಮುಮುಕ್ಷ್ವಾದಿ ತನ್ಯಾದಿ ತತ್ತ್ವಾದಿ ಸಾದೀನ್
ಚತುಸ್ತ್ರಿದ್ವಿಕ ದ್ವಿತ್ವ ಸಂಖ್ಯಾಕ್ರಮೇಣ |
ಪ್ರಾದೀ ನವಾದಿ ತಥಾ ಶ್ರ್ಯಾದೀ ಮಾದೀ
ಜಗುಃ ಕಾರ್ಷ್ಣಪಾದಿ ಪ್ರಣೀತಾನ್ ಪ್ರಬಂಧಾನ್ ||

ಕಾರ್ಷ್ಣಪಾದಿ ಎಂದರೆ ಪಿಳ್ಳೈ ಲೋಕಾಚಾರ್ಯರು-ಅವರ ಪ್ರಬಂಧ (ಗ್ರಂಥ)ಗಳು.

| | | |
|---|---|---|
| 1. | ಮುಮುಕ್ಷ್ವಾದಿಗಳು | — 1. ಮುಮುಕ್ಷುಪ್ಪಡಿ, 2. ಯಾದೃಚ್ಛಿಕಪ್ಪಡಿ<br>3. ಪರಂದ ಪಡಿ, 4. ಶ್ರಿಯಃಪತಿಪ್ಪಡಿ |
| 2. | ತನ್ಯಾದಿಗಳು | — 1. ತನಿದ್ವಯಂ, 2. ತನಿಚರಮುಮ್<br>3. ತನಿ ಪ್ರಣವಮ್ |
| 3. | ತತ್ತ್ವಾದಿಗಳು | — 1. ತತ್ತ್ವತ್ರಯಂ, 2. ತತ್ತ್ವಶೇಖರಂ |
| 4. | 'ಸಾ'ದಿಗಳು | — 1. ಸಾರಸಂಗ್ರಹಂ<br>2. ಸಂಸಾರ ಸಾಮ್ರಾಜ್ಯಂ |
| 5. | 'ಪ್ರಾ'ದಿಗಳು | — 1. ಪ್ರಮೇಯ ಶೇಖರಂ<br>2. ಪ್ರಪನ್ನ ಪರಿತ್ರಾಣಂ |
| 6. | ನವಾದಿಗಳು | — 1. ನವವಿಧ ಸಂಬಂಧಂ, 2. ನವರತ್ನ ಮಾಲೈ |
| 7. | 'ಶ್ರೀ' - ಆದಿ | — 1. ಶ್ರೀವಚನಭೂಷಣ |
| 8. | 'ಅ' - ಆದಿಗಳು | — 1. ಅರ್ಚಿರಾದಿ, 2. ಅರ್ಥ ಪಂಚಕಮ್ |

ಹೀಗೆ ಒಟ್ಟು ಗ್ರಂಥಗಳು 18.

ಹೀಗೆ ತುಂಬಾ ಪ್ರತಿಭಾಶಾಲಿಗಳಾದ ಲೋಕಾಚಾರ್ಯರು ತಾವು ನಂಬಿದ ಶ್ರೀವೈಷ್ಣವ ಸಂಪ್ರದಾಯದ ಉದ್ದೇಶಗಳನ್ನು ಎತ್ತಿಹಿಡಿಯುವ ಸಲು ವಾಗಿ ಈ ರಹಸ್ಯ ಗ್ರಂಥಗಳನ್ನು ರಚಿಸಿದರು. ಈ ವೇದಾಂತ ಗ್ರಂಥಗಳನ್ನು ಮೃದು ಮಧುರ ಗಂಭೀರವಾದ ಮಣಿಪ್ರವಾಳದಲ್ಲಿ ರಚಿಸಿ, ಶ್ರೀ ರಾಮಾನುಜ ದರ್ಶನದ ಪ್ರಚಾರಕ್ಕೆ ಹಾಗೂ ಶ್ರೀವೈಷ್ಣವ ಧರ್ಮಕ್ಕೇ ಮಹದುಪಕಾರ

ಮಾಡಿದ್ದಾರೆ. ಇವುಗಳಲ್ಲಿ ಮುಮುಕ್ಷುಪ್ಪಡಿ, ತತ್ತ್ವತ್ರಯ, ಶ್ರೀವಚನಭೂಷಣ ಈ ಮೂರು ಮುಖ್ಯವಾದುವು.

ಈ ಗ್ರಂಥಗಳ ಶೈಲಿ ಸುಲಭವಾಗಿ ಕಂಡುಬಂದರೂ, ಅರ್ಥಪೌಷ್ಕಲ್ಯದಿಂದ ದುರ್ಗ್ರಾಹ್ಯವಾಗಿದೆ. ಆದುದರಿಂದ ಉಪದೇಶದ ಮೂಲಕವಾಗಿಯೇ ಇವುಗಳಲ್ಲಿನ ಶ್ರೀ ಸೂಕ್ತಿಗಳ ಅರ್ಥವನ್ನು ಅರಿತುಕೊಳ್ಳಬಹುದು, ಇಲ್ಲದಿದ್ದಲ್ಲಿ ಸಾಧ್ಯವಿಲ್ಲ.

### ಅಷ್ಟಾದಶ ಸಂಖ್ಯೆಯ ವೈಶಿಷ್ಟ್ಯತೆ

ಈ ರಹಸ್ಯ ಗ್ರಂಥಗಳು 18ರಲ್ಲಿಯೇ ಏಕೆ ಸೀಮಿತಗೊಳಿಸಿದೆ ಎಂಬ ಸಂಶಯ ಬರಬಹುದು. ಇದಕ್ಕೆ ಕೆಲವು ಕಾರಣಗಳೂ ಇವೆ.

18 ಎಂಬುದು ಉತ್ತಮ ಪರಂಪರೆಯುಳ್ಳ ಸಂಖ್ಯೆ. ಆದುದರಿಂದ ಆಚಾರ್ಯರು ತಮ್ಮ ಕೃತಿಗಳ ರಚನೆಯನ್ನು ಈ ಸಂಖ್ಯೆಗೆ ಸೀಮಿತಗೊಳಿಸಿದರು ಎಂದು ಹೇಳಲಾಗುತ್ತದೆ.

ವಿಶಿಷ್ಟಾದ್ವೈತ ಸಂಪ್ರದಾಯದಲ್ಲಿ ಶ್ರೀಭಾಷ್ಯಾದಿ ಗ್ರಂಥಗಳಿಗೆ ಪ್ರಮಾಣಗಳನ್ನಾಗಿ ಉದಾಹರಿಸಿರುವ ಪ್ರಮುಖ ಉಪನಿಷತ್ತುಗಳು ಅಷ್ಟಾದಶವಾಗಿವೆ. ಅಂತೆಯೇ ವೇದಾಂತಕ್ಕೆ ಉಪ ಬೃಂಹ್ಣವಾಗಿ; ಆಧಾರವಾಗಿರುವ ಪುರಾಣಗಳು ಅಷ್ಟಾದಶಗಳಾಗಿವೆ. ಸರ್ವೋಪನಿಷತ್ತುಗಳಿಗೆ ಸಂಗ್ರಹ ರೂಪವಾದ ತತ್ತ್ವ, ಹಿತ, ಪುರುಷಾರ್ಥದ ಉಪದೇಶವಾದ ಈಶಾವಾಸ್ಯೋಪನಿಷತ್ತಿನಲ್ಲಿರುವ ಋಕ್ಕುಗಳು ಅಷ್ಟಾದಶವಾಗಿವೆ. ಇದೇ ರೀತಿಯಲ್ಲಿ ಮಹಾಭಾರತಕ್ಕೆ ಸಮಗ್ರ ಸಾರಭೂತವಾದ ಮತ್ತು ಪರಮ ಪ್ರಸಿದ್ಧವಾದ ಶ್ರೀಮದ್ಭಗವದ್ಗೀತೆಯಲ್ಲಿನ ಆಧ್ಯಾಯಗಳು ಅಷ್ಟಾದಶಗಳು.

ಆದುದರಿಂದ ಆಚಾರ್ಯರು ಈ ರಹಸ್ಯ ಗ್ರಂಥಗಳನ್ನು ಅಷ್ಟಾದಶಕ್ಕೆ ಸೀಮಿತಗೊಳಿಸಿ, ಇವುಗಳ ಪಾವಿತ್ರ್ಯತೆಯನ್ನು ಕಾಪಾಡಿದ್ದಾರೆ ಎಂದು ಹಿರಿಯರು ತಿಳಿಸುತ್ತಾರೆ.

### ಅಷ್ಟಾದಶ ರಹಸ್ಯಗಳ ಸಾರ

**1.** ಮುಮುಕ್ಷುಪ್ಪಡಿ : ಇದರಲ್ಲಿ ತಿರುಮಂತ್ರಂ, ದ್ವಯಮಂತ್ರಂ, ಚರಮ ಶ್ಲೋಕ–ಎನ್ನುವ ಮೂರು ಪ್ರಕರಣಗಳಿವೆ. ಈ ಮೂರನ್ನೂ ಈ ಪ್ರಕರಣಗಳಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ.

**2.** ಶ್ರಿಯಃ ಪ್ರತಿಪ್ಪಡಿ : ಇದರಲ್ಲಿ ಮೇಲೆ ತಿಳಿಸಿದ ಮೂರು ಪ್ರಕರಣಗಳನ್ನು ಸಂಸ್ಕೃತ ವಾಕ್ಯ ಬಾಹುಳ್ಯದ ಮುಖಾಂತರ ಹೆಚ್ಚಿನ ಪ್ರಮಾಣ ದಲ್ಲಿ ವಿವರಿಸಲಾಗಿದೆ.

**3.** ಯಾದೃಚ್ಛಿಕಪ್ಪಡಿ : ಇದರಲ್ಲಿ ಮೇಲೆ ತಿಳಿಸಿದ ಮೂರೂ ಪ್ರಕರಣಗಳನ್ನು ಬಹಳ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**4.** ಪರಂದ ಪಡಿ : ಇದರಲ್ಲಿ ಮೇಲಿನ ಮೂರು ಪ್ರಕರಣಗಳನ್ನು ಅತ್ಯಂತ ವಿಸ್ತಾರವಾಗಿ, ಹೆಚ್ಚಿನ ವಿವರಗಳೊಡನೆ ವಿವರಿಸಲಾಗಿದೆ.

ಈ ರೀತಿಯಲ್ಲಿ ಈ ನಾಲ್ಕೂ ರಹಸ್ಯ ಗ್ರಂಥದಲ್ಲಿ ಈ ಮೂರು ಮಂತ್ರಗಳ ಬಗ್ಗೆ ವಿಪುಲ ಚರ್ಚೆಗಳೊಂದಿಗೆ ವಿವರಗಳನ್ನು ನೀಡಲಾಗಿದೆ.

**5.** ತನಿ ಚರಮಮ್ : ಇದರಲ್ಲಿ ಬರೀ ಚರಮ ಶ್ಲೋಕ ಒಂದನ್ನೇ ವಿವರಿಸಲಾಗಿದೆ

**6.** ತನಿ ದಯಮಮ್ : ಇದರಲ್ಲಿ ಬರೀ ದ್ವಯ ಮಂತ್ರ ಒಂದನ್ನು ಮಾತ್ರವೇ ತನಿಯಾಗಿ ವಿವರಿಸಲಾಗಿದೆ.

**7.** ತನಿ ಪ್ರಣವಮ್ : ಇದರಲ್ಲಿ ತಿರುಮಂತ್ರ ಒಂದನ್ನು ಮಾತ್ರವೇ ವಿಪುಲವಾಗಿ ವಿಸ್ತರಿಸಿ, ವಿವರಿಸಲಾಗಿದೆ.

**8.** ಸಾರ ಸಂಗ್ರಹಂ : ಇದರಲ್ಲಿ ಬಹಳ ಸಂಕ್ಷಿಪ್ತವಾಗಿ ದ್ವಯ ಮಂತ್ರವನ್ನು ಪ್ರಮಾಣಗಳ ಸಹಿತ ವಿವರಿಸಲಾಗಿದೆ.

**9.** ತತ್ತ್ವ ತ್ರಯಂ : ಇದರಲ್ಲಿ ಚಿತ್, ಅಚಿತ್, ಈಶ್ವರ ತತ್ತ್ವ ಗಳು–ಈ ಮೂರನ್ನೂ, ಅವುಗಳ ಲಕ್ಷಣ, ಸ್ವರೂಪ, ಪ್ರಮಾಣಗಳೊಂದಿಗೆ, ಇತರೇ ಮತಗಳನ್ನು ನಿರಾಕರಿಸುತ್ತಾ, ಪ್ರತಿಪಾದಿಸಲಾಗಿದೆ.

**10.** ತತ್ತ್ವ ಶೇಖರಂ : ಇದರಲ್ಲಿ ಪರಸ್ವರೂಪ, ಜೀವಸ್ವರೂಪ, ಪುರುಷಾರ್ಥ ಸ್ವರೂಪ, ವಿರೋಧಿ ಸ್ವರೂಪ, ಉಪಾಯ ಸ್ವರೂಪ–ಎನ್ನುವ ಈ ಐದನ್ನೂ ಐದು ಬೇರೆ ಬೇರೆಯಾದ ಪ್ರಕರಣಗಳ ಮೂಲಕ ಸವಿವರವಾಗಿ ರೂಪಿಸಲಾಗಿದೆ.

**11.** ಅರ್ಚಿರಾದಿ : ಈ ಕೃತಿಯಲ್ಲಿ ಭೋಗ ವಿಭೂತಿ, ಲೀಲಾ

ವಿಭೂತಿ, ಮುಮುಕ್ಷುತ್ವ ಸಿದ್ಧಿ ಕ್ರಮ, ಮುಕ್ತರ ಅನುಭವದ ವಿಧಗಳು, ಅರ್ಚಿರಾದಿಗಳ ಗಮನದ ಪ್ರಕಾರಗಳು, ದಿವ್ಯನಗರವಾದ ವೈಕುಂಠದ ಪ್ರವೇಶ, ದಿವ್ಯಸ್ಥಾನವಾದ ಮಂಟಪದ ಪ್ರಾಪ್ತಿ, ದಿವ್ಯ ಪುರುಷರಿಂದ ಸೇವಿಸಲ್ಪಡುವಿಕೆ, ಚೂಡಾದಿ ಪಾದ ಪರ್ಯಂತದ ಪರಮಾತ್ಮನ ಅವಯವಗಳ ಸೌಂದರ್ಯ ಹಾಗೂ ಸೌಭಾಗ್ಯ ಇತ್ಯಾದಿಗಳ ವರ್ಣನೆ, ಭಗವಂತನ ಉಪಲಾಲನೆಯ ಕ್ರಮ, ನಿತ್ಯ ಕೈಂಕರ್ಯಗಳನ್ನು ಅನುಷ್ಠಾನ ಮಾಡುವ ಕ್ರಮ, ಮಂಗಳಾ ಶಾಸನದ ಕ್ರಮ ಇತ್ಯಾದಿಗಳನ್ನು ನಾಲ್ಕು ಪ್ರಕರಣಗಳಲ್ಲಿ ಸ್ಪಷ್ಟಪಡಿಸಿ, ವಿವರಿಸಲಾಗಿದೆ.

**12. ಪ್ರಮೇಯ ಶೇಖರಂ :** ಈ ಕೃತಿಯಲ್ಲಿ ಹೃದಯ ಗುಹಾ ನಿರ್ಗಮನದ ಕ್ರಮ, ದಿವ್ಯವಾದ ದೇಹವನ್ನು ಪಡೆಯುವಿಕೆ, ದಿವ್ಯ ಪರಿಷತ್ ಪ್ರಾಪ್ತಿ, ಸಪತ್ನೀಕ ಸರ್ವೇಶ್ವರನ ದರ್ಶನ. ಕೈಂಕರ್ಯ ಸಾಮ್ರಾಜ್ಯದ ಅನುಭವ ಪ್ರಕಾರ-ಇತ್ಯಾದಿಗಳನ್ನು ವಿವರಿಸಲಾಗಿದೆ.

**13. ಸಂಸಾರ ಸಾಮ್ರಾಜ್ಯಂ :** ಈ ಗ್ರಂಥದಲ್ಲಿ ಸಂಸಾರ ಸಾಮ್ರಾಜ್ಯದ ಅನುಭವ ಪ್ರಕಾರಗಳು, ಆಚಾರ್ಯರಲ್ಲಿ ಇರಿಸಬೇಕಾದ ಕೃತಜ್ಞತೆ, ಭಗವದ್ವಿಷಯದ ಬಗ್ಗೆ ಇರಬೇಕಾದ ಪ್ರೇಮಾವಿರ್ಭಾವತ್ವ, ಲಕ್ಷ್ಮಿಯ ಪುರುಷಾಕಾರದಿಂದ ಭಗವತ್ ಪ್ರಾಪ್ತಿ ಒದಗುವ ವಿಧಾನ-ಇತ್ಯಾದಿಗಳನ್ನು ವರ್ಣಿಸಲಾಗಿದೆ.

**14. ಅರ್ಥ ಪಂಚಕಮ್ :** ಮಾನವ ಜನ್ಮದ ಪ್ರಾಮುಖ್ಯತೆಯನ್ನು ವಿವರಿಸಿದ ನಂತರ ಪಂಚವಿಧ ಜ್ಞಾನಗಳ ವಿಶೇಷತೆಯನ್ನು ತಿಳಿಸಲಾಗಿದೆ. ಆ ನಂತರ ಸ್ವ-ಸ್ವರೂಪ, ಪರ-ಸ್ವರೂಪ, ಉಪಾಯ ಸ್ವರೂಪ, ವಿರೋಧಿ ಸ್ವರೂಪ ಹಾಗೂ ಪುರುಷಾರ್ಥ ಸ್ವರೂಪದ ವಿಶೇಷತೆಗಳನ್ನು ತಿಳಿಸಲಾಗಿದೆ. ಇವುಗಳಲ್ಲಿ ಉಪಾಯ ಸ್ವರೂಪವನ್ನು ವಿವರಿಸುವಾಗ ಅದರಲ್ಲಿನ ಅರ್ಥರೂಪ ಹಾಗೂ ದೃಷ್ಟರೂಪ ಎನ್ನುವ ಎರಡು ರೀತಿಯ ಪ್ರಪತ್ತಿಗಳ ಬಗ್ಗೆಯೂ ವಿವರಿಸಲಾಗಿದೆ.

**15. ನವರತ್ನ ಮಾಲೆ :** ಈ ಗ್ರಂಥದಲ್ಲಿ ಶರಣಾಗತಿ, ಸ್ವಸ್ವರೂಪ, ಸಂಸಾರ, ದೇಹಾಚರಣೆಯ ವಿಧಾನ, ದೇವತಾಂತರ, ಶ್ರೀವೈಷ್ಣವ, ಆಚಾರ್ಯ, ಲಕ್ಷ್ಮಿ, ಸರ್ವೇಶ್ವರರು- ಈ ಒಂಭತ್ತನ್ನು ಕುರಿತು ವಿವರಗಳಿವೆ.

**16.** ನವವಿಧ ಸಂಬಂಧವ್ : ಈ ಕೃತಿಯಲ್ಲಿ ವಿಶೇಷಣ-ವಿಶೇಷ್ಯ; ರಕ್ಷ್ಯ-ರಕ್ಷಕ; ಶೇಷ-ಶೇಷಿ; ಭಾರ್ಯಾ-ಭರ್ತೃ; ಜ್ಞೇಯ-ಜ್ಞಾತೃ; ಸ್ವ-ಸ್ವಾಮಿ ಭಾವ; ಶರೀರ-ಶರೀರಭಾವ; ಧಾರ್ಯ-ಧಾರಕ; ಭೋಕ್ತೃ-ಭೋಗ್ಯ ಎನ್ನುವ ಒಂಭತ್ತು ರೀತಿಯ ನಿರೂಪಣೆ, ಅವುಗಳ ಫಲಸಿದ್ಧಿಯನ್ನು ಸ್ಪಷ್ಟಪಡಿಸಲಾಗಿದೆ.

**17.** ಪ್ರಪನ್ನ ಪರಿತ್ರಾಣಂ : ಈ ಕೃತಿಯಲ್ಲಿ ಭ್ರಾತಾ, ಪುತ್ರರು, ತಂದೆ, ತಾಯಿಯರೇ ರಕ್ಷಕರಲ್ಲವೆಂದೂ, ಚಂದ್ರ-ಆದಿತ್ಯ-ಇಂದ್ರ-ಬ್ರಹ್ಮ-ರುದ್ರಾದಿಗಳೇ ರಕ್ಷಕರೆಂದೂ, ಭಗವಂತನೊಬ್ಬನೇ ರಕ್ಷಕನೆಂದೂ ವಿವರಿಸುತ್ತಾ ಅನನ್ಯ ಗತಿತ್ವ ನಿರೂಪಣೆಯನ್ನೂ ಹಾಗೂ ಆಕಿಂಚಿನ್ಯ ನಿರೂಪಣೆಯನ್ನೂ ಭಗವಂತನಲ್ಲಿ ಮಾಡಬೇಕೆಂದು ತಿಳಿಸಲಾಗಿದೆ.

**18.** ಶ್ರೀವಚನ ಭೂಷಣ : ಇದು ಆಚಾರ್ಯರು ಬರೆದ ಒಂದು ಪ್ರಮುಖ ಗ್ರಂಥ. ಶ್ರೀವೈಷ್ಣವ ಸಿದ್ಧಾಂತದ ಪ್ರತಿಪಾದನೆಯಲ್ಲಿ ಅತ್ಯಂತ ಮಹತ್ವದ ಸ್ಥಾನ ಪಡೆದಿದೆ. ಶ್ರೀ ರಾಮಾನುಜರ ಗ್ರಂಥಗಳ ನಂತರದ ವೈಶಿಷ್ಟ್ಯಪೂರ್ಣ ಕೃತಿ ಇದಾಗಿದೆ.

ಸೂತ್ರರೂಪದಲ್ಲಿರುವ ಈ ಗ್ರಂಥದಲ್ಲಿ ನಾಲ್ಕು ಪ್ರಕರಣಗಳು ಹಾಗೂ 462 ಸೂತ್ರಗಳು ಇವೆ. ಪುಟಗಳಗಟ್ಟಲೆ ಹೇಳಬೇಕಾದ ವಿಷಯವನ್ನು ಒಂದೊಂದೇ ಸಾಲಿನಲ್ಲಿ, ಸಂಕ್ಷಿಪ್ತರೂಪದಲ್ಲಿ ಹೇಳಿರುವುದು ಈ ಗ್ರಂಥದ ಹಿರಿಮೆಯನ್ನು ಹೆಚ್ಚಿಸಿದೆ. ಸಾಮಾನ್ಯವಾಗಿ ಇದನ್ನು ಗುರು ಮುಖೇನ ಪ್ರವಚನಗಳು, ಕಾಲಕ್ಷೇಪದ ಮುಖಾಂತರವೇ ಅಭ್ಯಾಸ ಮಾಡುವುದು ರೂಢಿ.

ಉಪಾಯ, ಪ್ರಾಪಕಾಂತರ ಪರಿತ್ಯಾಗ, ಮಂಗಳಾ ಶಾಸನ, ತ್ರಿಪಾದ್ವಿಭೂತಿ-ಎನ್ನುವವೇ ಇದರಲ್ಲಿನ ನಾಲ್ಕು ಪ್ರಕರಣಗಳು.

ಪ್ರಥಮ ಪ್ರಕರಣದಲ್ಲಿ ಪುರುಷಕಾರ, ಉಪಾಯ, ಉಭಯ ಸಾಧಾರಣ, ಪ್ರಪತ್ತಿಗಳ ವೈಭವವನ್ನು ನಿರೂಪಿಸಲಾಗಿದೆ.

ದ್ವಿತೀಯ ಪ್ರಕರಣದಲ್ಲಿ ಪ್ರಾಪಕಾಂತರ ಪರಿತ್ಯಾಗ, ಹೇತು ನಿರೂಪಣೆ, ಪ್ರಪತ್ತ್ಯಪಾಯ, ನಿರ್ದೋಷತ್ವ ವರ್ಣನೆ, ಸ್ವಗತ ಸ್ವೀಕಾರ ಹಾಗೂ ಪರಗತ ಸ್ವೀಕಾರಗಳಿಗೆ ಇರುವ ತಾರತಮ್ಯ, ಪ್ರಪನ್ನ ದಿನಚರ್ಯೆಯ ಕ್ರಮವನ್ನು ಸ್ಪಷ್ಟಪಡಿಸಿದೆ.

ತೃತೀಯ ಪ್ರಕರಣದಲ್ಲಿ ಮಂಗಳಾಶಾಸನದ ಸ್ವರೂಪ, ನಿರೂಪಣೆಗಳು, ಅಕೃತ್ಯ ಕರಣ, ಭಗವತ್ ಅಪಚಾರ, ಭಾಗವತ ಅಪಚಾರ, ಅಸಹ್ಯಾಚಾರಗಳ ನಿರೂಪಣೆ, ಸದಾಚಾರ ಲಕ್ಷಣ, ಸಚ್ಛಿಷ್ಯ ಲಕ್ಷಣ, ಭಗವನ್ನಿರ್ಹೇತುಕ ವಿಷಯ ನಿರೂಪಣ ಕಾರ್ಯಕ್ರಮ ನಿರೂಪಣೆಗಳನ್ನು ಮಾಡಲಾಗಿದೆ.

ನಾಲ್ಕನೆಯ ಪ್ರಕರಣದಲ್ಲಿ ಈಶ್ವರ (ಭಗವಂತ)ನು ಸಂಸಾರಾದಿಗಳನ್ನು ಅನುಗ್ರಹಿಸುವ ಕ್ರಮಗಳು, ಭಗವದಾಭಿಮುಖ್ಯತೆ, ಕೃಪಾಫಲಾನುಭವತೆ, ಭಯಾಭಯ ಹೇತು ನಿರೂಪಣೆ, ಪರಮಪ್ರಾಪ್ಯಪ್ರಾಪಕ ನಿರೂಪಣೆ, ಆಚಾರ್ಯಾಭಿಮಾನವೇ ಉತ್ತಾರಕವೆಂದು ನಿರೂಪಿಸುವುದು ಇತ್ಯಾದಿ ವಿವರಗಳನ್ನು ನೀಡಲಾಗಿದೆ.

ಇಲ್ಲಿ ವಿವರಿಸಿರುವ ಮೊದಲ ಎಂಟು ಗ್ರಂಥಗಳಲ್ಲಿ ಚರ್ಚಿಸಲ್ಪಟ್ಟಿರುವ ವಿಷಯಗಳಲ್ಲಿ ಸಾಮಾನ್ಯವಾದುವುವೆಂದರೆ–ತಿರುಮಂತ್ರ, ದ್ವಯ ಮಂತ್ರ ಹಾಗೂ ಚರಮ ಶ್ಲೋಕಗಳು.

'ಎ ಹಿಸ್ಟರಿ ಆಫ್ ಇಂಡಿಯನ್ ಫಿಲಾಸಫಿ' ಎನ್ನುವ ಐದು ಸಂಪುಟಗಳ ಬೃಹತ್ ಆಂಗ್ಲ ಕೃತಿಯನ್ನು ರಚಿಸಿರುವ ಸುರೇಂದ್ರನಾಥ ದಾಸಗುಪ್ತಾರವರು ತಾವು ಪಿಳ್ಳೈ ಲೋಕಾಚಾರ್ಯರ ಮೂರು ಸಂಸ್ಕೃತ ಗ್ರಂಥಗಳನ್ನು ನೋಡಿ ಪರಾಮರ್ಶಿಸಿರುವುದಾಗಿ ತಿಳಿಸಿದ್ದಾರೆ. ಇವು ಮೂರು ಹಸ್ತಪ್ರತಿಗಳ ರೂಪದಲ್ಲಿವೆಯಂತೆ. ಅವು ಯಾವುವೆಂದರೆ–ತತ್ತ್ವ-ತ್ರಯ, ತತ್ತ್ವಶೇಖರ ಹಾಗೂ ಶ್ರೀವಚನ ಭೂಷಣ ಎನ್ನುವುವು. ಈ ಮೂರೂ ಕೃತಿಗಳ ವಿಸ್ತೃತ ಪರಿಚಯಾತ್ಮಕ ವಿಮರ್ಶೆಯನ್ನು ನೀಡಿರುವ ಅವರು, ಇವು ಮೂರೂ ಶ್ರೀವೈಷ್ಣವ ಧರ್ಮದ ಆಧಾರ ಸ್ತಂಭಗಳು ಎಂದು ವಿವರಿಸಿದ್ದಾರೆ.

ಪಿಳ್ಳೈ ಲೋಕಾಚಾರ್ಯರ ಕೃತಿಗಗನ್ನು ಅರ್ಥ ಮಾಡಿಕೊಳ್ಳಲು ಮಣವಾಳ ಮಾಮುನಿಗಳ ವ್ಯಾಖ್ಯಾನಗಳು ಇಲ್ಲದಿದ್ದಲ್ಲಿ ತುಂಬಾ ಕಷ್ಟವಾಗುತ್ತಿತ್ತು. ಮುಮುಕ್ಷುಪ್ಪಡಿ, ತತ್ತ್ವತ್ರಯ ಹಾಗೂ ಶ್ರೀವಚನ ಭೂಷಣಗಳಿಗೆ ಬರೆದ ವ್ಯಾಖ್ಯಾನಗಳು ತುಂಬಾ ಪ್ರಸಿದ್ಧವೂ, ಸಹಾಯಕವೂ ಆಗಿವೆ.

oo oo oo oo

ಈ ಆಚಾರ್ಯರ ತಮ್ಮಂದಿರಾದ ಅಳಗಿಯ ಮಣವಾಳಪ್ಪೆರುಮಾಳ್ ನಾಯನಾರ್‌ರವರು ಆಳ್ವಾರಾಚಾರ್ಯರ ದಿವ್ಯಸೂಕ್ತಿಗಳಲ್ಲಿನ ಸಾಲುಗಳ ಜೋಡಣೆಯಿಂದಲೇ 'ಆಚಾರ್ಯ ಹೃದಯಂ' ಎಂಬ ಕೃತಿಯನ್ನು ರಚಿಸಿದ್ದಾರೆ. ಇದು ನಮ್ಮಾಳ್ವಾರರ ಕೃತಿಯಾದ 'ತಿರುವಾಯ್ಮೊಳಿ'ಯ ಸಾರಾರ್ಥವನ್ನು ಒಳಗೊಂಡಿದೆ.

ಭಕ್ತಿ, ವರ್ಣಾಶ್ರಮ ಧರ್ಮದ ಬಗ್ಗೆ ಹೇಳುತ್ತಾ, ಶ್ರೀವೈಷ್ಣವ ದರ್ಶನವು ದೈವ ಭಕ್ತರಲ್ಲಿ ವರ್ಣಭೇದ ಮಾಡಬಾರದು ಎಂದು ತಿಳಿಸಿದೆ. ಕಾರಣ ಅವರು ಬ್ರಹ್ಮಜ್ಞಾನಿಗಳು.

ಈ ಬಗ್ಗೆ ಈ ಪುಸ್ತಕದಲ್ಲಿ ಉದಾರ ಭಾವನೆಯನ್ನು ಪ್ರಕಟಿಸಿದೆ–

'ಶೂದ್ರಂ ವಾ ಭಗವದ್ಭಕ್ತಂ ನಿಷಾದಂ ಶ್ವಪಚಂ ತಥಾ ।
ವೀಕ್ಷತೆ ಜಾತಿ ಸಾಮಾನ್ಯಾತ್ ಸ ಯಾತಿ ನರಕಂ ನರಃ ॥'

ಎಂದು ತಿಳಿಸುತ್ತದೆ. ಇದೇ ರೀತಿಯಲ್ಲಿ ಮತ್ತೊಂದು ಶ್ಲೋಕದಲ್ಲಿಯೂ ಇದೇ ರೀತಿ ವಿವರಿಸಿದೆ–

'ಭಕ್ತಿ ರಷ್ಟ ವಿಧಾ ಹ್ಯೇಷಾ ಯಸ್ಮಿನ್ ಮ್ಲೇಚ್ಛೇಪಿ ವರ್ತತೆ ।
ತಸ್ಮೈ ದೇಯಂ ತತೋ ಗ್ರಾಹ್ಯಂ ಸ ಚ ಪೂಜ್ಯೋ ಯಥಾಹ್ಯಹಂ ॥'

ಎಂದು ತಿಳಿಸಲಾಗಿದೆ. ಮುಂದುವರೆದು ಈ ಗ್ರಂಥವು ಜ್ಞಾನ, ಭಕ್ತಿ, ಅನ್ವಿತ ಕರ್ಮಗಳಿಗೆ ಜನಕ ಮಹಾರಾಜ, ಕರ್ಮ ಭಕ್ತಿ ಅನ್ವಿತ ಜ್ಞಾನಕ್ಕೆ ಭರತ, ಕರ್ಮ ಜ್ಞಾನಾನ್ವಿತ ಭಕ್ತಿಗೆ ಪ್ರಹ್ಲಾದನನ್ನು ಉದಾಹರಣೆಯನ್ನಾಗಿ ನೀಡಿ,

ಚಂಡಾಲ ಮಪಿ ಮದ್ಭಕ್ತಂ ನಾವ ಮನ್ಯೇತ ಬುದ್ಧಿಮಾನ್,
ಅವಮಾನಾತ್ ಪತತ್ಯೇವ ಕಾರವೇ ನರಕೇ ಚ ಸಃ ॥

ಎಂದು ತಿಳಿಸಲಾಗಿದೆ.

ಚೇತನನು ಅರಿಷಡ್ವರ್ಗಗಳನ್ನು ಜಯಿಸಿ, ಪರಮಾತ್ಮನ ಸ್ವೀಕಾರಕ್ಕೆ ಯೋಗ್ಯನನ್ನಾಗಿ ಮಾಡಿಕೊಳ್ಳಬೇಕು. ಇವನು ಅರ್ಪಿಸಿದ ಪುಷ್ಪಗಳು ಆತ್ಮ ಪುಷ್ಪಗಳೆಂಬ ಪುಷ್ಪಗಳಾಗಬೇಕು. ಈ ರೀತಿಯ ಪುಷ್ಪಸಮರ್ಪಣದ 'ಆಚಾರ್ಯ ಹೃದಯ' ಗ್ರಂಥವು

'ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ,
ಸರ್ವಭೂತ ದಯಾಪುಷ್ಪಂ ಕ್ಷಮಾಪುಷ್ಪಂ ವಿಶೇಷತಃ |
ಜ್ಞಾನಂ ಪುಷ್ಪಂ ತಪಃ ಪುಷ್ಪಂ ಧ್ಯಾನಂ ಪುಷ್ಪಂ ತಥೈವಚ
ಸತ್ಯಂ ಅಷ್ಟವಿಧಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಭವೇತ್ ||

ಎಂದು ತಿಳಿಸಿದೆ.

ಈ ಆತ್ಮಗುಣಗಳನ್ನು ಅನುಷ್ಠಿಸುವುದು ನಿಜವಾದ ಪುಷ್ಪ ಸಮರ್ಪಣ ಎಂಬ ಭಾವವನ್ನು ಈ ಶ್ಲೋಕ ತಿಳಿಸುತ್ತದೆ.

ಮುಂದೆ ಇವರ ಸಿದ್ಧಾಂತಗಳನ್ನು ಇವರ ನೇರ ಶಿಷ್ಯರಾದ ಶ್ರೀರಂಗ ಸೂರಿ (ಕಸ್ತೂರಿ ರಂಗಾಚಾರ್ಯ) ಎನ್ನುವವರು ತಮ್ಮ ಕೃತಿಗಳ ಮೂಲಕ ಹೆಚ್ಚು ಪ್ರಚಾರಕ್ಕೆ ತಂದರು.

## 5. ಶ್ರೀ ವೇದಾಂತ ದೇಶಿಕರು
## (1268–1369)

ತೂಪ್ಪಿಲ್‌ನಲ್ಲಿ ಸಿಂಹಾಸನಾಧಿಪತಿಗಳು ಹಾಗೂ ವಿದ್ವತ್ ಹಿರಿಮೆಯ ಸಂತತಿಯಲ್ಲಿ ಜನಿಸಿದ ವೇಂಕಟನಾಥರು ತಿರುಪತಿಯ ಶ್ರೀನಿವಾಸರ ಘಂಟಾವ ತಾರರೆಂದು ಪ್ರಸಿದ್ಧಿ. ಉತ್ತಮ ಶಿಷ್ಯಾರ್ಜನೆಯಿಂದ ಹಾಗೂ ಪ್ರಸಿದ್ಧ ಆಚಾರ್ಯರ ಮಾರ್ಗದರ್ಶನದಲ್ಲಿ ಇವರ ಅತ್ಯುನ್ನತ ಮಟ್ಟದ ಕ್ರಿಯಾಶಕ್ತಿ ಹಾಗೂ ತಾರ್ಕಿಕ ಬುದ್ಧಿಗಳು, ಶಾಸ್ತ್ರವಾದದಲ್ಲಿ ಅಪಾರ ಆಸಕ್ತಿ ಹಾಗೂ ಸಂಪ್ರದಾಯ ಗ್ರಂಥಗಳಲ್ಲಿ ಇವರು ಹೊಂದಿದ್ದ ಜ್ಞಾನ ಭಂಡಾರ–ಇವುಗಳ ನೆರವಿನಿಂದ ಇವರು ರಾಮಾನುಜ ದರ್ಶನ ಹಾಗೂ ತತ್ತ್ವಗಳನ್ನು ಪುನರುಜ್ಜೀವನಗೊಳಿಸಿ, ಜನಪ್ರಿಯಗೊಳಿಸಿದರು. ನೂರಾರು ಸ್ತೋತ್ರಗಳು, ತತ್ತ್ವ, ರಹಸ್ಯ, ಪ್ರಬಂಧ, ನಾಟಕಗಳು ಇತ್ಯಾದಿ 120ಕ್ಕೂ ಮಿಕ್ಕು ಕೃತಿಗಳನ್ನು ರಚಿಸಿ, ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸೂಕ್ತಮಾರ್ಗದಲ್ಲಿ ಮುನ್ನಡೆಸಿದರು.

ಈ ರೀತಿಯಲ್ಲಿ ಭಾರತೀಯ ತತ್ತ್ವಶಾಸ್ತ್ರದ ಇತಿಹಾಸಕ್ಕೆ ಅವಲೋಕನ, ಟೀಕೆ, ಪುನರುಜ್ಜೀವನ–ಎನ್ನುವ ರೀತಿಗಳಲ್ಲಿ ಅಪರಿಮಿತ ಸೇವೆ ಸಲ್ಲಿಸಿ, ಅದಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟರು.

ಇವರು ರಚಿಸಿರುವ ಸಿದ್ಧಾಂತದ ಗ್ರಂಥಗಳು ಈ ರೀತಿ ಇವೆ–

**1.** ಶಾಸ್ತ್ರಗ್ರಂಥಗಳು : ಮೀಮಾಂಸಾ ಪಾದುಕಾ, ಸೇಶ್ವರ ಮೀಮಾಂಸಾ, ಅಧಿಕರಣ ಸಾರಾವಳಿ, ಶತದೂಷಿಣಿ, ಪಾಂಚರಾತ್ರ ರಕ್ಷಾ, ನಿಕ್ಷೇಪ ರಕ್ಷಾ, ಸಚ್ಚರಿತ್ರ ರಕ್ಷಾ, ವಾದಿತ್ರಯ ಖಂಡನಂ, ದ್ರವಿಡೋಪನಿಷತ್ ಸಾರಂ ಹಾಗೂ ತಾತ್ಪರ್ಯ ರತ್ನಾವಳಿ.

**2.** ಪ್ರಮೇಯ ಗ್ರಂಥಗಳು : ತತ್ತ್ವಮುಕ್ತಾ ಕಲಾಪ, ನ್ಯಾಯ ಪರಿಶುದ್ಧಿ ನ್ಯಾಯ ಸಿದ್ಧಾಂಜನ.

**3.** ವ್ಯಾಖ್ಯಾನ ಗ್ರಂಥಗಳು : ತತ್ತ್ವ ಟೀಕಾ, ಚತುಃಶ್ಲೋಕೀ ಭಾಷ್ಯ, ಸ್ತೋತ್ರರತ್ನ ಭಾಷ್ಯ, ಈಶವಾಸ್ಯೋಪನಿಷದ್ ಭಾಷ್ಯಂ, ತಾತ್ಪರ್ಯ ಚಂದ್ರಿಕಾ, ಗೀತಾರ್ಥ ಸಂಗ್ರಹ ರಕ್ಷಾ, ರಹಸ್ಯ ರಕ್ಷಾ, ಅಧಿಕರಣ ದರ್ಪಣಂ, ನಿಗಮ ಪರಿಮಳ, ಸರ್ವಾರ್ಥ ಸಿದ್ಧಿ.

**4.** ಮಣಿಪ್ರವಾಳ ಕೃತಿಗಳು : ಪರಮತ ಭಂಗಂ, ಪರಮತ ಸೋಪಾನ, ರಹಸ್ಯತ್ರಯ ಸಾರ.

**5.** ಶಿಲ್ಲರೈ ರಹಸ್ಯಂಗಳ್ : ಅಮೃತ ರಂಜನಿ ರಹಸ್ಯಂಗಳ್, ಅಮೃತಾ ಸ್ವಾದಿನೀ ರಹಸ್ಯಗಳ್.

ಈ ಗ್ರಂಥಗಳಲ್ಲಿ ಪ್ರತಿಪಾದಿಸಿರುವ ವಿಶಿಷ್ಟಾದ್ವೈತ ತತ್ತ್ವಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

**1. ಶ್ರೀಮದ್ ರಹಸ್ಯತ್ರಯಸಾರ :**

ಚತುರ್ವಿಧ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಮೋಕ್ಷವು ಅತ್ಯಂತ ಶ್ರೇಷ್ಠವಾದುದು. ಉಳಿದ ಮೂರು ಪುರುಷಾರ್ಥಗಳು ಮೋಕ್ಷಕ್ಕೆ ಪೂರಕವಾಗಿರಬೇಕು. ಮೋಕ್ಷದ ಕಲ್ಪನೆ ನಾನಾ ವಿಧವಾಗಿದ್ದು, ವಿವಿಧ ಸಿದ್ಧಾಂತಗಳು ವಿವಿಧ ರೂಪದಲ್ಲಿ ಅದನ್ನು ನಿರ್ಣಯಿಸಿದ್ದಾರೆ. ಒಟ್ಟಿನಲ್ಲಿ ಸಂಸಾರ ಬಂಧನದಿಂದ ವಿಮುಕ್ತನಾಗಿ, ಜೀವಾತ್ಮನು ಪರಮಾತ್ಮನನ್ನು ಹೊಂದುವುದು ಮೋಕ್ಷದ ಸ್ಥೂಲ ಕಲ್ಪನೆ. ಮೋಕ್ಷವನ್ನು ಪಡೆಯಲು ಅನೇಕ ಮಾರ್ಗಗಳಿದ್ದು, ಉಪನಿಷತ್ತುಗಳಂದಲೇ ಮೂವತ್ತೆರಡು ಬ್ರಹ್ಮವಿದ್ಯೆಗಳು

ಪ್ರೋಕ್ತವಾಗಿದೆ. ಕಲಿಯುಗದಲ್ಲಿ ಸಾಮಾನ್ಯವಾಗಿ ಜ್ಞಾನ ಮಾರ್ಗ, ಕರ್ಮ ಮಾರ್ಗ, ಭಕ್ತಿ ಮಾರ್ಗ ಎಂಬುದಾಗಿ ಪರಿಗಣಿಸಲ್ಪಟ್ಟಿದ್ದು, ಭಕ್ತಿ ಮಾರ್ಗ ಸುಲಭ ಸಾಧ್ಯವೆನಿಸಿ, ಎಲ್ಲರಿಂದಲೂ ಅಂದರೆ ಎಲ್ಲಾ ವರ್ಗದ ಜನರಿಂದಲೂ ಅನುಸರಿಸಲು ಯೋಗ್ಯವಾದ ಮಾರ್ಗವಾಗಿದೆ. ಭಗವದ್ರಾಮಾನುಜರಿಂದ ಪ್ರಣೀತವಾಗಿರುವ ಶ್ರೀವೈಷ್ಣವ ಸಿದ್ಧಾಂತದಲ್ಲಿ ಭಕ್ತಿಮಾರ್ಗದ ಜೊತೆಗೆ ಪ್ರಪತ್ತಿ ಅಥವಾ ಶರಣಾಗತಿ ಎಂಬ ಮಾರ್ಗವೂ ಸಹ ಮಾನ್ಯ ಮಾಡಲ್ಪಟ್ಟು ಇದು ಎಲ್ಲಾ ವರ್ಣದ ಜನರಿಂದಲೂ ಅತ್ಯಂತ ಸುಲಭವಾಗಿ ಸಾಧಿಸುವ ಮಾರ್ಗ ವಾಗಿದ್ದು, ಉಪನಿಷತ್ತಿನ ಪ್ರಮಾಣವು ಸಹ ಇದಕ್ಕಿದ್ದು, ಸರ್ವಾದರಣೀಯ ವಾಗಿದೆ. ಪ್ರಪತ್ತಿ ಮಾರ್ಗವೂ ಸಹ ಒಂದು ಬ್ರಹ್ಮವಿದ್ಯೆಯೇ ಎಂದು ಸಪ್ರಮಾಣ ವಾಗಿ ಶ್ರೀವೈಷ್ಣವ ಆಚಾರ್ಯರುಗಳು ತೋರಿಸಿಕೊಟ್ಟಿದ್ದಾರೆ.

ವಿಶಿಷ್ಟಾದ್ವೈತ ಸಿದ್ಧಾಂತದ ಅಂದರೆ ಶ್ರೀ ರಾಮಾನುಜ ಸಿದ್ಧಾಂತದ ಪ್ರಮುಖ ಆಚಾರ್ಯರಲ್ಲಿ ಒಬ್ಬರಾದ ಶ್ರೀ ವೇದಾಂತ ದೇಶಿಕರು, ಪ್ರಪತ್ತಿ ಶಾಸ್ತ್ರದ ಬಗ್ಗೆ ಅನೇಕ ಗ್ರಂಥಗಳನ್ನು ರಚಿಸಿದ್ದು ಅದರಲ್ಲಿ "ಶ್ರೀಮದ್ರಹಸ್ಯತ್ರಯ ಸಾರ"ವೆಂಬ ಗ್ರಂಥವು ಸುಪ್ರಸಿದ್ಧವಾಗಿದ್ದು, ಅದು ಆಚಾರ್ಯರ ಪ್ರಕಾಂಡ ಪಾಂಡಿತ್ಯ, ಅನುಭವಗಳ ದ್ಯೋತಕವಾಗಿದೆ. ಈ ಗ್ರಂಥವು ಪ್ರಮುಖವಾಗಿ ತಮಿಳು ಭಾಷೆಯಲ್ಲಿ ಬರೆಯಲ್ಪಟ್ಟಿದ್ದು, ಮಧ್ಯೆ ಮಧ್ಯೆ ಸಂಸ್ಕೃತ ಕಾರಿಕೆಗಳನ್ನು ಸೇರಿಸಿ ಆಚಾರ್ಯರು ಅದರ ಸೊಗಸನ್ನು ಹೆಚ್ಚಿಸಿದ್ದಾರೆ.

ರಹಸ್ಯತ್ರಯಗಳು–ಹೆಸರೇ ತಿಳಿಸುವಂತೆ ಮೂರು ರಹಸ್ಯ ಮಂತ್ರಗಳ ನ್ನೊಳಗೊಂಡಿವೆ. ಮೂಲಮಂತ್ರ, ದ್ವಯಮಂತ್ರ ಮತ್ತು ಚರಮಶ್ಲೋಕ ಎಂಬುದಾಗಿ. 'ಓಂ ನಮೋ ನಾರಾಯಣಾಯ' ಎಂಬುದು ಮೂಲಮಂತ್ರ. 'ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ ಶ್ರೀಮತೇ ನಾರಾಯಣಾಯ ನಮಃ' ಎಂಬುದು ದ್ವಯಮಂತ್ರ. 'ಸರ್ವಧರ್ಮಾನ್ ಪರಿತಜ್ಯ ಮಾಮೇಕಂ ಶರಣಂ ವ್ರಜ ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚ' ಎಂಬುದು ಭಗವದ್ಗೀತೆಯ ಚರಮ ಶ್ಲೋಕ.

ಈ ಮೂರು ಮಂತ್ರಗಳನ್ನು, ಮೂರು ರಹಸ್ಯಗಳು ಎಂಬುದಾಗಿ ಪರಿಗಣಿಸಿ, ಶರಣಾಗತಿ ಶಾಸ್ತ್ರದ ಎಲ್ಲಾ ವಿವರಗಳೂ ಇವುಗಳಲ್ಲಿ ಅಡಕವಾಗಿದೆ ಯೆಂದು, ಈ ರಹಸ್ಯಗಳ ಅರ್ಥ ವಿಶೇಷಗಳನ್ನು ಅರಿತವನು, ಪ್ರಪತ್ತಿಯನ್ನು

ಅನುಷ್ಠಿಸಲು ಅರ್ಹನಾಗಿ ಮೋಕ್ಷವನ್ನು ಹೊಂದುತ್ತಾನೆ ಎಂಬುದು ಎಲ್ಲಾ ಆಚಾರ್ಯರುಗಳ ಅಭಿಮತ. ಸ್ವಾಮಿ ದೇಶಿಕರ ಗ್ರಂಥ ವಾದ 'ಶ್ರೀಮದ್ರಹಸ್ಯ ತ್ರಯಸಾರ'ದಲ್ಲಿ 32 ಅಧಿಕಾರಗಳಿದ್ದು, ಪ್ರತಿಯೊಂದು ಅಧಿಕಾರದಲ್ಲೂ ಪ್ರಪತ್ತಿ ಶಾಸ್ತ್ರದ ವಿವಿಧ ಪ್ರಕಾರಗಳನ್ನು ಸಪ್ರಮಾಣವಾಗಿ ವಿಶದೀಕರಿಸಿ, ಎಲ್ಲಾ ಸಂದೇಹಗಳನ್ನು ನಿವಾರಿಸಿ, ಶರಣಾಗತಿಯ ಮೇಲ್ಮೈಯನ್ನು ಎತ್ತಿಹಿಡಿದಿದ್ದಾರೆ. ಉಪನಿಷತ್ತುಗಳಲ್ಲೂ 32 ಬ್ರಹ್ಮವಿದ್ಯೆಗಳಿರುವುದರಿಂದ, ಇಲ್ಲೂ ಸಹ ಗ್ರಂಥದಲ್ಲಿ 32 ಅಧಿಕಾರಗಳನ್ನು ರಚಿಸಿ, ಪ್ರಪತ್ತಿಯು ಉಪನಿಷತ್ ಪ್ರೋಕ್ತವೆಂದು ನಿರೂಪಿಸಿದ್ದಾರೆ. ಶರಣಾಗತಿಯು ಭಕ್ತಿಯೋಗಕ್ಕೆ ಅಂಗವಾಗಿಯೂ ಹಾಗೂ ಸ್ವತಂತ್ರವಾಗಿಯೂ ಮೋಕ್ಷಮಾರ್ಗ. ಪ್ರಪನ್ನರಲ್ಲಿ ಆರ್ತರೆಂದೂ, ದೃಪ್ತರೆಂದೂ ಎರಡು ವಿಧವಿದ್ದು, ಪ್ರಪತ್ತಿಯನ್ನು ಆಚರಿಸಿದ ನಂತರ ವಿಳಂಬವನ್ನು ಸಹಿಸದವರು ಆರ್ತ ಪ್ರಪನ್ನರೆಂದೂ, ಇವರು ತಕ್ಷಣವೇ ದೇಹಾವಸಾನವನ್ನು ಬಯಸಿ ಮೋಕ್ಷವನ್ನು ಪಡೆಯಲು ಇಚ್ಛಿಸುತ್ತಾರೆ. ದೃಪ್ತಪ್ರಪನ್ನರು, ಈ ಜನ್ಮದಲ್ಲಿ ಪ್ರಾರಬ್ಧಕರ್ಮವು ತೀರುವವರೆಗೂ, ದೇಹವನ್ನು ಧರಿಸಲು ಬಯಸಿ, ಭಗವತ್ಕೈಂಕರ್ಯದಲ್ಲಿ ನಿರತರಾಗಿ ಸಹಜ ದೇಹಾವಸಾನ ನಂತರ ಮೋಕ್ಷವನ್ನು ಬಯಸುತ್ತಾರೆ. ಆಚಾರ್ಯ ಮುಖೇನ ಮಾಡುವ ಪ್ರಪತ್ತಿಯು ಎಂದಿಗೂ ವಿಫಲವಾಗುವುದಿಲ್ಲ. ಒಂದುವೇಳೆ ಪ್ರಪತ್ತಿಯ ನಂತರ ಪ್ರಮಾದ ವಶಾತ್ ಏನಾದರೂ ಅಪರಾಧಗಳು ನಡೆದಲ್ಲಿಯೂ ಸಹ, ಅವುಗಳಿಗೆ ಪರಮಾತ್ಮನು ಅಲ್ಪಶಿಕ್ಷೆಯನ್ನು ವಿಧಿಸಿ ದೇಹಾವಸಾನದಲ್ಲಿ ಮೋಕ್ಷವನ್ನು ನೀಡಿಯೇ ನೀಡುತ್ತಾನೆ. ಆದ್ದರಿಂದ ಪ್ರಪತ್ತಿಯು, ಇತರ ಬ್ರಹ್ಮವಿದ್ಯೆಗಳಂತೆಯೇ ಉತ್ಕೃಷ್ಟವಾದ ಮಾರ್ಗವಾಗಿದ್ದು, ಜಾತಿ, ಮತ, ಭೇದಗಳಿಲ್ಲದೆ, ಎಲ್ಲರಿಂದಲೂ ಆಚರಿಸಲು ಯೋಗ್ಯವಾಗಿದೆ.

ಶ್ರೀಮದ್ರಹಸ್ಯತ್ರಯಸಾರದ 32 ಅಧಿಕಾರಗಳಲ್ಲಿ ಆಚಾರ್ಯರು ಬಹಳ ವಿಸ್ತಾರವಾಗಿ ಪ್ರಪತ್ತಿಯ ಸ್ವರೂಪ, ಅದರ ಆಚರಣೆ, ಪ್ರಪತ್ತಿ ಶಾಸ್ತ್ರದ ಬಗ್ಗೆ ಇರುವ ಪೂರ್ವಪಕ್ಷಗಳೇನು. ಅವುಗಳ ಪರಿಹಾರ, ಪ್ರಪನ್ನನ ಉತ್ತರ ಕೃತ್ಯಗಳು, ಪ್ರಪತ್ತಿಯ ಅನಂತರ ಬುದ್ಧಿಪೂರ್ವೋತ್ತರಾಘ ಉಂಟಾದಲ್ಲಿ ಪರಿಹಾರಗಳೇನು ಮೂಲ ಮಂತ್ರ, ದ್ವಯ, ಚರಮ ಶ್ಲೋಕಗಳಲ್ಲದ ವಿಶೇಷಾರ್ಥಗಳು ಮುಂತಾದ ಗಹನ ವಿಷಯಗಳನ್ನೆಲ್ಲಾ ನಿಪುಣತರವಾಗಿ ಉಪಚಾರಿಸಿದ್ದಾರೆ.

2. ಪರಮತ ಭಂಗ :

ದೇಶಿಕರು ರಚಿಸಿರುವ ಪ್ರಮೇಯ ಗ್ರಂಥಗಳಲ್ಲಿ ಪರಮತ ಭಂಗವು ಪ್ರಮುಖವಾದುದು. ಇದನ್ನು ತಮಿಳು, ಸಂಸ್ಕೃತ ಸೇರಿರುವ ಮಣಿ ಪ್ರವಾಳ ಮಾದರಿಯಲ್ಲಿ ರಚಿಸಿ, ಇತರ ಎಲ್ಲಾ ಅವೈದಿಕ ಮತಗಳ ಅಭಿಪ್ರಾಯಗಳನ್ನು ವಿಶದವಾಗಿ ಚರ್ಚಿಸಿ ವಿಶಿಷ್ಟಾದ್ವೈತ ಸಿದ್ಧಾಂತದ ಮೇಲ್ಮೈಯನ್ನು ಎತ್ತಿಹಿಡಿ ದಿದ್ದಾರೆ. ಶ್ರೀಭಗವ ಸಿದ್ಧಾಂತದ ಮೇಲ್ಮೈಯನ್ನು ಎತ್ತಿಹಿಡಿದಿದ್ದಾರೆ. ಶ್ರೀಭಗವ ದ್ರಾಮಾನುಜರು ಹಾಗೂ ಇತರ ಪೂರ್ವಾಚಾರ್ಯರುಗಳು ನಿರೂಪಿಸಿದ ಶ್ರೀವೈಷ್ಣವ ಸಿದ್ಧಾಂತದ ಶ್ರೇಷ್ಠತೆಯನ್ನು ಇತರ ಮತಗಳೊಡನೆ ತುಲನೆಮಾಡಿ, ನಿರೂಪಿಸಿದ್ದಾರೆ. ಇದರಲ್ಲಿ 24 ಅಧ್ಯಾಯಗಳಿದ್ದು, ಮೊದಲನೆಯ ಅಧ್ಯಾಯ ದಲ್ಲಿ ಸರಿಯಾದ ಆಧ್ಯಾತ್ಮ ಜ್ಞಾನದ ಅವಶ್ಯಕತೆಯನ್ನು ಒತ್ತಿ ಹೇಳಿ, 2, 3 ಮತ್ತು 4ನೆಯ ಅಧ್ಯಾಯಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತ ರೀತ್ಯಾ ತತ್ವ, ಹಿತ ಮತ್ತು ಪುರುಷಾರ್ಥಗಳನ್ನು ವಿಶದೀಕರಿಸಿದ್ದಾರೆ. ಮುಂದಿನ ಹದಿನೈದು ಅಧ್ಯಾಯಗಳಲ್ಲಿ ಪ್ರತಿಯೊಂದು ಇತರ ಮತದ ಅಭಿಪ್ರಾಯಗಳನ್ನು ಆಯಾ ಮತದ ಪ್ರವರ್ತಕರ ವಾದಗಳಿಗೆ ಅನುಸಾರವಾಗಿ ನಿರೂಪಿಸಿ, ನಂತರ ಅವುಗಳು ಹೇಗೆ ವೇದದ ನಿಜವಾದ ಅರ್ಥಕ್ಕೆ ವಿರೋಧವಾದವು ಎಂದು ಸಾಧಿಸಿ ಹಾಗೂ ಆ ಮತಗಳ ವಿಫಲತೆಯನ್ನು ಅನಾವರಣಗೊಳಿಸಿದ್ದಾರೆ. ಈ ಕೆಳಗಿನ ಮತಗಳ ಬಗ್ಗೆ ಚರ್ಚಿಸಿದ್ದಾರೆ–

1) ಲೋಕಾಯುತ ಮತ 2) ಬೌದ್ಧ ಮತ–ಅದರಲ್ಲಿ ಮಾಧ್ಯಮಿಕ ಮತ, ಯೋಗಾಚಾರ ಮತ, ಸೌತ್ರಾಂತಿಕ ಮತ, ವೈಭಾಷಿಕ ಮತಗಳು 3) ಅದ್ವೈತ ಮತ 4) ಜೈನ ಮತ 5) ಭಾಸ್ಕರ ಮತ 6) ವೈಯಾಕರಣ ಮತ 7) ವೈಶೇಷಿಕ ಮತ 8) ನೈಯಾಯಿಕ ಮತ 9) ನಿರೀಶ್ವರ ಮಿಮಾಂಸೆ 10) ನಿರೀಶ್ವರ ಸಾಂಖ್ಯ ಮತ 11) ಪಾಶುಪತ ಮತ

ಕೊನೆಯ ಅಧ್ಯಾಯಗಳಲ್ಲಿ ವಿಶಿಷ್ಟಾದ್ವೈತ ಮತದ ಪ್ರತಿಪಾದನೆ ಮತ್ತು ಸಮರ್ಥನೆ. ಇತರ ಎಲ್ಲಾ ಮತಗಳ ನೈಜ ನಿರೂಪಣೆಯು ಶ್ರೀ ದೇಶಿಕರಿಗಿರುವ ಆ ಮತಗಳ ಆಳವಾದ ಜ್ಞಾನವನ್ನು ತೋರಿಸುತ್ತದೆ. ಪ್ರತಿಯೊಂದು ಮತದ ಮುಖ್ಯ ತತ್ವಗಳನ್ನು ಆಯಾ ಮತದ ಪ್ರವರ್ತಕರಿಗಿಂತ ಚೆನ್ನಾಗಿ ವಿವರಿಸಿರು ವುದು ಅತ್ಯಂತ ಆಶ್ಚರ್ಯಕರವಾದ ಸಂಗತಿಯಾಗಿದೆ. ಅಷ್ಟೇ ಚೆನ್ನಾಗಿ ಆ

ಮತಗಳಲ್ಲಿನ ದೋಷ ಹಾಗೂ ಹೇಗೆ ಅವು ವೇದಗಳ, ಉಪನಿಷತ್ತುಗಳ ಸಮಂಜಸಾರ್ಥಕ್ಕೆ ಅಸಾಧುವಾದುವು ಎಂಬುವನ್ನು ವಿದ್ವತ್ಪೂರ್ಣವಾಗಿ ತಮಿಳು ಭಾಷೆಯಲ್ಲಿ ನಮಗೆ ತಿಳಿಸಿಕೊಟ್ಟಿದ್ದಾರೆ.

**3. ಸೇಶ್ವರ ಮಿಮಾಂಸೆ :**

ಮಿಮಾಂಸಾ ಶಾಸ್ತ್ರವು ಕರ್ಮ ಮೀಮಾಂಸಾ (ಪೂರ್ವ ಮಿಮಾಂಸಾ) ಮತ್ತು ಬ್ರಹ್ಮ ಮಿಮಾಂಸಾ (ಉತ್ತರ ಮಿಮಾಂಸಾ) ಎಂದು ಎರಡು ಬಗೆಯಾಗಿದ್ದು, ಜೈಮಿನ್ಯಾಚಾರ್ಯರು ಕರ್ಮ ಮಿಮಾಂಸಾದ ಪ್ರವರ್ತಕರಾಗಿಯೂ, ಶ್ರೀ ಬಾದರಾಯಣರು (ಉತ್ತರ ಮಿಮಾಂಸಾದ ಪ್ರತಿಪಾದಕರಾಗಿ) ಇಬ್ಬರೂ ಧರ್ಮಸೂತ್ರಗಳು ಹಾಗೂ ಬ್ರಹ್ಮಸೂತ್ರಗಳನ್ನು ಕ್ರಮವಾಗಿ ರಚಿಸಿದ್ದಾರೆ. ಅದ್ವೈತ ಸಿದ್ಧಾಂತದ ಅಧ್ವರ್ಯುಗಳಾದ ಶ್ರೀ ಶಂಕರರು ಮತ್ತು ಅವರ ಅನುಯಾಯಿಗಳು, ಕರ್ಮ ಮಿಮಾಂಸೆ ವೇದಾಂತಿಗಳಿಗೆ ಅವಶ್ಯಕವಿಲ್ಲವೆಂದೂ, ಕೇವಲ ಬ್ರಹ್ಮಸೂತ್ರಗಳು ಮಾತ್ರ ಮುಮುಕ್ಷುವನ್ನು ಮೋಕ್ಷದೆಡೆಗೆ ಕರೆದೊಯ್ಯುವುದೆಂದೂ ಪೂರ್ವ ಮಿಮಾಂಸಾ ಶಾಸ್ತ್ರವನ್ನು ನಿರಾಕರಿಸುತ್ತಾರೆ. ಆದರೆ ಶ್ರೀ ರಾಮಾನುಜರು ಕರ್ಮ ಮಿಮಾಂಸೆ ಮತ್ತು ಜ್ಞಾನ ಮಿಮಾಂಸೆ ಎರಡೂ ಸೇರಿ ಏಕ ಶಾಸ್ತ್ರವೆಂದೂ ಕರ್ಮಗಳ ಅಸ್ಥಿರತೆಯನ್ನು ಅರಿತುಕೊಂಡು ನಂತರ ಜ್ಞಾನದ ಅರ್ಜನೆಗೆ ತೊಡಗಬೇಕೆಂದೂ, ತಮ್ಮ ಶ್ರೀಭಾಷ್ಯದ ಮೊದಲಲ್ಲಿಯೇ ತಿಳಿಸಿ, 'ಅಥಾತೋ ಧರ್ಮ ಜಿಜ್ಞಾಸಾ' ಎಂಬ ಧರ್ಮಸೂತ್ರದಿಂದ ಹಿಡಿದು, 'ಅನಾವೃತ್ತಿ ಶಬ್ದಾತ್' ಎಂಬ ಬ್ರಹ್ಮಸೂತ್ರದ ಕೊನೆಯವರೆಗೆ ವೇದಾಂತವು ಏಕಶಾಸ್ತ್ರವೆಂದು ಪರಿಗಣಿಸಿದ್ದಾರೆ. ಜೈಮಿನಿಗಳ ಧರ್ಮಸೂತ್ರಗಳಿಗೆ ಶಾಬರ ಮುನಿಗಳು ಭಾಷ್ಯವನ್ನು ರಚಿಸಿದ್ದಾರೆ.

ಪ್ರಸ್ತುತ ಗ್ರಂಥವಾದ ಸೇಶ್ವರ ಮಿಮಾಂಸೆಯಲ್ಲಿ ಸ್ವಾಮಿ ದೇಶಿಕರು ಪೂರ್ವ ಮಿಮಾಂಸದ ಧರ್ಮಸೂತ್ರಗಳಿಗೆ ಮೊದಲನೆಯ ಅಧ್ಯಾಯದ ಮೊದಲನೆಯ ಮತ್ತು ಎರಡನೆಯ ಅಧಿಕರಣಗಳಿಗೆ ಮಾತ್ರ ವ್ಯಾಖ್ಯಾನ ಬರೆದಿದ್ದಾರೆ. ಪೂರ್ವ ಮಿಮಾಂಸೆಯು ಪರಬ್ರಹ್ಮನ ಸರ್ವೋತ್ತಮತ್ವ, ಮೋಕ್ಷದ ಅವಶ್ಯಕತೆ ಇತ್ಯಾದಿಗಳನ್ನು ಒಪ್ಪುವುದಿಲ್ಲವಾದ್ದರಿಂದ, ತಾವು ಈಶ್ವರ ಸಹಿತವಾದ ಕರ್ಮ ಜ್ಞಾನಗಳ ಸಮುಚ್ಚಯವನ್ನು ಎತ್ತಿ ಹಿಡಿಯುವುದರಿಂದ ತಮ್ಮ ಗ್ರಂಥಕ್ಕೆ

ಸೇಶ್ವರ ಮೀಮಾಂಸೆ ಎಂದು ಹೆಸರಿಸಿದ್ದಾರೆ.

ಪ್ರಾರಂಭದ ಮಂಗಳ ಶ್ಲೋಕ ಈ ರೀತಿ ಇದೆ–

'ವಿಹಿತ ಮನಸಮರ್ಥ ಯಃ ಪುಮರ್ಥೈರ್ ಚತುರ್ಭಿಃ
ಸಫಲಯತಿ ಪದಾನ್ಯಃ ಸ್ವಪ್ರಸಾದೇನ ಸೇವಃ |
ನಿಖಿಲ ನಿಗಮ ವೇದ್ಯ ಸಿದ್ಧ್ಯತು ಶ್ರೀ ಸಖೇ
ಅಸ್ಮಿನ್ ಭಗವತಿ ನಿರವದ್ಯೆ ಭಕ್ತಿರಾತ್ಯತಿಕೀನಃ ||'

'ಸಮಸ್ತ ವೇದಗಳಿಂದ ತಿಳಿಯಲ್ಪಡುವವನೂ, ಶ್ರೀ ಸಖನೂ (ಲಕ್ಷ್ಮೀ ಪತಿಯೂ) ಆದ ಪರಬ್ರಹ್ಮನಲ್ಲಿ ನಮಗೆ ಅತ್ಯಂತಿಕವಾದ (ಏಕರೂಪವಾದ) ಭಕ್ತಿ ಸಿದ್ಧಿಸಲಿ.'

ನಂತರ ಜೈಮಿನಿ ರಾಚಾರ್ಯರನ್ನೂ, ಕಾಶಕೃತ್ಯರನ್ನೂ, ಶ್ರೀ ಬಾದರಾಯಣ ರನ್ನೂ ವಂದಿಸಿದ್ದಾರೆ.

'ಸಜಯತಿ ಜೈಮಿನಿರಾದೌ ಜಯಂತಿ ಪುನಃ ಕಾಶಕ್ರತ್ಸ್ನೋಪಿ |
ನಾರಾಯಣಾವತಾರೋ ಜಯತಿ ಪರಂ ಬಾದರಾಯಣ ಶ್ರೀಮಾನ್ ||

ಜೈಮಿನಿಗಳನ್ನೂ, ಕಾಶಕೃತ್ಸ್ಯರನ್ನೂ ಹಾಗೂ ನಾರಾಯಣನ ಅವತಾರ ವಾದ ಶ್ರೀ ಬಾದರಾಯಣ (ವ್ಯಾಸ) ರನ್ನೂ ವಂದಿಸುತ್ತೇನೆ. ಅವರುಗಳಿಗೆ ಜಯವಾಗಲಿ ಎಂದಿದ್ದಾರೆ ಈ ಜಯ ಶಬ್ದ ಯಾವಾಗಲೂ ಮಂಗಳಾಚರಣೆಯ ದ್ಯೋತಕ.

ಮೂರನೇಯ ಶ್ಲೋಕದಲ್ಲಿ ತಮ್ಮ ಆರಾಧ್ಯ ದೈವವಾದ ಹಯಗ್ರೀವ ನನ್ನು ಸ್ತುತಿಸಿ ಗ್ರಂಥಾರಂಭ ಮಾಡಿದ್ದಾರೆ. 'ಅಥಾತೋ ಧರ್ಮ ಜಿಜ್ಞಾಸಾ ಇತ್ಯಾರಭ್ಯ ಅನಾವೃತ್ತಿ ಶಬ್ದಾತ್ ಅನಾವೃತ್ತಿ ಶಬ್ದಾತ್' ಇತ್ಯೇವ ಮಂತ್ರಂ ವಿಂಶತಿ ಲಕ್ಷಣಮ್ ಮೀಮಾಂಸಾಂ ಏಕಂ ಶಾಸ್ತ್ರಂ' ಎಂದು ಪ್ರಾರಂಭಿಸಿ ಪೂರ್ವ ಮೀಮಾಂಸೆ ಮತ್ತು ಉತ್ತರ ಮೀಮಾಂಸೆ ಎರಡೂ ಸೇರಿ ಏಕ ಶಾಸ್ತ್ರವೆಂದು ಘೋಷಿಸಿದ್ದಾರೆ.

ಧರ್ಮ ಮೀಮಾಂಸದ ಮೊದಲನೇ ಅಧ್ಯಾಯದ ಮೊದಲನೇ ಪಾದದಲ್ಲಿ 8 ಅಧಿಕರಣಗಳಿದ್ದು ಒಟ್ಟು ಮೂವತ್ತೆರಡು ಸೂತ್ರಗಳಿವೆ.

'ಅಥಾತೋ ಧರ್ಮ ಜಿಜ್ಞಾಸಾ' ಎಂಬುದು ಮೊದಲನೆಯ ಸೂತ್ರ.

ಸ್ವಾಮಿ ದೇಶಿಕರು ಈ ಸೂತ್ರದ ವ್ಯಾಖ್ಯಾನದಲ್ಲಿ ಈ ಕೆಳಗಿನ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ–

1. ಧರ್ಮ ಶಬ್ದದ ಅರ್ಥ–ಅಜಹತ್ ಎಂಬುದಾಗಿ. ಯಾವುದನ್ನು ಅನುಸರಿಸಿದರೆ ಮನುಜನಿಗೆ ಶ್ರೇಯಸ್ಕರವೋ ಅದು ಧರ್ಮವೆನಿಸಿಕೊಳ್ಳುತ್ತದೆ. ಇದು ತ್ರಿವರ್ಗ ಹಾಗೂ ಅಪವರ್ಗ ಇವೆರಡಕ್ಕೂ ಅನ್ವಯಿಸುತ್ತದೆ.
2. ಭಾಟ್ಟ ಮತದ ನಿರಾಕರಣೆ
3. ಪ್ರಾಭಾಕರ ಮತದ ನಿರಾಕರಣೆ

ಅಧಿಕರಣದ ಕೊನೆಯಲ್ಲಿ

ಸಂಪ್ರಯೋಗಶ್ಚಭವತಾ ವಿಫಲೋ ಅಸ್ಮಿನ್ ಮತೇ ಪುನಃ |
ಸೋಪಯೋಗೋ ವಿಚಾರಸ್ಯ ರಾಗ ಪ್ರಾಪ್ತತ್ವ ಸೂಚನಾತ್ ||

'ಇತರ ಮತದವರ ವಾದವು ಎಷ್ಟೇ ತೀವ್ರವಾಗಿದ್ದರೂ, ಅವುಗಳಲ್ಲಿ ಇರುವ ಮೂಲಭೂತ ನ್ಯೂನತೆಗಳಿಂದಾಗಿ ವಿಫಲವಾಗುತ್ತವೆ' ಎಂದು ಅವರು ಪ್ರತಿಪಾದಿಸಿದ್ದಾರೆ.

ಎರಡನೇ ಸೂತ್ರದ 'ಚೋದನಾಲಕ್ಷಣೋ ಅರ್ಥೋ ಧರ್ಮ' ಎಂಬುದರಿಂದ ಹಿಡಿದು ಮೊದಲನೇ ಅಧ್ಯಾಯದ ಮೊದಲ ಪಾದದ ಕೊನೆಯ ಸೂತ್ರದ ವರೆಗೆ, ಈ ಕೆಳಕಂಡ ವಿಷಯಗಳನ್ನು ನಿರೂಪಿಸಿದ್ದಾರೆ

1. ಶ್ರೌತ ಶಬ್ದಾರ್ಥ 2. ಅರ್ಥ ಶಬ್ದಾರ್ಥ 3. ವೇದದ ಸಾರ್ವಭೌಮತ್ವ ಮತ್ತು ಅಪೌರುಷೇಯತ್ವ 4. ಇತರ ಪ್ರಮಾಣಗಳ ನಿರಾಕರಣೆ 5. ಸ್ಫೋಟವಾದ ನಿರಾಕರಣೆ 6. ರುದ್ರ, ಶಿವ ಮುಂತಾದ ನಾಮಗಳ ಅರ್ಥ ನಿರ್ವಹಣೆ 7. ಕೆಲವು ಸೂತ್ರಗಳಿಗೆ ಶಾಬರ ಭಾಷ್ಯದ ನಿರಾಕರಣೆ, ಇತ್ಯಾದಿ.

ಪ್ರತಿಯೊಂದು ಅಧಿಕರಣದಲ್ಲೂ ಭಾಟ್ಟಮತ ಮತ್ತು ಪ್ರಾಭಾಕರ ವಾದಗಳನ್ನು ತಿರಸ್ಕರಿಸಿದ್ದಾರೆ. ಪ್ರಥಮ ಪಾದವನ್ನು ಈ ಶ್ಲೋಕದಿಂದ ಮುಕ್ತಾಯಗೊಳಿಸಿದ್ದಾರೆ.

ಅನಿತರ ಪರಿ ದೃಷ್ಟಿ ಷ್ಟಪ್ತ ಬಾಧೇಷು ವಸ್ತು
ಷ್ಟಖಿಲ ನಿಗಮ ವಾಕೋ ಬುದ್ಧಿಂ ಉತ್ಪಾದಯಂತ್ಯಃ |
ಸಹಜ ಪುನವ ಪಾದಂ ಮಾನಭಾವಂ ಪಧಾನಾಃ
ಸಮಾಜ ನಿಷತ ವಿಷ್ಣೋಃ ಶಾಶ್ವತಂ ಶಾಸನಂ ಸಃ ||

ಪ್ರಥಮ ಪಾದದಲ್ಲಿ 8 ಅಧಿಕರಣಗಳಿದ್ದು, ಅವು ಕ್ರಮವಾಗಿ ಧರ್ಮ ಜಿಜ್ಞಾಸಾಧಿಕರಣ, ಧರ್ಮ ಲಕ್ಷಣಾಧಿಕರಣ, ಪ್ರಮಾಣ ಪರೀಕ್ಷಾಧಿಕರಣ, ಅನ್ಯ ಪ್ರಮಾಣಕತ್ವ ನಿರಾಸಾಧಿಕರಣ, ವೇದ ಪ್ರಮಾಣಕತ್ವಾಧಿಕರಣ, ಸಂಬಂಧಾನಾಧಿತ್ವಾಧಿಕರಣ, ವೇದ ಸ್ವಾರ್ಥ ಪ್ರತ್ಯಾಯಕತಾಧಿಕರಣ, ವೇದ ಅಪೌರುಷೇಯ ತಾಧಿಕರಣಗಳಾಗಿವೆ.

ವೇದಗಳೇ ನಮಗೆ ಶಾಸನಗಳು ಎಂಬುದನ್ನು ವಿದತ್ಪೂರ್ಣವಾಗಿ ಇವುಗಳಲ್ಲಿ ನಿವೇದಿಸಿದ್ದಾರೆ.

## 4. ಮೀಮಾಂಸಾ ಪಾದುಕಾ :

ಸೇಶ್ವರ ಮೀಮಾಂಸೆಯಲ್ಲಿ ಧರ್ಮಸೂತ್ರಗಳಿಗೆ ಭಾಷ್ಯವನ್ನು ಅನುಗ್ರಹಿಸಿದ್ದಾರೆ. ಶ್ರೀ ದೇಶಿಕರು ಮೀಮಾಂಸಾ ಪಾದುಕಾ ಎಂಬ ತಮ್ಮ ಮತ್ತೊಂದು ಗ್ರಂಥದಲ್ಲಿ ಶ್ಲೋಕಗಳ ರೂಪದಲ್ಲಿ ಒಟ್ಟಾರೆ ಮೀಮಾಂಸಾ ಶಾಸ್ತ್ರದ ಮುಖ್ಯ ಅಭಿಪ್ರಾಯಗಳನ್ನು ವೈದಿಕ ಸಿದ್ಧಾಂತಕ್ಕೆ ಅನುಗುಣವಾಗಿ ನಿರೂಪಿಸಿದ್ದಾರೆ. ಎಲ್ಲಾ 176 ಶ್ಲೋಕಗಳು ಬಹಳ ಸುಂದರವಾಗಿ ಅರ್ಥಗರ್ಭಿತವಾಗಿದ್ದು ಅವುಗಳನ್ನು ಓದುವುದೇ ಆನಂದವನ್ನು ನೀಡುತ್ತದೆ. ಪ್ರಥಮ ಶ್ಲೋಕ ಈ ರೀತಿ ಇದೆ–

ಯಸ್ಯಶ್ರೀ ರ್ನಿತ್ಯ ಹುದ್ಯಾ ನಿರುಪಧಿಗೃಹಿಣಿ ನಂದತಿ ಚ್ಛಂದವೃತ್ತ್ಯಾ
ಯಸ್ಯಾಪತ್ಯಂ ಪ್ರಜೇಶ ಪ್ರಭೃತಿ ವಿರಣಂ ಯಸ್ಯ ವಿಶ್ವಕ್ ಪರಾರ್ಥಂ |
ಲೀಲಾ ಭೋಗೋಪದೇಶ ವ್ಯತಿಭಿದುರ ಮಿದಂ ಯಸ್ಯ ವಿಶ್ವಂ ವಿಭೂತಿಃ
ಸತ್ತಾಸಿದ್ಧಾನು ಕಂಪಾನಿಧಿವರತು ಸನಃ ಸಪ್ತಲೋಕೀ ಗೃಹಸ್ಥಃ ||

'ಸಪ್ತಲೋಕೀ ಗೃಹಸ್ಥ' ಎಂಬ ಪದದಿಂದ ಎಲ್ಲಾ ಲೋಕಗಳನ್ನೂ ಭಗವಂತನು ರಕ್ಷಿಸುವನೆಂದರ್ಥ. ರಕ್ಷಣ ಕಾರ್ಯವು ಅವನಿಗೆ ಸಹಜವೆಂಬುದಾಗಿ ತೋರಿಬರುತ್ತದೆ. ನಿರುಪಧಿ ಗೃಹಿಣಿ ಎಂಬಲ್ಲಿ, ಲಕ್ಷ್ಮೀ ತತ್ವವನ್ನು ಪ್ರತಿಪಾದಿಸಿ ಲಕ್ಷ್ಮಿಯು ಅವನಿಗೆ ಲೋಕ ರಕ್ಷಣ ಕಾರ್ಯದಲ್ಲಿ ಸಹಕಾರಿಯಾಗಿರುತ್ತಾಳೆ ಎಂದು ಬೋಧಿಸಿದ್ದಾರೆ. ಪ್ರಥಮ ಶ್ಲೋಕದಲ್ಲೇ ಭಗವಂತನು ಗೃಹಸ್ಥನಂತೆ ತನ್ನ ಅಖಂಡ ಸಾಮ್ರಾಜ್ಯವಾದ ಜೀವ, ಜಗತ್ತುಗಳೊಡಗೂಡಿ, ಜೀವರುಗಳಿಗೆ ಐಹಿಕ ಆಮುಷ್ಮಿಕ ಫಲಗಳನ್ನು ನೀಡುವುದರಿಂದ, ಪರಬ್ರಹ್ಮವು ನಿರ್ಗುಣನೆಂದಾಗಲೀ, ನಿರೀಶ್ವರನೆಂದಾಗಲೀ ಆಗಿರುತ್ತಾನೆ ಎಂಬ ವಾದಗಳು ನಿರಾಕರಿಸಲ್ಪಟ್ಟವು.

ಮೀಮಾಂಸಾ ಶಾಸ್ತ್ರವು ಸಗುಣ ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ.

5. ಅಧಿಕರಣ ಸಾರಾವಳಿ :

ಸ್ವಾಮಿ ರಾಮಾನುಜರ ಶ್ರೀಭಾಷ್ಯಕ್ಕೆ, ಶ್ರೀ ವೇದಾಂತ ದೇಶಿಕರು, ತತ್ವಟೀಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದು ಅದು ಅಪೂರ್ಣವಾಗಿದೆ. ಬ್ರಹ್ಮ ಸೂತ್ರದ ಪ್ರತಿಯೊಂದು ಅಧಿಕರಣದ ಮೇಲೂ, ಶ್ರೀಭಾಷ್ಯದ ಅಭಿಪ್ರಾಯ ಗಳನ್ನೇ ಅನುಸರಿಸಿ, ಸ್ವಾಮಿ ದೇಶಿಕರು ಶ್ಲೋಕಗಳ ರೂಪದಲ್ಲಿ 'ಅಧಿಕರಣ ಸಾರಾವಳೀ' ಎಂಬ ಉದ್ಗ್ರಂಥವನ್ನು ರಚಿಸಿದ್ದಾರೆ. ಶ್ರೀವೈಷ್ಣವ ಸಿದ್ಧಾಂತದ ಎಲ್ಲಾ ತತ್ವಗಳನ್ನೂ ಬಹಳ ಸ್ಪಷ್ಟವಾಗಿ ವಿವರಿಸಿ ಶಂಕೆಗೆ ಅವಕಾಶವಿಲ್ಲ ದಂತೆ, ಅನುಮಾನಗಳನ್ನು ಪರಿಹರಿಸಿ, ಈ ಗ್ರಂಥ ರಚಿಸಲ್ಪಟ್ಟಿದೆ. ಗ್ರಂಥದಲ್ಲಿ ಒಟ್ಟು ಶ್ಲೋಕಗಳಿದ್ದು, ಶ್ರೀಭಾಷ್ಯಕ್ಕೆ ಸಾರತಮವಾದ ಪೂರಕ ಗ್ರಂಥವೆನಿಸಿ ಕೊಂಡಿದೆ. ಸ್ವತಂತ್ರವಾಗಿಯೂ ಸಹ 'ಅಧಿಕರಣ ಸಾರಾವಳಿ' ಗ್ರಂಥವೂ ಬಹು ಉಪಯುಕ್ತವಾಗಿದೆ.

ಮಂಗಳ ಶ್ಲೋಕ ಹೀಗಿದೆ–

ಸ್ವಸ್ತಿಶ್ರೀ ರಂಗಭರ್ತುಃ ಕಿಮಪಿ ದಧದಹಂ ಶಾಸನಂ ತತ್ ಪ್ರಸತ್ತ್ಯೈ
ಸತ್ಯೇ ಕಾಲಂಬಿ ಭಾಷ್ಯಂ ಯತಿಪತಿ ಕಥಿತಂ ಶಶ್ವದದ್ಯಾಪ್ಯ ಯುಕ್ತಾನ್ |
ವಿಶ್ವಸ್ಮಿನ್ ನಾಮರೂಪಾಣ್ಯಮ ನಿಹಿತವತಾ ತೇನ ದೇವೇನ ಧತ್ತಾಂ
ವೇದಾಂತಾಚಾರ್ಯ ಸಂಜ್ಞಾಂ ಮವಹಿತ ಬಹು ವಿತ್ಸಾರ್ಥ ಮನ್ವರ್ಥಯಾಮಿ ||

ದೇಶಿಕರ ಪುತ್ರರಾದ ವರದಾಚಾರ್ಯರು ಈ ಗ್ರಂಥಕ್ಕೆ 'ಅಧಿಕರಣ ಚಿಂತಾಮಣಿ' ಎಂಬ ಟೀಕೆಯನ್ನು ಬರೆದಿದ್ದಾರೆ. ಶ್ರೀ ರಂಗನಾಥನು ತಮ್ಮ ಮೇಲೆ ವಿಶೇಷ ಕೃಪೆಯಿಟ್ಟು ವೇದಾಂತಾಚಾರ್ಯರೆಂಬ ಬಿರುದನ್ನು ನೀಡಿದುದ ರಿಂದ ಆ ಹೆಸರನ್ನು ಸಾರ್ಥಕಗೊಳಿಸಲು ತಾವು ಈ ಗ್ರಂಥವನ್ನು ರಚಿಸಿರುವುದಾಗಿ ಪ್ರಥಮ ಶ್ಲೋಕದಲ್ಲಿ ಹೇಳಿದ್ದಾರೆ.

ಉಪೋದ್ಘಾತ ಪ್ರಕರಣದಲ್ಲಿ 14 ಶ್ಲೋಕಗಳಿವೆ. ಇವುಗಳಲ್ಲಿ ಕರ್ಮ ಮೀಮಾಂಸಾ ಮತ್ತು ಬ್ರಹ್ಮ ಮೀಮಾಂಸಾ ಶಾಸ್ತ್ರಗಳೆರಡೂ ಸೇರಿಯೇ ಏಕಶಾಸ್ತ್ರ ವೆಂದೂ, ಎರಡರ ಜ್ಞಾನವೂ ಅವಶ್ಯಕವೆಂದು ತಿಳಿಸಿ, ಕರ್ಮಗಳ ಅಲ್ಪಾಸ್ಥಿರತೆ

ಯನ್ನು ಮನಗಂಡು, ಬ್ರಹ್ಮಜ್ಞಾನವನ್ನು ಸಂಪಾದಿಸಬೇಕೆಂದು ಅದಕ್ಕಾಗಿಯೇ ವೇದಾಂತ ಶಾಸ್ತ್ರ ಹುಟ್ಟಿದೆಯೆಂದೂ ಪ್ರತಿಪಾದಿಸಿದ್ದಾರೆ.

**6. ನಿಕ್ಷೇಪ ರಕ್ಷಾ :**

ಶ್ರೀ ದೇಶಿಕರ ರಕ್ಷಾ ಗ್ರಂಥಗಳಲ್ಲಿ 'ನಿಕ್ಷೇಪ ರಕ್ಷೆ' ಮೊದಲನೆಯ ಗ್ರಂಥ. ಮೋಕ್ಷೋಪಾಯಗಳಲ್ಲಿ ಒಂದಾದ ಹಾಗೂ ಅತ್ಯಂತ ಸುಲಭವಾದ ಶರಣಾಗತಿ ಅಥವಾ ಪ್ರಪತ್ತಿಯನ್ನು ಒಂದು ನಿಕ್ಷೇಪವೆಂದು ಕರೆದು, ಅದಕ್ಕೆ ಇರುವ ಶಾಸ್ತ್ರ ಪ್ರಮಾಣಗಳನ್ನು ನಿರೂಪಿಸಿ, ಇತರ ಅಪ ಸಿದ್ಧಾಂತಗಳಿಂದ ಅದನ್ನು ರಕ್ಷಿಸಿದ್ದಾರೆ. ನಿಕ್ಷೇಪವೆಂದರೆ ಅಪೂರ್ವ ನಿಧಿ ಎಂದರ್ಥ. ಈ ಅಪೂರ್ವ ನಿಧಿಯಾದ ಪ್ರಪತ್ತಿ ಶಾಸ್ತ್ರವನ್ನು ಶಾಸ್ತ್ರಗಳಿಂದ ಹುಡುಕಿ ತೆಗೆದು ಅದನ್ನು ನಮಗೇ ನೀಡಿದ್ದಾರೆ ಪೂರ್ವಾಚಾರ್ಯರುಗಳು. ಸ್ವಾಮಿ ದೇಶಿಕರು ಅದಕ್ಕೆ ಶಾಸ್ತ್ರ ಪ್ರಮಾಣಗಳೆಂಬ ಭದ್ರವಾದ ಕೋಟೆಯನ್ನು ಕಟ್ಟಿ ಶಾಶ್ವತವಾಗಿ ರಕ್ಷಿಸಿ ನಮಗೆ ಈ ಗ್ರಂಥದಲ್ಲಿ ನೀಡಿದ್ದಾರೆ.

ಮೋಕ್ಷಕ್ಕೆ ಉಪಾಯವಾದ ಮಾರ್ಗಗಳು ನಾಲ್ಕು. ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮತ್ತು ಶರಣಾಗತಿ. ಇವರಲ್ಲಿ ಕರ್ಮಯೋಗ, ಜ್ಞಾನಯೋಗಗಳು ಸಾಕ್ಷಾತ್ತಾಗಿ ಉಪಾಯವಲ್ಲವು. ಭಕ್ತಿಯೋಗಕ್ಕೆ ಸಹಕಾರಿಗಳಾಗಿ ಅವು ಉಪಾಯಗಳು. ಆದರೆ ಶರಣಾಗತಿಯು, ಪ್ರತ್ಯೇಕವಾಗಿ ಉಪಾಯವಾಗಿಯೂ ಹಾಗೂ ಭಕ್ತಿಯೋಗಕ್ಕೆ ಸಹಕಾರಿಯಾಗಿಯೂ ಉಪಾಯವಾಗಿದೆ. ಇದನ್ನು ಶ್ರೀಮದ್ರಹಸ್ಯತ್ರಯಸಾರದ ಉಪಾಯ ವಿಭಾಗಾಧಿಕಾರದಲ್ಲಿ ನಿಪುಣತರವಾಗಿ ಶ್ರೀ ದೇಶಿಕರು ನಿರೂಪಿಸಿದ್ದಾರೆ. ಅದನ್ನೇ ಸಂಕ್ಷೇಪವಾಗಿ ನಿಕ್ಷೇಪ ರಕ್ಷೆಯಲ್ಲಿಯೂ ವಿವರಿಸಿದ್ದಾರೆ. ಶರಣಾಗತಿಯಲ್ಲಿ ಪ್ರಧಾನವಾಗಿ 1) ಸ್ವರೂಪ ಸಮರ್ಪಣ 2) ಭರಸಮರ್ಪಣ 3) ಫಲ ಸಮರ್ಪಣ ಎಂಬುದಾಗಿ ಮೂರು ಮುಖ್ಯ ಅಂಶಗಳುಂಟು. ಸ್ವರೂಪ ಸಮರ್ಪಣವೆಂದರೆ, ದೇಹದಲ್ಲಿರುವ ಆತ್ಮನ ಸ್ವರೂಪವು ಪರಮಾತ್ಮನಿಗೆ ಶೇಷಭೂತವಾಗಿದ್ದು, ಅವನು ಸ್ವತಂತ್ರನಲ್ಲ, ಯಾವಾಗಲೂ ಪರಮಾತ್ಮನಿಗೆ ಅಧೀನ. ಇದನ್ನು ಅರಿತು ಸ್ವತಂತ್ರಾತ್ಮ ಭ್ರಮೆಯನ್ನು ತೊರೆದು ಶೇಷಭೂತ ಜ್ಞಾನವನ್ನು ಹೊಂದುವುದು.

ಪ್ರಪತ್ತಿಯನ್ನು ಅನುಷ್ಠಿಸಿದ ನಂತರ ಭರಸಮರ್ಪಣವೆಂದರೆ ಜೀವಾತ್ಮನ

ಇಹಲೋಕ ವ್ಯಾಪಾರದ ವಿಷಯದಲ್ಲಾಗಲೀ, ಮೋಕ್ಷ ಹೊಂದುವ ವಿಷಯದಲ್ಲಿ ಆಗಲಿ, ಯಾವ ಭಾರವನ್ನು ವಹಿಸದೆ, ಅವೆಲ್ಲಕ್ಕೂ ಭಗವಂತನೇ ಜವಾಬ್ದಾರಿ ಎಂಬ ಭಾವದಿಂದ ನಿಶ್ಚಿಂತನಾಗಿ, ಕೇವಲ ಭಗವಧ್ಯಾನ ನಿರತನಾಗಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ವಿಹಿತವಾಗಿ ನಡೆಸುತ್ತಾ ಜೀವನ ಯಾತ್ರೆಯನ್ನು ನಡೆಸುವುದು. ತನ್ನನ್ನು ರಕ್ಷಿಸುವ ಭಾರವು ಪರಮಾತ್ಮನಿಗೇ ಸೇರಿದ್ದು ಎಂಬ ಭಾವವಿರತಕ್ಕದ್ದು.

ಫಲಸಮರ್ಪಣವೆಂದರೆ, ಭಗವದನುಗ್ರಹದಿಂದ ದೊರೆಯಬಹುದಾದ ಐಹಿಕ ಆಮುಷ್ಮಿಕ ಫಲಗಳನ್ನು ಭಗವಂತನಿಗೆ ಸಮರ್ಪಿಸಿ, ನಿರ್ಲಿಪ್ತತೆಯಿಂದ ಅವುಗಳನ್ನು ಅನುಭವಿಸಿ, ಸದಾ ಭಗವಚ್ಚಿಂತನೆಯಲ್ಲಿ ತೊಡಗಿರಬೇಕು.

ಈ ಎಲ್ಲಾ ವಿಷಯಗಳೂ ಉಪನಿಷತ್ ಪ್ರತಿಪಾದ್ಯವಾಗಿದ್ದು, ಸ್ಮೃತಿಗಳಿಂದಲೂ ಪ್ರಮಾಣೀಕರಿಸಲ್ಪಟ್ಟಿದೆ.

## 7. ತತ್ವಟೀಕಾ :

ಭಾರತೀಯ ತತ್ವಶಾಸ್ತ್ರದ ಶಾಸ್ತ್ರಗ್ರಂಥಗಳಲ್ಲಿ ಅತ್ಯಂತ ಪ್ರಮುಖವಾದವು ಪ್ರಸ್ಥಾನತ್ರಯಗಳು. ಉಪನಿಷತ್‌ಗಳು, ಬ್ರಹ್ಮಸೂತ್ರ, ಭಗವದ್ಗೀತೆ ಇವುಗಳನ್ನೇ ಪ್ರಸ್ಥಾನತ್ರಯಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಬ್ರಹ್ಮಸೂತ್ರಗಳು ಪ್ರಧಾನವಾಗಿದ್ದು, ಉಪನಿಷದರ್ಥಗಳನ್ನು ಸೂತ್ರರೂಪದಲ್ಲಿ ಶ್ರೀ ಬಾದರಾಯಣರು ರಚಿಸಿದ್ದು, ಯಾವ ಆಚಾರ್ಯ ಪುರುಷನೇ ಆಗಲಿ, ತನ್ನ ಸಿದ್ಧಾಂತವನ್ನು ಪ್ರಚುರಪಡಿಸಬೇಕಾದಲ್ಲಿ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ತನ್ನ ಸಿದ್ಧಾಂತಕ್ಕೆ ಅನುಸಾರವಾಗಿ ಬರೆಯುವುದು ಅತ್ಯಾವಶ್ಯಕವಾಗಿದ್ದು, ಎಲ್ಲಾ ಆಚಾರ್ಯರುಗಳೂ ಈ ಸಂಪ್ರದಾಯವನ್ನು ಅನುಸರಿಸಿದ್ದಾರೆ. ಶ್ರೀ ರಾಮಾನುಜರೂ ಬ್ರಹ್ಮಸೂತ್ರಗಳಿಗೆ ಪ್ರಸಿದ್ಧವಾದ 'ಶ್ರೀಭಾಷ್ಯ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಭಾರತೀಯ ವಿದ್ವನ್ಮಣಿಗಳ ಆದರಕ್ಕೆ ಒಳಗಾಗಿರುವ 'ಶ್ರೀಭಾಷ್ಯ'ವನ್ನು ಪಾಶ್ಚಾತ್ಯ ವಿದ್ವಾಂಸನಾದ ಥಿಬೋ ಮಹಾಶಯನು ಮುಕ್ತಕಂಠದಿಂದ ಪ್ರಶಂಸೆ ಮಾಡಿರುವುದಲ್ಲದೆ, ಶ್ರೀ ರಾಮಾನುಜರ ಭಾಷ್ಯವು ಸೂತ್ರಕಾರನ ಅಭಿಪ್ರಾಯಗಳಿಗೆ ಸಮ್ಮತವಾಗಿರುವುದಾಗಿ ತಿಳಿಸಿದ್ದಾನೆ. ಶ್ರೀಭಾಷ್ಯಕ್ಕೆ ಶ್ರೀ ಸುದರ್ಶನ

ಸೂರಿಗಳೆಂಬ ಮಹನೀಯರು ಶ್ರುತ ಪ್ರಕಾಶಿಕಾ ಎಂಬ ವಿಸ್ತಾರವಾದ ಅನು ವ್ಯಾಖ್ಯಾನವನ್ನು ರಚಿಸಿದ್ದಾರೆ. ಅವರ ನಂತರ ಶ್ರೀ ರಾಮಾನುಜರ ಶಿಷ್ಯಪರಂ ಪರೆಯಲ್ಲಿ ಬಂದ ಶ್ರೀ ವೇದಾಂತ ದೇಶಿಕರು 'ತತ್ವಟೀಕಾ' ಎಂಬ ವ್ಯಾಖ್ಯಾನ ವನ್ನು ಶ್ರೀಭಾಷ್ಯಕ್ಕೆ ಅನುಗ್ರಹಿಸಿದ್ದಾರೆ. ಆದರೆ ದುರದೃಷ್ಟವಶಾತ್, ಈ ಗ್ರಂಥವು ಪೂರ್ತಿ ಉಪಲಬ್ಧವಿಲ್ಲ. ಕೇವಲ ಜಿಜ್ಞಾಸಾಧಿಕರಣದ ಕೆಲವು ಪ್ರಕರಣಗಳ ಮೇಲೆ ಬರೆದಿರುವ ವ್ಯಾಖ್ಯಾನ ಮಾತ್ರ ಲಭ್ಯವಿದೆ.

**8. ಪ್ರಮೇಯ ಸಂಗ್ರಹ :**

ಅನಾದಿಯಾದ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಶ್ರುತಿಗಳೂ, ಸ್ಮೃತಿಗಳೂ ಮತ್ತು ಸೂತ್ರಗಳೂ ಪರಮಾಧಾರವಾಗಿದೆ. ಶ್ರುತಿಪ್ರತಿಪಾದ್ಯವಾದ ಅನೇಕ ಅಂಶಗಳು ಭಕ್ತೋತ್ತಮರಾದ ಆಳ್ವಾರರುಗಳಿಂದ ದ್ರಾವಿಡ ಪ್ರಬಂಧಗಳಲ್ಲಿ ನಿರೂಪಿಸಲ್ಪಟ್ಟಿರುವ ಕಾರಣ ಅವೂ ಆ ದರ್ಶನಕ್ಕೆ ಆಧಾರಗಳೆಂದು ಹೇಳಿದೆ. ಶ್ರೀಮದ್ರಾಮಾಯಣ, ಮಹಾಭಾರತ, ಪಾಂಚರಾತ್ರಾಗಮ ಮೊದಲಾದವು ಈ ದರ್ಶನದ ಪ್ರಧಾನ ಪ್ರಮೇಯಗಳನ್ನು ವಿವೇಚಿಸುತ್ತವೆ. ಈ ಆಧಾರಗಳಿಗೆಲ್ಲಾ ಸಮಂಜಸವಾಗುವಂತೆ ಈ ಸಿದ್ಧಾಂತದ ಪ್ರಮೇಯ ನಿರೂಪಣೆಯನ್ನು ಆಚಾ ರ್ಯರುಗಳು ಮಾಡಿದ್ದಾರೆ. ವಿಶಿಷ್ಟಾದ್ವೈತ ಎಂಬ ಶಬ್ದವೇ ಸೂಚಿಸುವಂತೆ ಅನೇಕ ವಿಶೇಷಣಗಳಿಂದ ಕೂಡಿದ ವಸ್ತು ಒಂದೇ ಎಂಬುದು ಈ ದರ್ಶನದ ನೆಲೆ. ವಿಶೇಷಣಗಳು ಅನೇಕವಾಗಿದ್ದರೂ ಅವುಗಳನ್ನೆಲ್ಲಾ ಹೊಂದಿರುವ ವಿಶೇಷ್ಯ ಒಂದೇ. ವಿಶೇಷಣಗಳೂ ವಿಶೇಷ್ಯದಂತೆಯೇ ಸತ್ಯವಾದವು ಎಂಬ ನಿಶ್ಚಯ ಇದರಿಂದ ಉಂಟಾಗುತ್ತದೆ. ವಿಶೇಷ್ಯ ವಸ್ತುವನ್ನು ಬಿಟ್ಟು ವಿಶೇಷಣಗಳು ಸ್ವತಂತ್ರವಾಗಿ ಇರಲಾರವ ಕಾರಣ ಅವುಗಳಿಂದ ಎಡೆಬಿಡದೆ ಕೂಡಿದ ವಸ್ತು ಏಕಮೇವಾದ್ವಿತೀಯವಾಗಿ ಅದ್ವೈತವೂ ಫಲಿಸುವುದು. ಆದರೆ ಈ ಅದ್ವೈತ ನಿರ್ವಿಶೇಷಾದ್ವೈತವಲ್ಲ; ವಿಶಿಷ್ಟಾದ್ವೈತ.

ಬ್ರಹ್ಮವಸ್ತು ಸತ್ಯವೂ ಗುಣಪರಿಪೂರ್ಣವೂ ಆದುದು. ಹಾಗೆಯೇ ಜೀವರುಗಳೂ, ಜಗತ್ತೂ ಸತ್ಯವಾಗಿದ್ದಾರೆ. ಇವರು ಆ ಬ್ರಹ್ಮವಸ್ತುವಿಗಿಂತ ಸ್ವರೂಪ ಸ್ವಭಾವಗಳಲ್ಲಿ ಬೇರೆಯಾಗಿದ್ದರೂ ಇದನ್ನು ಬಿಟ್ಟಿರಲಾರರು. ಅದ ಕ್ಕಧೀನವಾಗಿಯೇ ಇರುವವರಾಗಿದ್ದಾರೆ. ಇವರ ಇರುವಿಕೆ, ಇವರ ಪ್ರವೃತ್ತಿ ಆ

ಬ್ರಹ್ಮವಸ್ತುವಿಗೆ ಅಧೀನವಾಗಿಯೇ ಇರುವುದಾಗಿದೆ. ಇದನ್ನೇ ಶಾಸ್ತ್ರೀಯವಾದ ಪರಿಭಾಷೆಯಲ್ಲಿ 'ಅಪೃಥಕ್ಸಿದ್ಧ ವಿಶೇಷಣಗಳು' ಎಂದು ಹೇಳುತ್ತಾರೆ. ಜೀವ, ಬ್ರಹ್ಮ, ಜಗತ್ತುಗಳಿಗೆ ಬೇರೆ ಬೇರೆ ಸ್ವರೂಪ ಸ್ವಭಾವಗಳಿರುವ ಕಾರಣ ಭೇದವೂ ಇದೆ. ಜೀವ ಜಗತ್ತುಗಳು ಎಲ್ಲ ಅವಸ್ಥೆಗಳಲ್ಲಿಯೂ ಬ್ರಹ್ಮವಸ್ತುವಿನೊಡನೆಯೇ ಕೂಡಿಕೊಂಡಿರುವುದರಿಂದ ಅದ್ವೈತವೂ ಆಗುತ್ತದೆ. ಈ ಸಿದ್ಧಾಂತದಲ್ಲಿ ಈ ಪ್ರಕಾರವಾಗಿ ಪ್ರಮೇಯ ನಿರೂಪಣೆಯನ್ನು ಆಚಾರ್ಯರು ಮಾಡಿದ್ದಾರೆ.

ಯಾಮುನರು 'ಸಿದ್ಧಿತ್ರಯ'ವೆಂಬ ತಮ್ಮ ಗ್ರಂಥದಲ್ಲಿ ಆತ್ಮಸಿದ್ಧಿ, ಈಶ್ವರ ಸಿದ್ಧಿ ಮತ್ತು ಸಂವಿತ್ಸಿದ್ಧಿ ಎಂಬ ಮೂರು ಪ್ರಕರಣಗಳಲ್ಲಿ ಜೀವಾತ್ಮರ, ಪರ ಮಾತ್ಮನ ಮತ್ತು ಧರ್ಮಭೂತ ಜ್ಞಾನದ ಸಮರ್ಥನೆಯನ್ನು ಮಾಡಿದ್ದಾರೆ. ಆತ್ಮಸಿದ್ಧಿಯಲ್ಲಿ ಜೀವ ಸ್ವರೂಪವನ್ನು ನಿರೂಪಿಸುವ ಸಂದರ್ಭದಲ್ಲಿ ಪ್ರಕೃತಿ, ಜೀವ ಮತ್ತು ಈಶ್ವರ ಇವರ ಸ್ವರೂಪ ನಿರೂಪಣೆಯನ್ನು ಯಾಮುನರು ಮಾಡಿದ್ದಾರೆ. ಭಗವದ್ಭಾಷ್ಯಕಾರರು ತಮ್ಮ ಶ್ರೀಭಾಷ್ಯಾದಿ ಗ್ರಂಥಗಳಲ್ಲಿ ಈ ಸಿದ್ಧಾಂತದ ಪ್ರಧಾನ ಪ್ರಮೇಯಗಳನ್ನು, ಪ್ರಮಾಣಗಳನ್ನು ಪ್ರಭಾವಪೂರ್ಣವಾಗಿ ಪ್ರತಿಪಾದಿಸಿದ್ದಾರೆ. ಸರ್ವ ಶ್ರುತಿವಾಕ್ಯಗಳಿಗೂ ಸಾಮಂಜಸ್ಯವುಂಟಾಗುವಂತೆ ಎಲ್ಲ ಶ್ರುತಿವಾಕ್ಯಗಳಿಗೂ ಮುಖ್ಯಾರ್ಥವನ್ನು ಹೇಳಿ ಶ್ರುತಿವಾಕ್ಯಗಳಿಗೆ ಆಪಾತತಃ ಕಾಣುತ್ತಿದ್ದ ಪರಸ್ಪರ ವಿರೋಧವನ್ನು ಪರಿಹರಿಸಿದ್ದಾರೆ. ಸಾಮಾನಾಧಿಕರಣ, ಪ್ರಕಾರ ಪ್ರಕಾರಿಭಾವ, ಸತ್ಕಾರ್ಯವಾದ, ಶರೀರ ಶರೀರಭಾವ, ಉಭಯ ಲಿಂಗತ್ವ, ಉಭಯವಿಭೂತತ್ವ, ವಿಗ್ರಹಗುಣತ್ವ ಮೊದಲಾದ ವಿಚಾರಗಳನ್ನು ಶಾಸ್ತ್ರೀಯವಾಗಿ ವಿವೇಚಿಸಿ ಈ ಸಿದ್ಧಾಂತದ ಸ್ಥಾಪನಾಚಾರ್ಯರಾಗಿದ್ದಾರೆ.

ಹೀಗೆ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಧಾನವಾದ ಪ್ರಮೇಯಗಳನ್ನು ಶ್ರೀಮನ್ನಾಥಮುನಿಗಳೂ, ಯಾಮುನ ಮುನಿಗಳು ಮತ್ತು ಶ್ರೀಮದ್ರಾಮಾನುಜ ಮುನಿಗಳು ಉಪದೇಶಿಸಿದರು. ಮುಂದಿನ ಕಾಲದಲ್ಲಿ ಈ ಸಿದ್ಧಾಂತಕ್ಕನುಸಾರವಾಗಿ ಶಾಸ್ತ್ರೀಯವಾದ ಸರಣಿಯಲ್ಲಿ ಈ ಪ್ರಮೇಯಗಳನ್ನು ವಿಶದವಾಗಿ ಆಚಾರ್ಯರು ವಿವರಿಸಿದ್ದಾರೆ. ಪದಾರ್ಥವಿಭಾಗ, ಸೃಷ್ಟಿಕ್ರಮ, ಪದಾರ್ಥಲಕ್ಷಣ, ಪದಾರ್ಥ ಪರೀಕ್ಷಣ ಮೊದಲಾದವನ್ನು ಇತರ ದಾರ್ಶನಿಕರಾದ ಸಾಂಖ್ಯರು, ನೈಯ್ಯಾಯಿಕರು ಮೊದಲಾದವರ ಕ್ರಮವನ್ನನುಸರಿಸಿ ಈ ಪ್ರಮೇಯದ ನಿರೂಪಣೆಯನ್ನು

ಸಿದ್ಧಾಂತಕ್ಕನುಸಾರ ಮಾಡಲಾಯಿತು. ರಾಮಾನುಜರ ನಂತರ ಬಂದ ಆಚಾರ್ಯರುಗಳು ಬಹುಮುಖ್ಯವಾಗಿ ಈ ಬಗೆಯ ಕೃತಿಗಳನ್ನು ರಚಿಸಿದ್ದರೂ ನಮ್ಮ ದುರ್ದೈವದಿಂದ ಅವುಗಳೆಲ್ಲ ಉಪಲಬ್ಧವಾಗಿಲ್ಲ. ವೇದಾಂತ ದೇಶಿಕರ ಕೃತಿರತ್ನಗಳಲ್ಲಿ ಪ್ರಾಚೀನಾಚಾರ್ಯರುಗಳ ಉಲ್ಲೇಖಗಳು ಮಾತ್ರ ಹೇರಳವಾಗಿ ದೊರೆಯುತ್ತವೆ.

ಈ ಕ್ರಮವಲ್ಲಿ ಪ್ರಮೇಯ ನಿರೂಪಣೆಯನ್ನು ವಿಶದವಾಗಿ ಮಾಡಿರುವ ಕೃತಿಗಳಲ್ಲಿ ನಮಗೆ ದೊರಕಿರುವುವು ಮೇಘನಾದಾರಿ ಸೂರಿಗಳ ನಯದ್ಯುಮಣಿ ಮತ್ತು ವೇದಾಂತ ದೇಶಿಕರ ನ್ಯಾಯ ಸಿದ್ಧಾಂಜನ, ತತ್ತ್ವ ಮುಕ್ತಾಕಲಾಪ ಮತ್ತು ನ್ಯಾಯ ಪರಿಶುದ್ಧಿಗಳೇ ಆಗಿವೆ. ಮೇಘನಾದಾರಿಸೂರಿಗಳು ವೇದಾಂತ ದೇಶಿಕರ ಹಿರಿಯ ಸಮಕಾಲೀನರು. ಅವರ ನಯದ್ಯುಮಣಿಯಲ್ಲಿ ನಯ್ಯಾಯಿಕ ಸರಣಿಯಲ್ಲಿ ಪ್ರಮಾಣ, ಪ್ರಮೇಯಗಳ ನಿರೂಪಣೆ ಇದೆ. ದೇಶಿಕರ ನ್ಯಾಯ ಸಿದ್ಧಾಂಜನ ಪ್ರಮೇಯ ನಿರೂಪಣಕ್ಕೂ ಪ್ರಾಯಪರಿಶುದ್ಧಿ ಪ್ರಮಾಣ ನಿರೂಪಣೆಗೂ ಮೀಸಲಾಗಿವೆ. ತತ್ವಮುಕ್ತಾಕಲಾಪವೆಂಬ ಸ್ರಗ್ಧರಾವೃತ್ತದ ಪದ್ಯ ಗ್ರಂಥವೂ ಪ್ರಮೇಯ ನಿರೂಪಣೆಯನ್ನು ವಿಶಿಷ್ಟವಾದ ರೀತಿಯಲ್ಲಿ ಪ್ರಭಾವ ಪೂರ್ಣವಾಗಿ ಮಾಡುತ್ತದೆ. ಈ ಕೃತಿಗೆ ಆಚಾರ್ಯರೇ ಸರ್ವಾರ್ಥಸಿದ್ಧಿ ಎಂಬ ವ್ಯಾಖ್ಯಾನವನ್ನು ಅನುಗ್ರಹಿಸಿದ್ದಾರೆ. ಈ ಗ್ರಂಥಗಳಲ್ಲಿ ಈ ಸಿದ್ಧಾಂತಕ್ಕನುಸಾರವಾಗಿ ಆಚಾರ್ಯರು ಪ್ರಮೇಯ ನಿರೂಪಣೆಯನ್ನು ಶಾಸ್ತ್ರೀಯವಾಗಿ ಮಾಡಿದ್ದಾರೆ. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸಮರ್ಥನ ಮಾಡುವ ಮಹಾ ಕಾರ್ಯದಲ್ಲಿ ವೇದಾಂತ ದೇಶಿಕರು ರಚಿಸಿದ ಗ್ರಂಥಗಳು ಬಹುಪ್ರಕಾರವಾಗಿವೆ. ಭಗವದ್ರಾಮಾನುಜರ ಗ್ರಂಥಗಳಿಗೆ ಕ್ಷೋದ ಕ್ಷೋಮವಾದ ವ್ಯಾಖ್ಯಾನಗಳನ್ನು ರಚಿಸಿ ಸಿದ್ಧಾಂತ ಸಂರಕ್ಷಣೆ ಮಾಡಿದ್ದಾರೆ. ತತ್ವಟೀಕಾ, ತಾತ್ಪರ್ಯಚಂದ್ರಿಕಾ, ಗದ್ಯ ಭಾಷ್ಯ ಮೊದಲಾದವು ಈ ಶ್ರೇಣಿಗೆ ಸೇರುತ್ತವೆ. ಇತರ ಸಿದ್ಧಾಂತಗಳನ್ನು ಕಠಿಣವಾಗಿ ಪರೀಕ್ಷಿಸಿ ಅವುಗಳ ದೋಷಗಳನ್ನು ಬಯಲಿಗೆಳೆದು ಸ್ವಸಿದ್ಧಾಂತದ ಸ್ಥಾಪನೆ ಮಾಡಿದ್ದಾರೆ. ಶತದೂಷಣೀ, ಪರಮತಭಂಗ ಮೊದಲಾದವು ಈ ಗುಂಪಿಗೆ ಸೇರುತ್ತವೆ. ಸಿದ್ಧಾಂತದ ಅನೇಕಾನೇಕ ಅಂಶಗಳನ್ನು ಯುಕ್ತಿಯುಕ್ತವಾಗಿ ಪ್ರತಿಪಾದಿಸುವ ಸ್ವತಂತ್ರವಾದ ಪ್ರಕರಣ ಗ್ರಂಥಗಳನ್ನು ಬರೆದಿದ್ದಾರೆ. ಮೇಲೆ ಹೇಳಿದ ನ್ಯಾಯ ಸಿದ್ಧಾಂಜನ ಮೊದಲಾದವು ಈ ಗುಂಪಿಗೆ ಸೇರಿದವು.

ವೇದಾಂತ ದೇಶಿಕರವರು ಹೀಗೆ ಅನೇಕ ಪ್ರಕಾರಗಳಲ್ಲಿ ಈ ಸಿದ್ಧಾಂತದ ಪ್ರಮೇಯ ಗಳನ್ನು ಸ್ಪಷ್ಟಪಡಿಸದೆ ಹೋಗಿದ್ದರೆ ಈ ಸಿದ್ಧಾಂತದ ಸ್ವರೂಪವು ಇಷ್ಟು ಸ್ಪಷ್ಟ ವಾಗಿ ಗೊತ್ತಾಗುತ್ತಿರಲಿಲ್ಲ.

ಪ್ರಧಾನವಾದ ಪ್ರಮೇಯ ಈ ಸಿದ್ಧಾಂತಕ್ಕನುಸಾರವಾಗಿ ಪರಮತತ್ತ್ವ ವಾದ ಶ್ರೀಮನ್ನಾರಾಯಣನೇ ಆಗಿದ್ದಾನೆ. ಈ ತತ್ತ್ವ ಏಕಮೇವಾದ್ವಿತೀಯ ವಾದುದೆಂದೂ ಸಮಸ್ತವಾದ ಚೇತನಾಚೇತನ ಪದಾರ್ಥಗಳೊಂದೊಡಗೂಡಿದೆ ಯೆಂದೂ ಸಮರ್ಥಿಸಿ ದೇಶಿಕರು 'ಅಶೇಷಚಿದಚಿತ್ರಕಾರಂ ಬ್ರಹ್ಮೈಕಮೇವ ತತ್ತ್ವಂ' ಎಂದು ಉದ್ಘೋಷಿಸಿದ್ದಾರೆ. ಯಾವುದೊಂದನ್ನು ತಿಳಿದರೆ ಸಂಸಾರ ದಿಂದ ವಿಮುಕ್ತಿಯೊ, ಯಾವುದೊಂದನ್ನು ತಿಳಿಯದಿದ್ದರೆ ಸಂಸಾರದಿಂದ ವಿಮೋ ಚನೆಯಿಲ್ಲವೊ ಅದೇ ಪ್ರಮೇಯ ಎನ್ನಿಸುವುದು. ಇದನ್ನೇ 'ಯದ್ವಿಷಯೇಣ ಭ್ರಮೇಣ ಸಂಸರಣಮಃ ಯದ್ವಿಷಯೇಣ ತತ್ತ್ವಜ್ಞಾನೇನ ಅಪವರ್ಗ್ಯೇಮಹಿ ತದಿಹ ನ ಪ್ರಕರ್ಷೇಣ ಮೇಯಂ ಪ್ರಮೇಯಂ' ಎಂದು ನ್ಯಾಯಪರಿಶುದ್ಧಿಯಲ್ಲಿ ದೇಶಿಕರವರು ಹೇಳಿದ್ದಾರೆ. ಭಗವದ್ರಾಮಾನುಜರೂ ಸಹ ಈ ಅಂಶವನ್ನೇ 'ತಾಪತ್ರಯಾತುರೈರಮೃತತ್ವಾಯ ಪರ ಏವ ಜಿಜ್ಞಾಸ್ಯಃ' ಎಂದು ತಿಳಿಸಿದ್ದಾರೆ.

ಇದಲ್ಲದೆ ಚಿಲ್ಲರೈ ರಹಸ್ಯಗಳೆಂಬ ಮಣಿ ಪ್ರವಾಳ ಶೈಲಿಯಲ್ಲಿ ಬರೆದಿರುವ ಚಿಕ್ಕ ಚಿಕ್ಕ ಕೃತಿಗಳಲ್ಲಿ ಶ್ರೀವೈಷ್ಣವ ಸಂಪ್ರದಾಯದ ಅನೇಕ ಗಹನ ವಿಷಯ ಗಳನ್ನು ಚಿಕ್ಕದಾದ ವಾಕ್ಯಗಳಲ್ಲಿ ಎಲ್ಲರಿಗೂ ತಿಳಿಯುವಂತೆ ರಚಿಸಿದ್ದಾರೆ.

ಶ್ರೀವೈಷ್ಣವ ಸಿದ್ಧಾಂತಕ್ಕೆ ಶ್ರೀ ದೇಶಿಕರ ಕೊಡುಗೆ ಅಪಾರವಾದದ್ದು. ಶ್ರೀ ರಾಮಾನುಜರ ಸಿದ್ಧಾಂತವೆಂಬ ಹೊಲಕ್ಕೆ ಶ್ರೀ ದೇಶಿಕರೆಂಬ ಬೇಲಿಯು ಇಲ್ಲದಿದ್ದಲ್ಲಿ ಅದ್ವೈತಿಗಳೆಂಬ ಹಸುಗಳು ಆ ಹೊಲವನ್ನು ಮೇಯ್ದು ಬಿಡುತ್ತಿದ್ದವು ಎಂಬ ವ್ಯಾಖ್ಯಾನಕಾರರೋರ್ವರ ಮಾತು ಅತಿಶಯೋಕ್ತಿ ಏನಲ್ಲ.

oo oo oo oo

## 6. ಮಣವಾಳ ಮಾಮುನಿ (1370–1443)

ವೇದಾಂತ ದೇಶಿಕರು ಪರಮಪದಿಸಿದ ಮರುವರ್ಷವೇ ಇವರು ಜನಿಸಿ ದುದು, ಅಷ್ಟೇ ಪ್ರಖ್ಯಾತರಾಗಿ, ಶ್ರೀವೈಷ್ಣವ ದರ್ಶನ ಎನ್ನುವ ನಾಣ್ಯದ

ಇನ್ನೊಂದು ಮುಖದ ಸೇವೆ ಮಾಡಿದುದು ಆಶ್ಚರ್ಯಕರ ವಿಷಯವಾಗಿದೆ.

ಶ್ರೀವೈಷ್ಣವ ದರ್ಶನ ಮತ್ತು ಸಂಸ್ಕೃತಿಗಳ ಪ್ರಚಾರಕ್ಕಾಗಿ ಇವರು ತಮ್ಮ ಜೀವನವನ್ನೇ ಮುಡುಪಾಗಿಟ್ಟರು. ಕೆಲವು ಕಾಲ ಗೃಹಸ್ಥರಾಗಿದ್ದು, ನಂತರ ಸನ್ಯಾಸಿಗಳಾಗಿದ್ದು ಶ್ರೀರಂಗದಲ್ಲಿ ಶ್ರೀರಂಗನಾಥನ ಸೇವೆಯಲ್ಲಿ ನಿರತರಾಗಿದ್ದರು. ಇದರೊಂದಿಗೆ ಪ್ರವಚನ ಕಾಲಕ್ಷೇಪ, ವ್ಯಾಖ್ಯಾನ, ಸ್ವತಂತ್ರ ಗ್ರಂಥಗಳು ಹಾಗೂ ಸ್ತೋತ್ರಗಳ ರಚನೆ, ಶ್ರೀವೈಷ್ಣವ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ ಇತ್ಯಾದಿಗಳ ಮುಖಾಂತರ ಶ್ರೀವೈಷ್ಣವ ಸಂಸ್ಕೃತಿ-ಜನಜೀವನಕ್ಕೆ ಹೊಸ ರೂಪ ನೀಡಿದರು. ದಿವ್ಯದೇಶಗಳ ದರ್ಶನ ಮಾಡುವಾಗ ಇವರ ಸುಂದರ ರೂಪ, ರಹಸ್ಯಾರ್ಥ ವಿಮರ್ಶನಾ ಸಾಮರ್ಥ್ಯ, ವಾಕ್ಚಾತುರ್ಯಗಳಿಗೆ ಆಕರ್ಷಿತರಾಗಿ ಅನೇಕರು ಇವರ ಶಿಷ್ಯರಾದರು. ಇವರ ಶ್ರೀಮಂತ ಶಿಷ್ಯರ ನೆರವಿನಿಂದ ಸಾವಿರಾರು ದೇವಾಲಯಗಳ ಜೀರ್ಣೋದ್ಧಾರ ಮಾಡಿದರು. ವಿಷ್ಣುಪರ ಸ್ತೋತ್ರಗಳು, ನೃತ್ಯಪ್ರದರ್ಶನ ಪ್ರಚಾರ ಮಾಡಿದರು. ಕಲೆಯ ಮುಖಾಂತರ ಮೋಕ್ಷ ಪಡೆಯುವ ಸಾಧನವನ್ನು ಇವರು ರೂಢಿಗೆ ತಂದರು.

ಪಿಳ್ಳೈ ಲೋಕಾಚಾರ್ಯರ ಸಿದ್ಧಾಂತಗಳಿಂದ ಬಹಳವಾಗಿ ಪ್ರಭಾವಿತಗೊಂಡ ಇವರು ಅವರ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದರು. ಅಲ್ಲದೆ ಅವರ ಸಹೋದರರು, ಪೆರಿಯವಾಚ್ಚಾನ್ ಪಿಳ್ಳೈ, ಅರುಳಾಳ ಪೆರುಮಾಳ್ ಮತ್ತಿತರ ಆಚಾರ್ಯರ ಕೃತಿಗಳಿಗೆ ವ್ಯಾಖ್ಯಾನವನ್ನು ರಚಿಸಿರುವರು.

ಇವಲ್ಲದೆ ಬಹಳಷ್ಟು ಸ್ವತಂತ್ರ ಗ್ರಂಥಗಳನ್ನೂ ಇವರು ರಚಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುವು-ಪ್ರಮಾಣತ್ತಿರಟ್ಟು, ತಿರುವಾಯ್ಮೊಳಿ ನೂತ್ತಂದಾದಿ, ಯತಿರಾಜ ವಿಂಶತಿ, ಉಪದೇಶ ರತ್ನಮಾಲೈ, ಆರ್ತಿ ಪ್ರಬಂಧ, ತಿರುವಾರಾಧನ ಕ್ರಮ, ಅರುಂಪದಂ, ದೇವರಾಜ ಮಂಗಲಂ, ಮುಕ್ತಕ ಮಂಗಲಂ ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ. ರಾಮಾಯಣ, ಮಹಾಭಾರತಗಳಿಗೆ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇವಲ್ಲದೆ ಗೀತಾತಾತ್ಪರ್ಯ ದೀಪಾ, ಶ್ರೀಭಾಷ್ಯ ರತ್ನ ಟೀಕಾ, ಗೋದಾ ಚತುಶ್ಲೋಕೀ, ಶ್ರೀ ಭಾಷ್ಯಕಾರ ಮಂಗಳಂ, ದಿವ್ಯದೇಶ ಮಂಗಳಾಷ್ಟಕ ಎನ್ನುವವುಗಳನ್ನೂ ರಚಿಸಿದ್ದಾರೆ.

'ಭಕ್ತಿಯು ಜ್ಞಾನ, ಕರ್ಮಗಳಿಗಿಂತಲೂ ಮುಖ್ಯವಾದುದು. ಸಮಾಜ ನಿಷ್ಠೆ ತುಂಬಾ ಮುಖ್ಯವಾದುದು. ಇದು ವ್ಯಕ್ತಿನಿಷ್ಠೆಗಿಂತಲೂ ಮುಖ್ಯ. ಉತ್ತಮ

ಸಮಾಜದ ನಿರ್ಮಾಣಕ್ಕೆ ಪ್ರತಿಯೊಬ್ಬನೂ ಶ್ರಮಿಸಬೇಕು. ಜಾತಿ ಮುಖ್ಯ ವಲ್ಲ. ಭಕ್ತನಾದವನು ಯಾವುದೇ ಜಾತಿಯವನಾದರೂ, ಎಲ್ಲ ಭಕ್ತರೂ ಸಮಾನರು.

'ಮಾನವನು ಪ್ರಯತ್ನ ಮಾಡುವುದರ ಮುಖಾಂತರವೇ ದೇವರ ಕೃಪೆ ಯನ್ನು ಪಡೆಯುವನು. ಇಲ್ಲದಿದ್ದರೆ ಇಲ್ಲ. ವ್ಯಕ್ತಿಯು ಉದ್ಧಾರ ಮಾಡಲು ಗುರುವಿನಿಂದಲೇ ಸಾಧ್ಯ. ಗುರು ಕರುಣೆ ಇಲ್ಲದೆ ಮಾನವನ ಉದ್ಧಾರವಿಲ್ಲ. ಅರಿಷಡ್ವರ್ಗ ಹಾಗೂ ಲೌಕಿಕ ವಿಷಯಗಳು ಆತ್ಮವನ್ನು ಪತನದೆಡೆಗೆ ಕರೆ ದೊಯ್ಯುತ್ತವೆ. ಅಹಂಕಾರವೂ ಕೂಡ ಮಾನವನ ನಾಶಕ್ಕೆ ಕಾರಣವಾಗು ತ್ತದೆ. ಆದುದರಿಂದ ಅವನ್ನು ತ್ಯಜಿಸಬೇಕು

'ಧನವನ್ನು ಆಶಿಸುವವನು ನರಕಕ್ಕೆ ಹೋಗುವನು. ಧರ್ಮದ ಅನು ಷ್ಠಾನ ಮಾಡುವವರು ಇದನ್ನು ಅನುಸರಿಸಬಾರದು. ಭಾಗವತರು ಭಗವಂತ ನಂತೆ ಪೂಜ್ಯರು ಹಾಗೂ ಅವನಿಗೆ ಸಮಾನರು. ಆದುದರಿಂದ ಅವರ ಸೇವೆಯಲ್ಲಿ ನಿರತರಾಗಿ ಆತ್ಮಜ್ಞಾನ ಪಡೆಯಬೇಕು. ಇದರಿಂದ ಚೇತನರು ತಾವು ಉದ್ಧಾರ ವಾಗುವುದಲ್ಲದೆ, ತಮ್ಮ ಆಚಾರ್ಯರಿಗೆ ಪ್ರತ್ಯುಪಕಾರ ಮಾಡುತ್ತಾರೆ. ಜೀವ ಕೋಟಿಯಲ್ಲಿ ಅಂತರ್ಯಾಮಿಯಾಗಿರುವ ಭಗವಂತನಲ್ಲಿ ಹಾಗೂ ಭಾಗವತರಲ್ಲಿ ನಿಷ್ಠೆ ತೋರುವವರಿಗೆ ಮೋಕ್ಷಸಿದ್ಧಿ ಸುಲಭ' ಎಂಬುದು ಮಣವಾಳರ ಮುಖ್ಯ ಉಪದೇಶ. ಇದು ಶ್ರೀವೈಷ್ಣವ ದರ್ಶನದ ತಿರುಳೂ ಆಹುದು.

ಮಣವಾಳ ಮಾಮುನಿಗಳೂ ಪಿಳ್ಳೈ ಲೋಕಾಚಾರ್ಯರು ಹಾಗೂ ಶ್ರೀ ರಾಮಾನುಜರಿಂದ ಹೆಚ್ಚು ಪ್ರಭಾವಿತರಾದುದರಿಂದ ಅವರ ಸಿದ್ಧಾಂತಗಳನ್ನೆ ಹೆಚ್ಚಾಗಿ ಪ್ರಚಾರ ಮಾಡಿದರೂ, ಆ ಸಿದ್ಧಾಂತಗಳೊಂದಿಗೆ ತಮ್ಮದೇ ಆದ ಸಿದ್ಧಾಂತಗಳನ್ನು ಇವರು ಪ್ರತಿಪಾದಿಸಿದ್ದಾರೆ. ಇವರು ಲಕ್ಷ್ಮೀತತ್ವದ ಬಗ್ಗೆ ಹಾಗೂ ಭಕ್ತಿ, ಪ್ರಪತ್ತಿ ಹಾಗೂ ಭಗವತ್ ಪ್ರೇಮದ ಬಗ್ಗೆ ತಮ್ಮದೇ ಆದ ಭಾವನೆಗಳನ್ನು ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿದ್ದಾರೆ. ತಮ್ಮದೇ ಆದ ಪ್ರಪತ್ತಿ ಮಾರ್ಗವನ್ನೂ ಇವರು ವಿವೇಚಿಸಿದ್ದಾರೆ. ಇದನ್ನು ರಾಗಪ್ರಾಪ್ತ-ಪ್ರಪತ್ತಿ' ಎಂದು ಕರೆಯಲಾಗುತ್ತದೆ.

7. ಕಸ್ತೂರಿ ರಂಗಾಚಾರ್ಯ

ಕಸ್ತೂರಿ ರಂಗಾಚಾರ್ಯರು (ಶ್ರೀರಂಗ ಸೂರಿಗಳು) ಮಣವಾಳ ಮಾಮುನಿಗಳ ಶಿಷ್ಯರು. ಇವರು ಬಹುಶಃ ಕ್ರಿ.ಶ. 15ನೇ ಶತಮಾನದ ಕೊನೆಯಲ್ಲಿ, 16ನೇ ಶತಮಾನದ ಪ್ರಾರಂಭದಲ್ಲಿ ಇದ್ದಿರಬಹುದು. ಕರ್ನಾಟಕದ ಕೋಲಾರ ಜಿಲ್ಲೆಗೆ ಸೇರಿದ ಇವರು ಪಿಳ್ಳೈ ಲೋಕಾಚಾರ್ಯ ಹಾಗೂ ಮಣವಾಳಮಾಮುನಿಗಳ ಪ್ರಭಾವಕ್ಕೆ ಒಳಗಾಗಿ ಕೆಲವು ಕಾಲ ಶ್ರೀರಂಗದಲ್ಲಿದ್ದು, ಆಚಾರ್ಯ ಸೇವೆ ಮಾಡಿ, ನಂತರ ಉತ್ತಮವಾದ ಎರಡು ಸಿದ್ಧಾಂತ ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿ, ಪರಮಪದವನ್ನೈದಿದರು. ಇವರು ರಚಿಸಿರುವ ಗ್ರಂಥಗಳೆಂದರೆ– 'ಕಾರ್ಯಾಧಿಕರಣ ವಾದ' ಮತ್ತು 'ಕಾರ್ಯಾಧಿಕರಣ ತತ್ವ' ಎನ್ನುವುವು.

ಈ ಸಮಯದವರೆಗೂ ರಾಮಾನುಜರ ಸಿದ್ಧಾಂತಗಳು ಯಾವುದೇ ಬದಲಾವಣೆಯನ್ನು ಹೊಂದದೆ, ನಾಲ್ಕು ಶತಮಾನಗಳ ನಂತರವೂ ಅವರ ಕಾಲದಲ್ಲಿ ಇದ್ದ ರೀತಿಯಲ್ಲೆ ಅವರ ಸಿದ್ಧಾಂತಗಳು ಅಚ್ಚುಕಟ್ಟಾಗಿದ್ದವು. ಇದೇ ಭಾವನೆಯನ್ನೆ ಕಸ್ತೂರಿ ರಂಗಾಚಾರ್ಯರು ತಮ್ಮ ಗ್ರಂಥಗಳಲ್ಲಿ ನಿರೂಪಿಸಿದ್ದಾರೆ. 'ಕಾರ್ಯಾಧಿಕರಣ ವಾದ'ದ ಕೃತಿಯಲ್ಲಿನ ಪ್ರತಿಪಾದನೆಗಳನ್ನೆ ಹೆಚ್ಚು ವಿಸ್ತಾರವಾಗಿ 'ಕಾರ್ಯಾಧಿಕರಣ ತತ್ವ'ದಲ್ಲಿ ವಿವರಿಸಲಾಗಿದೆ.

ಮುಂದಿನ ಆಚಾರ್ಯರು ಈ ಕೃತಿಗಳನ್ನೆ ತಮ್ಮ ಸಿದ್ಧಾಂತ ಕೃತಿಗಳಿಗೆ ಆಧಾರ ಮಾಡಿಕೊಂಡರು.

ಇಲ್ಲಿಂದ ಮುಂದೆ ಶ್ರೀವೈಷ್ಣವ ದರ್ಶನವು ನಿರಾತಂಕವಾಗಿ ಮುಂದುವರೆಯುತ್ತಾ ಬಂದಿದೆ. ಅಲ್ಪಸ್ವಲ್ಪ ಭೇದ ಭಾವಗಳಿದ್ದರೂ, ಅದು ಅತ್ಯಲ್ಪ ಎನ್ನುವ ರೀತಿಯಲ್ಲಿದೆ. ಗಮನಾರ್ಹ ಹಾಗೂ ಪ್ರಮುಖ ಸಿದ್ಧಾಂತ ಪ್ರವರ್ತಕರು ಕಾಣಿಸಿಕೊಳ್ಳಲಿಲ್ಲ. ಇದುವರೆವಿಗೆ ತಿಳಿಸಿದ ಆಚಾರ್ಯರುಗಳ ಸಿದ್ಧಾಂತಗಳನ್ನೆ ಪ್ರಚುರಪಡಿಸುತ್ತಾ ಮುಂದೆ ಸಾಗಿದೆ ಶ್ರೀವೈಷ್ಣವ ಸಮಾಜ.



# 5. ಕೀರ್ತನ ಸಾಹಿತ್ಯದಲ್ಲಿ ಶ್ರೀವೈಷ್ಣವ ದರ್ಶನ

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯದಂತೆ ಹರಿದಾಸ (ಕೀರ್ತನ) ಸಾಹಿತ್ಯವು ತನ್ನದೇ ಆದ ಪರಂಪರೆಯನ್ನು ಹೊಂದಿದೆ. ಈ ಹರಿದಾಸ ಸಾಹಿತ್ಯವು ಶ್ರೀ ಮಧ್ವಾಚಾರ್ಯರ ಉದಯದ ನಂತರ ಅವರು ಪ್ರತಿಪಾದಿಸಿದ ದ್ವೈತ (ಮಧ್ವ) ಸಿದ್ಧಾಂತ ಅನುಯಾಯಿಗಳು ಸೃಷ್ಟಿಸಿದ ಜನಪ್ರಿಯ ಸಾಹಿತ್ಯವೇ ಹರಿದಾಸ ಅಥವಾ ಕೀರ್ತನ ಸಾಹಿತ್ಯ ಎನ್ನುವ ನಂಬಿಕೆ ಅನೇಕರಲ್ಲಿದೆ. ಇವರಲ್ಲಿ ಪುರಂದರ, ಕನಕ, ವಾದಿರಾಜ ವೈಕುಂಠದಾಸರಿಂದ ಹಿಡಿದು, ಪ್ರಾಣೇಶ ವಿಠಲರ ವರೆಗೆ ಇರುವ ಎಲ್ಲ ಕೀರ್ತನಕಾರರನ್ನೂ ಮಧ್ವಸಿದ್ಧಾಂತದ ಹರಿದಾಸರು ಎನ್ನುವ ಮಾತು ರೂಢಿಯಲ್ಲಿ ಬಂದುಬಿಟ್ಟಿದೆ.

ಆದರೆ ಕಳೆದ ಶತಮಾನದ ಮಧ್ಯಭಾಗದಿಂದ ಅನೇಕ ನೂತನ ಸಂಶೋಧನೆಗಳು ನಡೆದು, ಈ ಕೀರ್ತನಕಾರರೆಲ್ಲ ಮಧ್ವಸಿದ್ಧಾಂತದ ಪರಂಪರೆಯವರು ಎನ್ನುವುದು ಸರಿಯಲ್ಲ ಎಂಬ ವಿಚಾರವನ್ನು ಬೆಳಕಿಗೆ ತಂದಿದ್ದಾರೆ.

ಇದರ ಫಲವಾಗಿ ಇದರಲ್ಲಿ ಅದ್ವೈತ ಪರಂಪರೆಯ ಕೀರ್ತನಕಾರರು ಇರುವುದನ್ನು ಕಂಡುಹಿಡಿಯಲಾಗಿದೆ. ಇದೇ ರೀತಿಯಲ್ಲಿ ಶ್ರೀವೈಷ್ಣವ ದರ್ಶನ ಪ್ರತಿಪಾದಿಸುವ ಕೀರ್ತನಕಾರರು ಇರುವರು ಎಂಬ ವಿಚಾರವನ್ನು ಸಾಹಿತ್ಯ ಚರಿತ್ರೆಕಾರರು ಅಲ್ಲಲ್ಲಿ ತಿಳಿಸಿದ್ದರೂ, ಇದರ ಬಗ್ಗೆ ಹೆಚ್ಚು ಗಮನ ನೀಡಿ, ಸಂಗ್ರಹಣ ಕಾರ್ಯವನ್ನು ಚುರುಕುಗೊಳಿಸಿದವರು ನಾ. ಗೀತಾಚಾರ್ಯ ಎನ್ನುವವರು ಮುಂಚೂಣಿಯಲ್ಲಿದ್ದಾರೆ.

ಹಾಗೆ ನೋಡಿದರೆ ದ್ವೈತ ಸಿದ್ಧಾಂತ ಪ್ರತಿಪಾದನೆಗೆ ವಿಶಿಷ್ಟಾದ್ವೈತ ಸಿದ್ಧಾಂತವೇ ಸ್ಫೂರ್ತಿ. ರಾಮಾನುಜರಿಂದ ಬಹಳಷ್ಟು ವಿಚಾರಗಳನ್ನು ಈ ಸಿದ್ಧಾಂತವು ಎರವಲು ಪಡೆದಿದೆ.

ರಾಮಾನುಜರ ಪ್ರವೇಶದ ನಂತರದಲ್ಲಿ ಕರ್ನಾಟಕದಲ್ಲಿ ಶ್ರೀವೈಷ್ಣವ ದರ್ಶನವು ಆಚಾರ್ಯರು ಹಾಗೂ ಅವರ ಶಿಷ್ಯರುಗಳಿಂದ ಹೆಚ್ಚು ಪ್ರಚಾರಕ್ಕೆ ಒಳಗಾಗಿತ್ತು. ಇದು ಮಧ್ವಸಿದ್ಧಾಂತದ ಮೇಲೂ ಪ್ರಭಾವ ಬೀರಿತು. ಹೀಗಾಗಿ ಪುರಂದರರ ಬಹಳಷ್ಟು ಕೀರ್ತನೆಗಳಲ್ಲಿ ಲಕ್ಷ್ಮಿ ದೇವಿಯ ಪ್ರಾಮುಖ್ಯತೆಯನ್ನು ಕಾಣಬಹುದು. 'ಭಾಗ್ಯದಾ ಲಕ್ಷ್ಮಿ ಬಾರಮ್ಮ' ಇತ್ಯಾದಿ ಕೀರ್ತನೆಗಳು ಈ

ವಿಷಯಕ್ಕೆ ಇಂಬುಕೊಡುತ್ತವೆ. ಲಕ್ಷ್ಮೀ ತತ್ತ್ವದ, ಆಕೆಯ ಪುರುಷಾಕಾರತ್ವದ, ಶ್ರೀತತ್ವದ ಬಗ್ಗೆ ಅನೇಕ ಕೀರ್ತನೆಗಳಿರುವುದನ್ನು ಪುರಂದರ ಹಾಗೂ ಇನ್ನಿತರೇ ಹರಿದಾಸರ ಸಾಹಿತ್ಯದಲ್ಲಿ ಕಾಣಬಹುದು.

ಸುಪ್ರಸಿದ್ಧ ಕವಿ ಲಕ್ಷ್ಮೀಶನು ಶ್ರೀವೈಷ್ಣವನು. ಇವನು ಕ್ರಿ.ಶ. 1345ರಲ್ಲಿ 'ಜೈಮಿನಿ ಭಾರತ'ವನ್ನು ಬರೆದನೆಂದು ಹೇಳಲಾಗುತ್ತದೆ. ಶ್ರೀಸಂಪ್ರದಾಯದ ಅನೇಕ ತತ್ವಗಳು ಇದರಲ್ಲಿ ಅಡಕವಾಗಿದೆ. ಇದೂನೂ ಗಮಕ ರೀತಿಯಲ್ಲಿ ಹಾಡುವುದು ಸಾಧ್ಯವಿರುವುದರಿಂದ, ಇದನ್ನು ಕೀರ್ತನ ರೂಪಕ್ಕೆ ಸೇರಿಸಲಾಗಿದೆ.

ಕನಕದಾಸರು ಶ್ರೀವೈಷ್ಣವರು, ರಾಮಾನುಜ ಮತಾನುಯಾಯಿಗಳು. ಇವರ ಸಮಕಾಲೀನರಾದ ಬೇಲೂರು ವೈಕುಂಠದಾಸರ ಮೂಲ ಹೆಸರು ಕೇಶವಯ್ಯಂಗಾರ್ಯರು. ಇವರು ಹೆಬ್ಬಾರ್ ಶ್ರೀವೈಷ್ಣವರು. ಇವರಿಬ್ಬರೂ ವೈಷ್ಣವ ಹರಿದಾಸರ ಸಂಪರ್ಕ, ಸಂಸರ್ಗಗಳಿಂದ ಪೂರ್ತಿಯಾಗಿ ಮಧ್ವಸಿದ್ಧಾಂತದ ಹರಿದಾಸ ಕೀರ್ತನೆಗಳನ್ನೆ ರಚಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಕಾಲದ ಗೀತಗೋಪಾಲವು ಶ್ರೀವೈಷ್ಣವ ಕೀರ್ತನೆಗಳಿಗೇ ಸೇರುತ್ತದೆ ಎಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಆದರೆ ವೈಕುಂಠದಾಸರ ಕೀರ್ತನೆಗಳಲ್ಲಿ 'ಪ್ರಪತ್ತಿ ಧರ್ಮ' ಎದ್ದುಕಾಣುವುದರೊಂದಿಗೆ 'ವೈಕುಂಠ ಕೇಶವ' ಎನ್ನುವ ಮುದ್ರಿಕೆ ಇವೆ. ಲಕ್ಷ್ಮೀಶ ಕವಿಯ ಹೆಸರಿನಲ್ಲಿ ಹತ್ತು ಕೀರ್ತನೆಗಳಿದ್ದು, ಇವು ಪ್ರಮುಖವಾಗಿ ಶ್ರೀಸಂಪ್ರದಾಯವನ್ನು ಪಸರಿಸುತ್ತವೆ. ಇವೆಲ್ಲವನ್ನೂ ಕಲೆಹಾಕಿ ಒಟ್ಟಾಗಿ ಪ್ರಕಟಿಸುವ ಕಾರ್ಯವಿನ್ನೂ ನಡೆದಿಲ್ಲ.

ಈಗಾಗಲೇ ತಿಳಿಸಿರುವಂತೆ ಚಿಕ್ಕದೇವರಾಜ ಒಡೆಯರ ಕಾಲದ ಶ್ರೀವೈಷ್ಣವ ಸಾಹಿತ್ಯದ ಕೆಲವು ಕೃತಿಗಳು ಈ ರೀತಿಯ ಕೀರ್ತನ ಸಾಹಿತ್ಯಕ್ಕೆ ಸೇರುತ್ತವೆ. ಅದರಂತೆ ಚಿಕ್ಕದೇವರಾಯನ 'ಗೀತಗೋಪಾಲ'ದೊಂದಿಗೆ, ಸಿಂಗರಾರ್ಯನ 'ಗೀತರಂಗೇಶ್ವರ', ಚಿಕ್ಕುಪಾಧ್ಯಾಯನ 'ಚಿಕ್ಕದೇವರಾಯ ಶೃಂಗಾರ ಪದಗಳು', 'ರಂಗನಾಥನ ಲಾಲೀ ಪದಗಳು' ಸೇರುತ್ತವೆ. ಕಳಲೆ ಕಾಂತರಾಜನ ಮಗಳಾದ ಚೆಲುವಾಂಬೆಯ 'ವೇಂಕಟಾಚಲ ಮತ್ತು ಅಲಮೇಲು ಮಂಗಮ್ಮ ಲಾಲಿಪದಗಳು' ಇನ್ನಿತರ ಕೃತಿಗಳು ಕೀರ್ತನ ಪ್ರಾಕಾರಕ್ಕೆ ಸೇರಿದರೂ, ಕೆಲವೊಂದು ನಿರ್ದಿಷ್ಟ ವಸ್ತು ವಿಷಯದ ಕೃತಿಗಳಾಗಿ ನಿಲ್ಲುತ್ತದೆ. ಇದೇ ರೀತಿಯಲ್ಲಿ

ತಿಮ್ಮಪ್ಪದಾಸರ 'ಶ್ರೀಕೃಷ್ಣಲೀಲೆ'ಯನ್ನು ಒಂದು ಬೃಹತ್ ಕೀರ್ತನೆ ಕಾವ್ಯ ವೆಂದೇ ಕರೆಯಬಹುದು.

ಶ್ರೀಕೃಷ್ಣನ ಕೀರ್ತನಕಾರರಾಗಿಯೇ ಕೆಲವು ಕೀರ್ತನಕಾರರು ಕಾಣಿಸಿ ಕೊಂಡಿದ್ದಾರೆ. ಅವರಲ್ಲಿ ಮುಖ್ಯರಾದವರೆಂದರೆ–

1. ರಂಗದಾಸರು ಕ್ರಿ.ಶ. 1830 (ತುಮಕೂರು ಜಿಲ್ಲೆ)
2. ತುಳಸೀ ರಾಮದಾಸರು ಕ್ರಿ.ಶ. 1850 (ಕಡಪಾ ಜಿಲ್ಲೆ ಆ.ಪ್ರ)
3. ಚನ್ನಪಟ್ಟಣದ ಅಹೋಬಲದಾಸರು ಕ್ರಿ.ಶ. 1880
4. ವೆಂಕಟವರದಾರ್ಯ ಕ್ರಿ.ಶ. 1880 (ಸರಗೂರು)
5. ಆಸೂರಿ ರಾಮಸ್ವಾಮಯ್ಯಂಗಾರ್ ಕ್ರಿ.ಶ. 1888 (ಬೆಂಗಳೂರು)
6. ಶಾಮಶರ್ಮದಾಸರು ಕ್ರಿ.ಶ. 1890 (ಬೆಂಗಳೂರು ಜಿಲ್ಲೆ)
7. ಎಸ್. ಸಂಪತ್ತಯ್ಯಂಗಾರ್ ಕ್ರಿ.ಶ. 1899 (ಬೆಂಗಳೂರು)
8. ಬುಡ್ಡಣ್ಣಯ್ಯಾಚಾರ್ (ಅಣ್ಣಾವಧೂತರು) ಕ್ರಿ.ಶ. 1880–90 (ಕಲ್ಕುಂಟೆ)
9. 'ಕೋಸಲಪುರಿವಾಸ' ಅಂಕಿತದ ಒಬ್ಬ ಕೀರ್ತನಕಾರರು
10. ನಾರಾಯಣ ಶರ್ಮರು ಕ್ರಿ.ಶ. 1912 (ಬೆಂಗಳೂರು ಜಿಲ್ಲೆ)

ರಂಗದಾಸರ ಕೀರ್ತನೆಗಳು ಸಂಗ್ರಹವಾಗಿ 1994ರಲ್ಲಿ ಪ್ರಕಟವಾಗಿವೆ. ಇವರಿಗೆ ಶಾಮಶರ್ಮದಾಸರು ಮತ್ತು ನಾರಾಯಣ ಶರ್ಮರು ಶಿಷ್ಯರು ಹಾಗೂ ಬಂಧುಗಳು. ಇವರು ಪೀಠಾಧಿಪತಿಗಳೂ, ಯತಿಗಳೂ ಆಗಿದ್ದು ಈ ಇಬ್ಬರು ಶಿಷ್ಯರಿಂದ ಸ್ತುತಿಸಲ್ಪಟ್ಟಿದ್ದಾರೆ. ಈ ಇಬ್ಬರು ಶಿಷ್ಯರಿಗೂ ಹೆಜ್ಜಾಜಿಯ ಕೇಶವನೆ ಆರಾಧ್ಯ ದೈವ ಹಾಗೂ ಅವರ ರಚನೆಗಳ ಅಂಕಿತಕಾರ.

ಶಾಮಶರ್ಮದಾಸ (ಕ್ರಿ.ಶ. 1891–1973) ರ ನಿಜನಾಮಧೇಯ ಎನ್. ಪುಟ್ಟಶಾಮಶರ್ಮರು. ಇವರು ದೊಡ್ಡಬಳ್ಳಾಪುರ ತಾಲ್ಲೂಕಿನ ಹೆಜ್ಜಾಜಿ ಯವರು, ಇಲ್ಲಿನ ಚನ್ನಕೇಶವ ಇವರ ಆರಾಧ್ಯದೈವ. ಇವರು ಶಿಕ್ಷಕರಾಗಿದ್ದು, ನಿವೃತ್ತಿಯ ನಂತರ ಈ ದೇವನ ಆರಾಧನೆಯಲ್ಲಿ ತೊಡಗಿದರು. 'ಜಾಜೀಶ', 'ಜಾಜಿಶ್ರೀಶ', 'ಹೆಜ್ಜಾಜಿ ಕೇಶವ' ಎನ್ನುವ ಅಂಕಿತಗಳಲ್ಲಿ 113 ಕೀರ್ತನೆ ಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕೆಲವು ಹೊಸಕೆರೆ ಚಿದಂಬರಯ್ಯನವರ 'ಭಕ್ತಬಂಧು' ಪತ್ರಿಕೆಯಲ್ಲಿ ಪ್ರಕಟವಾಗಿವೆ. ಇವರ ಕೀರ್ತನೆಗಳಲ್ಲಿ ಭಾವಪರವಶತೆ

ಭಕ್ತಿಯ ಅನನ್ಯತೆ, ಧನ್ಯತೆಯ ಭಾವ, ದೈವ ಸಾಕ್ಷಾತ್ಕಾರ ಅತ್ಯಂತ ಪರಿಣಾಮ ಕಾರಿಯಾಗಿ ಮೂಡಿಬಂದಿವೆ. ಕೀರ್ತನ ಸಾಹಿತ್ಯದ ಎಲ್ಲ ಲಕ್ಷಣಗಳೂ ಇವುಗಳ ಲ್ಲಿವೆ. ಜೊತೆಗೆ ವಿಶಿಷ್ಟಾದ್ವೈತ ತತ್ವದ ಪ್ರತಿಪಾದನೆ ಇವುಗಳಲ್ಲಿ ನಿಚ್ಚಳ ವಾಗಿದೆ. ಶ್ರೀವೈಷ್ಣವ ದರ್ಶನವನ್ನು ಪ್ರತಿಪಾದಿಸಿರುವ ಕೀರ್ತನಕಾರರಲ್ಲಿ ಈ ಮುಖಾಂತರ ಇವರು ಪ್ರಮುಖರಾಗಿರುತ್ತಾರೆ. ಇವು ಇನ್ನೂ ಹಸ್ತಪ್ರತಿ ಯಲ್ಲಿಯೇ ಇವೆ.

ನಾರಾಯಣ ಶರ್ಮದಾಸ (ಹೆಚ್.ವಿ. ನಾರಾಯಣಸ್ವಾಮಿ)ರು 1912 ರಲ್ಲಿ ದೊಡ್ಡ ಹೆಜ್ಜಾಜಿಯಲ್ಲಿ ಜನಿಸಿದರು. ಇವರೂ ಕೂಡ ವಿವಿಧೆಡೆಗಳಲ್ಲಿ ಉದ್ಯೋಗದಲ್ಲಿದ್ದು, ಕಡೆಗೆ ಶಿಕ್ಷಕರಾಗಿ 1974ರಲ್ಲಿ ನಿವೃತ್ತರಾದರು. ವೃತ್ತಿ ಯೊಂದಿಗೆ ಬಂದಿದ್ದ ಜಪ–ತಪ–ಧ್ಯಾನ–ಆರಾಧನೆಗಳೊಂದಿಗೆ ಪ್ರಪತ್ತಿ ಮಾರ್ಗ ವನ್ನೂ ಕೈಗೊಂಡು ಜೀವನ ಸಾಗಿಸಿ, 1992ರಲ್ಲಿ ವೈಕುಂಠವಾಸಿಗಳಾದರು. ಇವರು ತಮ್ಮ ಆರಾಧ್ಯದೈವವಾದ ಕೇಶವನ ಹೆಸರಿನಲ್ಲಿ ಜಾಜೀಪುರೀಶ, ಹೆಜ್ಜಾಜಿ ಪರವಾಸ ಎಂಬ ಅಂಕಿತದಲ್ಲಿ 26 ಕೀರ್ತನೆಗಳೊಂದಿಗೆ ವಿಶಿಷ್ಟಾದ್ವೈತ ಸಂಪ್ರ ದಾಯಕ್ಕೆ ಸೇರಿದ ಏಳು ಧಾರ್ಮಿಕ ಕೃತಿಗಳನ್ನು ರಚಿಸಿದ್ದಾರೆ. ಇವು ಇನ್ನೂ ಹಸ್ತಪ್ರತಿಯಲ್ಲಿವೆ. ಇವರ ಕೀರ್ತನೆಗಳಲ್ಲಿ ಶರಣಾಗತಿ ಭಾವ, ಭಗವಂತನ ನಾಮಸ್ಮರಣೆಯ ಭಕ್ತಿ ಪಾರಮ್ಯವನ್ನು ಕಾಣಬಹುದು. ಇದರ ಜೊತೆಗೆ ವಿಶಿಷ್ಟಾ ದ್ವೈತ ತತ್ವದ ಲಕ್ಷಣಗಳೂ ಮೂಡಿಬಂದಿವೆ.

ತುಳಸೀ ರಾಮದಾಸರು 19ನೇ ಶತಮಾನದ ಉತ್ತರಾರ್ಧದಲ್ಲಿದ್ದವರು 1870–1900ರ ನಡುವೆ ಇವರು ತುಂಬಾ ಜನಪ್ರಿಯರಾಗಿದ್ದರು. ಆಗ್ನೇಯ ಕರ್ನಾಟಕದಲ್ಲಿ ಆಗ ಜನಪ್ರಿಯರಾಗಿದ್ದು, ಭಾಗವತ ಧರ್ಮವನ್ನು ಮನಸಾ, ವಾಚಾ ಆಚರಿಸಿದವರು. ಕಡಪಾ ಜಿಲ್ಲೆಯ ಗ್ರಾಮವೊಂದರಲ್ಲಿ ಜನ್ಮ ತಳೆದು, ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದಲ್ಲಿ ಕೆಲವು ವರ್ಷ ನೆಲೆಸಿದರು. ಇವರ ಜಾತಿ ಯಾವುದೆಂಬುದು ತಿಳಿಯದಿದ್ದರೂ, ಬಲಿಜ ಜನಾಂಗದವರನ್ನು ಉದ್ಧರಿಸು ವುದರಲ್ಲಿ ಇವರು ವಿಶೇಷ ಆಸಕ್ತಿ ವಹಿಸಿದರು. ಲೌಕಿಕ ಲಾಲಸೆಯಿಂದ ದೂರ ವಾಗಿದ್ದ ಇವರು ಸಾವಿರಾರು ಪಾಮರರನ್ನು ಹರಿಭಕ್ತರನ್ನಾಗಿ ಪರಿವರ್ತಿಸಿದ ಕೀರ್ತಿ ಇವರದ್ದು. ಚಿಕ್ಕಬಳ್ಳಾಪುರ ಒಂದರಲ್ಲೆ ಸುಮಾರು 15ಕ್ಕೂ ಹೆಚ್ಚು ಭಜನಾ ಮಂದಿರಗಳನ್ನು ಸ್ಥಾಪಿಸಿ, ಬೆಳೆಸಿದವರು.

ದೇವರು ಇವರಿಗೆ ಸೊಗಸಾದ ಕಂಠಸಿರಿಯನ್ನು ದಯಪಾಲಿಸಿದ್ದ; ಜೊತೆಗೆ ಅಪೂರ್ವ ಪಾಂಡಿತ್ಯವನ್ನೂ ನೀಡಿದ್ದ. ಹೀಗಾಗಿ ಮಾತೃಭಾಷೆ ತೆಲುಗಿನಲ್ಲೇ ಅಲ್ಲದೆ ತಾವು ಬಂದು ಸೇರಿದ ಕನ್ನಡನಾಡಿನ ಆಡುಭಾಷೆಯನ್ನೂ ತುಂಬಾ ಸೊಗಸಾಗಿ ಕಲಿತು, ಈ ಎರಡೂ ಭಾಷೆಗಳಲ್ಲಿ ನೂರಾರು ಕೀರ್ತನೆಗಳನ್ನು ರಚಿಸಿದರು. ಇವರ ಭಜನೆ ಅಥವಾ ಸಂಕೀರ್ತನೆ ಎಂದರೆ ಗಾಡಿಗಳನ್ನು ಕಟ್ಟಿ ಕೊಂಡು ಸಾವಿರಾರು ಜನರು ಹಳ್ಳಿ ಹಳ್ಳಿಗಳಿಂದ ಬಂದು ಸೇರುತ್ತಿದ್ದರು. ಇವರ ಸಂಕೀರ್ತನೆಯ ಪ್ರಭಾವದಿಂದ ಅನೇಕ ನಾಸ್ತಿಕರು ಆಸ್ತಿಕರಾದರು, ಲೋಭಿ ಗಳು ಉದಾರಿಗಳಾದರು. ಶಿಡ್ಲಘಟ್ಟ, ಗೌರಿಬಿದನೂರು, ಬಾಗೇಪಲ್ಲಿ, ಚಿಂತಾ ಮಣಿ ಇತ್ಯಾದಿ ಪಟ್ಟಣಗಳಲ್ಲಿ ಭಜನಾ ಮಂಡಳಿಗಳನ್ನು ಮಾಡಿ, ಭಜನಾ ಮಂದಿರಗಳನ್ನು ನಿರ್ಮಿಸಿ, ಅವುಗಳಿಗೆ ಸಂಬಂಧಪಟ್ಟ ಹಾಗೆ ಕೆಲವು ನಿಯಮ ಗಳನ್ನು ಮಾಡಿ, ಅವು ಇಂದಿಗೂ ನಡೆದುಕೊಂಡು ಬರುವಂತೆ ಮಾಡಿದ ಕೀರ್ತಿ ಇವರಿಗೆ ಸೇರಬೇಕು. ಹಿಂದುಳಿದ ಜನಾಂಗಗಳಲ್ಲಿ ಭಕ್ತಿ ಜಾಗೃತಿ ಮೂಡಿಸು ವುದು ಇವರ ಮುಖ್ಯ ಗುರಿಯಾಗಿತ್ತು.

ಇವರು ಶ್ರೀ ರಾಮಾನುಜ ಪಂಥದ ವಡಗಲೈ ಸಂಪ್ರದಾಯದವರಾದುದ ರಿಂದ, ವಿಶಿಷ್ಟಾದ್ವೈತ ತತ್ವಗಳ ಪ್ರಚಾರವನ್ನು ತಮ್ಮ ಕೀರ್ತನೆಗಳ ಮುಖಾಂ ತರ ಕೈಗೊಂಡರು. ಈ ಭಜನಾ ಮಂದಿರಗಳಲ್ಲಿ ರಾಮೋತ್ಸವ, ಕೃಷ್ಣೋತ್ಸವ, ಧನುರ್ಮಾಸ, ಸಂಕ್ರಾಂತಿ ಹಾಗೂ ರಾಮಾನುಜ ತಿರುನಕ್ಷತ್ರಗಳು ನಡೆಯುವ ವ್ಯವಸ್ಥೆ ಮಾಡಿದರು. ಇವು ಇಂದಿಗೂ ರೂಢಿಯಲ್ಲಿವೆ.

ಇವರ ಪೂರ್ವಿಕರು ನರಸಿಂಹ ಉಪಾಸಕರಾಗಿ ತುಳಸೀ ಪುಷ್ಪಮಾಲೆ ಯನ್ನು ಕಟ್ಟಿ ಆ ದೇವರಿಗೆ ಅರ್ಪಿಸುತ್ತಿದ್ದರಂತೆ. ಈ ಹೆಸರು ಇವರಿಗೂ ಅಡ್ಡ ಹೆಸರಾಗಿ ಸೇರಿಸಲ್ಪಟ್ಟು, ಇವರ ಹೆಸರಿನೊಂದಿಗೆ 'ತುಳಸೀ ರಾಮದಾಸರು' ಎನ್ನುವ ಹೆಸರು ಜನಪ್ರಿಯವಾಯಿತು. ಇವರು ಉತ್ತರ ಭಾರತದ ತುಳಸೀ ದಾಸರಿಗೆ ಸಮ ಎಂದು ಭಾವಿಸಿರುವವರೂ ಇದ್ದಾರೆ. ಇದರಿಂದಲೇ ಇವರನ್ನು ಓರ್ವ ಅವತಾರ ಪುರುಷರೆಂದು ಜನ ಭಾವಿಸುತ್ತಾರೆ. ಇವರ ಜೀವನ ಚರಿತ್ರೆ ಯನ್ನು ಕೀರ್ತನೆ ರೂಪದಲ್ಲಿ ಹಾಡುತ್ತಾ, ಇವರ ಉತ್ಸವ ಮಾಡುವ ಜನರು ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಹೇರಳವಾಗಿದ್ದಾರೆ. ಅಂತೆಯೇ ದೀನ ದಲಿತರ ಸೇವೆ ಮಾಡುತ್ತಿದ್ದ ಇವರ ಬಗೆಗೆ ಅನೇಕ ಪವಾಡಗಳೂ ಸೇರಿವೆ.

ಇವರ ಈ ರೀತಿಯ ಸೇವೆಯಿಂದ ಆಗ ಧರ್ಮಾಂತರವಾಗುತ್ತಿದ್ದ ಸಾವಿರಾರು ಹಿಂದೂಗಳು ಹರಿಭಕ್ತರಾದರು.

ಇವರು ಬೆಂಗಳೂರಿಗೆ ಬಂದಾಗ ಅಗ್ಗೆ ನಗರದ ಅಂಚಿನಲ್ಲಿದ್ದ ಸ್ಥಳದಲ್ಲಿ ಭಕ್ತರ ನೆರವಿನಿಂದ ತುಳಸೀತೋಟವನ್ನು ಸ್ಥಾಪಿಸಿ, ರಾಮೋತ್ಸವ ಹಾಗೂ ಮತ್ತಿತರ ಧಾರ್ಮಿಕ ಕಾರ್ಯಗಳು ನಡೆಯುವಂತೆ ನೋಡಿಕೊಂಡರು.

ಈ ರೀತಿಯಲ್ಲಿ ಇವರು ಶ್ರೀವೈಷ್ಣವ ದರ್ಶನದ ಪ್ರಚಾರ ಮಾಡಿದ್ದೇ ಅಲ್ಲದೆ ಆ ಧರ್ಮವನ್ನು ರಕ್ಷಿಸಿ, ಜನಸಾಮಾನ್ಯರಲ್ಲೂ ಶ್ರೀವೈಷ್ಣವ ಸಂಸ್ಕೃತಿ ಹರಡುವಂತೆ ಮಾಡಿದರು.

ಒಮ್ಮೆ ಚಾಮರಾಜ ಒಡೆಯರು ಇವರ ಹನ್ನೊಂದು ಕೀರ್ತನೆಗಳನ್ನು ಆಲಿಸಿ, ಪರವಶರಾಗಿ, ದಾಸರು ಕೈಗೊಂಡಿದ್ದ ಧಾರ್ಮಿಕ ಕಾರ್ಯಗಳಿಗೆ ಬಹಳಷ್ಟು ದ್ರವ್ಯಸಹಾಯ ಮಾಡಿದರು.

ಇವರ ಶ್ರೀವೈಷ್ಣವ ದರ್ಶನದ ಪ್ರಚಾರ ವೈಖರಿಯನ್ನು ಗಮನಿಸಿದ ರಾಜಗುರುಗಳಾದ ಪರಕಾಲ ಮಠಾಧೀಶರಾದ ಶ್ರೀ ಶ್ರೀ ಕೃಷ್ಣ ಸ್ವಾಮಿಗಳವರು ದಾಸರಿಗೆ ದಿವ್ಯ ಕಿರೀಟವನ್ನೆ ಒಪ್ಪಿಸಿದರು.

ಆಗಿನ ಮೈಸೂರಿನ ದಿವಾನರಾಗಿದ್ದ ರಂಗಾಚಾರ್ಲು (1881–1883) ರವರೇ ಇವರ ಕೀರ್ತನೆ ಮಾಡುವ ರೀತಿಗೆ ಮನಸೋತು, ಸಂಬಂಧಪಟ್ಟವರಿಂದ ಬೆಂಗಳೂರಿನ ಮೆಜೆಸ್ಟಿಕ್ ಬಳಿ ಇರುವ ಸ್ಥಳವನ್ನು ತುಳಸೀತೋಟಕ್ಕೆ ಕೊಡಿಸುವುದರಲ್ಲೂ, ಕಂಟೋನ್ಮೆಂಟಿನಲ್ಲಿರುವ ತುಳಸೀ ರಾಮದಾಸಾಶ್ರಮದ ನಿರ್ಮಾಣದಲ್ಲೂ ಪ್ರಮುಖ ಪಾತ್ರ ವಹಿಸಿದರು. ಈ ದೈವಕಾರ್ಯ ಮಾಡಿದ ನಂತರವೇ ಅವರು ಮದರಾಸಿನಲ್ಲಿ ವೈಕುಂಠವಾಸಿಗಳಾದರು.

ಧರ್ಮಪ್ರಚಾರದ ದೃಷ್ಟಿಯಿಂದ ಕೀರ್ತನ ಸಾಹಿತ್ಯ ನಿರ್ಮಿಸಿ ಜನಪರ ಪ್ರಚಾರ ಮಾಡಿ, ಜನಪ್ರಿಯರಾದ ಈ ದಾಸರನ್ನು ದ್ವೇಷಿಸುವವರೂ ಇದ್ದರು ಆದರೂ ಇವರು ಹರಿಪರತ್ವವನ್ನು ರಾಮಾನುಜ ಸಿದ್ಧಾಂತದ ಉತ್ಕರ್ಷವನ್ನೂ ನಿರ್ಭಯವಾಗಿ ತಿಳಿಸುತ್ತಿದ್ದರು. ಇವರ ಜ್ಞಾನ ಭಕ್ತಿ ವೈರಾಗ್ಯಾದಿ ಸದ್ಗುಣಗಳಿಂದ ಅನೇಕ ಪಂಡಿತರು ಮುಗ್ಧರಾಗಿದ್ದರು. ಅವರಲ್ಲಿ ವೇದಾಂತ ಶಿವರಾಮ ಶಾಸ್ತ್ರಿಗಳೂ ಒಬ್ಬರು. ಇವರು ದಾಸರ ಮೇಲೆ ಅನೇಕ ಪದ್ಯಗಳನ್ನು ರಚಿಸಿದ್ದಾರೆ..

ಸ್ವತಃ ಪರಕಾಲ ಮಠಾಧೀಶರೇ ಇವರ ಮೇಲೆ

ಧೀರೋಸಿ ವೈದಿಕವರೋಸಿ ಕವೀಶ್ವರೋಸಿ
ಸ್ವಾರ್ಥಂ ವಿಹಾಯ ವಿದಿತೋಸಿ ಜಿತೇಂದ್ರಿಯೋಸಿ
ಭೋ ದಾಸವರ್ಯ ಮಹದಂಶ ಸಮುದ್ಭವೋಸಿ ||

ಎಂಬುದರ ಮೂಲಕ ಅವರನ್ನು ಪ್ರಶಂಸಿಸಿದ್ದಾರೆ.

ಆಗಮಶಾಸ್ತ್ರದಲ್ಲಿ ಪಂಡಿತರೆನಿಸಿ ಅನೇಕ ಗ್ರಂಥಗಳನ್ನು ರಚಿಸಿ ಕೀರ್ತಿವಂತರಾದ ತೂಪ್ಪಲ್ ವೆಂಕಟಾಚಾರ್ಯರು ಈ ದಾಸರ ಮೇಲೆ ಮಂಗಳಾಶಾಸನ ರೂಪವಾಗಿ 27 ಶ್ಲೋಕಗಳನ್ನು ರಚಿಸಿದ್ದಾರೆ. ಇವು ಸಂಪ್ರದಾಯ ಸ್ತೋತ್ರಗಳಾಗಿವೆ.

ಇದುವರೆವಿಗೆ ಈ ದಾಸರ 25ರಷ್ಟು ಕನ್ನಡ ಕೀರ್ತನೆಗಳು, 200ಕ್ಕೂ ಮೇಲ್ಪಟ್ಟು ತೆಲುಗು ಕೀರ್ತನೆಗಳು ಇವರನ್ನು ಕುರಿತಾದ 3 ಹರಿಕಥೆಗಳು ದೊರೆತಿವೆ.

ಬಹುಶಃ ಇವರು 1901 ಅಥವಾ 1902ರಲ್ಲಿ ಪರಮಪದಿಸಿರಬಹುದು.

ಕಲ್ಕುಂಟೆಯವರಾದ ಬಡ್ಡಣ್ಣಯ್ಯಾಚಾರ್ (ಅವಧೂತರು)ರವರ ಕೀರ್ತನೆಗಳಲ್ಲಿ ಕೆಲವು ಮಾತ್ರ ಲಭ್ಯವಿದೆ.

ಇದರೊಂದಿಗೆ ಚನ್ನಪಟ್ಟಣದ ಅಹೋಬಲದಾಸರು, ವೆಂಕಟವರದಾರ್ಯರು, (ಹೆಸರು-ಕಾಲ ಗೊತ್ತಿಲ್ಲದ) 'ಕೋಸಲ ಪುರಿವಾಸ' ಅಂಕಿತದ ಓರ್ವ ಕೀರ್ತನಕಾರರು-ಇವರುಗಳ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ.

ಆಗ್ನೇಯ ಕರ್ನಾಟಕ ಹಾಗೂ ಅದಕ್ಕೆ ಹೊಂದಿಕೊಂಡಂತಹ ಆಂಧ್ರ ಪ್ರದೇಶದ ಭಾಗಗಳಲ್ಲಿ ನೆಲೆಸಿರುವ ಶ್ರೀವೈಷ್ಣವ ಮನೆತನಗಳು ಪರಂಪರಾನುಗತವಾಗಿ ಹರಿಕಥಾ ಕಲೆಯನ್ನು ರೂಢಿಸಿಕೊಂಡು ಬಂದಿದ್ದಾರೆ. ಈ ಕೆಲಸವನ್ನು ಶತಶತಮಾನಗಳಿಂದಲೂ ಅನುಸರಿಸುತ್ತಿದ್ದಾರೆ. ಇವರಲ್ಲಿ ಬಹಳಷ್ಟು ಜನ ವಿದ್ವಾಂಸರೂ, ಕೀರ್ತನಕಾರರೂ ಹೌದು. ಆದರೆ ಇವರು ಮುಖ್ಯವಾಗಿ ತೆಲುಗು ಪಂಡಿತರು. ಕರ್ನಾಟಕದಲ್ಲಿ ನೆಲೆಸಿದ್ದರೂ ಕನ್ನಡ ಕೀರ್ತನೆಗಳನ್ನು ಮಾಡುವ ಶಕ್ತಿ ಇದ್ದರೂ, ಅಂತಹ ಕನ್ನಡ ಕೀರ್ತನೆಗಳನ್ನು ರಚಿಸುವ ಗೋಜಿಗೇ ಹೋಗಿಲ್ಲ. ಎಲ್ಲೋ ಒಬ್ಬಿಬ್ಬರು ಶ್ರೀರಾಮ, ಶ್ರೀಕೃಷ್ಣನನ್ನು ಕುರಿತಾದ ಕೀರ್ತನೆಗಳನ್ನು ರಚಿಸಿದ್ದರೂ, ಅವರ ನಿರ್ಲಕ್ಷ್ಯ ಮನೋಭಾವದಿಂದ ಕಳೆದು

ಹೋಗಿವೆಯೆಂದೇ ಹೇಳಬಹುದು. ಆದರೆ ನನ್ನ ಬಾಲ್ಯದಲ್ಲಿ ಪರಿಚಯವಿದ್ದ ಖ್ಯಾತ ನಾಟಕಗಳನ್ನು ಬರೆದಿರುವ ಪಂಡಿತ ವಿ. ಕೇಶವಯ್ಯನವರು, ರಾಜಕವಿ ತಿರುಮಲೆ ಶ್ರೀನಿವಾಸ ಅಯ್ಯಂಗಾರ್‌ರವರು ಕೀರ್ತನೆಗಳನ್ನು ರಚಿಸಿರುವುದನ್ನು ಕಂಡಿದ್ದೇನೆ. ಆದರೆ ಅವು ಕೈಗೆ ಸಿಗುವವರೆಗೂ ಖಚಿತವಾಗಿ ಏನೂ ಹೇಳು ವಂತಿಲ್ಲ.

ದೇವಶಿಖಾಮಣಿ ಆಳಸಿಂಗರಾಚಾರ್ಯರು ಅನೇಕ ಕೀರ್ತನೆಗಳನ್ನು ರಚಿ ಸಿದ್ದಾರೆ. ಅಂತೆಯೇ ಇವರ ತಂದೆಯವರಾದ ದೇವಶಿಖಾಮಣಿ ತಿರುಮಲಾ ಚಾರ್ಯರು. ಇವರು 1910ರಲ್ಲಿ ತಮ್ಮ 96ನೇ ವಯಸ್ಸಿನಲ್ಲಿ ಪರಮಪದಿಸಿ ದರು. ಇವರು ಚಿತ್ರಗಾರರು, ಸಂಗೀತಗಾರರಾಗಿದ್ದರು. ಕಲ್ಯಾಣಿ ರಾಗವನ್ನು ಬಹಳ ಚೆನ್ನಾಗಿ ಹಾಡುತ್ತಿದ್ದರಂತೆ. ಭೈರವಿ ವೆಂಕಟಸುಬ್ಬಯ್ಯನವರು ಬಂದು ಕೇಳುತ್ತಿದ್ದರೆಂದು ಪ್ರತೀತಿ. ನಾಟಕ ಶಿರೋಮಣಿ ವರದಾಚಾರ್ಯರಿಗಿಂತ ಹಿಂದಿನವರಾದ ಇವರು 'ಮಣಿಮಾಲಿನಿ ಕರ್ನಾಟಕ ನಾಟಕ ಸಭಾ' ಎನ್ನುವ ಸಂಸ್ಥೆಯನ್ನು 1895ರವರೆಗೆ ನಡೆಸಿದರು. ಅನೇಕ ನಾಟಕಗಳನ್ನು ಬರೆದಿದ್ದಾ ರೆಂದು ಹೇಳಲಾಗುತ್ತದೆ. ಇವರು ಮುಕುಂದಮಾಲೆಯನ್ನು ಕೀರ್ತನೆಗಳ ರೂಪ ದಲ್ಲಿ ಪರಿವರ್ತಿಸಿದ್ದಾರೆ.

ಶ್ರೀವೈಷ್ಣವರಲ್ಲಿ ಕನ್ನಡದಲ್ಲಿ ಮೊದಲು ಕೀರ್ತನೆಗಳನ್ನು ಬರೆದವರಲ್ಲಿ ಹೆಮ್ಮಿಗೆ ದೇಶಿಕಾಚಾರ್ಯರೂ ಒಬ್ಬರು. ಇವರ ಕೆಲವು ಕೀರ್ತನೆಗಳು ಈ ಹಿಂದೆ ಚಲಾವಣೆಯಲ್ಲಿದ್ದುವು.

ಗಮಕಿಗಳಾದ ಎಂ. ಎನ್. ಅನಂತನಾರಾಯಣ ಅಯ್ಯಂಗಾರ್‌ರವರು 'ಪಾದುಕಾ ಸಹಸ್ರ'ದ ಬಗ್ಗೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಸುಮಾರು 600 ಇರಬಹುದೆಂದು ಊಹೆ.

ಚಿಕ್ಕಮಗಳೂರಿನ ಮಂಡಯಂ ನಾರಾಯಣಯ್ಯಂಗಾರ್ (ರಾಮಾನುಜ ಮುನಿ) ಎನ್ನುವವರು ಸುಮಾರು 160 ವರ್ಷಗಳ ಹಿಂದೆ ಇದ್ದವರು. ಇವರು ಶ್ರೀವೈಷ್ಣವ ತತ್ತ್ವದ ಆಧಾರದ ಮೇಲೆ ಕೆಲವೊಂದು ಕೀರ್ತನೆಗಳನ್ನು ಬರೆ ದಿದ್ದಾರೆ.

ಇದೇ ರೀತಿಯಲ್ಲಿ ಶ್ರೀ 'ಕಲ್ಕಿ'ಯವರೂ ಕೂಡ ಇದೇ ರೀತಿಯ ಕೀರ್ತನೆ ಗಳನ್ನು ರಚಿಸಿ, 'ಗಾನಾಮೃತ ತರಂಗಿಣಿ' ಎನ್ನುವ ಕೃತಿಯಲ್ಲಿ ಸಂಗ್ರಹಿಸಿದ್ದಾರೆ.

ಕೀರ್ತನೆಗಳ ರಚನೆಯಲ್ಲಿ ಮಹಿಳೆಯರು ಯಾವುದೇ ರೀತಿಯಲ್ಲಿಯೂ ಹಿಂದೆ ಬಿದ್ದಿಲ್ಲ.

ಇವರಲ್ಲಿ ಪ್ರಮುಖರು ಯದುಗಿರಿ ಅಮ್ಮ ಎಂಬುವವರು. ಬೆಂಗಳೂರಿನ ಅರಳೇಪೇಟೆಯ ಸಮೀಪದಲ್ಲಿ 1820–1908ರವರೆಗೆ ಇದ್ದವರು. ಓದು ಬರಹ ಬರೆಯಲು ಬರದ ಈಕೆಯು ಓರ್ವ ಕವಯಿತ್ರಿಯಾಗಿ ಬೆಳಕು ಕಂಡರು ಎಂದರೆ ಆಶ್ಚರ್ಯವಲ್ಲವೆ! ಸುಮಾರು 100 ಕೀರ್ತನೆಗಳನ್ನು ಈಕೆ ಬರೆದಿದ್ದಾರೆ. 1904ರಲ್ಲಿ ಕೃತಿಯ ರೂಪದಲ್ಲಿ ಇದು ಪ್ರಕಟವಾಗಿದೆ. 'ಶ್ರೀರಾಮ ಧ್ಯಾನ', 'ಶ್ರೀ ಭಾಗವತಾ ಕಥಾ ಸಂಗ್ರಹ', 'ಶ್ರೀರಂಗ ಮಾಹಾತ್ಮ್ಯೆ', 'ಶ್ರೀ ಪಾರ್ಥ ಸಾರಥಿ ಸೇವಾಕ್ರಮ ಕೀರ್ತನೆಗಳು', 'ಶ್ರೀ ಪಾರ್ಥಸಾರಥಿ ಮಂಗಳ', 'ಶ್ರೀ ಶ್ರೀನಿವಾಸ ಮಂಗಳಹಾರ್', 'ಉಡುಪಿ ಕೃಷ್ಣ ಕೀರ್ತನೆ', 'ಅಂಡಾಳಂ ನೀರಾಟ್ಟಂ' ಹಾಗೂ ಕೆಲವೊಂದು ಮಂಗಳ ಕೀರ್ತನೆಗಳು–ಇತ್ಯಾದಿಯವು ಈಕೆಯ ಮುಖ್ಯ ರಚನೆಗಳು.

ನಂಜನಗೂಡು ತಿರುಮಲಾಂಬಾರವರು ಸುಮಾರು 40 ಕೀರ್ತನೆಗಳನ್ನು ಬರೆದಿದ್ದಾರೆ.

ಇದೇ ರೀತಿಯಲ್ಲಿ ನಲ್ಕುಂದಿ ವೀರರಾಘವಾಚಾರ್ಯರ ಮಗಳಾದ ಮೇಲು ಕೋಟೆಯ (ನಲ್ಕುಂದಿ) ಎನ್. ಶ್ರೀರಂಗಮ್ಮ ಎನ್ನುವವರು. 1967ರಲ್ಲಿ ಇವರಿಗೆ 70 ವರ್ಷ ವಯಸ್ಸಾಗಿತ್ತು. 'ಶ್ರೀ ವೈರಮುಡಿ ಸೇವಾ' ಎನ್ನುವ ರಾಗಮಾಲಿಕೆಯ ಎರಡು ದೀರ್ಘವಾದ ಹಾಡುಗಳನ್ನು ರಚಿಸಿದ್ದಾರೆ. ಇದ ರೊಂದಿಗೆ ಅನೇಕ ಲಾವಣಿಗಳನ್ನು ರಚಿಸಿದ್ದಾರೆ. ಇವರು 'ತಿರುಪ್ಪಾವೈ'ಯನ್ನು ಕೀರ್ತನ ರೂಪದಲ್ಲಿ ರಚಿಸಿದ್ದಾರೆ. ಧನುರ್ಮಾಸದಲ್ಲಿ ಇದನ್ನು ಹೇಳಿಕೊಳ್ಳು ವುದು ರೂಢಿಯಲ್ಲಿತ್ತು.

ಇದರೊಂದಿಗೆ ಆರ್. ಚೆಲ್ಲಮ್ಮ (ಮೇಲುಕೋಟೆ), ಮದುಹನಂಬಿ ರಮ್ಯ ವರಾಚಾರ್ಯರ ಪ್ರಥಮ ಪುತ್ರಿಯಾದ ಕಂದಾಡೈ ಗೋದಮ್ಮನವರು ಶ್ರೀರಾಮ ನನ್ನು ಕುರಿತಾದ ಕೆಲವೊಂದು ಕೀರ್ತನೆಗಳನ್ನು ರಚಿಸಿದ್ದಾರೆ.

ಇದುವರೆವಿಗೆ ಲಭ್ಯವಾಗಿರುವ ಶ್ರೀವೈಷ್ಣವ ಕೀರ್ತನೆಗಳನ್ನು ಪರಿಶೀಲಿಸಿ ದಾಗ ಕೆಲವೊಂದು ವಿವರಗಳು ಸ್ಪಷ್ಟವಾಗುತ್ತವೆ. ಇವು ದ್ವೈತ ಮತ್ತು ಅದ್ವೈತಕ್ಕಿಂತ ಬೇರೆಯೇ ಆದ ರೀತಿಯಲ್ಲಿ ಇವುಗಳ ರಚನೆಯಾಗಿರುವುದು

ಸ್ಪಷ್ಟವಾಗಿದೆ. ಶ್ರೀವೈಷ್ಣವ ದರ್ಶನ ಪ್ರಮುಖ ತತ್ವವಾದ 'ಶರಣಾಗತಿ ಮಾರ್ಗ' (ಪ್ರಪತ್ತಿ ಧರ್ಮ) ಈ ಎಲ್ಲ ಕೀರ್ತನೆಗಳ ಮೂಲ ಬಂಡವಾಳವಾಗಿದೆ. ವಿಶಿಷ್ಟಾದ್ವೈತವು ಹರ ನಿರಾಕರಣೆಯೊಂದಿಗೆ ಹರಿಸರ್ವೋತ್ತಮತ್ವವನ್ನು ಸಾರು ವುದು. ಈ ತತ್ವಕ್ಕೆ ಅನುಗುಣವಾಗಿ ಶ್ರೀವೈಷ್ಣವ ಕೀರ್ತನೆಗಳ ರಚನೆಯಾಗಿವೆ.

ಇಲ್ಲಿನ ಗುರುಸ್ತುತಿ ಕೀರ್ತನೆಗಳೆಲ್ಲ ಶ್ರೀವೈಷ್ಣವ ಆಳ್ವಾರರು ಮತ್ತು ಆಚಾರ್ಯರ ಸ್ತುತಿಗಳಾಗಿ, ಕನ್ನಡ ಕೀರ್ತನ ಸಾಹಿತ್ಯಕ್ಕೆ ಹೊಸ ರೂಪವನ್ನು ನೀಡಿವೆ. ಶ್ರೀವೈಷ್ಣವ ಮುಖ್ಯ ಸಾಹಿತ್ಯ ಇರುವುದು ತಮಿಳಿನಲ್ಲಿ. ಆದುದರಿಂದ ಆ ಧಾರ್ಮಿಕ ಕೃತಿಗಳ ಉಲ್ಲೇಖ ಹಾಗೂ ಅಲ್ಲಿಯ ಭಕ್ತರ, ಆಳ್ವಾರಾಚಾರ್ಯರ ವಿಶೇಷ ಸಂಗತಿಗಳನ್ನು ಹೇಳುವ ವಿವರಗಳು ಈ ಕೀರ್ತನೆಗಳಲ್ಲಿವೆ. ಹರಿಯ ಆದರಲ್ಲೂ ಕೇಶವಾದಿ ಹೆಸರುಗಳ ಸ್ತುತಿ ಇಲ್ಲಿ ಎದ್ದುಕಾಣುವ ಸಂಗತಿಯಾಗಿದೆ. ಪ್ರಪತ್ತಿ ಧರ್ಮದ ಎಲ್ಲ ತಿರುಳು ಈ ದಾಸರ ಕೃತಿಗಳಲ್ಲಿ ಮಡುಗಟ್ಟಿ ನಿಂತಿವೆ.



# 6. ಆಧುನಿಕ ಕನ್ನಡದಲ್ಲಿ ಶ್ರೀವೈಷ್ಣವ ದರ್ಶನ

ಆಧುನಿಕ ಕನ್ನಡ ಸಾಹಿತ್ಯವೆಂದರೆ 20ನೇ ಶತಮಾನದ ಪ್ರಾರಂಭವನ್ನೇ ತೆಗೆದುಕೊಳ್ಳಬೇಕು.

1928ರಲ್ಲಿ ಪ್ರಕಟವಾದ ದೇವಶಿಖಾಮಣಿ ಅಳಸಿಂಗರಾಚಾರ್ಯರ ಸಹೋದರರಾದ ರಾಮಾನುಜಾಚಾರ್ಯರ 'ತತ್ವಶುದ್ಧ' ಎನ್ನುವ ಬೃಹತ್ ಕೃತಿಯು 'ವಿಶಿಷ್ಟಾದ್ವೈತ ತತ್ವ'ವನ್ನು ಕುರಿತಾದ ಮೊಟ್ಟಮೊದಲ ಪುಸ್ತಕ. ಡೆಮ್ಮಿ ಅಷ್ಟದಳದ ಸಾವಿರ ಪುಟಗಳ ಈ ಗ್ರಂಥವು ಅಂದಿಗೂ, ಇಂದಿಗೂ ಮೈಲಿಗಲ್ಲೆ ಆಗಿದೆ. ಇದಕ್ಕೆ ಮುಂಚೆಯೇ ಅಣ್ಣ ಅಳಸಿಂಗರಾಚಾರ್ಯರು ಶ್ರೀ ಮಹಾಭಾರತ (24 ಸಂಪುಟಗಳು), ಶ್ರೀಮದ್ರಾಮಾಯಣ (8 ಸಂಪುಟಗಳು), ಶ್ರೀಮದ್ಭಾಗವತ (8 ಸಂಪುಟಗಳು), ಶ್ರೀಮದ್ರಾಮಾಯಣ ಉತ್ತರ ಕಾಂಡ, ಶ್ರೀಮದ್ಭಗವದ್ಗೀತೆಗಳನ್ನು ಕನ್ನಡದಲ್ಲಿ ಅನುವಾದ ಮಾಡಿ, ಈ ಕೃತಿಗಳ ಅಡಿಪ್ಪಣಿಗಳಲ್ಲಿ ವಿಶಿಷ್ಟಾದ್ವೈತ ಪರಾಮರ್ಶೆಯನ್ನು ನೀಡಿದ್ದರು. ಇದು ಕನ್ನಡ ಜನತೆಯಲ್ಲಿ ಜನಪ್ರಿಯವೂ ಆಯಿತು.

ಅಂದಿಗೇ ಅತಿ ಸಾಹಸ ಮಾಡಿ 'ತತ್ವಶುದ್ಧಿ' ಕೃತಿಯನ್ನು ಪ್ರಕಟಿಸಿದ ರಾಮಾನುಜಾಚಾರ್ಯರು, ಅದೃಷ್ಟವಂತರೆಂದೇ ಹೇಳಬೇಕು. ಅನೇಕ ಹಿರಿಯ ಪಂಡಿತರು ಅವರ ಕಾರ್ಯವನ್ನು ಪ್ರಶಂಸಿಸಿದುದೇ ಅಲ್ಲದೆ, ಬಿ.ಎಂ.ಶ್ರೀ ಮೈಸೂರು ವಿಶ್ವವಿದ್ಯಾನಿಲಯದಿಂದ ಸಹಾಯಧನವನ್ನೂ ಕೊಡಿಸಿದ್ದರು. ಅಂತೆಯೇ ಅಂದಿನ ಮಹಾರಾಜರೂ ಇದಕ್ಕೆ ಪ್ರೋತ್ಸಾಹ ನೀಡಿದ್ದರು.

ಸುಮಾರು 70 ವರ್ಷಗಳ ಹಿಂದೆ ರಚಿತವಾದ ಈ ಗ್ರಂಥ, ಇಷ್ಟು ವರ್ಷಗಳ ನಂತರವೂ ಇನ್ನೊಂದು ಬೃಹತ್ತಾದ, ಆಳವಾದ ಅಧ್ಯಯನದ ಮತ್ತೊಂದು ಕನ್ನಡ ಕೃತಿಯು ವಿಶಿಷ್ಟಾದ್ವೈತ ತತ್ವದಲ್ಲಿ ಬಂದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಸಿದ್ಧಾಂತದ ಅನೇಕ ನಿಗೂಢ ವಿಷಯಗಳನ್ನು ವಿವರಿಸುವುದರೊಂದಿಗೆ ಇತರೇ ದರ್ಶನಗಳ ಸಿದ್ಧಾಂತಗಳನ್ನೂ ಈ ಕೃತಿ ವಿವರಿಸಿರುವುದು ಇದರ ಹಿರಿಮೆಯನ್ನು ಹೆಚ್ಚಿಸಿದೆ. ಇವರು ತಮ್ಮ ಸುಲಲಿತ ಭಾಷೆ, ಪ್ರಬೋಧನ ಶೈಲಿಯಿಂದ ಎಲ್ಲ ಚೇತನರಿಗೆ ಉಪಯೋಗಕಾರಿಯಾಗಿರುವ ರೀತಿಯಲ್ಲಿ ವಿವರಿಸಿರುವುದು ಇದರ ವಿಶೇಷತೆ. ತನ್ನ ನಿರೂಪಣಾ ಪ್ರೌಢಿಮೆಯಿಂದಲೂ, ಸುಲಭ

ಸಾಮಿೂಪ್ಯತೆಯಿಂದಲೂ ಜನಮನವನ್ನು ಆಕರ್ಷಿಸಿದೆ.

'ಕನ್ನಡ ಭಾಷೆಗೆ ಹಾಗೂ ಕನ್ನಡ ನಾಡಿಗೆ ಈ ಕೃತಿಯ ಮೂಲಕ ಲೇಖಕರು ಸಲ್ಲಿಸಿರುವ ಸೇವೆ ಅವಿಸ್ಮರಣೀಯವಾದುದು. ಈ ಕೃತಿಯ ಮುಖಾಂತರ ಕನ್ನಡ ಭಾಷಾ ಬೆಳವಣಿಗೆ ಬಹು ಚೆನ್ನಾಗಿ ಆಗುವುದೇ ಅಲ್ಲದೆ ಇತರೇ ಸಾಹಿತ್ಯ ವಿದ್ವಾಂಸರಿಗೆ ಒಂದು ಮಾದರಿಯಾಗಿದೆ. ಕನ್ನಡ, ಸಂಸ್ಕೃತ, ತಮಿಳು ಭಾಷೆಗಳಲ್ಲಿ ಅಪಾರ ಪಾಂಡಿತ್ಯವನ್ನು ಪಡೆದಿರುವ ಶ್ರೀ ರಾಮಾನುಜಾಚಾರ್ಯರಲ್ಲದೆ ಬೇರೆಯವರಿಂದ ಇಂತಹ ಕೃತಿ ನಿರ್ಮಾಣವು ಸಾಧ್ಯವಾಗುತ್ತಿರಲಿಲ್ಲವೆಂದು ಸ್ಪಷ್ಟವಾಗಿ ಹೇಳಬಯಸುತ್ತೇನೆ. ವಿಶಿಷ್ಟಾದ್ವೈತ ಸಿದ್ಧಾಂತದ ಒಂದು ಅಮೂಲ್ಯ ರತ್ನ ಈ ಕೃತಿ'* ಎಂಬ ಮಾತು ಈ ಪುಸ್ತಕದ ಹಿರಿಮೆಯನ್ನು ಸಾರುತ್ತದೆ. ತಮ್ಮ ಹಾಗೂ ಲೇಖಕರ ಅನೇಕ ವರ್ಷಗಳ ಸಾಹಿತ್ಯಕ ಪರಿಚಯವನ್ನು ಹೊಂದಿದ್ದ ವಿದ್ಯಾ ವಿಭೂಷಣ, ವೇದಾಂತರತ್ನ ಎ. ಗೋವಿಂದಾಚಾರ್ಯರು ತಿಳಿಸಿರುವ ವಿಷಯವಿದು.

ವಿಶಿಷ್ಟಾದ್ವೈತ ತತ್ವವನ್ನು ಸಂಗ್ರಹವಾಗಿ, ಸರಳವಾಗಿ ವಿವರಿಸಿರುವ ಲೇಖಕರು ಈ ಕೃತಿಯನ್ನು ಆರು ಪರಿಚ್ಛೇದಗಳಾಗಿ ವಿಭಾಗಿಸಿದ್ದಾರೆ. ಇವುಗಳಲ್ಲಿ ಅಚಿತ್ತತ್ವ ಪರಿಚ್ಛೇದವು ಮೊದಲನೆಯದು. ನಂತರದಲ್ಲಿ ಕ್ರಮವಾಗಿ ಜೀವ ಪರಿಚ್ಛೇದ, ಈಶ್ವರ ಪರಿಚ್ಛೇದ, ನಿತ್ಯ ವಿಭೂತಿ ಪರಿಚ್ಛೇದ, ಜ್ಞಾನ ಪರಿಚ್ಛೇದ, ಅದ್ರವ್ಯ ಪರಿಚ್ಛೇದಗಳು ಬರುತ್ತವೆ. ತಮ್ಮ ತಮ್ಮ ಹೆಸರಿಗೆ ಅನುಗುಣವಾಗಿ ಇವು ಆಯಾ ಅರ್ಥಗಳ ಸ್ವರೂಪ, ಸ್ವಭಾವ, ಸ್ಥಿತಿಗಳನ್ನು ವಿಶದತವುವಾಗಿ ತಿಳಿಸುವ ರೀತಿಯಲ್ಲಿ ಅವನ್ನು ರಚಿಸಲಾಗಿದೆ. ಒಂದೊಂದು ಪರಿಚ್ಛೇದವೂ ವಿಷಯಾನುಸಾರವಾಗಿ ಅನೇಕ ಪ್ರಕರಣಗಳನ್ನು ಒಳಗೊಂಡಿವೆ. ಹೀಗಾಗಿ ಈ ಆರು ಪರಿಚ್ಛೇದಗಳಲ್ಲಿ 1148 ವಿಷಯ ಸೂಚಿಗಳಿವೆ.

## ರಾಮಾನುಜ ದರ್ಶನ ಸಾಹಿತ್ಯ

ರಾಮಾನುಜರು ತಾವು ಪ್ರತಿಪಾದಿಸಿದ ಸಿದ್ಧಾಂತಕ್ಕೆ 'ವಿಶಿಷ್ಟಾದ್ವೈತ ಸಿದ್ಧಾಂತ' ಎಂಬ ಹೆಸರು ನೀಡಿದರು. ನಂತರದಲ್ಲಿ ಇದು 'ರಾಮಾನುಜ ದರ್ಶನ' ಎಂಬ ಹೆಸರು ಪಡೆಯಿತು.

---

* ಆಲ್ಕೊಂಡವಿಲ್ಲಿ ಗೋವಿಂದಾಚಾರ್ಯರು 9-9-27ರಲ್ಲಿ ಬರೆದ ಪತ್ರದಿಂದ.

ರಾಮಾನುಜರು ತಾವು ಪ್ರತಿಪಾದಿಸಿದ 'ವಿಶಿಷ್ಟಾದ್ವೈತ ಸಿದ್ಧಾಂತ'ದ ಆಧಾರ ಸ್ತಂಭಗಳಾಗಿ 1) ಗದ್ಯತ್ರಯ, 2) ನಿತ್ಯಮ್, 3) ಗೀತಾಭಾಷ್ಯ, 4) ವೇದಾರ್ಥ ಸಂಗ್ರಹ, 5) ವೇದಾಂತಸಾರ, 6) ವೇದಾಂತದೀಪ, 7) ಶ್ರೀಭಾಷ್ಯ–ಎನ್ನುವ ಗ್ರಂಥಗಳನ್ನು ರಚಿಸಿದರು. ಇವು ಸಂಸ್ಕೃತ ರೂಪದಲ್ಲಿವೆ.

20ನೇ ಶತಮಾನದ ಪ್ರಾರಂಭದಲ್ಲಿ ಈ ಕೃತಿಗಳ ಕನ್ನಡ ಅನುವಾದಗಳು ಪ್ರಕಟಗೊಳ್ಳತೊಡಗಿದುವು. ಬಹುಶಃ ಈ ಗ್ರಂಥಗಳು ಕಥಾನಕಗಳಾಗಿರದೆ, ಸಿದ್ಧಾಂತ ಗ್ರಂಥಗಳಾಗಿರುವುದರಿಂದ ಜನಸಾಮಾನ್ಯರು ಈ ಕೃತಿಗಳಲ್ಲಿ ಆಸಕ್ತಿ ವಹಿಸುವುದಿಲ್ಲವೆಂದು ತಿಳಿದೋ, ಏನೋ, ಇವುಗಳ ಅನುವಾದಿತ ಗ್ರಂಥಗಳು ಪ್ರಕಟವಾಗಲಿಲ್ಲವೆಂದು ಕಾಣುತ್ತದೆ.

ಆದರೆ ಇತ್ತೀಚಿನ ದಿನಗಳಲ್ಲಿ ಇಂತಹ ಕೃತಿಗಳನ್ನು ಓದುವುದು, ಅರ್ಥ ಮಾಡಿಕೊಳ್ಳುವುದು, ಪ್ರವಚನಗಳನ್ನು ಆಲಿಸುವುದು–ಇತ್ಯಾದಿ ಧಾರ್ಮಿಕ ಪ್ರಜ್ಞೆ ಆಸ್ತಿಕರಲ್ಲಿ ಹೆಚ್ಚಾಗುತ್ತಾ ಬಂದಿರುವುದರಿಂದ, ದಿವ್ಯಪ್ರಬಂಧಗಳ ಕನ್ನಡ ಅವತರಣಿಕೆಗಳು, ರಾಮಾನುಜರ ಕೃತಿಗಳು ಕನ್ನಡದಲ್ಲಿ ಹೆಚ್ಚು ಹೆಚ್ಚಾಗಿ ಬೆಳಕು ಕಾಣುತ್ತಿವೆ.

ರಾಮಾನುಜರ ಗ್ರಂಥಗಳು ಒಮ್ಮೆಲೇ ಕನ್ನಡಕ್ಕೆ ಬರಲಿಲ್ಲ. ಅವರ ಎಲ್ಲ ಗ್ರಂಥಗಳು ಈಗಲೂ ಕನ್ನಡದಲ್ಲಿ ಬಂದಿಲ್ಲ. ಹಾಗೆ ನೋಡಿದರೆ ರಾಮಾನುಜರ ಗ್ರಂಥಗಳು ಮೊಟ್ಟಮೊದಲು ಕನ್ನಡದಲ್ಲಿ ಕಾಣಿಸಿಕೊಂಡಿದ್ದೇ ವೈಷ್ಣವರಲ್ಲ ದಿದ್ದರೂ, ವಿಶಿಷ್ಟಾದ್ವೈತದಲ್ಲಿ ಆಸಕ್ತಿಯನ್ನು ಹೊಂದಿರುವ ಹೊಳೆನರಸೀಪುರದ ಅಧ್ಯಾತ್ಮ ಪ್ರಕಾಶನ ಕಾರ್ಯಾಲಯದಿಂದ. ಇವರು ರಾಮಾನುಜರ ಮೂರು ಗ್ರಂಥಗಳನ್ನು ತಮ್ಮ ಕಾರ್ಯಾಲಯದ ಮುಖಾಂತರ ಅನುವಾದ ಮಾಡಿಸಿ, ಬೆಳಕಿಗೆ ತಂದಿದ್ದಾರೆ.

'ವೇದಾಂತಸಾರ'ದ ಮೊದಲ ಅಧ್ಯಾಯದ ಎರಡು ಪಾದಗಳು ಮೊದಲು ಭಾಗವಾಗಿ 1957ರಲ್ಲಿ ಸಚ್ಚಿದಾನಂದ ಸರಸ್ವತೀ ಸ್ವಾಮಿಗಳ ಕನ್ನಡದ ಅನು ವಾದಬೊಡನೆ ಪ್ರಕಟವಾಯಿತು. ವೇದಾಂತ ಸಾರ, ವೇದಾಂತ ದೀಪ, ಶ್ರೀಭಾಷ್ಯ–ಈ ಮೂರೂ ಗ್ರಂಥಗಳು ಬಾದರಾಯಣರ ಬ್ರಹ್ಮಸೂತ್ರಗಳ ಅಭಿ ಪ್ರಾಯವನ್ನೇ ಬೇರೆ ಬೇರೆ ರೂಪಗಳಲ್ಲಿ ವರ್ಣಿಸುತ್ತವೆ. ಇವುಗಳಲ್ಲಿ 'ವೇದಾಂತ ಸಾರ'ವು ತೀರಾ ಚಿಕ್ಕದಾದುದರಿಂದ ಅದನ್ನು ಮೂಲ ಸಮೇತ, ಅನುವಾದ

ಸಹಿತ ಪ್ರಕಟಿಸಲು ಅಧ್ಯಾತ್ಮ ಪ್ರಕಾಶನದ ಕಾರ್ಯಾಲಯದವರು ತೀರ್ಮಾನಿಸಿದರು. ಆದರೆ ಕಾರಣಾಂತರಗಳಿಂದ ಮೊದಲ ಭಾಗ ಮಾತ್ರ ಪ್ರಕಟವಾಯಿತು. ಈ ಗ್ರಂಥವು ಪೂರ್ಣವಾಗಿ ಪ್ರಕಟವಾದ ಬಳಿಕ ಇದಕ್ಕೊಂದು ಪೀಠಿಕೆಯನ್ನು ಬರೆದು, ಗ್ರಂಥದ ಸಾರವನ್ನು ಪ್ರಕಟಿಸಬೇಕೆಂಬ ಅಭಿಪ್ರಾಯವಿತ್ತು. ಆದರೆ ಇಂದಿನವರೆಗೂ 'ವೇದಾಂತಸಾರ'ದ ಉಳಿದ ಭಾಗವನ್ನು ಪ್ರಕಟಿಸಿಲ್ಲ. ಅಂತೆಯೇ ಅದರ ಪೀಠಿಕಾ ರೂಪವೂ ಹೊರಬರಲಿಲ್ಲ.

ರಾಮಾನುಜರು ಬರೆದ ಸಿದ್ಧಾಂತ ಪ್ರಧಾನವಾದ ಗ್ರಂಥಗಳಲ್ಲಿ 'ವೇದಾರ್ಥಸಂಗ್ರಹ' ಮೊಟ್ಟಮೊದಲನೆಯದು. ಇದನ್ನು 'ಉಪನಿಷತ್ ಪ್ರಸ್ಥಾನ' ಎಂದೂ ಕರೆಯಬಹುದು. ಇದರಲ್ಲಿ ಬರೆದಿರುವ ಅನೇಕ ವಿಷಯಗಳು ಅಲ್ಲಲ್ಲಿ ಹಾಗೂ ಅದೇ ಕ್ರಮದಲ್ಲಿ ರಾಮಾನುಜರ 'ಗೀತಾಭಾಷ್ಯ'ದಲ್ಲಿ ಪ್ರತಿಪಾದಿತವಾಗಿರುವುದು ಕಂಡುಬರುತ್ತದೆ. ಇದರ ಸಂಸ್ಕೃತ ಮೂಲದಲ್ಲಿ ಅಧ್ಯಾಯದ ವಿಭಾಗಗಳಿಲ್ಲ. ಆದರೆ ಕನ್ನಡದ ಅನುವಾದ ನೀಡಿರುವ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು 1959ರಲ್ಲಿ ಅಧ್ಯಾತ್ಮ ಪ್ರಕಾಶನದ ಕಾರ್ಯಾಲಯದ ಮುಖಾಂತರ ಮೂಲ, ಆದರ ಕನ್ನಡ ಅನುವಾದ ಸಹಿತ ಪ್ರಕಟಿಸಿದರು. ಒಂದು ವ್ಯವಸ್ಥಿತ ಕ್ರಮವನ್ನು ಅನುಸರಿಸಿ, ವಿಷಯಾನುಸಾರ—

1. ಸಿದ್ಧಾಂತ ಹಾಗೂ ಪೂರ್ವಪಕ್ಷಗಳ ಸಂಕ್ಷೇಪ.
2. ಶಾಂಕರ ಮತ ನಿರಾಕರಣ.
3. ಭಾಸ್ಕರ ಮತ ನಿರಾಕರಣ.
4. ಯಾದವಪ್ರಕಾಶ ಮತ ನಿರಾಕರಣ.
5. ಸ್ವಪಕ್ಷ ಪ್ರತಿಷ್ಠಾಪನೆ.

ಎಂಬ ಐದು ಮುಖ್ಯ ಪ್ರಕರಣಗಳನ್ನಾಗಿ ವಿಂಗಡಿಸಿ, ಬೇರೆ ಬೇರೆ ತಲೆಬರಹಗಳಿಂದ ವಿಂಗಡಿಸಿ ತೋರಿಸಿದ್ದಾರೆ.

ಉಪನಿಷತ್ ಪ್ರಸ್ಥಾನ ಸಾರವಾಗಿರುವ ಈ ಗ್ರಂಥಕ್ಕೆ ಅಗ್ರಸ್ಥಾನವಿರುವುದರಿಂದ ಜಿಜ್ಞಾಸುಗಳು ರಾಮಾನುಜ ಸಿದ್ಧಾಂತದ ಆಳ, ವಿಸ್ತಾರಗಳನ್ನು ಅರಿಯಲು ಮೊದಲು ಈ ಕೃತಿಯನ್ನು ಓದಬೇಕೆಂಬುದು ಅನುವಾದಕರ ಸಲಹೆ. ಈ ಕೃತಿಯ ಪ್ರಕಟಣೆಯಲ್ಲಿ ಅವರು ತುಂಬಾ ಶ್ರದ್ಧೆ ವಹಿಸಿರುವುದನ್ನು ಪುಸ್ತಕ ಓದಿದರೇನೇ ಅರ್ಥವಾಗುವುದು. ಶ್ರಮವಹಿಸಿ ಸಿದ್ಧಮಾಡಿರುವ ಈ ಗ್ರಂಥದಲ್ಲಿ

ಮೂಲ, ಅದರರ್ಥ, ಅದಕ್ಕೆ ಟಿಪ್ಪಣಿ, ಸೀಠಿಕೆ, ಪರಿಶಿಷ್ಟ ಇತ್ಯಾದಿ ವಿವರಗಳನ್ನು ಅನುವಾದಕರು ನೀಡಿದ್ದಾರೆ. ಕಾಶಿಯಿಂದ ಪ್ರಕಟವಾಗಿರುವ ಸಟೀಕಾ ವೇದಾರ್ಥ ಸಂಗ್ರಹ, ಕಂಚಿಯಿಂದ ಪ್ರಕಟವಾಗಿರುವ 'ವೇದಾರ್ಥ ಸಂಗ್ರಹ'ವನ್ನು ಪರಿಶೀಲಿಸಿರುವುದೇ ಅಲ್ಲದೆ ಎರಡು ಇಂಗ್ಲಿಷ್ ಕೃತಿಗಳನ್ನು ಲೇಖಕರು ಪರಾಮರ್ಶಿಸಿರುವರು. ಇವೆಲ್ಲವುಗಳ ಆಧಾರದ ಮೇಲೆ ಕೃತಿಯ ಸಂಸ್ಕೃತದ ಶುದ್ಧ ಪಾಠವನ್ನು ನೀಡಿದ್ದಾರೆ. ಕನ್ನಡದ ಅರ್ಥದೃಷ್ಟಿಯಿಂದಲೇನೇ ತಿಳಿದುಕೊಳ್ಳುವುದಕ್ಕಾಗದ ವಿಷಯಗಳನ್ನು ಅಡಿ ಟಿಪ್ಪಣಿಗಳ ಮುಖಾಂತರ ವಿವರಿಸಿದ್ದಾರೆ. ಇಂತಹ ಅನುವಾದ ಕೆಲಸವು ರಾಮಾನುಜರ ಬೇರೆ ಯಾವುದೇ ಕೃತಿಗೆ ಭಾರತೀಯ ಯಾವುದೇ ಭಾಷೆಯಲ್ಲಿ ಇದುವರೆವಿಗೂ ಆಗದೆ ಇರುವುದು ಈ ಪುಸ್ತಕದ ಒಂದು ವಿಶೇಷ.

ಈ ಎರಡೂ ಗ್ರಂಥಗಳನ್ನು ಇದುವರೆವಿಗೂ ಯಾವ ವೈಷ್ಣವರೂ ಪ್ರಕಟಿಸಿಲ್ಲದಿರುವುದೊಂದು ಹಿನ್ನಡೆ.

ಇದೇ ರೀತಿಯಲ್ಲಿ ರಾಮಾನುಜರ ಇನ್ನೆರಡು ಗ್ರಂಥಗಳಾದ 'ವೇದಾಂತ ದೀಪ' ಹಾಗೂ 'ನಿತ್ಯ' ಗ್ರಂಥಗಳೂ ಕೂಡ ಕನ್ನಡದಲ್ಲಿ ಬೆಳಕು ಕಾಣದೆ ಇರುವುದೊಂದು ದೊಡ್ಡ ಕೊರತೆ.

ಇದೇ ಅಧ್ಯಾತ್ಮ ಕಾರ್ಯಾಲಯದವರು ಬ್ರಹ್ಮಸೂತ್ರಗಳ ಪ್ರಥಮ ಪರಿಚಯವಾಗಿ 'ವೇದಾಂತ ದರ್ಶನ' ಎನ್ನುವ ಕೃತಿಯೊಂದನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಶಂಕರ, ರಾಮಾನುಜ, ಮಧ್ವರ ವೇದಾಂತ ಸಿದ್ಧಾಂತಗಳ ಬಗೆಗೆ ವಿವರಗಳಿವೆ. ವೇದಾಂತ ದರ್ಶನದ ಸಾರವನ್ನು ಶಂಕರಾಚಾರ್ಯರ ಅಭಿಪ್ರಾಯಕ್ಕೆ ಅನುಗುಣವಾಗಿ ವಿವರಿಸಿ, ಪರಿಶಿಷ್ಟದಲ್ಲಿ ರಾಮಾನುಜರ ಅಭಿಪ್ರಾಯವನ್ನು ಸಂಗ್ರಹವಾಗಿ ಪ್ರತಿಪಾದಿಸಲಾಗಿದೆ.

### ಶ್ರೀಭಾಷ್ಯ :

ರಾಮಾನುಜರು ರಚಿಸಿರುವ ಗ್ರಂಥಗಳಲ್ಲಿ ಅತ್ಯಂತ ಪ್ರಮುಖವಾದುದು 'ಶ್ರೀಭಾಷ್ಯ'. ಈ ಮೇರು ಕೃತಿಯು 'ವಿಶಿಷ್ಟಾದ್ವೈತ' ಪ್ರತಿಪಾದಕ ಕೃತಿಯಾಗಿದೆ. ಈ ಕೃತಿಯನ್ನು ಕುರಿತಾದ ಗ್ರಂಥಗಳು ಕನ್ನಡದಲ್ಲಿ ಸಾಕಷ್ಟು ಬಂದಿವೆ.

1913ರಲ್ಲಿ ಕಲ್ಕಿ ನರಸಿಂಹಾಚಾರ್ಯ (ಕಲ್ಕಿ ಸಿಂಹ)ರು ತಿಳಿಗನ್ನಡದಲ್ಲಿ

ಸರ್ವರಿಗೂ ಅರ್ಥವಾಗುವಂತೆ ಸಂಕ್ಷಿಪ್ತರೂಪದಲ್ಲಿ ಶ್ರೀಭಾಷ್ಯವನ್ನು ಸುಲಭ ಕನ್ನಡದಲ್ಲಿ ನೀಡಿದ್ದಾರೆ. ಇಂತಹುದೇ ಪ್ರಯತ್ನ ಎಂ.ಓ.ಎಸ್. ಅಯ್ಯಂಗಾರ್ ರವರ 'ಶ್ರೀಭಾಷ್ಯ ತಾತ್ಪರ್ಯ ಸಾರ' ಹಾಗೂ ಶ್ರೀದೇವಿಯವರ 'ಶ್ರೀಭಾಷ್ಯ ಪ್ರವೇಶ'.

ಆದರೆ ಈ ಯಾವುದೇ ಕೃತಿಗಳಲ್ಲಿಯೂ ಮೂಲದ ರೂಪ ಕಂಡುಬರುವುದಿಲ್ಲ.

ಈ ಕೊರತೆಯನ್ನು ನೀಗಿದವರು ಶ್ರೀ ಟಿ. ವಿ. ನಾಥಮುನಿ ಅಯ್ಯಂಗಾರ್ ರವರು. ಇವರು ಬ್ರಹ್ಮಸೂತ್ರಗಳನ್ನು ಮೂಲದಲ್ಲಿ ನೀಡಿ, ಅವುಗಳಿಗೆ ಶ್ರೀಭಾಷ್ಯದ ಕನ್ನಡದ ಅರ್ಥ ನೀಡಿರುವ ಪ್ರಯತ್ನ ಮಾಡಿರುವರು. 'ಬ್ರಹ್ಮಸೂತ್ರಗಳು–ಶ್ರೀಭಾಷ್ಯ ದರ್ಪಣ' ಎನ್ನುವ ಕೃತಿಯು 1972ರಲ್ಲಿ ಪ್ರಕಟವಾಗಿದ್ದು, 500 ಪುಟಗಳಷ್ಟು ವಿಸ್ತಾರ ರೂಪವನ್ನು ಪಡೆದಿದೆ. ರಾಮಾನುಜರ ಭಾಷ್ಯದೊಂದಿಗೆ ಶಂಕರ, ಮಾಧ್ವರ ಬ್ರಹ್ಮಸೂತ್ರ ಭಾಷ್ಯಗಳ ಕಿರುಪರಿಚಯವನ್ನೂ ನೀಡಲಾಗಿದೆ ಇದೊಂದು ಉತ್ತಮ ಪ್ರಯತ್ನ. ಇಂತಹುದೇ ಒಂದು ಬೃಹತ್ ಪ್ರಯತ್ನ ಇತ್ತೀಚೆಗೆ ನಾಥಮುನಿ ಅಯ್ಯಂಗಾರ್ ಸಹೋದರರಾದ ವರದರಾಜ ತಿರುಮಲೈ ರವರ ಸಾಹಸದಿಂದ ಫಲಪ್ರದವಾಯಿತು. ಶ್ರೀವೈಷ್ಣವ ಸಾಹಿತ್ಯದ ಖ್ಯಾತ ವಿದ್ವಾಂಸರಾದ ಡಾ|| ಎನ್.ಎಸ್. ಅನಂತರಂಗಾಚಾರ್ಯರವರು 'ಶ್ರೀಭಾಷ್ಯ'ದ ಮೂಲ, ಅದರ ಕನ್ನಡ ಅನುವಾದ ಹಾಗೂ ಆವಶ್ಯಕ ಇತರೇ ವಿವರಗಳೊಡನೆ 'ಶ್ರೀಭಾಷ್ಯ' ಎನ್ನುವ ಹೆಸರಿನಲ್ಲಿ ಮೂರು ಸಂಪುಟಗಳಲ್ಲಿ ಪ್ರಕಟಿಸಿದರು. ಮೊದಲ ಸಂಪುಟ 1984ರಲ್ಲೂ, ಎರಡನೆಯದು 1987ರಲ್ಲೂ, ಮೂರನೇ ಸಂಪುಟವನ್ನು 1990ರಲ್ಲೂ ಪ್ರಕಟಿಸಲಾಯಿತು. ಒಟ್ಟು ಸುಮಾರು ಎಡರು ಸಾವಿರ ಪುಟ (ಡೆಮ್ಮಿ ಅಷ್ಟಗಳ)ಗಳನ್ನು ಮೀರಿರುವ ಈ ಕೃತಿಯು ಕೇವಲ ಸೇವಾಮನೋಭಾವದಿಂದ ಹೊರಬಂದಿದೆಯೆಂದರೆ ಅತಿಶಯೋಕ್ತಿಯಲ್ಲ. ಇದು ಕನ್ನಡ ಧಾರ್ಮಿಕ ಸಾಹಿತ್ಯದ ಒಂದು ಅಮೂಲ್ಯರತ್ನ.

ಶ್ರೀ ಕೆ. ಎಸ್. ಕೃಷ್ಣ ತಾತಾಚಾರ್ಯರ 'ಭಾಷ್ಯಾಮೃತಸಾರ' ಎನ್ನುವ ಕೃತಿಯು ಸಂಪೂರ್ಣ ಶ್ರೀಭಾಷ್ಯದ ಪ್ರಮುಖ ವಿಷರಗಳನ್ನು ವಿವರಿಸುವ ಒಂದು ಅಮೂಲ್ಯ ಕೃತಿ.

ಗೀತಾಭಾಷ್ಯ :

ಗೀತಾ ಪ್ರಸ್ಥಾನದ ರೂಪದಲ್ಲಿ ರಾಮಾನುಜರು ತಮ್ಮ ಗೀತಾಭಾಷ್ಯವನ್ನು ರಚಿಸಿದರು. ವಿಶಿಷ್ಟಾದ್ವೈತ ಸಿದ್ಧಾಂತದ ಪ್ರತಿಪಾದನೆಗಾಗಿ ಭಗವದ್ಗೀತೆಯನ್ನು ಉಪಯೋಗಿಸಿಕೊಂಡು, ತಮ್ಮ ವಾದವನ್ನು ಸೂಕ್ತ ಪರಾಮರ್ಶೆಯಿಂದ ಈ ಭಾಷ್ಯದ ಮುಖಾಂತರ ಮಂಡಿಸಿದ್ದಾರೆ.

ಈ ಗೀತಾಭಾಷ್ಯವನ್ನು ಉಪಯೋಗಿಸಿಕೊಂಡು ಗ್ರಂಥರಚನೆ ಮಾಡಿದವರಲ್ಲಿ ಸಿ. ಎಂ. ವಿಜಯರಾಘವಾಚಾರ್ಯರು ಮೊದಲಿಗರು. ಇವರು 'ಶ್ರೀಮದ್ಭಗವದ್ಗೀತಾ ಭಾಷ್ಯ' ಎನ್ನುವ ಬೃಹತ್ ಸಂಪುಟವನ್ನು ನಾಲ್ಕು ಭಾಗಗಳಲ್ಲಿ ಪ್ರಕಟಿಸಿದರು. 1942ರಿಂದ 1952ರ ಅವಧಿಯಲ್ಲಿ ಪ್ರಥಮ ಷಟ್ಕ (800 ಪುಟ), ದ್ವಿತೀಯ ಷಟ್ಕ-ಭಾಗ 2 (450 ಪುಟ), ತೃತೀಯ ಷಟ್ಕ-ಭಾಗ 1 (606 ಪುಟ), ತೃತೀಯ ಷಟ್ಕ-ಭಾಗ 2 (450 ಪುಟ) ಒಟ್ಟು ಸುಮಾರು 2700 ಪುಟ (ಚತುರ್ಥ ರಾಯಲ್)ಗಳ ಬೃಹತ್ ಕೃತಿಯನ್ನು ಇವರು ರಚಿಸಿದ್ದಾರೆ. ಇಂತಹುದೊಂದು ಬೃಹತ್ ಕೃತಿಯನ್ನು ಪ್ರಕಟಿಸಬೇಕಾದರೆ ಲೇಖಕರಿಗೆ ಇರಬೇಕಾದ ಸಹನೆ, ಶ್ರಮ, ಆರ್ಥಿಕ ಮೂಲ, ಸಾಧನೆಗಳನ್ನು ಮೆಚ್ಚತಕ್ಕದ್ದೆ. ಈ ಕೃತಿಯಲ್ಲಿ ಮೂಲ ಭಗವದ್ಗೀತೆ ಅರ್ಥದೊಂದಿಗೆ, ಮೂಲ ರಾಮಾನುಜ ಭಾಷ್ಯ ಹಾಗೂ ಯಾಮುನೇಯರ ಗೀತಾರ್ಥ ಸಾರವನ್ನೂ ಸಹ ಅನುವಾದ, ವ್ಯಾಖ್ಯಾನಗಳ ಸಹಿತ ನೀಡಿದ್ದಾರೆ. ಇದರೊಂದಿಗೆ 'ಆಚಾರ್ಯ ಹೃದಯಾನ್ವೇಷೀ' ಎನ್ನುವ ಕನ್ನಡ ಪ್ರತಿಪದ ಅರ್ಥ, ತಾತ್ಪರ್ಯ, ಚಂದ್ರಿಕಾರ್ಥಗಳೂ, ಶ್ರುತಿ, ಸ್ಮೃತಿ ಇತಿಹಾಸ ಪುರಾಣ ಪ್ರಮಾಣಗಳೊಂದಿಗೆ ಉಪಪಾದನೆಯನ್ನೂ ಸಹ ಲೇಖಕರು ನೀಡಿದ್ದಾರೆ.

ಕಲ್ಕಿ ನರಸಿಂಹಾಚಾರ್ಯರೂ ಕೂಡ 'ಗೀತಾ ತಾತ್ಪರ್ಯ ಸಾರಾಮೃತ' ಎನ್ನುವ ಕೃತಿಯೊಂದನ್ನು ಈ ನಿಟ್ಟಿನಲ್ಲಿ ರಚಿಸಿದ್ದಾರೆ.

ಡಾ|| ಎನ್. ಎಸ್. ಅನಂತರಂಗಾಚಾರ್‌ರವರು 'ಶ್ರೀಮದ್ಭಗವದ್ಗೀತಾ ಭಾಷ್ಯ' ಎನ್ನುವ ಕೃತಿಯನ್ನು ಮೂರು ಸಂಪುಟಗಳಲ್ಲಿ ಹೊರತರಲು ನಿರ್ಧರಿಸಿ, ಇದರಲ್ಲಿ ಈಗಾಗಲೇ ಮೊದಲೆರಡು ಸಂಪುಟಗಳನ್ನು ಪ್ರಕಟಿಸಿದ್ದಾರೆ. ಮೂರನೇ ಸಂಪುಟ ಹೊರಬರಬೇಕಾಗಿದೆ. ಶ್ರೀ ರಾಮಾನುಜರ ಗೀತಾಭಾಷ್ಯದ ಮೂಲ, ಅನುವಾದ, ತಾತ್ಪರ್ಯಗಳನ್ನು ವಿಸ್ತೃತ ರೂಪದಲ್ಲಿ ಇದರಲ್ಲಿ ನೀಡಲಾಗಿದೆ.

ಪ್ರೊ|| ಎಸ್. ಎಸ್. ರಾಘವಾಚಾರ್ಯರು 'ಗೀತಾಭಾಷ್ಯದ' ತಾತ್ಪರ್ಯ ವನ್ನು ಬಹು ಸುಂದರವಾಗಿ 'ಶ್ರೀಮದ್ಗೀತಾ ಭಾಷ್ಯ' ಎಂಬ ಹೆಸರಿನಲ್ಲಿ ಕನ್ನಡ ದಲ್ಲಿ ರಚಿಸಿದ್ದಾರೆ. ತುಂಬಾ ಉಪಯುಕ್ತ ಗ್ರಂಥವಿದು. ಇದನ್ನು ಬೆಂಗಳೂರಿನ ಶ್ರೀ ಲಕ್ಷ್ಮೀ ಹಯಗ್ರೀವ ಸೇವಾ ಟ್ರಸ್ಟ್‌ನವರು 1982ರಲ್ಲಿ ಪ್ರಕಟಿಸಿದರು. 'ಶ್ರೀ ರಾಮಾನುಜ ಆನ್ ದಿ ಗೀತಾ', 'ಶ್ರೀ ರಾಮಾನುಜ ಆನ್ ದಿ ಉಪ ನಿಷದ್ಸ್' ಎನ್ನುವ ಇವರ ಪ್ರಖ್ಯಾತ ಆಂಗ್ಲ ಕೃತಿಗಳ ಹಾದಿಯಲ್ಲಿ ಅರ್ಥ ಗ್ರಹಣದ ಧೃಢೀಕರಣಕ್ಕಾಗಿ ಲೇಖಕರು ಗೀತಾಭಾಷ್ಯವನ್ನು ಕನ್ನಡಿಸಿದಾಗ, ಅವರಿಗೆ ಅದರ ಪದ, ವಾಕ್ಯ ಮತ್ತು ಪ್ರಕರಣಗಳ ಸ್ವಾರಸ್ಯ ಮನದಟ್ಟಾಗಿ, ಅದು ಭಾಷ್ಯಕಾರರ ಶೈಲಿಯಲ್ಲಿಯೇ ಸಂರಕ್ಷಿತವಾಗುವಂತೆ ಮಾಡಿದ್ದಾರೆ. ಮೂಲ ಭಾಷ್ಯಕ್ಕೆ ಸಮೀಪವಾದ ಈ ಅನುವಾದ ಆಚಾರ್ಯ ರಾಮಾನುಜರ ಮಾತಿನಲ್ಲಿನ ಅಪೇಕ್ಷೆ, ಭಕ್ತಿ ಇರುವ ಜಾಗೃತ ಪ್ರಜ್ಞೆಗಳ ಓದುಗರಿಗೆ ಮನ ದಟ್ಟಾಗುವಂತೆ ಪ್ರೊ|| ರಾಘವಾಚಾರ್ಯರು ಪ್ರಯತ್ನಿಸಿರುವುದು ತುಂಬಾ ಸ್ತುತ್ಯವಾದ ಕಾರ್ಯ.

ಸುಮಾರು ಒಂದು ಶತಮಾನದಷ್ಟು ಹಿಂದೆಯೇ ರಾಮಾನುಜರ ಗೀತಾ ಭಾಷ್ಯವು ಕನ್ನಡದಲ್ಲಿ ಬಂದಿರುವುದು ಕನ್ನಡಿಗರು ಹೆಮ್ಮೆ ಪಡುವ ವಿಷಯ. ತೂಪ್ಪಲ್ ವೆಂಕಟಾಚಾರ್ಯರವರು 'ಶ್ರೀಮದ್ಗೀತಾರ್ಥಸಾರ' ಎನ್ನುವ ಈ ಕೃತಿಯನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿದರು. ಪ್ರಥಮ ಸಂಪುಟವು 1896ರಲ್ಲೂ, ದ್ವಿತೀಯ ಸಂಪುಟವು 1898ರಲ್ಲೂ, ತೃತೀಯ ಸಂಪುಟವು 1900ರಲ್ಲೂ ಪ್ರಕಟವಾಯಿತು. ಪ್ರತಿ ಅಧ್ಯಾಯದ ಪ್ರತಿ ಶ್ಲೋಕದ ಕೊನೆ ಯಲ್ಲೂ ರಾಮಾನುಜ ಭಾಷ್ಯ (ರಾ. ಭಾ)ದ ಗದ್ಯಾನುವಾದವನ್ನು ನೀಡಿರುತ್ತಾರೆ. ಇದರೊಂದಿಗೆ ಶಂಕರ ಭಾಷ್ಯ, ಮಾಧ್ವ ಭಾಷ್ಯಗಳ ಕನ್ನಡಾನುವಾದವನ್ನೂ ಅಲ್ಲಲ್ಲಿ ಕೊಡಲಾಗಿದೆ.

ರಾಮಾನುಜರ ಮತ್ತೊಂದು ಗ್ರಂಥವಾದ 'ಗದ್ಯತ್ರಯ'ವನ್ನು ಎಸ್. ರಂಗಾಚಾರ್‌ರವರು ಕನ್ನಡ ಅನುವಾದ ಹಾಗೂ ಅವತರಣಿಕೆಗಳೊಂದಿಗೆ ಮೇಲ್ಕೋಟೆಯ ಅಹೋಬಿಲ ಮಠದ ಮುಖಾಂತರ 1991 ರಲ್ಲಿ ಬೆಳಕಿಗೆ ತಂದಿ ದ್ದಾರೆ. ಉಪಯುಕ್ತ ಅವತರಣಿಕೆಯೊಂದಿಗೆ ಶರಣಾಗತಿ ಗದ್ಯ, ಶ್ರೀರಂಗ ಗದ್ಯ, ವೈಕುಂಠ ಗದ್ಯಗಳ ಮೂಲ ಹಾಗೂ ಅನುವಾದಗಳನ್ನು ಅವರು ನೀಡಿ

ದ್ದಾರೆ. ಕಡೆಯಲ್ಲಿ ಧಾಟೀ ಪಂಚಕ ಹಾಗೂ ರಾಮಾನುಜರ ಜೀವನ ಚರಿತ್ರೆಯನ್ನು ಲೇಖಕರು ಪ್ರಚುರಪಡಿಸಿದ್ದಾರೆ. ಇವುಗಳಿಗೆ ಸಂಬಂಧಪಟ್ಟ ವ್ಯಾಖ್ಯಾನಗಳು ಇನ್ನೂ ಕನ್ನಡಕ್ಕೆ ಬಂದಿಲ್ಲ. ಕಡೆಯ ಪಕ್ಷ ಬಹು ಮುಖ್ಯವಾದ ಸುದರ್ಶನ ಸೂರಿಯವರ ಹಾಗೂ ಪೆರಿಯ ವಾಚ್ಛಾನ್ ಪಿಳ್ಳೈರವರ 'ಶರಣಾಗತಿ ಗದ್ಯಭಾಷ್ಯ'ವಾದರೂ ಕನ್ನಡಕ್ಕೆ ಬರುವುದು ಒಳ್ಳೆಯದು.

ದರ್ಶನ :

ವೇದಾಂತ ದರ್ಶನದ ಪ್ರಾಕಾರಗಳಲ್ಲಿ ಒಂದಾದ ವಿಶಿಷ್ಟಾದ್ವೈತ ದರ್ಶನವು ತನ್ನದೇ ಆದ ವಿಶೇಷತೆಗಳನ್ನು ಹೊಂದಿದೆ. ಚಿತ್, ಅಚಿತ್ ಮತ್ತು ಈಶ್ವರ ಎನ್ನುವ ತತ್ವತ್ರಯವನ್ನು ಅಂಗೀಕರಿಸಿರುವ ಈ ದರ್ಶನವು ಶರೀರ–ಶರೀರಿ ಭಾವದ ನಿರೂಪಣೆಯನ್ನು ಮಾಡಿ, ಚಿದಚಿದ್ವಿಶಿಷ್ಟವಾದ ಒಂದೇ ಎಂದು ಸ್ಥಾಪಿಸಿದೆ. ಅನಾದಿಯಾದ ಈ ಸಿದ್ಧಾಂತವನ್ನು ಭಗವದ್ರಾಮಾನುಜರು ಪ್ರವರ್ತನಗೊಳಿಸಿದರು. ಆದರಿಂದ ಮುಂದೆ ಇದು 'ರಾಮಾನುಜ ದರ್ಶನ' ಎಂದು ಪ್ರಸಿದ್ಧವಾಯಿತು.

ಡಾ|| ಎನ್. ಎಸ್. ಅನಂತರಂಗಾಚಾರ್ಯರು ತಮ್ಮ 'ರಾಮಾನುಜ ದರ್ಶನ' (ಡಿ.ವಿ.ಕೆ. ಮೂರ್ತಿ, ಮೈಸೂರು) ಎನ್ನುವ ಕೃತಿಯಲ್ಲಿ ಈ ಸಿದ್ಧಾಂತದ ಸ್ವರೂಪವನ್ನು ಸಂಗ್ರಹವಾಗಿ ನಿರೂಪಿಸಿದ್ದಾರೆ.

ಈ ಕೃತಿಯ ಪ್ರಾರಂಭದಲ್ಲಿ 'ಹಿನ್ನೆಲೆ' ಎನ್ನುವ ಅಧ್ಯಾಯದಲ್ಲಿ ದರ್ಶನಗಳ ಸಂಕ್ಷಿಪ್ತ ಇತಿಹಾಸ, ರಾಮಾನುಜ ದರ್ಶನದ ಹಿನ್ನೆಲೆ, ಸಂಪ್ರದಾಯ ಪರಂಪರೆ, ಆಳ್ವಾರುಗಳ ಹಿರಿಮೆ, ಆಚಾರ್ಯರುಗಳ ವಿಶೇಷತೆ, ರಾಮಾನುಜ ದರ್ಶನದ ಪರಮಾಧಾರಗಳು–ಇತ್ಯಾದಿಗಳ ವಿವರಗಳಿವೆ.

ಎರಡನೇ ಅಧ್ಯಾಯದಲ್ಲಿ ಭಗವದ್ರಾಮಾನುಜರ ದಿವ್ಯಜೀವನವನ್ನು ಚಿತ್ರಿಸಲಾಗಿದೆ.

ಬಹಳ ಮುಖ್ಯವಾದ ಮೂರನೇ ಅಧ್ಯಾಯದಲ್ಲಿ ಪ್ರಕೃತಿ, ಕಾಲ, ಧರ್ಮಭೂತಜ್ಞಾನ, ನಿತ್ಯವಿಭೂತಿ, ಜೀವಾತ್ಮರು, ಪರಮಾತ್ಮಾ–ಇವರ ಸ್ವರೂಪ, ಮೋಕ್ಷೋಪಾಯವಾದ ಭಕ್ತಿ ಹಾಗೂ ಪ್ರಪತ್ತಿಗಳ ಸ್ವರೂಪ, ಮೋಕ್ಷಸ್ವರೂಪ ಹಾಗೂ ಶ್ರೀವೈಷ್ಣವ ಧರ್ಮದ ಸ್ವರೂಪ–ಇತ್ಯಾದಿಗಳನ್ನು ಸವಿಸ್ತಾರವಾಗಿ, ಓದುಗರ ಮನಸ್ಸಿಗೆ ಹಿಡಿಸುವಂತೆ ಲೇಖಕರು ವಿವರಿಸಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ವಿಶಿಷ್ಟಾದ್ವೈತವು ಹೇಗೆ ಇತರೇ ದರ್ಶನಗಳೊಂದಿಗೆ ಹೊಂದಿಕೊಂಡಿದೆ ಎಂಬುದರ ವಿವರಗಳಿವೆ. ವಿಶಿಷ್ಟಾದ್ವೈತವು ಇತರೇ ದರ್ಶನಗಳನ್ನೆಲ್ಲ ಪೂರ್ತಿಯಾಗಿ ತಳ್ಳಿಹಾಕುವುದಿಲ್ಲ. ಆಯಾ ದರ್ಶನಗಳಲ್ಲಿ ಯಾವ ಯಾವ ಅಂಶ ವೇದ ವಿರುದ್ಧ, ನ್ಯಾಯವಿರುದ್ಧವಾಗಿವೆಯೋ ಅಂತಹವುಗಳನ್ನು ಯಾವ ರೀತಿ ಬಹಿಷ್ಕರಿಸುತ್ತವೆ ಎಂಬುದರ ವಿವರಗಳಲ್ಲಿವೆ. ಹೀಗೆ ವಿವರಿಸುವಾಗ ಚಾರ್ವಾಕ, ಬೌದ್ಧ, ಜೈನ, ಸಾಂಖ್ಯ, ಯೋಗ, ನ್ಯಾಯ, ಅದ್ವೈತ, ಶಕ್ತಿ ವಿಶಿಷ್ಟಾದ್ವೈತ, ದ್ವೈತಗಳೊಂದಿಗೆ ವಿಶೇಷವಾಗಿ ಯಾವ ಯಾವ ಅಂಶಗಳಲ್ಲಿ ವೈಲಕ್ಷಣಗಳಿವೆ ಎಂಬುದನ್ನು ತಿಳಿಸಲಾಗಿದೆ. ಕಡೆಯ ಅಧ್ಯಾಯದಲ್ಲಿ ಈ ಎಲ್ಲ ವಿಷಯಗಳ, ಚರ್ಚೆಗಳ ಉಪಸಂಹಾರವಿದೆ.

ಈ ಕೃತಿಯ ಅನುಬಂಧದಲ್ಲಿ ಆಗಮಗಳು ಹಾಗೂ ವಿವಿಧ ಆಗಮಗಳು ಹೇಗೆ ಪರಸ್ಪರ ಸಂಬಂಧವನ್ನು ಹೊಂದಿವೆ ಎಂಬುದನ್ನು ತಿಳಿಸಲಾಗಿದೆ. ಅಂತೆಯೇ ದ್ರಾವಿಡ ಪ್ರಬಂಧಗಳಲ್ಲಿ ಹೇಗೆ ವಿಶಿಷ್ಟಾದ್ವೈತ ಅಡಗಿದೆ ಎಂಬುದನ್ನು ಲೇಖಕರು ವಿವರಿಸಿದ್ದಾರೆ.

3ನೇ ಅನುಬಂಧದಲ್ಲಿ ತೆಂಗಲೈ ಹಾಗೂ ವಡಗಲೈ ಸಂಪ್ರದಾಯಗಳಲ್ಲಿನ ಹದಿನೆಂಟು (ಅಷ್ಟಾದಶ) ಭೇದಗಳನ್ನು ನೀಡಲಾಗಿದೆ.

ಕಡೆಯಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಅರಿಯಲು ಅಧ್ಯಯನ ಮಾಡಬೇಕಾದ ಪ್ರಮುಖ ವಿದ್ವನ್ಮಣಿಗಳ ಪ್ರಮುಖ ಸಿದ್ಧಾಂತ ಗ್ರಂಥಗಳ ಪಟ್ಟಿಯನ್ನು ನೀಡಲಾಗಿದೆ.

ರಾಮಾನುಜರ ದರ್ಶನವನ್ನು ಸಾಮಾನ್ಯಜನಕ್ಕೂ ಪರಿಚಯಿಸುವ ನಿಟ್ಟಿನಲ್ಲಿ ಮತ್ತೊಂದು ಹೆಸರಿಸಬಹುದಾದ ಕನ್ನಡದ ಕೃತಿ ಎಂದರೆ 'ವಿಶಿಷ್ಟಾದ್ವೈತ ದರ್ಪಣ'. ಇದು ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ. ಮೊದಲನೆಯದು 1980ರಲ್ಲೂ, ಎರಡನೆಯದು 1990ರಲ್ಲೂ ಪ್ರಕಟವಾಗಿವೆ. ಈ ಸಂಪುಟಗಳ ಲೇಖಕರು ಶೇಟ್ಟಲೂರ್ ಶ್ರೀನಿವಾಸರಂಗಾಚಾರ್ಯ ಎನ್ನುವ ಪ್ರಕಾಂಡ ಪಂಡಿತರು. ವಿಶಿಷ್ಟಾದ್ವೈತ ಧರ್ಮದ ರೂಪರೇಷೆಗಳನ್ನು ತುಂಬಾ ವಿವರವಾಗಿ ಚಿತ್ರಿಸಿರುವ ಪುಸ್ತಕವಿದು. ಇದು ಒಂದು ವಿನೂತನ ಕ್ರಮವನ್ನು ಅನುಸರಿಸಿ, ರಾಮಾನುಜ ದರ್ಶನದ ಉದ್ಧಗಲಗಳನ್ನು ಪರಿಚಯ ಮಾಡಿಸಿಕೊಡುತ್ತದೆ. ಶ್ರೀಭಾಷ್ಯ ಮತ್ತು ಶ್ರುತಿ ಪ್ರಕಾಶಿಕೆಗಳಲ್ಲಿ ಪ್ರತಿಪಾದಿಸಿರುವ ಪ್ರಮೇಯಗಳನ್ನು

ಅದೇ ಕ್ರಮದಲ್ಲಿ ಸ್ವತಂತ್ರ ವಾಕ್ಯಗಳಿಂದ ಪ್ರತಿಪಾದಿಸಿರುವುದು ಈ ಪುಸ್ತಕದ ವೈಶಿಷ್ಟ್ಯ. ಸೂತ್ರ ಭಾಷ್ಯ ಪ್ರಮಿತವಾದ ಮೂವತ್ತೆರಡು ವಿದ್ಯೆಗಳನ್ನು ಅನುಕ್ರಮವಾಗಿ ಇದರಲ್ಲಿ ವಿವರಿಸಲಾಗಿದೆ. ಇದರಿಂದ ಈ ಸಿದ್ಧಾಂತದ ತತ್ತ್ವಗಳು ಓದುಗರ ಮನಸ್ಸಿಗೆ ಸ್ಫುಟವಾಗಿ ನಾಟುತ್ತವೆ. ಈ ಗ್ರಂಥಾದಿಯಲ್ಲಿ ವೇದದ ಹಿರಿಮೆಯನ್ನು ವಿವರಿಸಿ, ನಂತರ ಚಾರ್ವಾಕ, ಬೌದ್ಧ, ಜೈನ ಇತ್ಯಾದಿ ಇತರೇ ಮತಗಳ ಸ್ವರೂಪವನ್ನು ಪರಿಚಯ ಮಾಡಿಕೊಟ್ಟಿರುವುದು ಈ ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಿದೆ.

ಇದರಿಂದ ರಾಮಾನುಜ ದರ್ಶನದ ಹೆಚ್ಚುಗಾರಿಕೆ ಏನೆಂಬುದೂ ಓದುಗರಿಗೆ ಸ್ಪಷ್ಟವಾಗುತ್ತದೆ.

ಎರಡನೇ ಸಂಪುಟದಲ್ಲಿ ಶರಣಾಗತಿ ತತ್ತ್ವವನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ಜೀವರು ಈಶ್ವರನಿಗಿಂತಲೂ ಭಿನ್ನರಾಗಿ, ಅವರು ಹೊಂದಬೇಕಾದ ಮೋಕ್ಷ ಸ್ವರೂಪವನ್ನು ಚರ್ಚಿಸಿ ಹೇಳಿದೆ. ಶ್ರಿಯಃ ಪತಿಯಾದ ನಾರಾಯಣನೇ ಪರತತ್ತ್ವವೆಂದೂ, ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳ ಸ್ವರೂಪ, ಸ್ವಭಾವಗಳನ್ನು ಹೇಳಿ, ಶಬ್ದ, ಸ್ಪರ್ಶ, ರೂಪಗಳನ್ನು ನಿರೂಪಿಸಲಾಗಿದೆ. ಈ ತತ್ತ್ವಗಳನ್ನು ಪ್ರತಿಪಾದಿಸುವ ಆಳ್ವಾರುಗಳ ಪಾಶುರಗಳನ್ನು ಪುಸ್ತಕದ ಕೊನೆಯಲ್ಲಿ ಕೊಡಲಾಗಿದೆ.

ಪ್ರೊ|| ಎಂ. ಯಾಮುನಾಚಾರ್ಯರ 'ಆಚಾರ್ಯ ರಾಮಾನುಜರು' ಕೃತಿಯಲ್ಲಿನ ಎರಡನೇ ಭಾಗದಲ್ಲಿನ ವಿಶಿಷ್ಟಾದ್ವೈತದ ಸ್ವರೂಪ, ಗುಣಲಕ್ಷಣಗಳು, ಸಿದ್ಧಾಂತಗಳ ಪ್ರಕ್ರಿಯೆಯನ್ನು ರಾಮಾನುಜರ ಉಲ್ಲೇಖನಗಳೊಂದಿಗೆ ವಿವರಿಸಿರುವುದು ತುಂಬಾ ಉತ್ಕೃಷ್ಟವಾದ ಉದಾಹರಣೆಯಾಗಿದೆ. ರಾಮಾನುಜರ ದೃಷ್ಟಿಕೋನವನ್ನು ಸುಲಭವಾಗಿ ಎಲ್ಲರೂ ಅರ್ಥಮಾಡಿಕೊಳ್ಳಲು ಈ ವಿವರ ತುಂಬಾ ಅನುಕೂಲವಾಗಿದೆ.

ಹೆಚ್. ಜಿ. ರಾಮಯ್ಯಂಗಾರ್‌ರವರು 'ರಾಮಾನುಜರ ಸೂತ್ರಭಾಷ್ಯ' ಎನ್ನುವ ಕೃತಿಯನ್ನು 1991ರಲ್ಲಿ ಪ್ರಕಟಿಸಿದ್ದಾರೆ. ಪ್ರಮಾಣ ಸಾಹಿತ್ಯದೊಂದಿಗೆ ಇದರಲ್ಲಿ ವಿಶಿಷ್ಟಾದ್ವೈತದ ಪೂರ್ಣ ಪರಿಚಯವಿದೆ. ಮೂಲ ಬ್ರಹ್ಮಸೂತ್ರವನ್ನು ನೀಡಿ, ನಾಲ್ಕು ಅಧ್ಯಾಯಗಳಲ್ಲಿ ಸೂತ್ರಾರ್ಥ ಸಾರವನ್ನು ನೀಡಲಾಗಿದೆ. ನಂತರ ಪುರುಷಾರ್ಥಗಳು, ಮೋಕ್ಷ ಸಾಧನಗಳು, ರಾಮಾನುಜರ ವಿಶಿಷ್ಟಾ

ದ್ವೈತ ವೇದಾಂತ, ರಾಮಾನುಜರ ಸಿದ್ಧಾಂತ ಸಾರ ಹಾಗೂ ಇದರ ಹಿಂದಿನ ರಹಸ್ಯತ್ರಯಸಾರ ಸಂಗ್ರಹಗಳ ಬಗೆಗೆ ವಿವರ ನೀಡಿದ್ದಾರೆ.

ಪತ್ರಿಕೆಗಳು :

ರಾಮಾನುಜರ ದರ್ಶನವನ್ನು ಪ್ರಸಾರಮಾಡುವ ಪತ್ರಿಕೆಗಳು ಸಾಕಷ್ಟು ಕನ್ನಡದಲ್ಲಿ ಬಂದಿವೆ. ಇವುಗಳನ್ನು ಪ್ರಕಟಿಸಿರುವವರು ಸಾಮಾನ್ಯವಾಗಿ ಕೈಸುಟ್ಟು ಕೊಂಡ ಉದಾಹರಣೆಗಳೇ ಹೆಚ್ಚು.

ಶ್ರೀ ರಾಮಾನುಜ ಸೇವಾ ಟ್ರಸ್ಟ್, ಬೆಂಗಳೂರು–ಇವರು 'ಶ್ರೀ ರಾಮಾನುಜ' ಎಂಬ ಅನಿಯತಕಾಲಿಕ ಪತ್ರಿಕೆಯನ್ನು ಪ್ರಕಟಿಸುತ್ತಿದ್ದಾರೆ. 1981ರಲ್ಲಿ ಪ್ರಾರಂಭವಾದ ಈ ಪತ್ರಿಕೆಯು ಮೊದಲಿನಲ್ಲಿ ತ್ರೈಮಾಸಿಕವೇ ಆಗಿತ್ತು. ಆದರೆ ಕಾಲಾನುಕ್ರಮದಲ್ಲಿ ಅನಿಯತಕಾಲಿಕವಾಯಿತು. ರಾಮಾನುಜ ದರ್ಶನಕ್ಕೆ ಸಂಬಂಧಪಟ್ಟ ಪ್ರಬಂಧಗಳು ಈ ಪತ್ರಿಕೆಯಲ್ಲಿ ಬೆಳಕು ಕಂಡಿವೆ. ಎಂ. ಎ. ಶೆಲ್ವ ನಾರಾಯಣ್‌ರವರು ಇದರ ಸಂಪಾದಕರು.

ತಿರುಮಲೆ ತಿರುಪತಿ ದೇವಸ್ಥಾನ (T.T D.) ದವರು 'ಸಪ್ತಗಿರಿ' ಎನ್ನುವ ಧಾರ್ಮಿಕ ಮಾಸಿಕ ಪತ್ರಿಕೆಯನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಇದು ಕನ್ನಡ, ತೆಲುಗು, ತಮಿಳು, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟವಾಗುತ್ತಿದೆ. ಇದರ ಕನ್ನಡ ಆವೃತ್ತಿಯು ಸುಮಾರು 27 ವರ್ಷಗಳಿಂದ ಆಸ್ತಿಕರಿಗೆ ಆಸರೆಯಾಗಿ ಜನಪ್ರಿಯವಾಗಿದೆ. ಇದರಲ್ಲಿ ರಾಮಾನುಜ ದರ್ಶನವನ್ನು ಕುರಿತಾದ ಅನೇಕ ಲೇಖನಗಳು ಪ್ರಕಟವಾಗುತ್ತ ಬಂದಿವೆ. ಹಿರಿಯ ಕಿರಿಯ ಅನೇಕ ಲೇಖಕರಿಗೆ ಈ ಪತ್ರಿಕೆ ಆಶ್ರಯವಾಗಿರುವುದು ಹೆಮ್ಮೆಯ ವಿಷಯ. ಸಾಮಾನ್ಯ ಜನರನ್ನೂ ತಲುಪುವಂತಹ ಪತ್ರಿಕೆಯಿದು.

ಬೆಂಗಳೂರಿನ ಉಭಯ ವೇದಾಂತ ಪ್ರವರ್ತನ ಸಭೆಯವರು ಸುಮಾರು ವರ್ಷಗಳಿಂದಲೂ 'ಉಭಯವೇದ' ಎನ್ನುವ ತ್ರೈಮಾಸಿಕವನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಇದರಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಕುರಿತಾದ ಅನೇಕ ಪ್ರಬಂಧಗಳು ಪ್ರಕಟವಾಗಿವೆ. ಇತ್ತೀಚಿಗೆ ಇದು ಹೊಸ ರೂಪವನ್ನು ಪಡೆದಿದೆ.

ಹೆಚ್. ಆರ್. ಸಂಪತ್ಕುಮಾರನ್ ಎನ್ನುವವರು 1976ರಲ್ಲಿ 'ಶ್ರೀ ರಾಮಾನುಜ ದರ್ಶನ' ಎನ್ನುವ ತ್ರೈಮಾಸಿಕವನ್ನು ಪ್ರಾರಂಭಿಸಿ, ಸುಮಾರು

ಐದು ವರ್ಷಗಳ ಕಾಲ ನಡೆಸಿದರು. ದಿವ್ಯಪ್ರಬಂಧಗಳೊಂದಿಗೆ ರಾಮಾನುಜರ ಜೀವನ ಚರಿತ್ರೆ, ಅವರು ನಿರೂಪಿಸಿದ ದರ್ಶನಗಳ ಬಗ್ಗೆಯೂ ಲೇಖನಗಳನ್ನು ಪ್ರಕಟಿಸಿದರು. ಮುಂದೆ ಇವುಗಳಲ್ಲಿ ಕೆಲವನ್ನು ಪುಸ್ತಕರೂಪದಲ್ಲಿಯೂ ಹೊರ ತಂದರು. ನಂತರದಲ್ಲಿ ಆರ್ಥಿಕ ಸಂಕಷ್ಟಗಳಲ್ಲಿ ಸಿಲುಕಿ ಮುಂದುವರಿಯಲಿಲ್ಲ.

ಬೆಂಗಳೂರಿನ ಆದರ್ಶ ಭವನದವರು ಶ್ರೀ ರಾಮಾನುಜ ಸೇವಾ ನ್ಯಾಸದ ಆಶ್ರಯದಲ್ಲಿ 'ಯೋಗಕ್ಷೇಮ' ಎನ್ನುವ ಧಾರ್ಮಿಕ ತ್ರೈಮಾಸಿಕ ಪತ್ರಿಕೆಯನ್ನು ಸುಮಾರು ಮೂರು ವರ್ಷಗಳಿಂದಲೂ ನಡೆಸಿಕೊಂಡು ಬರುತ್ತಿದ್ದಾರೆ. ಈಗ ನಾಲ್ಕನೇ ವರ್ಷಕ್ಕೆ ಹೆಜ್ಜೆ ಇರಿಸಿದೆ. ರಾಮಾನುಜರು ನೀಡಿದ ಸಂದೇಶ, ಅವರ ದಿವ್ಯಜೀವನದ ಆದರ್ಶಗಳು, ಅವರ ದರ್ಶನದ ತತ್ವವಿಚಾರಗಳನ್ನು ತಿಳಿಸುವ ತಿಳಿಸುವ 'ಯೋಗಕ್ಷೇಮ'ವು ಒಂದು ಆದರ್ಶ ಪತ್ರಿಕೆ. ಉತ್ತಮ (ಆಫ್‌ಸೆಟ್) ಮುದ್ರಣ, ಪಂಡಿತರ ಲೇಖನಗಳು, ಉತ್ತಮ ಮುಖಪುಟ-ಇವುಗಳಿಂದ ಕೂಡಿ, ಪತ್ರಿಕೆಯು ತುಂಬಾ ಜನಪ್ರಿಯವಾಗಿ, ಆಧ್ಯಾತ್ಮಿಕರಂಗದಲ್ಲಿ ಹೆಸರು ಮಾಡಿದೆ.

ಇತ್ತೀಚೆಗಷ್ಟೇ ವಿದುಷಿ ರಮಾ ಶ್ರೀನಿವಾಸನ್‌ರವರ ಸಂಪಾದಕತ್ವದಲ್ಲಿ 'ಕೈಂಕರ್ಯ' ಎನ್ನುವ ಕನ್ನಡ ಆಧ್ಯಾತ್ಮಿಕ ಮಾಸಪತ್ರಿಕೆ ಪ್ರಾರಂಭವಾಗಿ, ಈಗ ತಾನೆ ಮೊದಲ ಸಂಚಿಕೆ ಬಂದಿದೆ, ಆಶಾದಾಯಕವಾಗಿದೆ, ಚೆನ್ನಾಗಿ ಬಾಳಲಿ ಎಂದು ಹರಸುವ.

ಇವಲ್ಲದೆ ಕೆಲವೊಂದು ಪತ್ರಿಕೆಗಳು ಪ್ರಕಟವಾಗಿ, ನಿಂತುಹೋಗಿವೆ. ಮತ್ತೆ ಕೆಲವು ಯಾವಾಗಲೋ ಬೆಳಕಿಗೆ ಬಂದು, ಹಾಗೆಯೇ ಕಣ್ಮರೆಯಾಗಿ ಹೋಗುತ್ತದೆ. ಖೇದದ ವಿಚಾರವೆಂದರೆ ಇವು ಹೆಚ್ಚಿಗೆ ಬೆಳಕಿಗೇ ಬರುವುದಿಲ್ಲ, ಎಲ್ಲರನ್ನೂ ತಲುಪುವುದಿಲ್ಲ.

ಈ ರೀತಿಯಲ್ಲಿ ಶ್ರೀ ರಾಮಾನುಜರನ್ನು ಕುರಿತಾದ ಗ್ರಂಥಗಳು ಹಾಗೂ ಅವರನ್ನು ಕುರಿತಾದ ಸಾಹಿತ್ಯ ಕನ್ನಡದಲ್ಲಿ ವಿಪುಲವಾಗಿ ಬಂದಿದೆ. ಆದರೆ ಇವು ಸಂಘಟಿತ ರೂಪದಲ್ಲಿ ಸಹಕಾರದ ಆಶ್ರಯದಲ್ಲಿ ಪ್ರಚಾರ ಸಹಿತ ಬೆಳಕು ಕಂಡಿಲ್ಲ. ಆ ಪ್ರಯತ್ನಗಳು ನಡೆದೂ ಇಲ್ಲ. ಈ ಎಲ್ಲ ಕೃತಿ, ಪತ್ರಿಕೆಗಳನ್ನು ಕೊಂಡು ಓದುವ ಓದುಗರು ಎಷ್ಟಿದ್ದಾರೆಂಬುದು ಇನ್ನೂ ಸರಿಯಾಗಿ ತಿಳಿದುಬಂದಿಲ್ಲ.

# ಶ್ರೀಭಾಷ್ಯದ ವ್ಯಾಖ್ಯಾನಗಳು

ಯಾಮುನರ ಇಷ್ಟಾರ್ಥಗಳಲ್ಲಿ ವಿಶಿಷ್ಟಾದ್ವೈತ ರೀತ್ಯಾ ಬ್ರಹ್ಮಸೂತ್ರಗಳ ಭಾಷ್ಯವನ್ನು ರಚಿಸಬೇಕೆಂಬುದು ಬಹಳ ಮುಖ್ಯವಾದುದು. ಅವರ ಜೀವಿತ ಕಾಲದಲ್ಲಿ ಇದು ನೆರವೇರಲಿಲ್ಲ. ಆದರಿಂದ ತಮ್ಮ ಮುಂದಿನ ಪೀಳಿಗೆಯವರು ಈ ಇಷ್ಟಾರ್ಥವನ್ನು ನೆರವೇರಿಸಲಿ ಎಂಬ ಭಾವನೆ ಅವರಿಗೆ ಇತ್ತು. ಯಾಮುನರ ಚರಮವಿಗ್ರಹ ದರ್ಶನ ಮಾಡಿದ ಆಚಾರ್ಯ ರಾಮಾನುಜರು ಈ ವಿಷಯವನ್ನು ತಿಳಿದು, ಯಾಮುನರ ಮನೋಭೀಷ್ಟವನ್ನು ಪೂರ್ಣಗೊಳಿಸುವುದಾಗಿ ಪ್ರತಿಜ್ಞೆ ಮಾಡಿದ್ದರಿಂದ, ಯಾಮುನರ ಸಂಕುಚಿತ ಹಸ್ತಾಂಗುಳಿತ್ರಯವು ವಿಮೋಚನೆ ಗೊಂಡಿತು. ಇದರಿಂದ ಯಾಮುನರ ಶಿಷ್ಯರು ಆಶ್ಚರ್ಯಗೊಂಡು, ಸಂತೋಷ ಗೊಂಡು, ಯಾಮುನರಂತೆ ರಾಮಾನುಜರೂ ಕೂಡ ದರ್ಶನ ಸ್ಥಾಪಕಾಚಾರ್ಯ ರೆಂದು ನಿರ್ಧರಿಸಿದರು.

ತಾವು ಯಾಮುನರಿಗೆ ಕೊಟ್ಟ ಮಾತನ್ನು ನೆರವೇರಿಸಲು ಅದುವರೆವಿಗೆ ಉಳಿದಿದ್ದ ಬ್ರಹ್ಮಸೂತ್ರಗಳ ಬೋಧಾಯನ ವೃತ್ತಿಯನ್ನು ಕೂರೇಶರ ಮುಖಾಂತರ ಪಡೆದು ಅದರ ಆಧಾರದ ಮೇಲೆ 'ಶ್ರೀಭಾಷ್ಯ' ಎನ್ನುವ ಬ್ರಹ್ಮಸೂತ್ರಗಳ ವ್ಯಾಖ್ಯಾನವನ್ನು ಆಚಾರ್ಯ ರಾಮಾನುಜರು ರಚಿಸಿದರು. ಈ ಗ್ರಂಥವು ವಿಶಿಷ್ಟಾದ್ವೈತ ತತ್ವಕ್ಕೆ ಆಧಾರಭೂತವಾಗಿದ್ದು, ಇಂದಿನವರೆಗೂ ಜನಾದರ ಣೀಯವಾಗಿ ಉಳಿದಿದೆ.

ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ ಪ್ರಮಾಣಗಳನ್ನು ಅನುಸರಿಸಿ ಹಾಗೂ ಪೂರ್ವಾಚಾರ್ಯರಾದ ಬೋಧಾಯನ, ಟಂಕ, ದ್ರಮಿಡ, ಗುಹದೇವ, ಕಪರ್ದಿ, ಭಾರುಚಿ; ಭರ್ತೃಮಿಶ್ರ, ಭರ್ತೃಪ್ರಪಂಚ, ನಾಥಮುನಿ, ಯಾಮುನರ ಮುಖಾಂತರ ಪ್ರವರ್ತಿಸಲ್ಪಟ್ಟ ಸಿದ್ಧಾಂತವನ್ನು ಅನುಸರಿಸಿ ಶ್ರೀಮದ್ರಾಮಾ ನುಜರು (ಕ್ರಿ.ಶ. 1017–1137) ಬ್ರಹ್ಮಸೂತ್ರಗಳಿಗೆ ರಚಿಸಿದ 'ಶ್ರೀಭಾಷ್ಯ' ವ್ಯಾಖ್ಯಾನವು ಚಿರ ಯಶಸ್ಸನ್ನು ಪಡೆದು, ಜಗದ್ವಿಖ್ಯಾತವಾಗಿದೆ.

ಮುಂದಿನ ನೂರಾರು ಜ್ಞಾನಭಿಕ್ಷುಗಳಿಗೆ ಈ ಕೃತಿಯು ದಾರಿದೀಪವಾಗಿದೆ. ಇಂತಹ ಜ್ಞಾನಿಗಳು, ವಿದ್ವಾಂಸರು ಈ ಕೃತಿಯಲ್ಲಿ ತಾವು ಕಂಡುದುದನ್ನು, ತಾವು ಪಡೆದ ಬೆಳಕನ್ನು ಗ್ರಂಥರೂಪದಲ್ಲಿ ರಚಿಸಿ, ಪ್ರಕಟಿಸಿದ್ದಾರೆ. ಇಂತಹ

ವ್ಯಾಖ್ಯಾನಗಳ ಒಂದು ಪ್ರವಾಹವೇ ಹರಿದು ಬರುತ್ತಿರುವುದನ್ನು ಗಮನಿಸಿದರೆ, ಯಾರಿಗಾದರೂ ಆಶ್ಚರ್ಯವಾಗದಿರದು. ಇಂತಹ ವ್ಯಾಖ್ಯಾನಗಳು, ಪರಿಚಯ ಗ್ರಂಥಗಳು ಸಂಸ್ಕೃತ, ಭಾರತೀಯ ಭಾಷೆಗಳೇ ಅಲ್ಲದೆ ಐರೋಪ್ಯ ಭಾಷೆಗಳಲ್ಲಿಯೂ ಕೂಡ ಬೆಳಕು ಕಂಡಿರುವುದು ಈ ಕೃತಿಯ ಜನಪ್ರಿಯತೆ ಹಾಗೂ ಹೆಗ್ಗಳಿಕೆಯನ್ನು ಪ್ರದರ್ಶಿಸುತ್ತದೆ. ಆಚಾರ್ಯ ರಾಮಾನುಜರ ಪಾಂಡಿತ್ಯಕ್ಕೆ ಈ ಗ್ರಂಥವು ಉತ್ಕೃಷ್ಟ ಉದಾಹರಣೆಯಾಗಿದೆ.

1. ಆಚಾರ್ಯ ರಾಮಾನುಜರ ಸೋದರಳಿಯಂದಿರಾದ (ರಾಮಾನುಜರ ಅಕ್ಕ ಮಂಗಲವಲ್ಲಿಯ ಮಗ) (2ನೇ) ರಾಮಮಿಶ್ರರು ಆಚಾರ್ಯರಲ್ಲಿಯೇ ಶ್ರೀಭಾಷ್ಯಾದಿಗಳಲ್ಲಿ ಕಾಲಕ್ಷೇಪ ಮಾಡಿ, ಅವರ ಅಪೇಕ್ಷೆಯಂತೆ 'ಶ್ರೀಭಾಷ್ಯ ವಿವರಣ' ಎನ್ನುವ ಗ್ರಂಥವನ್ನು ಬರೆದು ಗುರುಗಳಿಂದಲೇ ಹೊಗಳಿಸಿಕೊಂಡಿದ್ದಾರೆ.

2. 'ವಕುಳಾಭರಣ ಭಕ್ತಿಕಿಂಕರರು' ಎಂದು ಕರೆಯಿಸಿಕೊಂಡಿರುವ ವರದನಾರಾಯಣ ಭಟ್ಟಾರಕ ಎನ್ನುವವರು 'ವೇದಾಂತ ನ್ಯಾಯ ಸುದರ್ಶನಂ' ಎನ್ನುವ ಶ್ರೀಭಾಷ್ಯ ವ್ಯಾಖ್ಯಾನವನ್ನು ಕ್ರಿ.ಶ. 1220ರಲ್ಲಿ ರಚಿಸಿದರು. ನ್ಯಾಯ ಪದ್ಧತಿಯನ್ನು ಅನುಸರಿಸಿ, ವಿಶಿಷ್ಟಾದ್ವೈತ ತತ್ತ್ವವನ್ನು ಇದರಲ್ಲಿ ನಿರೂಪಿಸಲಾಗಿದೆ. ಈ ವ್ಯಾಖ್ಯಾನವನ್ನು ಶ್ರೀ ವೇದಾಂತ ದೇಶಿಕರು ಪ್ರಮಾಣವಾಗಿ ಸ್ವೀಕರಿಸಿರುವುದರಿಂದ ಇದರ ಪ್ರಾಮುಖ್ಯತೆಯು ಸ್ಪಷ್ಟವಾಗುತ್ತದೆ.

3. ಕ್ರಿ.ಶ. 12ನೇ ಶತಮಾನದ 'ಮೇಘನಾದಾದಿ ಸೂರಿ' ಎನ್ನುವ ತಾರ್ಕಿಕರು 'ನಯದ್ಯುಮಣಿ' ಎನ್ನುವ ಹೆಸರಿನ ಶ್ರೀಭಾಷ್ಯ ವ್ಯಾಖ್ಯಾನವನ್ನು ರಚಿಸಿದರು. ಶ್ರೀಭಾಷ್ಯ ದಿವ್ಯಪ್ರಬಂಧ, ರಹಸ್ಯತ್ರಯಗಳ ಬಗ್ಗೆ ಇವರು ಉತ್ತಮವಾಗಿ ವಿವರಣೆ ನೀಡುತ್ತಿದ್ದರು. 'ನಯಪ್ರಕಾಶಿಕಾಚಾರ್ಯ' ಎಂಬ ಬಿರುದೂ ಇವರಿಗಿದೆ. 'ನಯದ್ಯುಮಣಿ'ಯು 12 ಭಾಗಗಳನ್ನು ಹೊಂದಿದೆ. ಈ ಕೃತಿಯು ರಾಮಾನುಜ ತತ್ತ್ವವನ್ನು ಸಂಗ್ರಹವಾಗಿ ವಿವರಿಸುತ್ತದೆ. 'ನಯ ಪ್ರಕಾಶಿಕಾ' ಎನ್ನುವ ಮತ್ತೊಂದು ವ್ಯಾಖ್ಯಾನ, 'ಶ್ರೀಭಾಷ್ಯ ಭಾವಪ್ರಬೋಧನಂ' ಎನ್ನುವ ಮತ್ತೊಂದು ವ್ಯಾಖ್ಯಾನ–ಇವರ ಪಾಂಡಿತ್ಯದ ಒರೆಗಲ್ಲುಗಳಾಗಿವೆ. ಮೊದಲೆರಡು ಮುದ್ರಣಗೊಂಡಿವೆ, ಮೂರನೆಯದು ಹಸ್ತಪ್ರತಿ ರೂಪದಲ್ಲಿ ಅಡಯಾರು ಗ್ರಂಥಾಲಯದಲ್ಲಿದೆ.

4. 'ನಡಾದೂರವಮ್ಮಾಳ್' (1165–1275) ಎಂದು ಕರೆಯಲ್ಪಡುವ ವಾತ್ಸವರದಾಚಾರ್ಯರು ಶ್ರೀಭಾಷ್ಯದ ಮೇಲೆ ಅದ್ಭುತ ವಿವರಣೆಯನ್ನು ನೀಡುತ್ತಿದ್ದವರು. 'ರಾಮಾನುಜ ಸಿದ್ಧಾಂತದ ಅತಿ ಶ್ರೇಷ್ಠ ಮೊದಲ ಪ್ರತಿಪಾದಕರು' ಎಂಬ ಹೆಗ್ಗಳಿಕೆಗೆ ಪಾತ್ರರಾದ ಇವರ ಪ್ರವಚನಗಳಿಂದ ಬಾಲಕರಾಗಿದ್ದ ವೇದಾಂತ ದೇಶಿಕರು ಹಾಗೂ ಶಿಷ್ಯ ಸುದರ್ಶನ ಸೂರಿಗಳು ತುಂಬಾ ಪ್ರಭಾವಿತರಾಗಿದ್ದಾರೆ. ಇವರ 'ತತ್ವಸಾರ' ಹಾಗೂ 'ತತ್ವನಿರ್ಣಯ'ಗಳು ಶ್ರೀಭಾಷ್ಯದ ಮೇಲಿನ ಅಪರೂಪದ ವ್ಯಾಖ್ಯಾನಗಳು.

5. ಕೂರೇಶರ ಎರಡನೇ ಮಗ ಶ್ರೀರಾಮ ಪಿಳ್ಳೈರವರ ಮೊಮ್ಮಗ ಹಾಗೂ ದಿಗ್ವಿಜಯ ಭಟ್ಟರ ಮಗನಾದ ಸುದರ್ಶನಾಚಾರ್ಯ (1200–1275)ರು ಪ್ರಸಿದ್ಧ ವಿದ್ವಾಂಸರು. ಸುದರ್ಶನ ಭಟ್ಟ, ಸುದರ್ಶನ ಸೂರಿ, ವೇದವ್ಯಾಸ ಭಟ್ಟಾರ್ಯ, ವ್ಯಾಸಾರ್ಯ, ಶ್ರುತಿ ಪ್ರಕಾಶಿಕಾಚಾರ್ಯ ಎಂಬ ಹೆಸರುಗಳನ್ನು ಇವರು ಹೊಂದಿದ್ದರು. ಶ್ರೀಭಾಷ್ಯಕ್ಕೆ ಇವರು ಬರೆದ 'ಶ್ರುತ ಪ್ರಕಾಶಿಕೆ' ಎನ್ನುವ ವ್ಯಾಖ್ಯಾನವು ತುಂಬಾ ಅಪರೂಪವಾದ ಹಾಗೂ ವಿಶಿಷ್ಟಾದ್ವೈತದ ಆಧಾರ ಗ್ರಂಥ. ಈ ಕೃತಿಯ ಸಂಕ್ಷಿಪ್ತರೂಪವಾದ 'ಶ್ರುತಪ್ರದೀಪಿಕಾ' ಎಂಬ ಗ್ರಂಥವನ್ನೂ ಇವರು ರಚಿಸಿದ್ದಾರೆ. ಶ್ರುತಿ ಪ್ರಾಕಾಶಿಕೆ ಹಾಗೂ ಸುದರ್ಶನ ಸೂರಿಗಳ ಇಬ್ಬರು ಮಕ್ಕಳನ್ನು ವೇದಾಂತ ದೇಶಿಕರು ಮಹಮ್ಮದೀಯರ ದಾಳಿಗಳಿಂದ ರಕ್ಷಿಸಿದರು.

6. ವಿಶಿಷ್ಟಾದ್ವೈತ ಸಿದ್ಧಾಂತದ ರಕ್ಷಣೆ, ವ್ಯವಸ್ಥೆ, ಪ್ರವಚನ, ಪ್ರಚಾರಗಳಿಗಾಗಿ ತಮ್ಮ ಜೀವನವನ್ನೆ ಮುಡಿಪಾಗಿಟ್ಟ ವೇದಾಂತ ದೇಶಿಕರು (ಕ್ರಿ.ಶ. 1268–1369) ಸರ್ವತಂತ್ರ ಸ್ವತಂತ್ರ, ಕವಿ ತಾರ್ಕಿಕಸಿಂಹ, ವೇದಾಂತ ಚಾರ್ಯ ಎಂಬ ಬಿರುದುಗಳನ್ನು ಹೊಂದಿದ್ದವರು. ಇವರು 'ಅಧಿಕರಣ ದರ್ಪಣ' ಎನ್ನುವ ಹೆಸರಿನಲ್ಲಿ ಶ್ರೀಭಾಷ್ಯದ ವ್ಯಾಖ್ಯಾನವನ್ನು ಸಂಗ್ರಹವಾಗಿ ರಚಿಸಿದರು. ಇದು ಈಗ ದೊರೆಯುತ್ತಿಲ್ಲ. ಶ್ರೀಭಾಷ್ಯದಲ್ಲಿರುವ ವಿಷಯಗಳನ್ನು ಅಧಿಕರಣ ಕ್ರಮದಲ್ಲಿ ವಿವರಿಸುತ್ತಾ 'ಅಧಿಕರಣ ಸಾರಾವಳಿ' ಎನ್ನುವ ಮತ್ತೊಂದು ವ್ಯಾಖ್ಯಾನವನ್ನು ರಚಿಸಿದರು. ಇದಕ್ಕೆ 'ಅಧಿಕರಣ ಚಿಂತಾಮಣಿ' ಎನ್ನುವ ವ್ಯಾಖ್ಯಾನವೊಂದಿದೆ. ನಂತರದಲ್ಲಿ ಶ್ರೀಭಾಷ್ಯದಲ್ಲಿರುವ ಎಲ್ಲ ವಿಷಯಗಳ ಬಗ್ಗೆಯೂ ಚರ್ಚಿಸುತ್ತಾ "ತತ್ವಟೀಕ" ಎನ್ನುವ ಹೆಸರಿನ ಮತ್ತೊಂದು

ವ್ಯಾಖ್ಯಾನವನ್ನು ಇವರು ರಚಿಸಿದರು. ಇದು ಮುದ್ರಣಗೊಂಡಿದೆ.

೭. ವೇದಾಂತ ದೇಶಿಕರಿಗಿಂತಲೂ ಹಿಂದಿನವರಾದ ಸೇನೇಶ್ವರಾಚಾರ್ಯ ಎನ್ನುವವರು ಬ್ರಹ್ಮಸೂತ್ರಗಳ ಮೇಲಿನ ಭಾಷ್ಯದ ಬಗ್ಗೆ ರಚಿಸಿರುವ "ಶಾರೀರಿಕ ನ್ಯಾಯಕಲಾಪ ಸಂಗ್ರಹ" ಎಂಬ ಕೃತಿಯು ಸುದರ್ಶನ ಸೂರಿಗಳ ಹಾಗೂ ವರದ ನಾರಾಯಣ ಭಟ್ಟಾರಕರ ಕೃತಿಗಳಿಗಿಂತಲೂ ಉತ್ತಮವಾಗಿದೆ ಎಂಬುದು ವಿದ್ವನ್ಮಣಿಗಳ ಅಭಿಪ್ರಾಯ.

೮. ಕ್ರಿ. ಶ. ೧೫-೧೬ ನೇ ಶತಮಾನದ ನಡುವೆ ಇದ್ದ ಕೌಶಿಕ ವರದಾ-ಚಾರ್ಯರ ಮಕ್ಕಳಾದ 'ಚಂಪಕೇಶಾಚಾರ್ಯ' ಎನ್ನುವವರು 'ಲಘುತತ್ವ ಪ್ರಕಾಶಿಕಾ' ಎನ್ನುವ ಹೆಸರಿನ ಶ್ರುತಿಪ್ರಕಾಶಿಕೆಯ ವ್ಯಾಖ್ಯಾನವನ್ನು ರಚಿಸಿದ್ದಾರೆ ೧೯೭೭ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದವರು ಇದನ್ನು ಪ್ರಕಟಿಸಿದ್ದಾರೆ.

೯. ಕ್ರಿ.ಶ. ೧೫-೧೬ ನೇ ಶತಮಾನದ ಮಧ್ಯಕಾಲದಲ್ಲಿದ್ದ 'ವಾಧೂಲ ಶ್ರೀನಿವಾಸಾಚಾರ್ಯ' ಎನ್ನುವವರು 'ತುಳಿಕ' ಎನ್ನುವ ಹೆಸರಿನಲ್ಲಿ "ಶ್ರುತಪ್ರಕಾಶಿಕೆ"ಯ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದೂ ಕೂಡ ಅಡಯಾರು ಗ್ರಂಥಾ-ಲಯದಲ್ಲಿದೆ.

೧೦. ಶುದ್ಧ ಸತ್ವಾಚಾರ್ಯರ ಮಕ್ಕಳಾದ ಲಕ್ಷ್ಮಣಾಚಾರ್ಯರು "ಗುರು ಭಾವ ಪ್ರಕಾಶಿಕ" ಎನ್ನುವ ಶ್ರೀಭಾಷ್ಯ ವ್ಯಾಖ್ಯಾನವನ್ನು ರಚಿಸಿ, ಪ್ರಸಿದ್ಧಿ ಯನ್ನು ಪಡೆದಿದ್ದಾರೆ.

೧೧. ಕ್ರಿ. ಶ. ೧೫೦೮-೧೫೩೧ರಲ್ಲಿದ್ದ ದೊಡ್ಡಯ್ಯಾಚಾರ್ಯ ಎನ್ನುವ ಮಹಾಚಾರ್ಯರು "ಶ್ರೀ ಭಾಷ್ಯೋಪನ್ಯಾಸ" ಎನ್ನುವ ಗ್ರಂಥವನ್ನು ರಚಿಸಿದರು ಅಂತೆಯೇ ಭಾಷ್ಯದ ಮುಖ್ಯ ವಿಷಯಗಳನ್ನು ತಿಳಿಸುತ್ತಾ "ಅದಿಕರಣಾರ್ಥ ಸಂಗ್ರಹ:" ಎನ್ನುವ ಗ್ರಂಥವನ್ನೂ ಕೂಡ ರಚಿಸಿದರು.

೧೨. ಕ್ರಿ. ಶ. ೧೬ನೇ ಶತಮಾನದ ತಾತದೇಶಿಕರ ಶಿಷ್ಯರಾದ ರಂಗರಾಮಾ ನುಜರು "ಭಾವಪ್ರಕಾಶಿಕ' ಎನ್ನುವ ಹೆಸರಿನಲ್ಲಿ "ಶ್ರುತಪ್ರಕಾಶಿಕೆ"ಯ ವ್ಯಾಖ್ಯಾ ನವನ್ನು 'ಮೂಲಭಾವ ಪ್ರಕಾಶಿಕೆ' ಶಾರೀರಿಕ "ಶಾಸ್ತ್ರಾರ್ಥ ದೀಪಿಕ" ಎನ್ನುವ ಗ್ರಂಥಗಳನ್ನೂ ಇವರು ರಚಿಸಿದರು. ಇವುಗಳಲ್ಲಿ ಮೊದಲನೆಯದು ಮುದ್ರಣ ಗೊಂಡಿದೆ. ಎರಡನೆಯದು ಹಸ್ತಪ್ರತಿ ರೂಪದಲ್ಲಿ ಅಡಯಾರು ಗ್ರಂಥಾಲಯ ದಲ್ಲಿದೆ.

೧೩. ಕ್ರಿ. ಶ. ೧೮–೧೯ ಶತಮಾನಗಳ ಮಧ್ಯಕಾಲದಲ್ಲಿ ಕೋಳಿಯಾಳಂ ರಂಗರಾಮಾನುಜ ಮುನಿಗಳು ಆನಂದಮಯಾಧಿಕರಣವನ್ನು ವಿವರಿಸುತ್ತಾ "ಪರಪಕ್ಷ ನಿರಾಕೃತಿ" ಎನ್ನುವ ಗ್ರಂಥವನ್ನು ರಚಿಸಿದರು. ಇದು ಮುದ್ರಣಗೊಂಡಿದೆ.

೧೪. ಕ್ರಿ. ಶ. ೧೮ನೇ ಶತಮಾನದಲ್ಲಿ ಸುರಪುರಂ ಶ್ರೀನಿವಾಸ ತಾತಾಚಾರ್ಯರ ಪುತ್ರರಾದ ವೆಂಕಟಾಚಾರ್ಯ ಎನ್ನುವವರು ಬ್ರಹ್ಮಸೂತ್ರ ಭಾಷ್ಯ ಪೂರ್ವಪಕ್ಷ ಸಂಗ್ರಹಕಾರಿಕ" ಎನ್ನುವ ಗ್ರಂಥವನ್ನು ಬರೆದರು.

೧೫. ಇದೇ ಕಾಲಕ್ಕೆ ಸೇರಿದ ಸುರಪುರಂ ಶ್ರೀನಿವಾಸಾಚಾರ್ಯರು ಶ್ರೀ ಭಾಷ್ಯಸ್ಯ ಸಮೀಕ್ಷಾತ್ಮಕಮಧ್ಯಯನಮ್ ಎನ್ನುವ ರೀತಿಯಲ್ಲಿನ 'ತತ್ತ್ವ ಮಾರ್ತಾಂಡ' ಎನ್ನುವ ಗ್ರಂಥವನ್ನು ರಚಿಸಿದರು.

"ಅಥಾತೋ ಬ್ರಹ್ಮ ಜಿಜ್ಞಾಸ" ಎನ್ನುವ ಮೊದಲ ಬ್ರಹ್ಮಸೂತ್ರದಲ್ಲಿನ "ಜಿ–ಜ್ಞಾಸಾ" ಎನ್ನುವ ಪದವನ್ನು ಶ್ರೀ ಭಾಷ್ಯಾನುಸಾರ ವಿವರಿಸುತ್ತಾ "ಜಿಜ್ಞಾಸಾ ದರ್ಪಣ" ಹೆಸರಿನ ಗ್ರಂಥವನ್ನು ರಚಿಸಿದ್ದಾರೆ.

"ನಾರಾಯಣ" ಪದದಲ್ಲಿರುವ 'ಣ' ತ್ವವನ್ನು ವಿವರಿಸುತ್ತಾ 'ಣ'ತ್ವದರ್ಪಣ ಎನ್ನುವ ಹೆಸರಿನ ಗ್ರಂಥವೊಂದನ್ನು ಇವರು ರಚಿಸಿದ್ದಾರೆ.

'ಬ್ರಾಹ್ಮಣಃ ಜಿಜ್ಞಾಸ-ಬ್ರಹ್ಮಜಿಜ್ಞಾಸಾ' ಎನ್ನುವ ಕಡೆಯಲ್ಲಿ ಕರ್ಮಣಿ ಷಷ್ಟಿಯನ್ನು ಪ್ರತಿಪಾದಿಸುತ್ತಾ ಷಷ್ಟಿದರ್ಪಣ ಎನ್ನುವ ಹೆಸರಿನ ಗ್ರಂಥವನ್ನು ರಚಿಸಿದ್ದಾರೆ. ಇವೆಲ್ಲವೂ ಮುದ್ರಣಗೊಂಡಿವೆ.

೧೬. ಕ್ರಿ, ಶ. ೧೮ನೇ ಶತಮಾನದಲ್ಲಿ ಭೂತಪುರವಾಸಿಯಾದ 'ಶ್ರೀಶೈಲ ಯೋಗಿ' ಎನ್ನುವ ಖ್ಯಾತ ಹೆಸರನ್ನು ಹೊಂದಿರುವ ಶ್ರೀನಿವಾಸಾಚಾರ್ಯರು ಬ್ರಹ್ಮ ಎನ್ನುವ ಪದವನ್ನು ವಿವರಿಸುತ್ತಾ ಬ್ರಹ್ಮಪದ ಶಕ್ತಿವಾದ: ಎನ್ನು ಗ್ರಂಥವನ್ನು ರಚಿಸಿದ್ದಾರೆ. ಇದು ಅಡಯಾರು ಗ್ರಂಥಾಲಯದಲ್ಲಿದೆ.

೧೭. ಕ್ರಿ. ಶ. ೧೮ನೇ ಶತಮಾನದ ಶ್ರೀ ರಂಗನಾಥದೇಶಿಕರ ಮಕ್ಕಳೂ, ಶಿಷ್ಯರೂ ಆದ ಶ್ರೀ ಭಾಷ್ಯಂರಂಗಾಚಾರ್ಯರವರು ಶ್ರೀ ಭಾಷ್ಯ ಸಿದ್ಧಾಂತ ಸಾರ ಎನ್ನುವ ಗ್ರಂಥವನ್ನು ಬರೆದರು. ಇದು ಕೂಡ ಅಡಯಾರು ಗ್ರಂಥಾ–ಲಯದಲ್ಲಿದೆ.

೧೮. ಶ್ರೀ ರಾಮಾನುಜರ ಗುರುಗಳಲ್ಲಿ ಒಬ್ಬರಾದ ಶ್ರೀ ಶೈಲಪೂರ್ಣರ

ವಂಶೀಯರಲ್ಲಿ ಒಬ್ಬರಾದ ತಾತ್ಯದೇಶಿಕರ ಮಕ್ಕಳಾದ ಶ್ರೀಶೈಲಸೂರಿ ಎನ್ನುವವರು ಕ್ರಿ ಶ. ೧೮ನೇ ಶತಮಾನಕ್ಕೆ ಸೇರಿದವರು. ಇವರು 'ಶ್ರುತ ಪ್ರಕಾಶಿಕೆ' ಎನ್ನುವ ಗ್ರಂಥವನ್ನು ಬರೆದಿದ್ದಾರೆ. ಇದೂ ಕೂಡ ಅಡಯಾರ್ ಗ್ರಂಥಾಲಯದಲ್ಲಿದೆ.

೧೯. ೧೮ನೇ ಶತಮಾನಕ್ಕೆ ಸೇರಿದ ಕುಂಭಕೋಣಂ ನಿವಾಸಿಗಳಾದ ರಾಘವಾಚಾರ್ಯ ಎನ್ನುವವರು ಶಾರೀರಿಕಾರ್ಥ ಸಂಕ್ಷೇಪ: ಎನ್ನುವ ಗ್ರಂಥ-ವನ್ನು ಬರೆದಿದ್ದಾರೆ.

೨೦. ಕ್ರಿ. ಶ. ೧೭೩೪ – ೧೭೩೬ರ ಮೈಸೂರಿನ ಇಮ್ಮಡಿ ಕೃಷ್ಣರಾಜ-ಒಡೆಯರ ದಳವಾಯಿಯೊಬ್ಬರ ತಮ್ಮನಾದ ವೀರರಾಜರ ಮಗನಾದ ಶುದ್ಧ ಸತ್ವಂ ರಾಮಾನುಜಾಚಾರ್ಯ ಎನ್ನುವವರು ಗುರುಭಾವ ಪ್ರಕಾಶಿಕೆ ಎನ್ನುವ ವ್ಯಾಖ್ಯಾವನ್ನು ರಚಿಸಿದ್ದಾರೆ. ಇದು ಕೂಡ ಆಡಯಾರ್ ಗ್ರಂಥಾಲಯದಲ್ಲಿದೆ

೨೧. ಕ್ರಿ.ಶ. ೧೮ನೇ ಶತಮಾನಕ್ಕೆ ಸೇರಿದ ಪ್ರತಿವಾದಿ ಭಯಂಕರ ವೆಂಕಟೇಶ ಪಂಡಿತರು ಎನ್ನುವವರು ಶಾರೀರಿಕ ದೀಪಿಕ ಎನ್ನುವ ಗ್ರಂಥವನ್ನು ಬರೆದಿದ್ದಾರೆ.

೨೨. ವೀರರಾಘವದಾಸರು ಎನ್ನುವವರು ತಾತ್ಪರ್ಯ ದೀಪಿಕಾ ಎನ್ನುವ ಗ್ರಂಥವನ್ನು ಬರೆದಿದ್ದಾರೆ.

೨೩. ಪರಕಾಲ ಸ್ವಾಮಿಗಳು ಮಿತ ಪ್ರಕಾಶಿಕೆ ಎನ್ನುವ ಶ್ರೀ ಭಾಷ್ಯದ ಗೂಡಾರ್ಥ ವಿವರಿಸುವ ಕೃತಿಯನ್ನು ರಚಿಸಿದ್ದಾರೆ.

೨೪. ಕ್ರಿ.ಶ. ೧೨೪೨-೧೯೨೪ರ ನಡುವಿನಲ್ಲಿದ್ದ ಮುಡಂಬಿ ನರಸಿಂಹಾ-ಚಾರ್ಯ ಎನ್ನುವವರು ಬ್ರಹ್ಮಸೂತ್ರ ಭಾಷ್ಯ ಎನ್ನುವ ಗ್ರಂಥವೊಂದನ್ನು ರಚಿಸಿದ್ದಾರೆ.

೨೫. ಪಂಡಿತ ರಾಮಾಶಾಸ್ತ್ರಿಗಳಿಂದ ರಚಿತವಾಗಿರುವ ಶ್ರೀಭಾಷ್ಯವಾಖ್ಯಾ ಎನ್ನುವ ಗ್ರಂಥವು ಪಂಡಿತ್ ನ್ಯೂ ಸೀರೀಸ್ ಎನ್ನುವ ಮಾಲೆಯಲ್ಲಿ ಪ್ರಕಟ-ವಾಗಿದೆ.

೨೬. 'ಶೇಷಾರ್ಯ' ಎಂದು ಕರೆಯಲ್ಪಡುವ ಅನಂತಾಚಾರ್ಯರವರು ಶ್ರೀ ಭಾಷ್ಯವನ್ನು ಅನುವಾದ ಮಾಡುತ್ತಾ 'ವೇದಾಂತ ನ್ಯಾಯಮಾಲಿಕ' ಎನ್ನುವ ಗ್ರಂಥವನ್ನು ಬರೆದವರು ಇದೂ ಕೂಡ ಅಡಯಾರು ಗ್ರಂಥಾಲಯದಲ್ಲಿದೆ

೨೭. ಶ್ರೀಶೈಲ ಶ್ರೀನಿವಾಸಚಾರ್ಯರು ಶ್ರೀ ಭಾಷ್ಯವನ್ನು ಅನುವಾದ

ಮಾಡುತ್ತಾ 'ವೇದಾಂತ ನ್ಯಾಯಮಾಲಿಕ' ಎನ್ನುವ ಗ್ರಂಥವನ್ನು ಬರೆದರು ಇದೂ ಕೂಡಾ ಅಡಯಾರು ಗ್ರಂಥಾಲಯದಲ್ಲಿದೆ.

೨೮. ತಟ್ಟಿ, ವಾಧೂಲ ಶ್ರೀನಿವಾಸ ಪಂಡಿತರು 'ಶ್ರೀ ಭಾಷ್ಯ' ಹಾಗೂ 'ಶ್ರುತ ಪ್ರಕಾಶಿಕೆ' ಯನ್ನು ತಮಿಳಿಗೆ ಅನುವಾದ ಮಾಡಿದರು

೨೯. ಕಂದಾಡೈಶೇಷಾಚಾರ್ಯರು ೧೯೨೨ರಲ್ಲಿ 'ಆಂಧ್ರ ಶ್ರೀ ಭಾಷ್ಯ' ಎನ್ನುವ ಗ್ರಂಥವನ್ನು ತೆಲುಗಿನಲ್ಲಿ ರಚಿಸಿ ಪ್ರಕಟಿಸಿದರು.

೩೦. ೨೦ ಶತಮಾನದಲ್ಲಿನ ನೀಲಮೇಘಶಾಸ್ತ್ರಿ ಎನ್ನುವರೊಬ್ಬರು ವಿಶಿಷ್ಟಾ-ದ್ವೈತ ತತ್ವದ ಅನುಸಾರ 'ಸೂತ್ರಭಾಷ್ಯ' ಎನ್ನುವ ಗ್ರಂಥವನ್ನು ಬರೆದರು.

೩೧. ೧೯ನೇ ಶತಮಾನಕ್ಕೆ ಸೇರಿದ ಅನಂತರಾಮ ಪಂಡಿತರು ಎನ್ನುವರು 'ವೇದಾಂತಸಾರ ವ್ಯಾಖ್ಯಾ' 'ವೇದಾಂತಸಾರ ಪದ್ಯಮಾಲಾ' ಎನ್ನುವ ಗ್ರಂಥಗಳನ್ನು ರಚಿಸಿದರು.

೩೨. 'ಶ್ರೀನಿವಾಸ ರಾಘವದಾಸು' ಎಂಬ ಶಠಗೋಪ ರಾಮಾನುಜಯತಿ' ಎನ್ನುವರು 'ಅಧಿಕರಣ ಕಲ್ಪತರು' ಎನ್ನುವ ವ್ಯಾಖ್ಯಾವನ್ನು ಬರೆದಿರುವರು ಇದು ಪ್ರಕಟಗೊಂಡಿದೆ.

೩೩. ಕ್ರಿ.ಶ.೧೮೪೫ರಲ್ಲಿ ಜನಿಸಿದ ಕಪಿಸ್ಥಲಂ ದೇಶಿಕಾಚಾರ್ಯ ಎನ್ನುವರು 'ಶಾರೀರಾಧಿಕರಣ ರತ್ನಮಾಲಾ' ಎನ್ನುವ ಗ್ರಂಥವನ್ನು ರಚಿಸಿದರು ಇದರ ತಮಿಳು ಅನುವಾದವೂ ಇದೆ.

೩೪. ಕೌಂಡಿನ್ಯ ವೆಂಕಟಾಚಾರ್ಯರ ಪುತ್ರರಾದ ಅಣ್ಣಯ್ಯಾಚಾರ್ಯ ಎನ್ನುವವರು ವಿಶಿಷ್ಟಾದ್ವೈತಮತಾನುಸಾರ 'ಬ್ರಹ್ಮಸೂತ್ರೋಪಸೂತ್ರ ಸಂಗ್ರಹ' ಎನ್ನುವ ಗ್ರಂಥವನ್ನು ರಚಿಸಿದ್ದಾರೆ.

೩೫. ಪಂಜಾಬೀ ಸುದರ್ಶನಾಚಾರ್ಯರು 'ಶ್ರೀ ಭಾಷ್ಯದ ಅನುಸಾರ 'ವಿಶಿಷ್ಟಾದ್ವೈತಾಧಿಕರಣ ರತ್ನಮಾಲಾ' ಎನ್ನುವ ಗ್ರಂಥವನ್ನು ಬರೆದಿದ್ದಾರೆ.

೩೬. ೧೮೮೫ರಲ್ಲಿ ಅಂದಿನ ವೇದಾಂತ ದೇಶಿಕ ಮಹಾಯತೀಂದ್ರ ದೇಶಿಕರು ಶ್ರೀ ಭಾಷ್ಯಾನುಸಾರ 'ಬ್ರಹ್ಮಸೂತ್ರಾರ್ಥ ಪದಮಾಲಿಕ' ಎನ್ನುವ ಗ್ರಂಥವೊಂದನ್ನು ರಚಿಸಿದರು.

೩೭. ಮೈಸೂರು ಪರಕಾಲ ಮಠದ ೩೩ನೇ ಜೀಯರ್ ರವರಾದ ಅಭಿನವ ರಂಗನಾಥ ಸ್ವಾಮಿಗಳು (೧೯೨೫-೧೯೮೬) 'ಗೂಢಾರ್ಥ ಸಂಗ್ರಹ' ಎನ್ನುವ

ವಿಸ್ತಾರವಾದ ವ್ಯಾಖ್ಯಾನವನ್ನು ಬರೆದಿರುವರು.

೩೮. ವಾಧೂಲ ಶ್ರೀನಿವಾಸಚಾರ್ಯ ಎನ್ನುವರು ಬರೆದಿರುವ 'ಶ್ರೀ ಭಾಷ್ಯ ಪ್ರಕಾಶಿಕ' ಎನ್ನುವ ವ್ಯಾಖ್ಯಾನವೂ ಕೂಡ ಪ್ರಕಟವಾಗಿದೆ.

೩೯. 'ಅಭಿನವ ದೇಶಿಕ' ಎಂದು ಬಿರುದಾಂಕಿತರಾದ ಉತ್ತಮೂರು ವೀರ ರಾಘವಾಚಾರ್ಯರು 'ಶ್ರೀ ಭಾಷ್ಯಾರ್ಥದರ್ಪಣ' ಎನ್ನುವ ವ್ಯಾಖ್ಯಾನವೊಂದನ್ನು ರಚಿಸಿದ್ದಾರೆ. ಇದು ಆಧುನಿಕವಾದ ಸಂಸ್ಕೃತ ವ್ಯಾಖ್ಯಾನವಾಗಿದ್ದು ಮೊದಲ ಸಂಪುಟವು ೧೯೬೩ರಲ್ಲೂ ೨ನೇ ಸಂಪುಟವು ೧೯೬೮ರಲ್ಲೂ ಪ್ರಕಟವಾಗಿವೆ.

೪೦. ಕಾರುಕುಚ್ಚಿ ವೆಂಕಟರಾಘವಾಚಾರ್ಯರು ಶ್ರೀ ಭಾಷ್ಯಾರ್ಥ ಸಂಗ್ರಹ ಎನ್ನುವ ಮಣಿಪ್ರವಾಳ ಗ್ರಂಥವನ್ನು ರಚಿಸಿದ್ದಾರೆ.

೪೧. ವರದರಾಜಸೂರಿ ಎನ್ನುವವರು ಶ್ರೀ ಭಾಷ್ಯಪ್ರವೇಶ ಮಾಲಾ ಎನ್ನುವ ಗ್ರಂಥವನ್ನು ಪ್ರಕಟಿಸಿದ್ದಾರೆ.

೪೨. ರಂಗರಾಜಮುನಿಗಳು ಶ್ರೀ ಶಾರೀರಕ ಶಾಸ್ತ್ರಾರ್ಥ ದೀಪಿಕೆ ಎನ್ನುವ ವ್ಯಾಖ್ಯಾನವನ್ನು ರಚಿಸಿದ್ದಾರೆ.

೪೩. ವೇದಾಂತ ಯತಿರಾಜ ಎನ್ನುವವರು ಬರೆದಿರುವ ಬ್ರಹ್ಮಸೂತ್ರವೃತ್ತಿ ಎನ್ನುವ ವ್ಯಾಖ್ಯಾನವೊಂದಿದೆ.

೪೪. ಶ್ರೀನಿವಾಸ ಎನ್ನುವವರು ಬ್ರಹ್ಮಸೂತ್ರಾರ್ಥ ಎನ್ನುವ ವಿಪುಲ ವಿಚಾರಾತ್ಮಕ ಗ್ರಂಥ ಬರೆದಿದ್ದಾರೆ.

೪೫. ರಾಮಾನುಜದಾಸರು ಶಾರೀರಿಕ ಭಾಸ್ಕರ ಎನ್ನುವ ವ್ಯಾಖ್ಯಾನ ಗ್ರಂಥ ವೊಂದನ್ನು ರಚಿಸಿದ್ದಾರೆ.

೪೬. ಸುಂದರರಾಜ ವಿರಚಿತ ಶ್ರೀ ಭಾಷ್ಯವ್ಯಾಖ್ಯ ಎನ್ನುವ ಗ್ರಂಥವೊಂದಿದೆ ಇವೇ ಅಲ್ಲದೆ ಇನ್ನೂ ಕೆಲವು ವ್ಯಾಖ್ಯಾನಗಳಿವೆ. ಮುಖ್ಯವಾದವುಗಳೆಂದರೆ

೪೭. ಶ್ರೀನಿವಾಸ ವಿರಚಿತ "ಶ್ರೀಭಾಷ್ಯ ಲಘುಭಾವ ಪ್ರಕಾಶಿಕ"

೪೮. ರಾಮಾನುಜ ಸೂರಿ ವಿರಚಿತ "ಶ್ರೀಭಾಷ್ಯ ಸುಬೋಧಿನಿ"

೪೯. ವೆಂಕಟಾಚಾರ್ಯ ವಿರಚಿತ " ಬ್ರಹ್ಮಸೂತ್ರಭಾಷ್ಯ ಪೂರ್ವಪಕ್ಷ ಸಂಗ್ರಹ ಕಾರಿಕಾ"

೫೦. ಶಠಕೋಪಮುನಿ ವಿರಚಿತ "ಬ್ರಹ್ಮಸೂತ್ರಾರ್ಥ ಸಂಗ್ರಹಃ"

೫೧. ನಾರಾಯಣ ವಿರಚಿತ 'ಬ್ರಹ್ಮಸೂತ್ರ ವ್ಯಾಖ್ಯಾ'

೫೨. ತಿರುಮಲೈ ಲಕ್ಷ್ಮೀಕುಮಾರ ಕೋಟಿಕನ್ಯಾ ಅನಂತ ಕೃಷ್ಣ ತಾತಾ-ಚಾರ್ಯ ಮಹಾದೇಶಿಕ ವಿರಚಿತ "ಬ್ರಹ್ಮಶಬ್ದಾರ್ಥ ವಿಚಾರ"

೫೩. ಶಠಗೋಪಾಚಾರ್ಯ ವಿರಚಿತ "ಬ್ರಹ್ಮಶಬ್ದಾರ್ಥವಿಚಾರ" ಹಾಗೂ 'ಬ್ರಹ್ಮಶಬ್ದಾರ್ಥ ನಿಷ್ಕರ್ಷಾ'

೫೪. ದೇಶಿಕಾಚಾರ್ಯ ವಿರಚಿತ "ಬ್ರಹ್ಮಸೂತ್ರ ಭಾಷ್ಯಟಿಪ್ಪಣಿ'

೫೫. ಕಾಂಚಿಕುರಿಚ್ಚಿ ವೆಂಕಟಕೃಷ್ಣ ಮಾಚಾರ್ಯ ವಿರಚಿತ "ಶ್ರೀಭಾಷ್ಯಾರ್ಥ ಮಣಿಪ್ರವಾಳ ದೀಪಿಕಾ"

೫೬. ಸಿರಿಸಿನಗಳ್ ಕೃಷ್ಣಮಾಚಾರ್ಯ ವಿರಚಿತ 'ಶ್ರೀಭಾಷ್ಯೋಪನ್ಯಾಸಾ'

೫೭. ಶ್ರೀರಂಗಾಚಾರ್ಯ ವಿರಚಿತ "ಶ್ರೀಭಾಷ್ಯೋಪನ್ಯಾಸ"

೫೮. ವರದಾಚಾರ್ಯ ಕೃತ "ಶ್ರೀಭಾಷ್ಯವಾರ್ಥಿಕಮ್ ಶ್ರೀ ಭಾಷ್ಯಪ್ರಮೇಯ ಮಾಲಾ"-ಎನ್ನುವವುಗಳು ಹೆಸರಿಸುವಂತಹವು

ಇನ್ನು ಕೆಲವು ವ್ಯಾಖ್ಯಾನಗಳಿಗೆ ಲೇಖಕರ ಹೆಸರೇ ಇಲ್ಲ. ಇಂತಹ ಅನೇಕ ಗ್ರಂಥಗಳು ಅಡಯಾರ್ ಗ್ರಂಥಾಲಯದಲ್ಲಿದೆ. ಈ ಅಜ್ಞಾತ ಪಂಡಿತ-ರಿಂದ ರಚಿತವಾದ ಗ್ರಂಥಗಳೆಂದರೆ–

೫೯. ಅದಿಕರಣ ಸಂಗ್ರಹ ಶ್ಲೋಕ ವ್ಯಾಖ್ಯಾ

೬೦. ಜನ್ಮಾದ್ಯಧಿಕರಣ ವಿಚಾರಮ್

೬೧. ಬ್ರಹ್ಮಸೂತ್ರ ದೂಷಣೋದ್ಧರ:

೬೨. ಬ್ರಹ್ಮಸೂತ್ರ ಭಾಷ್ಯಸಂಗ್ರಹ ವಿವರಣಂ

೬೩. ಬ್ರಹ್ಮಸೂತ್ರ ಭಾಷ್ಯಾರಂಭ ಪ್ರಯೋಜನ ಸಮರ್ಥನಂ

೬೪. ಬ್ರಹ್ಮಸೂತ್ರಾಧಿಕರಣ ಸೂತ್ರಕಾರಿಕಾ

೬೫. ಬ್ರಹ್ಮಸೂತ್ರಭಾಷ್ಯ ಸಂಗ್ರಹ ಟಿಪ್ಪಣಿ

೬೬. ಬ್ರಹ್ಮಸೂತ್ರ ವೃತ್ತಿ

೬೭. ಶಾರೀರಕ ವ್ಯಾಖ್ಯಾನಂ

೬೮. ಶಾರೀರಕ ಸಾರಾರ್ಥ ಸಂಗ್ರಹಃ

೬೯. ಲಘುಭಾವ ಪ್ರಕಾಶಿಕಾ

೭೦. ಸುಭೋಧಿನೀ

೭೧. ಶ್ರುತಪ್ರಕಾಶಿತ ವ್ಯಾಖ್ಯಾ ತಾತ್ಪರ್ಯ ದೀಪಿಕಾ

೭೨. ಶ್ರುತ ಪ್ರಕಾಶಿತ ಸಂಗ್ರಹಃ
೭೩. ಷಷ್ಟ್ಯರ್ಥ ವಿಚಾರಃ
೭೪. ಬ್ರಹ್ಮಸೂತ್ರಭಾಷ್ಯಾವಾಖ್ಯಾ
೭೫. ಬ್ರಹ್ಮಸೂತ್ರಭಾಷ್ಯ ಸಂಗ್ರಹ ಟಿಪ್ಪಣಿ
೭೬. ಬ್ರಹ್ಮಸೂತ್ರಾರ್ಥ ಸಂಗ್ರಹವರ್
೭೭. ರಾಮಾನುಜ ಸಿದ್ಧಾಂತವರ್
೭೮. ರಾಮಾನುಜ ಸಿದ್ಧಾಂತ ನಿರ್ಣಯ ಸಂಗ್ರಹವರ್
೭೯. ಶ್ರೀ ಭಾಷ್ಯಾಪ್ರಕಾಶಿಕಾ-ಲಘುಭಾವ ಪ್ರಕಾಶಿಕಾ
೮೦. ಶ್ರಿ ಭಾಷ್ಯಾವ್ಯಾಖ್ಯಾಸುಬೋಧಿನಿ, ಇತ್ಯಾದಿಯವು

## ಕನ್ನಡದಲ್ಲಿ ಶ್ರೀ ಭಾಷ್ಯಾ

ಕರ್ನಾಟಕದಲ್ಲಿನ ರಾಮಾನುಜಭಕ್ತರು ತುಂಬಾ ನಿಧಾನವಾಗಿ ಶ್ರೀಭಾಷ್ಯದ ಕಡೆ ಗಮನ ಹರಿಸಿದರು. ಇಂತಹ ಮೊಟ್ಟಮೊದಲ ಪ್ರಯತ್ನವನ್ನು ಕಲ್ಕಿ ನರಸಿಂಹಾಚಾರ್ಯ (ಕಲ್ಕಿ ಸಿಂಹ)ರು ಮಾಡಿದರು. ೧೯೩೧ ರಲ್ಲಿ 'ಶ್ರೀ ಭಾಷ್ಯ ಸಾರಾಮೃತ' ಎಂಬ ಗ್ರಂಥದಲ್ಲಿ ತಿಳಿಗನ್ನಡದಲ್ಲಿ ಸರ್ವರಿಗೂ ಅರ್ಥವಾಗುವಂತೆ ಶ್ರೀ ಭಾಷ್ಯವನ್ನು ವಿವರಿಸಿದ್ದಾರೆ. ಕ್ರೌನ್ ಅಷ್ಟದಳದ ೯೬ ಪುಟಗಳಲ್ಲಿ ವಿಸ್ತಾರವಾದ ವಿಷಯವನ್ನು ಸಂಗ್ರಹಿಸುವುದು ಅವರ ಲೇಖನ ಕೌಶಲ್ಯವನ್ನು ತೋರಿಸುತ್ತದೆ.

ಇಂತಹುದೇ ಪ್ರಯತ್ನಗಳು ಶ್ರೀ ಆಂಡವನ್‌ಸ್ವಾಮಿಯವರ 'ಶ್ರೀಭಾಷ್ಯ-ರಹಸ್ಯತ್ರಯಸಾರ', ಎಂ. ಒ. ಎಸ್. ಅಯ್ಯಾಂಗಾರ್‌ರವರ 'ಶ್ರೀ ಭಾಷ್ಯಾ ಪ್ರವೇಶ' ಕೆ. ಎಸ್. ಕೃಷ್ಣ ತಾತಾಚಾರ್‌ರವರ 'ಶ್ರೀ ಭಾಷಾಮೃತಸಾರ' ಗಳಲ್ಲಿ ನಡೆದಿದೆ.

ಆದರೆ ಮೂಲ ಬ್ರಹ್ಮಸೂತ್ರಗಳನ್ನು ನೀಡಿ ಅವುಗಳಿಗೆ ಶ್ರೀಭಾಷ್ಯದ ಕನ್ನಡದ ಅರ್ಥ ನೀಡಿದ ಮೊಟ್ಟಮೊದಲ ಪ್ರಯತ್ನ ಶ್ರೀ ಟಿ. ವಿ. ನಾಥಮುನಿ ಅಯ್ಯಂಗಾರ್‌ರವರಿಂದ ಆಯಿತು. ಇವರು 'ಬ್ರಹ್ಮಸೂತ್ರಗಳು - ಶ್ರೀಭಾಷ್ಯದರ್ಪಣ' ಎನ್ನುವ ಕೃತಿ ಡೆಮ್ಮಿ ಅಷ್ಟದಳ ೫೦೦ ಪುಟಗಳ ವಿಸ್ತೃತ ಕೃತಿಯನ್ನು ೧೯೭೦ರಲ್ಲಿ ( ಬೆಲೆ ೧೨-೦೦ ರೂ. ) ಪ್ರಕಟಿಸಿದರು. ರಾಮಾನುಜರ ಭಾಷ್ಯದೊಂದಿಗೆ

ಶಂಕರ, ಮಾಧ್ವರ ಬ್ರಹ್ಮಸೂತ್ರ ಭಾಷ್ಯಗಳ ಕಿರುಪರಿಚಯವನ್ನೂ ಇದರಲ್ಲಿ ನೀಡಲಾಯಿತು.

ಇಂತಹುದೇ ಒಂದೇ ಬೃಹತ್ ಪ್ರಯತ್ನ ಇತ್ತೀಚೆಗೆ ನಾಥಮುನಿ ಅಯ್ಯಂಗಾರ್ ರವರ ಸಹೋದರರ ಸಾಹಸದಿಂದ ಫಲಪ್ರದವಾಯಿತು. ಶ್ರೀ ವೈಷ್ಣವ ಸಾಹಿತ್ಯದ ಖ್ಯಾತ ವಿದ್ವಾಂಸರಾದ ಡಾ.|| ಎನ್. ಎಸ್. ಅನಂತರಂಗಾಚಾರ್‌ರವರು ಶ್ರೀ ಭಾಷ್ಯದ ಮೂಲ, ಅದರ ಕನ್ನಡ ಅನುವಾದ ಹಾಗೂ ಅವಶ್ಯಕ ಇತರೇ ವಿವರ ಗಳೊಡನೆ 'ಶ್ರೀ ಭಾಷ್ಯ'ವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿದರು. ಮೊದಲ ಸಂಪುಟವು ಶ್ರೀ ಭಾಷ್ಯದ ಮೊದಲ ಅಧ್ಯಾಯದ ಮೊದಲಪಾದವನ್ನು ಒಳಗೊಂಡು (ಡೆಮ್ಮಿ ಅಷ್ಟದಳ ೬೪೮ + ೨೮ ಪುಟಗಳು, ಬೆಲೆ ೬೦-೦೦) ೧೯೮೮ರಲ್ಲಿ ಬೆಳಕು ಕಂಡಿತು. ಇದೇ ರೀತಿಯಲ್ಲಿ ಉಳಿದೆರಡು ಸಂಪುಟಗಳೂ ಪ್ರಕಟಗೊಂಡವು. ಎರಡನೇ ಸಂಪುಟವು (ಮೊದಲ ಅಧ್ಯಾಯದ ಎರಡನೇ ಪಾದದಿಂದ ಎರಡನೇ ಅಧ್ಯಾಯದ ಎರಡನೇಪಾದ ಪೂರ್ತಿ ಒಳಗೊಂಡು ಡೆಮಿ ಅಷ್ಟದಳ ೭೦೮+೮ ಪುಟಗಳು, ಬೆಲೆ ೬೦-೦೦ರೂ.) ೧೯೮೭ರಲ್ಲೂ, ಮೂರನೇ ಸಂಪುಟವು (ಎರಡನೇ ಅಧ್ಯಾಯದ ಮೂರನೇ ಪಾದದಿಂದ ನಾಲ್ಕನೇ ಅಧ್ಯಾಯ ಪೂರ್ತಿ ಡೆಮ್ಮಿ ಅಷ್ಟದಳ ೨೬೪+೧೬ ಪುಟ, ಬೆಲೆ ೬೦-೦೦ ರೂ.) ೧೯೯೦ರಲ್ಲಿ ಪ್ರಕಟವಾದುವು. ಸುಮಾರು ಎರಡು ಸಾವಿರ ಪುಟಗಳನ್ನು ಮೀರಿರುವ ಈ ಕೃತಿಯು ಕೇವಲ ಸೇವಾ ಮನೋಭಾವದಿಂದ ಹೊರಬಂದಿದೆ ಎಂದರೆ ಅತಿಶಯೋಕ್ತಿಯಲ್ಲ ಇದು ಕನ್ನಡದ ಧಾರ್ಮಿಕ ಸಾಹಿತ್ಯದ ಒಂದು ಅಮೂಲ್ಯರತ್ನ.

## ವಿದೇಶೀ ಭಾಷೆಗಳಲ್ಲಿ 'ಶ್ರೀಭಾಷ್ಯ'

ಭಗವದ್ಗೀತೆಯಂತೆ ರಾಮಾನುಜರ ಶ್ರೀ ಭಾಷ್ಯವೂ ಅಮೆರಿಕನ್ನರು ಹಾಗೂ ಐರೋಪ್ಯರನ್ನು ಆಕರ್ಷಿಸಿದೆ, ಮೈಸೂರಿನ ಪ್ರೊ. ಎಸ್. ಎಸ್. ರಾಘವಾಚಾರ್ ಹಾಗೂ ಮದ್ರಾಸ್‌ನ ಪ್ರೊ. ಎಂ. ರಂಗಾಚಾರ್ಯ-ಇವರುಗಳ ಪ್ರಭಾವದಿಂದ ವಿದೇಶಿಯರು ಆಕರ್ಷಿತರಾಗಿ ಭಾರತಕ್ಕೆ ಬಂದು ಇವರುಗಳ ಬಳಿ ವಿಶಿಷ್ಟಾದ್ವೈತ ವನ್ನು ಅಧ್ಯಯನ ಮಾಡಿ, ಸಂಶೋಧನಾತ್ಮಕ ಪ್ರಬಂಧಗಳನ್ನು ಸಿದ್ಧಗೊಳಿ ಸಿದ್ದಾರೆ. ಅಲ್ಲಿನ ಬುದ್ಧಿ ಜೀವಿ ಜನಾಂಗದವರನ್ನು ಆಕರ್ಷಿಸಿರುವ ರಾಮಾನುಜ ಸಿದ್ಧಾಂತವು ಅವರ ಪ್ರೀತಿಯ ವಿಷಯವಾಗಿದೆ. ಪರಿಣಾಮವಾಗಿ ಶ್ರೀಭಾಷ್ಯವು ಅಲ್ಲಿನ ಅನೇಕ ಭಾಷೆಗಳಿಗೆ ಅನುವಾದವಾಗಿದೆ.

1. The Vedanthasuthras with the commentary by Ramanuja George Thibaut-Sacred books of the East-Vol. 48 Oxford 1904.

2. Sri Bhashya of Ramanuja- R. D. Karmakar 1962. 3. Volums.

3. Sri Bhasha-(English Translation) - V. K. Ramanujachar.

4. The Mahasiddhanta of Ramanujas Sri Bhashya James Norton.

5. The Vedanta Sutras with the Sri Bhashya of Ramanuja-Vol. II 1964, Vol. III 1965 by M. Rangacharya and M. B. VaradarajaIyengar.

6. A Critical study of the Philosophy of Ramanuja-Sen Gupta, Anima, Chowkamba Series, Banaras (Vol. 55)-1967.

7. The Vedanta-A study of the Brahma sutras with the Bhashyams of Sankara, Ramanuja etc., V.S. Ghate.

8. Siddhanta des Ramanuja-Rudolf, Otto (ಶ್ರೀ ಭಾಷ್ಯದ ಜರ್ಮನ್ ಅನುವಾದ) 1917.

9. La doctrine morale et meta phisique de Ramanuja (ಶ್ರೀ ಭಾಷ್ಯದ ಫ್ರೆಂಚ್ ಅನುವಾದ) 1938 by Lacombe, Oliver. ಇತ್ಯಾದಿಯು.

ಈ ರೀತಿಯಲ್ಲಿ ಒಂದು ಪ್ರವಾಹ ರೂಪದಂತೆ ಸಾಲಾಗಿ ರಾಮಾನುಜರ ಶ್ರೀ ಭಾಷ್ಯದ ಬಗ್ಗೆ ಬಂಧಿರುವ ಕೃತಿಗಳು ಅವರ ಅಸದೃಶವೂ, ಅಖಂಡವೂ ಆದ ಪ್ರಭಾವವನ್ನು ಸ್ಪಷ್ಟಪಡಿಸುತ್ತವೆ.

ಶ್ರೀ ಭಾಷ್ಯಕಾರೋ ಜಯತು

ರಾಮಾನುಜ ಜಗದ್ಗುರುಃ

ಮುಮುಕ್ಷೂಣಾಂ ಚ ಸರ್ವೇಷಾಂ ಶ್ರೀ ಮಷ್ಟಾಕ್ಷರ ಪ್ರದಃ

ಹಿಂದೂ ಧರ್ಮದ ಪ್ರತಿಯೊಂದು ಸಿದ್ಧಾಂತವೂ ತನ್ನದೇ ಆದ 'ರಹಸ್ಯಗ್ರಂಥ'ಗಳನ್ನು ಹೊಂದಿರುತ್ತದೆ. ಇವುಗಳಲ್ಲಿ ಆಯಾಯಾ ಸಿದ್ಧಾಂತ ರಹಸ್ಯ ವಿಷಯಗಳು ವಿವರವಾಗಿ, ಸಂಬಂಧಪಟ್ಟ ಪ್ರವಾಚಕರಿಂದ ನಿರೂಪಿತವಾಗಿರುತ್ತದೆ. ಸಾಮಾನ್ಯವಾಗಿ ಈ ರಹಸ್ಯ ವಿಷಯಗಳು ಗುರುಮುಖೇನ ಪರಂಪರಾನುಗ್ರಹವಾಗಿ ಮುಂದುವರೆದು ಬಂದಿರುತ್ತವೆ.

ಶ್ರೀ ವೈಷ್ಣವಮತ ಸಿದ್ಧಾಂತವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಈ ರಹಸ್ಯಗ್ರಂಥಗಳನ್ನು ಅಧ್ಯಯನ ಮಾಡಬೇಕಿದೆ. ಇವುಗಳಲ್ಲಿ 'ಗ್ರಂಥಚತುಷ್ಟಯ'ವೆನ್ನುವುದು ಮುಖ್ಯವಾದುದು. ರಾಮಾನುಜಚಾರ್ಯರ ಗೀತಾಭಾಷ್ಯ ಅವರದ್ದೇ ಆದ ಶ್ರೀ ಭಾಷ್ಯ ನಮ್ಮಾಳ್ವಾರ್‌ರವರ ತಿರುವಾಯ್ಮೊಳಿಯ ಭಗವದ್ವಿಷಯವೆಂಬ ವ್ಯಾಖ್ಯಾನ ಹಾಗೂ ಶ್ರೀ ವೇದಾಂತ ದೇಶಿಕ ವಿರಚಿತ ಶ್ರೀಮದ್ ರಹಸ್ಯತ್ರಯಸಾರ–ಎನ್ನುವುದೇ ಗ್ರಂಥ ಚತುಷ್ಟಯ ಎನ್ನುವುದು. ಇವುಗಳಲ್ಲಿ ಮುಖ್ಯವಾದದು ದೇಶಿಕರ 'ರಹಸ್ಯತ್ರಯಸಾರ' ಎನ್ನುವ ಮಹಾ ಉದ್ಗ್ರಂಥ. ಈ ಕೃತಿಯೊಂದಿಗೆ ಪಿಳ್ಳೈಲೋಕಾಚಾರ್ಯರ 'ಅಷ್ಟಾದಶ ರಹಸ್ಯ'ಗಳನ್ನು ಅಧ್ಯಯನ ಮಾಡುವ ರೂಢಿಯೂ ಕೆಲವರಲ್ಲುಂಟು.

ಶ್ರೀ ಭಾಷ್ಯಾದಿ ಸಕಲ ವೇದಾಂತ ಗ್ರಂಥಗಳ ಸಾರವೇ 'ರಹಸ್ಯತ್ರಯಸಾರ' ಗ್ರಂಥ. ಅಷ್ಟಾಕ್ಷರ ಮಂತ್ರದ ವ್ಯಾಖ್ಯಾನವೇ ಈ ಗ್ರಂಥದ ಮೂಲಸ್ವರೂಪ. ಇವರಲ್ಲಿ ೩೨ ಅಧಿಕಾರ (ಅಧ್ಯಾಯ)ಗಳಿವೆ. ಇವನ್ನು ನಾಲ್ಕು ವಿಭಾಗಗಳಲ್ಲಿ ಹಂಚಲಾಗಿದೆ. ೧. ಅರ್ಥಾನುಶಾಸನ ವಿಭಾಗ (೧–೨೨ ಅಧಿಕಾರಗಳು); ೨. ಸ್ಥಿರೀಕರಣ ವಿಭಾಗ (೨೩–೨೬ ಅಧಿಕಾರಗಳು); ೩. ಪದವಾಕ್ಯ ಯೋಜನಾ ವಿಭಾಗ (೨೭–೨೯ ಅಧಿಕಾರಗಳು); ೪. ಸಂಪ್ರದಾಯ ಪ್ರಕೀಯಾವಿಭಾಗ (೩೦–೩೨ ಅಧಿಕಾರಗಳು) ಈ ರಹಸ್ಯ ಮಂತ್ರಾರ್ಥಗಳನ್ನು ಚೆನ್ನಾಗಿ ತಿಳಿಯಲು ಅವಶ್ಯಕವಾದ ತತ್ವಹಿತ ಪುರುಷಾರ್ಥ, ಅರ್ಥಪಂಚಕ, ಮೋಕ್ಷೋಪಾಯಗಳು, ಅವುಗಳ ಸ್ವರೂಪ, ಶರಣಾಗತಿ, ಅದರ ಪ್ರಯೋಗ ವಿಧಾನ ಇತ್ಯಾದಿ ವಿಷಯಗಳನ್ನು ಮೊದಲ ಎರಡು ವಿಭಾಗಗಳಲ್ಲಿ ಪ್ರಮುಖವಾಗಿ ನಿರೂಪಿಸಲಾಗಿದೆ. ಮೂರನೇ ವಿಭಾಗದಲ್ಲಿ ಮೂರು ರಹಸ್ಯ ಮಂತ್ರಗಳ ವಿಸ್ತಾರವಾದ ಅರ್ಥ ವಿವ

ರಣೆ ಇದೆ. ನಾಲ್ಕನೆಯ ವಿಭಾಗದಲ್ಲಿ ಆಚಾರ್ಯರ ಹಾಗೂ ಶಿಷ್ಯನ ಕರ್ತವ್ಯಗಳನ್ನು ವಿವರಿಸಲಾಗಿದೆ.

ಈ ಗ್ರಂಥದ ಪ್ರಾರಂಭದಲ್ಲಿ ಗುರುಪರಂಪರಾನುಸಾರವಿದ್ದು, ಶ್ರೀಮನ್ನಾರಾಯಣನಿಂದ ಆಳ್ವಾರಾಚಾರ್ಯರ ಮುಖಾಂತರ ರಾಮಾನುಜರ ಗುರುಗಳ ಪರಂಪರೆ ಯನ್ನು ದೇಶಿಕರು ಸ್ಮರಿಸಿದ್ದಾರೆ.

ಮೊದಲಯದಾದ ಅರ್ಥಾನುಶಾಸನ ವಿಭಾಗದಲ್ಲಿ ಉಪೋದ್ಘಾತ, ಸಾರ ನಿಷ್ಕರ್ಷ, ಪ್ರಧಾನ ಪ್ರತಿತಂತ್ರ, ಅರ್ಥ ಪಂಚಕ, ತತ್ವತ್ರಯ, ಪರದೇವತಾ ಪಾರಮಾರ್ಥ, ಮುಮುಕ್ಷತ್ವ, ಅಧಿಕಾರಿವಿಭಾಗ, ಉಪಾಯವಿಭಾಗ, ಪ್ರಪತ್ತಿ ಯೋಗ, ಪರಿಕರ ವಿಭಾಗ, ಸಾಂಗಪ್ರಪದನ, ಕೃತಕೃತ್ಯ ಸ್ವನಿಷ್ಠಾಭಿಜ್ಞಾನ, ಉತ್ತರ ಕೃತ್ಯ ಪುರುಷಾರ್ಥಕಾಷ್ಠ, ಶಾಸ್ತ್ರೀಯ ನಿಯಮನ, ಅಪರಾಧ ಪರಿಹಾರ, ಸ್ಥಾನವಿಶೇಷ, ನಿರ್ಯಾಣ, ಗತಿಚಿಂತನ, ಪರಿಪೂರ್ಣ ಬ್ರಹ್ಮಾನುಭವ-ಎನ್ನುವ ೨೨ ಅಧಿಕಾರಿಗಳಿವೆ. ಚೇತನ ಅಚೇತನ, ಈಶ್ವರನೆಂಬ ತತ್ವತ್ರಯಗಳ ಸ್ವರೂಪ ವನ್ನು ಪ್ರಮುಖವಾಗಿ ಇಲ್ಲಿ ವಿವರಿಸಲಾಗಿದೆ. ಚೇತನಾಚೇತನಗಳು ಈಶ್ವರನಿಗೆ ಶರೀರರೂಪವಾದುವು. ಇವುಗಳಿಗೂ ಈಶ್ವರನಿಗೂ ಇರುವ ಶರೀರಾತ್ಮಭಾವ ಸಂಬಂಧವನ್ನು ಸ್ಪಷ್ಟವಾಗಿ ನಿರೂಪಿಸಿ, ಭಕ್ತಿ, ಪ್ರಪತ್ತಿಗಳ ಸ್ವರೂಪ ಹಾಗೂ ಪುರುಷಾರ್ಥ ಸ್ವರೂಪಗಳನ್ನೂ ಆಚಾರ್ಯರು ವಿವರಿಸಿದ್ದಾರೆ.

ಎರಡನೆಯದಾದ ಸ್ಥಿರೀಕರಣ ವಿಭಾಗದಲ್ಲಿ ಸಿದ್ಧೋಪಾಯ ಶೋಧನ, ಸಾಧ್ಯೋಪಾಯ ಶೋಧನ; ಪಾಭಾವ ವ್ಯವಸ್ಥೆ, ಪ್ರಭಾವ ರಕ್ಷೆ-ಎನ್ನುವ ನಾಲ್ಕು ಅಧಿಕಾರಗಳಿವೆ. ಸಿದ್ಧೋಪಾಯ, ಸಾಧ್ಯೋಪಾಯಗಳ ಶೋಧನೆಯನ್ನು ವಿವರಿಸಿರುವ ಆಚಾರ್ಯರು ಅವುಗಳ ಉಪಾಯ ಪ್ರಭಾವಗಳನ್ನು ಆಕ್ಷೇಪ ಸಮಾಧಾನಗಳ ಮುಖಾಂತರ ನಿರೂಪಣೆ ಮಾಡಿದ್ದಾರೆ.

ಮೂರನೆಯದಾದ 'ಪದವಾಕ್ಯ ಯೋಜನಾ ವಿಭಾಗ'ದಲ್ಲಿ ಮೂಲಮಂತ್ರಾಧಿಕಾರ, ದ್ವಯಾಧಿಕಾರ, ಚರಮಶ್ಲೋಕಾಧಿಕಾರ-ಎನ್ನುವ ಮೂರು ಅಧ್ಯಾಯಗಳಿವೆ. ರಹಸ್ಯ ಮಂತ್ರಗಳಾದ ಅಷ್ಟಾಕ್ಷರ, ದ್ವಯ ಮತ್ತು ಚರಮಶ್ಲೋಕಗಳ ವಿಸ್ತಾರವಾದ ಅರ್ಥ ವಿತರಣೆಯನ್ನು ನೀಡಲಾಗಿದೆ. ಇವುಗಳಲ್ಲಿನ ಪದಗಳಲ್ಲಿ ಹಾಗೂ ಆಧ್ಯಾತ್ಮಕ ಕ್ರಿಯಾಪದಗಳಿಂದ ಉಂಟಾದ ವಾಕ್ಯಗಳಲ್ಲಿ ಮೇಲೆ ಹೇಳಿದ ಅರ್ಥಗಳು ಹೇಗೆ ನಿರೂಪಿತವಾಗಿವೆ ಎಂಬುದರ ವೈಚಾರಿಕ ಸ್ವರೂಪವಿದೆ

ಇದರ ಮುಖಾಂತರ ಪರಮರಹಸ್ಯವಾದ ಲಕ್ಷ್ಮೀ ವಿಶಿಷ್ಟ ನಾರಾಯಣನೆಂಬ ಪರತತ್ವದ ಉಪಾಯೋಪೇಯಾತ್ಮಕವಾದ ಸ್ವರೂಪ, ಶರಣಾಗತಿ ಸ್ವರೂಪ, ಗೀತಾ ಚರಮಶ್ಲೋಕದ ಅರ್ಥವಿಸ್ತಾರವನ್ನು ನಿರೂಪಿಸಲಾಗಿದೆ. ಇದೇ ಪರಮೋಪಾದೇಯುವೆಂದು ತಿಳಿಸಲಾಗಿದೆ. ನಾಲ್ಕನೆಯದಾದ ಸಂಪ್ರದಾಯ ಪ್ರಕ್ರಿಯಾ ವಿಭಾಗದಲ್ಲಿ ಆಚಾರ್ಯಕೃತ್ಯ, ಶಿಷ್ಯಕೃತ್ಯ, ನಿಗಮನ ಎನ್ನುವ ಮೂರು ಅಧ್ಯಾಯಗಳಿದ್ದು ಇದರಲ್ಲಿ ಆಚಾರ್ಯರ ಹಾಗೂ ಶಿಷ್ಯನು ನೆರವೇರಿಸಬೇಕಾದ ಕರ್ತವ್ಯಗಳನ್ನು ವಿವರಿಸಲಾಗಿದೆ. ಈ ಪರಮರಹಸ್ಯಾರ್ಥಗಳನ್ನು ಉತ್ತಮ ಶಿಷ್ಯರಿಗೆ ಉಪದೇಶಿಸಬೇಕೆಂದೂ, ಅನರ್ಹ ಅಯೋಗ್ಯರಿಗೆ ಉಪದೇಶಿಸಕೂಡದೆಂದು ಎಚ್ಚರಿಸಲಾಗಿದೆ.

ಈ ರೀತಿಯಲ್ಲಿ ಈ ಗ್ರಂಥವು ಉಪದೇಯವೂ, ಶ್ರೇಷ್ಠವಾದದೂ ಆಗಿದೆ. ಈ ಕೃತಿಯು ಸಂಸ್ಕೃತ, ತಮಿಳು ಮಿಶ್ರಣದ ಮಣಿಪ್ರವಾಳ ಭಾಷೆಯಲ್ಲಿದೆ. ಆದರೂ ಇವೆರಡೂ ಭಾಷೆಗಳನ್ನು ಬಲ್ಲ ಸಾಮಾನ್ಯರಿಗೆ ಇದು ಅರ್ಥವಾಗುವುದು ಕಷ್ಟ. ಇದಕ್ಕೆ ಸಂಬಂಧಪಟ್ಟಹಾಗೇ ಅನೇಕ ವ್ಯಾಖ್ಯಾನಗಳೂ ಇವೆ. ಇಷ್ಟಗಳಲ್ಲಿ ಮುಖ್ಯವಾದ ಪಂಚವ್ಯಾಖ್ಯಾನಗಳಿವೆ. ಸಾರದೀಪಿಕೆ, ಸಾರಾಸ್ವಾದಿನೀ, ಸಾರ ಪ್ರಕಾಶಿಕೆ, ಸಾರವಿವರಿಣೀ, ಸಾರಸಂಗ್ರಹ–ಎನ್ನುವುವು ಪ್ರಖ್ಯಾತವಾದ ಪಂಚ ವ್ಯಾಖ್ಯಾನಗಳು. ಇವು ಈಗ ದೊರೆಯುವುದಿಲ್ಲವೆಂದು ಹೇಳಲಾಗುತ್ತದೆ. ಇದಲ್ಲದೆ ಇನ್ನೂ ಎರಡು ವ್ಯಾಖ್ಯಾನಗಳು ಪ್ರಸಿದ್ಧಿ ಪಡೆದಿವೆ–ಶ್ರೀ ಇಂಜಿಮೇಡು ಅಳಗಿಯಸಿಂಗರೆಂದು ಪ್ರಸಿದ್ಧರಾದ ಶ್ರೀವಣ್ ಶಠಕೋಪ ಮಹಾದೇಶಿಕರು ರಚಿಸಿರುವ 'ಸಾರಬೋಧಿನಿ' ಹಾಗೂ ಶ್ರೀ ಉ.ವೇ. ಉತ್ತಮೂರು ವೀರರಾಘವಾಚಾರ್ಯರು ರಚಿಸಿರುವ 'ಸಾರವಿಸ್ತಾರ', ಇವು ಏಳೂ ಸೇರಿ ಸಪ್ತವ್ಯಾಖ್ಯಾನಗಳು ಎಂದು ಪ್ರಸಿದ್ಧಿ ಪಡೆದಿವೆ. ಇವುಗಳೊಂದಿಗೆ ಕರೂರುಸ್ವಾಮಿಗಳೆಂದು ಖ್ಯಾತರಾದ ರಂಗರಾಮಾನುಜ ಮುನಿವರರು ರಚಿಸಿರುವ 'ಸಾರತಾತ್ಪರ್ಯ ಕೌಮುದಿ' ಎಂಬ ವ್ಯಾಖ್ಯಾನವೂ ಪ್ರಚಲಿತವಾಗಿದೆ.

ಈ 'ರಹಸ್ಯತ್ರಯಸಾರ' ಮಹತ್‌ಕೃತಿಯು ಕನ್ನಡದಲ್ಲಿಯೂ ಕೆಲವೊಂದು ವ್ಯಾಖ್ಯಾನ ಸಮೇತ ಪ್ರಕಟವಾಗಿರುವುದು ಸಂತೋಷದ ವಿಷಯ.

## ಶ್ರೀಮದ್ರಹಸ್ಯಸಾರ

ಸಿ.ಎಂ. ವಿಜಯರಾಘವಾಚಾರ್ಯ ಎನ್ನುವ ಮಹನೀಯರು ಕನ್ನಡಕ್ಕೆ 'ರಹಸ್ಯತ್ರಯಸಾರ'ವನ್ನು ನೀಡಿದ ಪ್ರಥಮ ಮಹನೀಯರು. ಒಂದು ದೃಷ್ಟಿಯಿಂದ ನೋಡಿದರೆ ಕನ್ನಡ ಶ್ರೀವೈಷ್ಣವ ಸಾಹಿತ್ಯಕ್ಕೆ ಇವರು ಮಾಡಿರುವ ಸೇವೆ ಅತ್ಯದ್ಭುತವೆಂದೇ ಹೇಳಬೇಕು. ಇವರ ಅಪಾರ ಸೇವೆಯನ್ನು ಗಮನಿಸಿರುವವರೂ ಕಡಿಮೆಯೇನೆ ! ಯಾರೂ ಮಾಡದಂತಹ ಸಾಹಿತ್ಯ ಸೇವೆ ಇವರು ಕನ್ನಡಕ್ಕೆ ಮಾಡಿದ್ದಾರೆ. ವಿದ್ಯಾಭ್ಯಾಸ ಇಲಾಖೆಯಲ್ಲಿ ಸರ್ಕಲ್ ಇನ್ಸ್‌ಪೆಕ್ಟರ್ ಆಗಿದ್ದು ನಿವೃತ್ತರಾದಮೇಲೆ ಸತತವಾಗಿ ಶ್ರೀ ವೈಷ್ಣವ ಸಾಹಿತ್ಯಕ್ಕೆ ಜೀವನವನ್ನು ಮೀಸಲಾಗಿಟ್ಟರು. ಬೃಹತ್ ಪ್ರಮಾಣದಲ್ಲಿ ಪುಸ್ತಕ ಪ್ರಕಟಣೆ ಮಾಡಿದರು. 'ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾಂತ ರತ್ನಮಾಲಾ'ದ ಅಡಿಯಲ್ಲಿ ಗೀತಾಭಾಷ್ಯ ರಹಸ್ಯತ್ರಯಸಾರ, ವಿಷ್ಣುಸಹಸ್ರನಾಮದ ಪರಾಶರ ಭಟ್ಟರ ವ್ಯಾಖ್ಯಾನ-ಇತ್ಯಾದಿ ಕೃತಿಗಳನ್ನು ಬೆಳಕಿಗೆ ತಂದು ಅನೇಕ ಕನ್ನಡ ಧಾರ್ಮಿಕ ಲೇಖಕರಿಗೆ ಮಾದರಿಯಾದರು. ಇವುಗಳಲ್ಲಿ 'ರಹಸ್ಯತ್ರಯಸಾರದ' ಕೃತಿಯು ಮಹತ್ವಪೂರ್ಣವಾದುದು.

ರಹಸ್ಯತ್ರಯ ಸಾರದ ಮೂಲವನ್ನು ನೀಡಿ, ಅದರ ಪ್ರತಿಪದ ಅರ್ಥವನ್ನೂ, ತಾತ್ಪರ್ಯವನ್ನೂ ವ್ಯಾಖ್ಯಾನವನ್ನು ವಿಜಯರಾಘವಾಚಾರ್ಯರವರು ನೀಡಿದ್ದಾರೆ. ಅಂತೆಯೇ ವಿಶೇಷ ಅರ್ಥಗಳನ್ನೂ, ಪರಾಮರ್ಶಿತ ವಿವರಗಳನ್ನು ವಿಶಿಷ್ಟ ಅರ್ಥಗಳನ್ನೂ ನೀಡಿ, ಕಡೆಯಲ್ಲಿ ವಿಷಯವಿಶೇಷಗಳನ್ನು ತಿಳಿಗನ್ನಡದಲ್ಲಿ ನೀಡಿದ್ದಾರೆ. ಭಾಷೆಯು ಎಲ್ಲಿಯೂ ಕ್ಲಿಷ್ಟವಾಗಿಲ್ಲ. ವಿವರಿಸಿರುವ ರೀತಿಯೂ ಕೂಡ ಸುಲಭಗ್ರಾಹ್ಯವಾದುವೆ.

ಮೂಲಗ್ರಂಥದ ೩೨ ಅಧಿಕಾರಗಳನ್ನು ಅನುವಾದ ಮಾಡುವಾಗ, ಓದುಗನಿಗೆ ಭಾರವಾಗದ ರೀತಿಯಲ್ಲಿ ಪ್ರಕಟಣಾಕಾರ್ಯವನ್ನು ಲೇಖಕರು ಕೈಗೊಂಡಿದ್ದಾರೆ ಪ್ರತಿ ಎರಡು ಅಧಿಕಾರಗಳಿಗೆ ಒಂದು ಪುಸ್ತಕದಂತೆ ಪ್ರಕಟಿಸಿದ್ದಾರೆ. ಒಟ್ಟು ೧೮ ಸಂಪುಟಗಳನ್ನು ಪ್ರಕಟಿಸಿದ್ದಾರೆ. ಈ ಒಟ್ಟು ಸಂಪುಟಗಳ ಒಟ್ಟು ಪುಟಗಳ ಸಂಖ್ಯೆ ಸುಮಾರು ಡೆಮ್ಮಿ ಅಷ್ಟದಳಾಕಾರದ ೪೦೦೦ ಪುಟಗಳು. ಇದರ ಮೊದಲ ಸಂಪುಟ ಪ್ರಕಟವಾದದ್ದು ೧೯೩೭. ಕಡೆಯ ಸಂಪುಟ ಪ್ರಕಟವಾಗಿರುವುದು ೧೯೫೩ ಅಂದರೆ ಈ ಗಂಥದ ಪ್ರಕಟಣೆಯ ಕಾಲಾವಧಿ ಸುಮಾರು ೨೫ ವರ್ಷಗಳು. ನಿವೃತ್ತರಾದ ನಂತರದಲ್ಲಿ ಇಷ್ಟು ವರ್ಷಗಳ ಕಾಲದಲ್ಲಿ ಈ ಬೃಹತ್ ಗ್ರಂಥವನ್ನು

ಮುಗಿಸಿರುವುದು ಒಂದು ಗಾಥೆಯೇ ಸರಿ. ಲೇಖಕರ ಶ್ರದ್ಧೆ, ಸಾಹಸ, ಹಠಗಳು ಸಾಮಾನ್ಯರಿಗೆ ಅರ್ಥವಾಗುವುದು ಕಷ್ಟ.

ಇವರು ತಾವು ನೀಡಿರುವ ವ್ಯಾಖ್ಯಾನಕ್ಕೆ ಬೇರೆ ವ್ಯಾಖ್ಯಾನಗಳ ಸಹಾಯ ಪಡೆದಿದ್ದರೂ, ಸ್ವತಂತ್ರವಾಗಿ 'ಆಚಾರ್ಯ ಹೃದಯಾನ್ವೇಷಣೀ' ಎನ್ನುವ ವ್ಯಾಖ್ಯಾನವನ್ನು ಸುಂದರ ವಿವರ ಹಾಗೂ ಕಥಾನಕಗಳೊಂದಿಗೆ ರೂಪಿಸಿರುವುದು ಲೇಖಕರ ಶ್ರದ್ಧಾಭಕ್ತಿಗಳನ್ನು ತೋರಿಸುತ್ತದೆ. ಇದಕ್ಕಾಗಿ ಇವರು ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳ ಪ್ರಮಾಣಗಳನ್ನು ಉಪಪಾದನೆಯನ್ನಾಗಿ ಉಪಯೋಗಿಸಿಕೊಂಡು ಒಂದು ಉತ್ತಮ ಮಾದರಿಯನ್ನೆ ನಮ್ಮ ಮುಂದಿಟ್ಟಿದ್ದಾರೆ.

ಈ ಹಿರಿಯ ಸಾಧನೆ ಅನುಸರಣೀಯವಾದುದು, ಅಸಮಾನವಾದುದೂ ಆಗಿದೆ.

## ಶ್ರೀಮದ್ರಹಸ್ಯತ್ರಯಸಾರ ಸಂಗ್ರಹ

ವೇದಾಂತ ವಿದ್ವಾನ್, ವೇದಾಂತ ಸಾರಜ್ಞ ಕೆ. ಎಸ್. ಕೃಷ್ಣ ತಾತಾಚಾರ್ಯರವರು ಈ ಕೃತಿಯ ಲೇಖಕರು. ಬೆಂಗಳೂರಿನ ಶ್ರೀ ಲಕ್ಷ್ಮೀಹಯಗ್ರೀವ ಸೇವಾ ಟ್ರಸ್ಟ್‌ನವರು ಕ್ರೌನ್ ಅಷ್ಟದಳದ ೧೬೭ ಪುಟಗಳ ಈ ಕೃತಿಯನ್ನು ೧೯೮೧ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ 'ರಹಸ್ಯತ್ರಸಾರ'ದ ೩೨ ಅಧಿಕಾರಗಳನ್ನು ಸಂಕ್ಷಿಪ್ತರೂಪದಲ್ಲಿ ತಿಳಿಗನ್ನಡದಲ್ಲಿ ಸಾಮಾನ್ಯ ಓದುಗನಿಗೂ ಅರ್ಥವಾಗುವ ರೀತಿಯಲ್ಲಿ ನೀಡಿದ್ದಾರೆ. ಪ್ರತಿಯೊಂದು ಅಧಿಕಾರವನ್ನೂ ಬೇರೆ ಬೇರೆ ಅಧ್ಯಾಯವನ್ನಾಗಿ ಮಾಡಿ, ಆ ಅಧ್ಯಾಯಕ್ಕೆ ಸಂಬಂಧಪಟ್ಟ ವಿಶಿಷ್ಟವಾದ ಶ್ಲೋಕಗಳು, ಪಾಶುರಗಳನ್ನು ನೀಡಲಾಗಿದೆ. ಇದು ನಿಜ ಅರ್ಥದ ಸಂಗ್ರಹವಾಗಿದ್ದು, ಅತ್ಯಂತ ಉಪಯುಕ್ತವಾಗಿದೆ. ಇದು ಜನಪ್ರಿಯ ಪ್ರಕಟಣೆಯೂ ಹೌದು.

## ಶ್ರೀಮದ್ರಹಸ್ಯತ್ರಯ ಸಾರ

ಈ ಕೃತಿಯು ತುಂಬಾ ಗಮನಾರ್ಹವಾದುದು. ಇದನ್ನು ಎಸ್. ಎಂ. ಕೃಷ್ಣಮಾಚಾರ್ಯರವರು ಬರೆದಿದ್ದಾರೆ. ಇದೊಂದು ಬೃಹತ್ ಕೃತಿ ಸುಮಾರು ಕ್ರೌನ್ ಚತುರ್ಥ ೧೩೦೦ ಪುಟಗಳ ಎರಡು ಭಾಗಗಳಲ್ಲಿ ಪ್ರಕಟವಾಗಿರುವ ಈ ಗ್ರಂಥವು ಸುಮಾರು ಒಂದು ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ೧೯೭೦ರಲ್ಲಿ ಬೆಂಗಳೂರು ಪ್ರಕಾಶನಗರದಲ್ಲಿನ ಶ್ರೀ ವೈಷ್ಣವ ಸಭೆಯ ಲೇಖಕರಾದ ಎಸ್. ಎಂ. ಕೃಷ್ಣಮಾ

ಚಾರ್ಯರ ನೇತೃತ್ವದಲ್ಲಿ ಬೆಳಕು ಕಂಡಿದೆ.

ವಯೋವೃದ್ಧರಾದ ಸರಗೂರು ಮಾಡಭೂಷಣಂ ಕೃಷ್ಣಮಾಚಾರ್ಯರು ಈ ಕೃತಿಯ ಲೇಖಕರು. ತಮ್ಮ ತಂದೆ ಸ ಮ. ಶ್ರೀನಿವಾಸ ಗೋಪಾಲಚಾರ್ಯ ನಾಲಾಯಿರ ದಿವ್ಯಪ್ರಬಂಧ ಹಾಗೂ ರಹಸ್ಯಗ್ರಂಥಗಳಲ್ಲಿ ಶಿಕ್ಷಣ ಪಡೆದು, ಸ್ವಅಧ್ಯಯನ ಶ್ರಮದಿಂದ ವಿಪುಲಜ್ಞಾನವನ್ನು ಪಡೆದವರು. ಇವರು ರಚಿಸಿರುವ ಧಾರ್ಮಿಕ ಸಂಪ್ರದಾಯಗ್ರಂಥಗಳು ಶ್ರೀವೈಷ್ಣವ ಸಮುದಾಯಕ್ಕೆ ತುಂಬಾ ಸಹಾಯಕವಾಗಿವೆ. ಸರ್ಕಾರಿ ಉದ್ಯೋಗದಲ್ಲಿದ್ದರೂ ಕೂಡ ಸಂಪ್ರದಾಯ ಗ್ರಂಥಗಳ ಅಧ್ಯಯನ, ರಚನೆ, ಪ್ರಕಟಣೆಗಳಿಂದ ದೂರವಿದ್ದವರಲ್ಲ. ಶ್ರೀವೈಷ್ಣವ ಸಾಹಿತ್ಯಕ್ಕೆ ಈ ರೀತಿಯಲ್ಲಿ ಇವರ ಸೇವೆ ಸರ್ವತೋಮುಖವಾದುದು. ಪ್ರಸ್ತುತ ಇವರ ಜೀವನದ ಮೇರುಕೃತಿ ಎನ್ನುವದರಲ್ಲಿ ಸಂಶಯವೇ ಇಲ್ಲ.

ವಿವಿಧ ಗ್ರಂಥಗಳನ್ನು ಪರಾಮರ್ಶಿಸಿ, ಶುದ್ಧಮೂಲ ಪಾಠವನ್ನು ನೀಡಿರುವ ಲೇಖಕರು ಪ್ರತಿ ಅಧ್ಯಾಯ (ಅಧಿಕಾರ)ದಲ್ಲಿನ ವಿಷಯಗಳನ್ನು ವಿಂಗಡಿಸಿ, ಸುಲಭೀಕರಿಸಿದ್ದಾರೆ. ಅವುಗಳಿಗೆ ಸೂಕ್ತ ಶೀರ್ಷಿಕೆಗಳನ್ನು ನೀಡಿ, ಸಂಗತಿಗಳನ್ನು ಬರೆದಿದ್ದಾರೆ.

ಸಮರ್ಥ ಜ್ಞಾನಿಗಳಲ್ಲಿ ಮೂಲಗ್ರಂಥವನ್ನು ಕಾಲಕ್ಷೇಪ ಮಾಡಿದ್ದರ ಪರಿಣಾಮವಿದು. ತದನಂತರ ವಿವಿಧ ವ್ಯಾಖ್ಯಾನಗಳನ್ನೂ ಅಧ್ಯಯನ ಮಾಡಿ, ವಿಶೇಷ ಜ್ಞಾನವನ್ನು ಹೊಂದಿರುವುದರ ಪರಿಣಾಮವಾಗಿ ಲೇಖಕರು 'ಸಾರಚಂದ್ರಿಕಾ' ಎನ್ನುವ ವೈಶಿಷ್ಟ್ಯಪೂರ್ಣ ಅರ್ಥಗರ್ಭಿತ ವ್ಯಾಖ್ಯಾನವನ್ನು ನೀಡಿ, ಈ ಕೃತಿಯ ಮಹತ್ವವನ್ನು ಹೆಚ್ಚಿಸಿದ್ದಾರೆ.

ಮೂಲ ಪಾಠದ ಸುಸಂಬದ್ಧ ಅನುವಾದ ನೀಡಿ, ಇದರೊಂದಿಗೆ ಇತರೇ ವಿವರಣೆಗಳನ್ನೂ ಲೇಖಕರು ನೀಡಿದ್ದಾರೆ. ಮೂಲದಲ್ಲಿ ಶ್ರೀ ವೇದಾಂತ ದೇಶಿಕರು ಉಲ್ಲೇಖಿಸಿರುವ ಪ್ರಮಾಣಗಳ ಆಕರಣಗಳನ್ನು ಅಡಿ ಟಿಪ್ಪಣಿಗಳಲ್ಲಿ ಉಲ್ಲೇಖಿಸಿ, ಅವುಗಳ ಪೂರ್ಣ ಪಾಠವನ್ನು ಅರ್ಥವಿವರಣೆ ಮಾಡಿರುವ ವೈಶಿಷ್ಟ್ಯ ಓದುಗರಿಗೆ ಮೂಲಕೃತಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವುದರಲ್ಲಿ ಸಹಾಯಕವಾಗಿದೆ ಇದರೊಂದಿಗೆ ಇದಕ್ಕೆ ಸಂಬಧಪಟ್ಟ ಹಾಗೆ ಇತರೇ ಅನೇಕ ಉಪಯುಕ್ತ ವಿಷಯಗಳನ್ನು ವಿವರಣಾತ್ಮಕವಾಗಿ ವಿವೇಚಿಸಿರುವುದು—ಈ ಕೃತಿಯ ಬಗೆಗೆ ಹೆಚ್ಚಿನ ಅರಿವು ಪಡೆಯಲು ಸಹಾಯಕವಾಗಿದೆ.

ಈ ರೀತಿಯಲ್ಲಿ ಸರ್ವೋಪಯೋಗವಾದ ಈ ಬೃಹತ್ ಕೃತಿಯನ್ನು ನೀಡಿರುವುದು ಸೂಕ್ತವೂ ಉಪಯುಕ್ತವೂ ಆಗಿದೆ. ಅತಿ ವಿಸ್ತಾರವೂ ಅಲ್ಲದೆ, ಅತಿ ಸಂಕ್ಷಿಪ್ತವೂ ಅಲ್ಲದ ಇಂತಹುದೊಂದು ಮೂಲಕೃತಿಯನ್ನು ನೀಡಿರುವುದಕ್ಕೆ ಕನ್ನಡ ಆಸ್ತಿಕರು ನಿಜವಾಗಿಯೂ ಈ ಲೇಖಕರಿಗೆ ಋಣಿಗಳಾಗಿರಬೇಕಾಗಿದೆ.

ಕೃತಿಯ ಮುದ್ರಣವೂ ಚೆನ್ನಾಗಿದೆ. ಮೂಲಪಾಠವನ್ನು ಅನುಸಂಧಾನ ಮಾಡುತ್ತಿರುವಂತೆಯೇ, ಅದಕ್ಕೆ ತಕ್ಕಂತಹ ಕನ್ನಡ ಅನುವಾದ, ವ್ಯಾಖ್ಯಾನ–ಇತ್ಯಾದಿಗಳನ್ನು ಆಯಾ ಪುಟದಲ್ಲಿಯೇ ಬರುವಂತೆ ಮಾಡಿರುವ ವ್ಯವಸ್ಥೆ ಉಪಯುಕ್ತವಾಗಿದೆ. ಮುಖ್ಯವಾದ, ಅಗತ್ಯ ವಿಷಯ, ಶ್ಲೋಕಗಳನ್ನು ದಪ್ಪಕ್ಷರಗಳಲ್ಲಿ ಮುದ್ರಿಸಿರುವುದು ಸೂಕ್ತವಾಗಿದೆ.

ಈ ರೀತಿಯಲ್ಲಿ ಹಿಂದಿನ ಎರಡು ಗ್ರಂಥಗಳಿಗಿಂತಲೂ ಉತ್ತಮಗೊಂಡಿರುವ ಈ ಕೃತಿಯು ಕನ್ನಡ ಧಾರ್ಮಿಕ ಜಗತ್ತಿಗೆ ಉತ್ತಮಕೊಡುಗೆ

## ರಹಸ್ಯತ್ರಯ ಸಾರ

ಆಸ್ಥಾನ ವಿದ್ವಾನ್, ವಿದ್ಯಾರತ್ನ, ಬಾಲಧನ್ವಿ ಎಸ್. ರಂಗಾಚಾರ್‌ರವರು ಪ್ರಸಿದ್ಧ ವಿದ್ವಾಂಸರಾಗಿದ್ದುದೇ ಅಲ್ಲದೆ ಮಹಾರಾಜಾ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದವರು. ಇವರ ತಮ್ಮ ಪ್ರಕಾಂಡ ಪಾಂಡಿತ್ಯದಿಂದಲೇ ಕಾಲೇಜು ವಿದ್ಯಾರ್ಥಿಗಳು ಹಾಗೂ ಪಂಡಿತ ಮಂಡಲಿಯ ಪ್ರೀತಿಗೆ ಪಾತ್ರರಾಗಿದ್ದವರು. ಕೆಲವರಿಗಂತೂ ಇವರು ಸಿಂಹಸ್ವಪ್ನರೆ ! ಇವರೊಂದಿಗೆ ಮಾತನಾಡುವುದೂ ಕಷ್ಟವೆ! ತಮ್ಮ ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯಲೋಕಕ್ಕೆ ಪರಿಚಿತರು. ಶ್ರೀವೈಷ್ಣವ ಸಾಹಿತ್ಯಕ್ಕೆ ಇವರ ಕೊಡುಗೆ ಅಪಾರ. ದೇಶಿಕರ ಸ್ತೋತ್ರಗಳೆಲ್ಲ ಐದು ಭಾಗಗಳಲ್ಲಿ ಕನ್ನಡಕ್ಕೆ ನೀಡಿದವರಿವರು. ಇವೆಲ್ಲಕ್ಕಿಂತಲೂ ಮುಖ್ಯವಾದ ಅನುಪಮವಾದ ಕೃತಿಯಾದ ಶ್ರೀ ವೇದಾಂತದೇಶಿಕರ 'ರಹಸ್ಯತ್ರಯಸಾರ'ದ ಕನ್ನಡ ಅನುವಾದ. ೧೯೯೦ರಲ್ಲಿ ಇವರ ಸಂಸ್ಕೃತ ಸಾಹಿತ್ಯ ಸದನ ಹಾಗೂ ಶ್ರೀ ತಿಲ್ಲೈಸ್ಥಾನಂ ಸ್ವಾಮಿ ಕೈಂಕರ್ಯ ಸಭಾದವರಿಂದ ಸಂಯುಕ್ತವಾಗಿ ಪ್ರಕಾಶಗೊಂಡಿರುವ ಈ ಗ್ರಂಥವು ಎಲ್ಲರೂ ಓದಿ ಅರ್ಥಮಾಡಿಕೊಳ್ಳತಕ್ಕಂತಹ ಅಮೂಲ್ಯಗ್ರಂಥ. ಸುಮಾರು ಕೌನ್ ಅಷ್ಟದಳ ೩೭೦ ಪುಟಗಳ ಈ ಪುಸ್ತಕವು ತನ್ನ ಆದ ರೀತಿಯಲ್ಲಿ ಅಸಮಾನವಾದುದೂ, ಅಸದೃಶವಾದುದೂ ಆಗಿದೆ. ಧಾರ್ಮಿಕ ಗ್ರಂಥಗಳನ್ನು

ಕನ್ನಡಕ್ಕೆ ನೀಡುವವರಿಗೆ ಇದೊಂದು ಮಾರ್ಗದರ್ಶಿಯಾಗಿದೆಯೆಂದರೆ ತಪ್ಪಾಗಲಾರದು.

ಗ್ರಂಥ ಚತುಷ್ಟಯಗಳನ್ನು ಪ್ರಾಜ್ಞರಾದ ಆಚಾರ್ಯರಿಂದ ಕಾಲಕ್ಷೇಪ ಮುಖೇನ ಬೋಧಿಸ್ಪಲಟ್ಟು ಅಭ್ಯಸಿಸುವುದೇ ಸಂಪ್ರದಾಯ ಹಾಗೂ ಸರಿಯಾದ ಮಾರ್ಗ. ಆದರೆ ಈಗಿನ ಕಾಲದಲ್ಲಿ ವೇದಾಂತ ವಿಚಾರಗಳಲ್ಲಿ ಆಸಕ್ತಿಯುಳ್ಳವರು ದೇಶದ ನಾನಾ ಭಾಗಗಳಲ್ಲಿ ಉದ್ಯೋಗನಿರತರಾಗಿದ್ದು, ಅಲ್ಲೆಲ್ಲ ಆಚಾರ್ಯರು ಸಿಗುವುದು ಕಷ್ಟ. ಅಂತಹ ಜ್ಞಾನ ಪಿಪಾಸುಗಳಿಗೆ ಸುಲಭವಾಗಿ ಅರ್ಥವಾಗುವ ಗ್ರಂಥಗಳ ಆವಶ್ಯಕತೆ ಇದೆ, ಮೂಲಗ್ರಂಥಗಳನ್ನು ಓದಿ ತಿಳಿಯಬೇಕೆನ್ನುವವರಿಗೆ ಆ ಗ್ರಂಥಗಳ ಭಾಷೆ ಅರ್ಥವಾಗುವುದು ಕಷ್ಟ. ಅಂತಹವರಿಗೆ ಆ ಗ್ರಂಥಗಳ ಆಡುಭಾಷೆಯಲ್ಲಿನ ಸರಳ ಅನುವಾದಗಳು ತುಂಬ ಉಪಯುಕ್ತ-ಎಂದು ಬ್ರಹ್ಮತಂತ್ರ ಪರಕಾಲ ಸ್ವಾಮಿಗಳು ಈ ಪುಸ್ತಕದ ಮುನ್ನುಡಿಯಲ್ಲಿ ತಿಳಿಸಿರುವುದು ಸೂಕ್ತವಾಗಿದೆ.

ಈ ಅಭಿಪ್ರಾಯಕ್ಕೆ ಅನುಗುಣವಾದ ಕಾರ್ಯವನ್ನು ಶ್ರೀ ಎಸ್. ರಂಗಾಚಾರ್ಯರವರು ಮಾಡಿದ್ದಾರೆ.

ಧಾರ್ಮಿಕ, ಸಾಹಿತ್ಯ ಕೃತಿಗಳನ್ನು ಅನುವಾದ ಮಾಡುವುದರಲ್ಲಿ ನಿಷ್ಣಾತರಾದ ಮಾನ್ಯ ಲೇಖಕರು ತುಂಬಾ ಸಮರ್ಥ ರೀತಿಯಲ್ಲಿ ರಹಸ್ಯತ್ರಯಸಾರವನ್ನು ಅನುವಾದ ಮಾಡಿದ್ದಾರೆ. ಇದಕ್ಕೆ ಬೋಧಪ್ರದವಾದ ಪೀಠಿಕೆಯನ್ನೂ ನೀಡಿದ್ದಾರೆ. ಇದು ಉಪಯುಕ್ತವಾದುದೂ ಹೌದು. ಇದರಲ್ಲಿ ಮುಮುಕ್ಷು ಎಂದರೆ ಯಾರು ? ಪರಮಪುರುಷಾರ್ಥ ಪರಿಜ್ಞಾನವೆಂದರೇನು ? ಮೋಕ್ಷಸಾಧನಗಳು ಯಾವುವು ? ಭಕ್ತಿ ಪ್ರಪತ್ತಿಗಳನ್ನು ಮಾಡುವಾಗ ಯಾವ ರೀತಿಯ ಅರಿವು ಮೂಡಬೇಕು ? ಶರಣಾಗತಿಯನ್ನು ಹೇಗೆ ಮಾಡಬೇಕು ಅದನ್ನು ಹೇಗೆ ಅನುಷ್ಠಾನ ಮಾಡಬೇಕು ? ಪ್ರಸನ್ನನಿಗೆ ಸಿತ್ಯಾನಂದ ಹೇಗೆನಿಸುತ್ತದೆ-ಎಂಬ ಪ್ರಶ್ನೆಗಳಿಗೆ ಸೂಕ್ತ ವಿವರಗಳನ್ನು ಸುಲಭ, ಸರಳ ಶೈಲಿಯಲ್ಲಿ ನೀಡುತ್ತಾ 'ರಹಸ್ಯತ್ರಯ ಸಾರ'ವು ಈ ನಿಟ್ಟಿನಲ್ಲಿ ಹೇಗೆ ಮಾರ್ಗದರ್ಶಿಯಾಗಬಲ್ಲುದು ಎಂಬುದರ ಸಂಪೂರ್ಣ ವಿವರಗಳನ್ನು ಲೇಖಕರು ನೀಡಿದ್ದಾರೆ.

ಇದರೊಂದಿಗೆ ಲೇಖಕರು ತಾವು ಯಾವ ರೀತಿಯಲ್ಲಿ ತಿಲ್ಲೈಸ್ಥಾನಂ ಸ್ವಾಮಿಗಳಿಂದ ರಹಸ್ಯತ್ರಯ ಸಾರವನ್ನು ಕಾಲಕ್ಷೇಪ ಮಾಡಿಕೊಂಡರು ಎಂಬುದನ್ನು

ವಿವರಿಸುತ್ತಾ, ಯಾವ ರೀತಿಯಲ್ಲಿ ಸ್ವಾಮಿಗಳು ತಾತ್ವಿಕ ವಿಷಯಗಳನ್ನು ಶಿಷ್ಯರಿಗೆ ಅರ್ಥವಾಗುವಂತೆ ವಿವರಿಸುತ್ತಿದ್ದರು ಎಂಬುದನ್ನು ಉದಾಹರಣೆಗಳ ಮೂಲಕ ನೀಡಿರುವುದು ಚೇತೋಹಾರಿಯಾಗಿದೆ. ನೀಡಿರುವ ಒಂದೆರಡು ಉದಾಹರಣೆಗಳೆ ನನ್ನನ್ನು ಆಕರ್ಷಿಸಿವೆ. ಹೀಗಿರುವಾಗ ಸ್ವತಃ ಅನುಭವಿಸಿದ ಲೇಖಕರ ಪರಿಸ್ಥಿತಿ ಹೇಗಿರಬೇಡ ! 'ಸ್ವಾಮಿಗಳು ಕಾಲಕ್ಷೇಪ ಅನುಸರಿಸುತ್ತಿದ್ದ ವೈಖರಿಯನ್ನು ಬರೆಯುತ್ತಾ ಹೋದರೆ ಅದೇ ಒಂದು ಪುಸ್ತಕವಾದೀತು' ಎಂದು ಲೇಖಕರು ಮುನ್ನುಡಿಯಲ್ಲಿ ತಿಳಿಸಿರುವುದನ್ನು ಓದಿದರೆ ಅಂತಹ ಒಂದು ಪುಸ್ತಕ ಬರಬಾರದಾಗಿತ್ತೆ ಎನಿಸುತ್ತದೆ. ಅವರೆ, ದುರ್ದೈವದಿಂದ ಮಾನ್ಯ ಲೇಖಕರು ಈಚೆಗಷ್ಟೆ ಪರಮಪದಿಸಿದುದು ಕನ್ನಡ ಧಾರ್ಮಿಕ ಸಾಹಿತ್ಯಕ್ಕಾದ ಮಹಾ ನಷ್ಟ.

ದೇಶಿಕರ ಗ್ರಂಥದ ಮೂಲದ ಅನುವಾದ ಮಾತ್ರ ಇಲ್ಲಿದೆ ಎಂದು ಲೇಖಕರು ಹೇಳಿದರೂ, ಅದಕ್ಕಿಂತ ಹೆಚ್ಚಿನದನ್ನೆ ಅವರು ನಮಗೆ ನೀಡಿದ್ದಾರೆ. ದೇಶಿಕರು ನೀಡಿರುವ ಆಧಾರಗಳಲ್ಲಿ ಕೆಲವನ್ನು ಉಳಿಸಿಕೊಂಡಿರುವ ಲೇಖಕರು, ಹೆಚ್ಚುವರಿಯಾದುದನ್ನು ಬಿಟ್ಟು ಬಿಟ್ಟಿದ್ದಾರೆ. ಇದರಲ್ಲಿ ಮೂಲಗ್ರಂಥವನ್ನು ಅಚ್ಚು ಮಾಡಿಸಿಲ್ಲ ಈಗಾಗಲೇ ಎರಡು ಅವತರಣಿಕೆಗಳು ಇರುವುದರಿಂದ, ಅದೂ ಕನ್ನಡ ಲಿಪಿಯಲ್ಲಿ, ಕೇವಲ ಕನ್ನಡ ಲಿಪಿಯಲ್ಲಿ, ಕೇವಲ ಕನ್ನಡ ಅನುವಾದವನ್ನು ನೀಡಲಾಗಿದೆ. ಈ ರೀತಿಯಲ್ಲಿ ೩೨ ಅಧಿಕಾರಗಳನ್ನೂ ಸುಲಭೀಕರಿಸಿ, ಪ್ರಕಟಿಸಿದ್ದಾರೆ ಲೇಖಕರು.

ಕ್ಲುಪ್ತವಾಗಿ, ತುಂಬಾ ಸುಲಭಶೈಲಿಯಲ್ಲಿ, ಹೊಸಬರಿಗೂ ಅರ್ಥವಾಗುವ ರೀತಿಯಲ್ಲಿ ಬರೆದಿರುವ ಲೇಖಕರು, ಅನೇಕ ಕ್ಲಿಷ್ಟ ವಿಷಯ ವಿವರಗಳನ್ನು ಸಂಕ್ಷಿಪ್ತಗೊಳಿಸಿದ್ದಾರೆ. ಪ್ರತಿ ಅಧಿಕಾರದ ವಿಷಯವನ್ನು ಸಂಕ್ಷಿಪ್ತವಾಗಿ, ಆಯಾ ಅಧಿಕಾರದ ಪ್ರಾರಂಭದಲ್ಲಿ ನೀಡಿ, ಓದುಗರ ಕಷ್ಟವನ್ನು ದೂರಮಾಡಿದ್ದಾರೆ. ಇದರೊಂದಿಗೆ ಪಾರಂಭದಲ್ಲಿ ದೇಶಿಕರೇ ರಚಿಸಿರುವ ಸಂಸ್ಕೃತ ಶ್ಲೋಕದಿಂದಲೂ ಇದು ತಿಳಿದು ಬರುತ್ತದೆ. ಇದರ ಕನ್ನಡ ಅನುವಾದ ನೀಡಿ, ಮೂಲ ಸಂಸ್ಕೃತ ಶ್ಲೋಕವನ್ನು ಅಡಿ ಟಿಪ್ಪಣಿಯಲ್ಲಿ ನೀಡಿದ್ದಾರೆ. ಇದೇ ರೀತಿಯಲ್ಲಿ ಪ್ರತಿ ಅಧಿಕಾರದ ಕೊನೆಯಲ್ಲಿ ಆಯಾ ಅಧಿಕಾರದಲ್ಲಿ ಹೇಳಿರುವುದನ್ನು ಸಂಸ್ಕೃತ ಶ್ಲೋಕರೂಪದಲ್ಲಿ ದೇಶಿಕರು ನೀಡಿರುವುದನ್ನು ಅನುವಾದ ಮಾಡಿದ್ದಾರೆ. ಇದೇ ರೀತಿಯಲ್ಲಿ ಅಧಿಕಾರಗಳ ಕೊನೆಯಲ್ಲಿ ಅಲ್ಲಲ್ಲಿನ ವಿಷಯವನ್ನು ಸಂಗ್ರಹಿಸಿ ಪಾಶುರ

ರೂಪವಾಗಿ ಕೊಟ್ಟಿರುವುದನ್ನೂ ಕನ್ನಡ ಮೂಲ ಪಾಠದಲ್ಲಿ ಕೊಡಲಾಗಿದೆ. ಇವಲ್ಲದೆ ಅಧಿಕಾರಗಳ ನಡುನಡುವೆ ಅಲ್ಲಲ್ಲಿನ ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳಲು ಅನುಕೂಲಿಸುವಂತೆ, ಸಂಸ್ಕೃತ ಕಾರಿಕೆಗಳಲ್ಲಿ ದೇಶಿಕರೇ ಸಂಗ್ರಹಿಸಿದ್ದಾರೆ. ಇವುಗಳನ್ನು ದಪ್ಪಕ್ಷರವಲ್ಲೂ, ಕನ್ನಡ ಅನುವಾದನನ್ನು ಅತಿ ಸಣ್ಣ ಅಕ್ಷರವಲ್ಲೂ ನೀಡಿದ್ದಾರೆ.

ಈ ರೀತಿಯಲ್ಲಿ ಈ ಅನುವಾದವು ಬಹಳಷ್ಟು ಉಪಯುಕ್ತವಾಗಲೂ ಲೇಖಕರು ಬಹಳಷ್ಟು ಶ್ರಮಿಸಿದ್ದಾರೆ. ಅವರದೇ ಮಾತಿನಲ್ಲಿ ತಿಳಿಸಿರುವಂತೆ, "ರಹಸ್ಯತ್ರಯಸಾರದಂತಹ ಆಧ್ಯಾತ್ಮಿಕ ಗ್ರಂಥವನ್ನು ಎಷ್ಟೇ ತಿಳಿಗನ್ನಡದಲ್ಲಿ ಅನುವಾದ ಮಾಡಬೇಕೆಂದು ಪ್ರಯತ್ನಿಸಿದರೂ ಸಾಂಪ್ರಾದಾಯಿಕ, ಪಾರಿಭಾಷಿಕ, ಸಂಸ್ಕೃತ ಕ್ಲಿಷ್ಟ ಪದಗಳು ಬಂದೇ ಬರುತ್ತವೆ. ಅಂತಹವುಗಳಿಗೆ ಶಬ್ದಕೋಶದಲ್ಲಿ ವಿವರಣೆ ನೀಡಲಾಗಿದೆ' ಎಂದಿರುವ ಲೇಖಕರು, ತುಂಬಾ ಶ್ರಮವಹಿಸಿ ಇಪ್ಪತ್ತು ಪುಟಗಳ ಅಮೂಲ್ಯ ಶಬ್ದಕೋಶವನ್ನು ನೀಡಿದ್ದಾರೆ. ಇದು ತುಂಬಾ ಉಪಯುಕ್ತ.

ಈ ಪುಸ್ತಕವನ್ನು ಓದುವ ರೀತಿಯನ್ನೂ ಲೇಖಕರು ಈ ರೀತಿ ತಿಳಿಸಿದ್ದಾರೆ 'ಸಾಮಾನ್ಯರಿಗೆ ಈ ಗ್ರಂಥ ಅರ್ಥವಾಗುವುದು ಕಷ್ಟ, ಇಂತಹವನ್ನು ಪುನಃ ಪುನಃ ಓದಿದರೆ ಸ್ವಲ್ಪವಾದರೂ ತಿಳಿಯುತ್ತದೆ. ಹಾಗೆ ತಿಳಿಯುವಷ್ಟನ್ನು ತಿಳಿದು ಮುಂದೆ ಓದಬಹುದು. ಆನುಪೂರ್ವಿಗೆ ತೊಂದರೆಯಾಗದು'.

ಇದರಂತೆ ನಡೆದರೆ ಓದುಗರು ಲಾಭ ಪಡೆಯುವುದರಲ್ಲಿ ಅನುಮಾನವೇ ಇಲ್ಲ. ಇಂತಹ ಕನ್ನಡ ಕೃತಿಯನ್ನು ಪಡೆದ ಕನ್ನಡಿಗರೇ ಧನ್ಯರು.

ಶ್ರೀ ವೈಷ್ಣವ ಸಿದ್ಧಾಂತದ ಸಾರ ಸರ್ವಸ್ವವನ್ನು ಒಳಗೊಂಡಿರುವ 'ರಹಸ್ಯತ್ರಯಸಾರ' ಪ್ರಪತ್ತಿಯು ಸಮರ್ಥವಾದ ಮೋಕ್ಷೋಪಾಯ; ಈ ಸಿದ್ಧಾಂತವನ್ನು ಪ್ರಕಾಶ ಪಡಿಸುವ ರಹಸ್ಯಗ್ರಂಥವೆಂದು ತೋರಿಸಿ ಕೊಟ್ಟಿದೆ; ಈ ಪ್ರತಿಪಾದನೆಗೆ ಸ್ಮೃತಿ, ಇತಿಹಾಸ, ಪುರಾಣಗಳು, ಆಳ್ವಾರರ ಶ್ರೀಸೂಕ್ತಿಗಳ ಪ್ರಮಾಣಗಳ ಮುಖಾಂತರ ಉಭಯವೇದಗಳ ಆಧಾರವನ್ನು ಪ್ರಮಾಣೀಕರಿಸುವಿಕೆ; ಪ್ರಸ್ಥಾನತ್ರಯಗಳನ್ನು ಅಧಿಕರಿಸುವುದರಲ್ಲಿ ಸರ್ವರಿಗೂ ಅಧಿಕಾರ; ಪ್ರಪತ್ತಿಯ ಸ್ವರೂಪ, ಪ್ರಕಾರ, ಪರಿಕಾರ ಅನುಷ್ಠಾನಕ್ರಮ; ಪ್ರಪನ್ನನ ಲಕ್ಷಣ, ಅವನ ಉತ್ತರ ಕೃತ್ಯಸ್ವರೂಪ ಇವುಗಳನ್ನು ಕುರಿತ ಸುಸ್ಪಷ್ಟ ನಿರೂಪಣೆ; ಪ್ರಪತ್ತಿ

ಸಿದ್ಧಾಂತದ ಬಗೆಗಿನ ಅಭಿಪ್ರಾಯಗಳನ್ನು ಪರಿಶೀಲಿಸಿ, ಸಂಗ್ರಹಿಸಿ, ಪ್ರಮಾಣ ಪೂರ್ವಕವಾಗಿ ನಿಷ್ಕರ್ಷಿಸಿ ಪ್ರತಿಪಾದಿಸಿರುವಿಕೆಗಳು– ಇತ್ಯಾದಿಗಳನ್ನು ಮೇಲೆ ತಿಳಿಸಿರುವ ಕನ್ನಡದ ಪ್ರತಿರೂಪಗಳು ಅರಿಯಲು ಸಹಾಯಕವಾಗುವುದರಲ್ಲಿ ಸಂದೇಹವೇ ಇಲ್ಲ.

ಇಂತಹ ಅಮೂಲ್ಯ ಕೃತಿಗಳು ಕನ್ನಡದಲ್ಲಿ ಇರುವುದೇ ಕನ್ನಡ ಆಸ್ತಿಕ ಮಹನೀಯರ ಪುಣ್ಯವಿಶೇಷ. ಆದುದರಿಂದ ಇವುಗಳ ಅಧ್ಯಯನ ಪುಣ್ಯಕರ ವಾದದು.

## ತಿರುವಾಯ್ಮೊಳಿಯ ಹಿರಿಮೆ

ಆಳ್ವಾರರುಗಳಲ್ಲೆಲ್ಲಾ ಅತ್ಯಂತ ವೈಭವವನ್ನು ಹೊಂದಿದವರೆಂದರೆ ನಮ್ಮಾಳ್ವಾರ್‌ರವರು. ಆಳ್ವಾರರ ಸರಣಿಯಲ್ಲಿ ಇವರು ಹನ್ನೊಂದನೆಯವರಾದರೂ, ಕೊನೆಯವರೆಂದೇ ಖ್ಯಾತಿ ಪಡೆದವರು. ಇವರ ನಂತರ ಇವರ ಶಿಷ್ಯರಾದ ಮಧುರಕವಿಯವರು ಬಂದು, ಹನ್ನೆರಡನೆಯ ಆಳ್ವಾರರಾದರೂ, ನಮ್ಮಾಳ್ವಾರ್ ರವರೆ ಆಳ್ವಾರರ ಪರಂಪರೆಯಲ್ಲಿ ಕಟ್ಟ ಕಡೆಯವರಾದ ಪ್ರಮುಖ ಆಳ್ವಾರರಾಗಿ ರುತ್ತಾರೆ. ಅವರ ಕಾಲ ಕ್ರಿ.ಶ. ಸುಮಾರು ೭೫೮. ಇವರು ಬದುಕಿದ್ದುದು ಕೇವಲ ೩೫ ವರ್ಷಗಳ ಕಾಲ.

ಪಾಂಡ್ಯ ದೇಶದ ತಾಮ್ರಪರ್ಣಿ ತೀರದಲ್ಲಿನ 'ತಿರುಕ್ಕುರುಹೂರ್ (ತಿರುನ ಹರಿ ಎಂಬ ಊರಿನಲ್ಲಿ ವೆಲ್ಲಾಳ ವರ್ಣದಲ್ಲಿ ಜನಿಸಿದ ಇವರು 'ಪ್ರಸನ್ನಜನ ಕೂಟಸ್ಥರೆಂಬ ಬಿರುದಿಗೆ ಪಾತ್ರರಾದವರು. ಇವರ ತಂದೆ ತಾಯಿಗಳು ಭಗ ವದ್ಭಕ್ತರು. ಈ ಕಾರಣ ಅವರು ಜನಿಸಿದ ಶಿಶುವನ್ನು ದೇವಮಂದಿರಕ್ಕೆ ಕರೆ ದೊಯ್ದರು. ಅಲ್ಲಿ ಶಿಶುವು ಕಣ್ತೆರೆದು ದೇವರನ್ನು ಸಂದರ್ಶಿಸಿತು. ನಂತರ ಜನ್ಮತಃ ಯೋಗಿಯಾದ ಆ ಶಿಶುವು ಅಂಬೆಗಾಲಿಟ್ಟು ತೆವಳಿ ಹತ್ತಿರದಲ್ಲಿನ ಹುಣಸೆ ಮರದಡಿಯಲ್ಲಿ ಕುಳಿತು ಬಿಟ್ಟಿತು. ಅಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತಾ ಕಣ್ಮುಚ್ಚಿ, ಯೋಗ ತಪಸ್ಸಿನಲ್ಲಿ ಇವರು ನಿರತರಾದರು. ಇವರನ್ನು ಅಜ್ಞಾನಕ್ಕೆ ಒಳಪಡಿಸುವ 'ಶಠ' ಎಂಬ ವಾಯುವು ಇವರನ್ನು ಆಕ್ರಮಿಸಲು ಬಂದಾಗ, ಇವರು ಅದನ್ನು ಹೂಂಕಾರದಿಂದ ಓಡಿಸಿದರಂತೆ, ಅದರಿಂದಲೇ ಇವರಿಗೆ 'ಶಠ ಕೋಪ' ಎಂಬ ಹೆಸರು ಬಂದಿತು. ಅನ್ನಾಹಾರಗಳನ್ನು ಸೇವಿಸದೇ ಇದ್ದರೂನೂ,

ಹದಿನಾರು ವರ್ಷಗಳ ಕಾಲ ವಯಸ್ಸಿಗೆ ತಕ್ಕ ಹಾಗೆ ಬೆಳವಣಿಗೆ ಇದ್ದಿತು.

'ಮಾರನ್' ಎಂದೇ ಇವರು ಪ್ರಖ್ಯಾತರಾದವರು. ಈ ವಿಶೇಷವನ್ನು ತಿಳಿದು ಮಧುರಕವಿಯಾಳ್ವಾರ್‌ರವರು ಇವರನ್ನು ಸಂದರ್ಶಿಸಲು ಬಂದು, ಇವರು ಕಣ್ತೆರೆದ ನಂತರ,

ಶೆತ್ತದಿನ್ ವಯಿತ್ತಲ್
ಶಿರಿಯದು ಪಿರಂದಾಲ್
ಎತ್ತೈ ತಿನ್ರು' ಎಂಗೇ ಕಿಡಿಕ್ಕುಂ?"
ಎಂದು ಕೇಳಲು,
"ಅತ್ತೆ ತಿನ್ರು ಅಂಗೇ ಕಿಡಕ್ಕುಂ"
ಎಂಬ ಉತ್ತರ ಬಂದಿತು.

ಈ ಉತ್ತರದ ಮಹತ್ವವನ್ನು ಅರಿತ ಮಧುರಕವಿಗಳು ಕೂಡಲೇ ನಮ್ಮಾಳ್ವಾರ್‌ರವರ ಪಾದಗಳಿಗೆ ವಂದಿಸಿ, ಅವರನ್ನು ತಮ್ಮ ಗುರುಗಳನ್ನಾಗಿ ಸ್ವೀಕರಿಸಿದರು. ತದನಂತರದಲ್ಲಿ ಅವರಿಂದ ಉಪದೇಶಗಳನ್ನು ಪಡೆದು, ಇತರರೂ ಅದರ ಸವಿಯನ್ನು ಪಡೆಯುವಂತೆ ಮಾಡಿದರು. ಹೀಗೆ ಆಳ್ವಾರ್‌ರವರ ಬಾಯಿಂದ ಹೊರಬಿದ್ದ ಉಪದೇಶಗಳನ್ನು ಸಂಗ್ರಹಿಸಿ, ಈ ಲೋಕಕ್ಕೆ ನೀಡಿದ್ದೇ ಅಲ್ಲದೆ, ಮಧುರಕವಿಗಳು ಅವರನ್ನು ತಮ್ಮ ಆಚಾರ್ಯರನ್ನಾಗಿ ಸ್ವೀಕರಿಸಿದರು. ಈ ರೀತಿಯಲ್ಲಿ ಆಚಾರ್ಯ ಪರಂಪರೆಗೆ ಮಧುರ ಕವಿಗಳು ನಾಂದಿಯನ್ನು ಹಾಡಿದರು. ಅಂತೆಯೇ ನಮ್ಮಾಳ್ವಾರ್‌ರವರು ಮಧುರ ಕವಿಗಳಿಗೆ ತತ್ವಹಿತ ಪುರುಷಾರ್ಥಗಳನ್ನು ಉಪದೇಶಿಸಿ, 'ಪ್ರಥಮ ಆಚಾರ್ಯ'ರೆಂಬ ಬಿರುದನ್ನು ಸಾರ್ಥಕಪಡಿಸಿಕೊಂಡರು.

ನಮ್ಮಾಳ್ವಾರ್‌ರವರು ತಿರುವಿರುತ್ತಂ, ತಿರುವಾಶಿರಿಯಂ ಪೆರಿಯ ತಿರುವಂದಾದಿ ಹಾಗೂ ತಿರುವಾಯ್ಮೊಳಿ ಎನ್ನುವ ನಾಲ್ಕು ಕೃತಿಗಳನ್ನು ರಚಿಸಿದರು. ವೇದಗಳು, ಉಪನಿಷತ್ತು, ಗೀತೆ ಮೊದಲಾದವುಗಳ ಸಾರಸರ್ವಸ್ವವನ್ನು ಈ ನಾಲ್ಕೂ ಕೃತಿಗಳಲ್ಲಿ ತುಂಬಿಸಿದ್ದಾರೆ. ತಿರುವಿರತಂ ಋಗ್ವೇದದ ಸಾರವೆಂದೂ, ತಿರುವಾಶಿರಿಯಂ ಯಜುರ್ವೇದದ ಸಾರವೆಂದೂ, ಪೆರಿಯ ತಿರುವಂದಾದಿ ಅಥರ್ವವೇದದ ಸಾರವೆಂದೂ, ತಿರುವಾಯ್ಮೊಳಿಯು ಸಕಲ ವೇದಾಂತಗಳ ಸಾರವೆಂದೂ ಹೇಳಲಾಗುತ್ತದೆ.

ಆನರಲ್ಲಿಯೂ 'ತಿರುವಾಯ್ಮೊಳಿ'ಯು ಚತುರ್ವೇದಗಳ ಸಾರಾರ್ಥವನ್ನೂ ಒಳಗೊಂಡಿರುವುದೇ ಅಲ್ಲದೆ ಭಗವತ್ ಸ್ವರೂಪ, ಜೀವಸ್ವರೂಪ ಮೋಕ್ಷೋಪಾಯ ಸ್ವರೂಪ, ಫಲಸ್ವರೂಪ, ವಿರೋಧಿ ಸ್ವರೂಪ - ಎನ್ನುವ ಅರ್ಥ ಪಂಚಕಗಳನ್ನು ಈ ಮಹಾನ್ ಕೃತಿಯು ಪ್ರತಿಪಾದಿಸುತ್ತದೆ. ನಾಲಾಯಿರ ದಿವ್ಯ ಪ್ರಬಂಧ ಗಳಿಗೇ ಈ ಮಹತ್ ಕೃತಿಯು ಕಿರೀಟ ಪ್ರಾಯವಾಗಿದೆ ಎನ್ನುವುದರಲ್ಲಿ ಯಾವುದೇ ಅನುಮಾನವೂ ಇಲ್ಲ. ಆದರಿಂದಲೇ ಈ ಗ್ರಂಥವು 'ದ್ರಾವಿಡವೇದ ಸಾಗರ' ಎಂಬ ಹೆಸರನ್ನು ಪಡೆದಿದೆ. ಇದು ಅನ್ವರ್ಥವೂ ಹೌದು.

ತಮ್ಮಲ್ಲಿನ ದಿವ್ಯಜ್ಞಾನದಿಂದ ಪಡೆದ ಭಗವತ್ ಸಾಕ್ಷಾತ್ಕಾರವನ್ನು ಆಳ್ವಾರ್‌ರವರು ಈ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಈ ಗ್ರಂಥದಲ್ಲಿನ ೧೧೦೨ ಪಾಶುರಗಳು ಹತ್ತು ಪತ್ತು (ಶತಕ) ಗಳಾಗಿ ವಿಭಾಗಿಸಲ್ಪಟ್ಟಿದೆ. ಪ್ರತಿಯೊಂದು ಪತ್ತಿನಲ್ಲಿಯೂ ಹತ್ತು ದಶಕಗಳಿವೆ.

ಮೊದಲ ಶತಕದಲ್ಲಿ ಭಗವಂತನು ಮೋಕ್ಷೋಪಾಯನೆಂದೂ, ೨ನೇ ಶತಕ ವಿಶಿಷ್ಟ ಭೋಗ್ಯತೆಯ ಕಾರಣ ಆ ಭಗವಂತನು ಪರಮ ಪ್ರಾಪ್ಯನೆಂದೂ, ೩ನೇ ಶತಕದಲ್ಲಿ ಆ ಭಗವಂತನು ಸಾಧನನೂ, ಫಲವೂ ಆಗಿರುವನೆಂದೂ, ೪ನೇ ಶತಕದಲ್ಲಿ ಭಗವಂತನ ವಿನಹ ಬೇರೆ ಯಾವುದೂ ಪ್ರಾಪ್ಯವಾಗಲು ಅರ್ಹ ವಲ್ಲವೆಂದೂ, ಉಳಿದ ಶತಕಗಳಲ್ಲಿ ಭಗವಂತನ ಅನನ್ಯೋಪಾಯತ್ವವನ್ನೂ ಸಮರ್ಥಿಸಲಾಗಿದೆ. ಹೀಗೆ ಪ್ರತಿಯೊಂದು ದಶಕವೂ, ಒಂದೊಂದು ಪಾಶುರವೂ ಅವನ ಅನಂತ ಕಲ್ಯಾಣಗುಣಗಳಲ್ಲಿ ಒಂದೊಂದನ್ನು ಕೊಂಡಾಡುತ್ತವೆ. ಆ ಕಲ್ಯಾಣಗುಣಗಳನ್ನು ಈ ಸಹಸ್ರ ಗಾಥೆಗಳಲ್ಲಿ ಸಾವಿರ ರೀತಿಗಳಲ್ಲಿ ಕೊಂಡಾಡ ಲಾಗಿದೆ.

ಈ ಶತಕಗಳಲ್ಲಿ ಒಂದರಿಂದ ಹತ್ತರವರೆಗೆ ಕ್ರಮವಾಗಿ ೧) ಭಗವಂತನ ಸೇವ್ಯತ್ವ, ೨) ಅವನ ಭೋಗತ್ವ, ೩) ಅವನ ದಿವ್ಯ ಮಂಗಳ ವಿಗ್ರಹತ್ವ, ೪) ಅವನ ಸರ್ವ ಭೋಗ್ಯಾಧಿಕತ್ವ, ೫) ಪುರುಷಾರ್ಥಕ್ಕೂ ಅದನ್ನು ಪಡೆಯುವುದಕ್ಕೆ ಕಾರಣನಾಗಿರುವುದನ್ನೂ, ೬) ಅವನು ಪ್ರಪನ್ನರಿಗೆ ಸುಲಭ ನಾಗಿರುವುದನ್ನೂ, ೭) ಆಶ್ರಿತರ ಅನಿಷ್ಟ ನಿವರ್ತಕತ್ವವನ್ನೂ, ೮) ಆಶ್ರಿತರ ಇಷ್ಟಕ್ಕೆ ಅನುಸಾರ ನಡೆಯುವುದನ್ನೂ, ೯) ಸಹಜಸುಹೃತ್ವವನ್ನೂ, ೧೦) ಸತ್ಪದವೀ ಸಹಾಯತ್ವವನ್ನೂ– ಆಳ್ವಾರರು ನಿರೂಪಿಸಿದ್ದಾರೆ ಎಂದು

ವೇದಾಂತ ದೇಶಿಕರು ಭಗವದ್ಗುಣಗಳನ್ನು ಸಂಗ್ರಹವಾಗಿ ವಿವರಿಸಿದ್ದಾರೆ.

ತಿರುವಾಯ್ಮೊಳಿಯ ಶತಕಗಳ ತಾತ್ಪರ್ಯ ಸಂಗ್ರಹವನ್ನು ಪನ್ನಿರುಪ್ಪಡಿ ಹಾಗೂ, ಮುಪ್ಪತ್ತಾರಾಯಿರಪ್ಪಡಿಗಳಲ್ಲಿ ಈ ರೀತಿಯಲ್ಲಿ ವಿವರಿಸಿದೆ.

| ಶತಕ | ಪನ್ನೀರಾಯಿರಪ್ಪಡಿ | ಮುಪ್ಪತಾರಾಯಿರಪ್ಪಡಿ |
|---|---|---|
| 1ನೇ ಶತಕ | ಭಗವಂತನ ರಕ್ಷಕತ್ವ | ಭಗವತ್ ಕೈಂಕರ್ಯವೇ ಪುರುಷಾರ್ಥ |
| 2ನೇ ಶತಕ | ಭೋಗ್ಯತ್ವ | ತದೇಕ ಭೋಗ್ಯತ್ವವೇ ಪುರುಷಾರ್ಥ |
| 3ನೇ ಶತಕ | ತದೇಕಾನುಭವ | ಅರ್ಚಾವತಾರ ವಿಷಯದಲ್ಲಿ ವಾಚಿಕ ಕೈಂಕರ್ಯ |
| 4ನೇ ಶತಕ | ತದೇಕ ಪ್ರಿಯತ್ವ | ಭಗವಚ್ಚರಣಯುಗಳವೆ ಶರಣು |
| 5ನೇ ಶತಕ | ನಿರಪಾಯೋಪಾಯತ್ವ | ಭಗವಂತನ ಸಿದ್ಧೋಪಾಯತ್ವ |
| 6ನೇ ಶತಕ | ಉಪಾಯವರಣ ಪ್ರಕಾರ | ಸಿದ್ಧೋಪಾಯ ಸ್ವೀಕಾರ ಕ್ರಮ ಲಕ್ಷ್ಮೀಪುರುಷಾಕಾರ ಪೂರ್ವಕವಾದ ಶರಣವರಣ |
| 7ನೇ ಶತಕ | ವಿರೋಧಿಸ್ವರೂಪ ವರ್ಣನ | ಬಾಹ್ಯ ಸಂಶ್ಲೇಷಾವೇಕ್ಷೆ |
| 8ನೇ ಶತಕ | ವಿರೋಧಿ ನಿವೃತ್ತಿ ಪ್ರಕಾರ | ಅಹಂಕಾರ, ಮಮಕಾರತ್ಯಾಗ |
| 9ನೇ ಶತಕ | ಫಲಸ್ವರೂಪ ವರ್ಣನ | ಭಗವಂತನ ಸೌಶೀಲ್ಯಾದಿ ಗುಣಾನುಭವ |
| 10ನೇ ಶತಕ | ಫಲಪ್ರಾಪ್ತಿ | ಅರ್ಚಿರಾದಿಗಳ ಮುಖಾಂತರ ಮೋಕ್ಷ ಪ್ರಾಪ್ತಿ |

ದರ್ಶನ ಸ್ಥಾಪನಾಚಾರ್ಯರುಗಳಾದ ಯಾಮುನ, ರಾಮಾನುಜ ಇತ್ಯಾದಿಯವರುಗಳು ಶ್ರುತಿ, ಸ್ಮೃತಿಗಳ ಅರ್ಥಗಳನ್ನು ತೀರ್ಮಾನಿಸುವಲ್ಲಿ ನಮ್ಮಾಳ್ವಾರ್‌ರವರ ಶ್ರೀ ಸೂಕ್ತಿಗಳಿಂದ ಸ್ಫೂರ್ತಿಯನ್ನು ಪಡೆದಿದ್ದಾರೆ.

ಶ್ರೀಮನ್ನಾರಾಯಣನೇ ಪರತತ್ತ್ವ. ಪರಮಾತ್ಮನಿಗೂ, ಜೀವಾತ್ಮರಿಗೂ ಇರುವ ಭೇದವು ಸತ್ಯವಾದುದು. ಆ ಭಗವಂತನನ್ನು ಪಡೆಯಲು, ಅವನನ್ನು ಪ್ರಸನ್ನಗೊಳಿಸಲು ಭಕ್ತಿ ಪ್ರಪತ್ತಿಗಳೇ ಪುರುಷಾರ್ಥಗಳು. ಸಕಲ ಕಲ್ಯಾಣ ಗುಣ ಸಂಪೂರ್ಣ ಪರಮ ಪುರುಷಾರ್ಥ–ಎಂಬುದೆಲ್ಲವನ್ನೂ ತಿರುವಾಯ್ಮೊಳಿ ಗ್ರಂಥವು ಪ್ರತಿಪಾದಿಸುತ್ತದೆ. ಪವಿತ್ರವಾದ ದ್ವಯ ಮಂತ್ರದ ಅರ್ಥ ವಿಶೇಷ ಗಳನ್ನೂ ಇದು ಒಳಗೊಂಡಿದೆ. ಅದರಿಂದ ಈ ಪ್ರಬಂಧವನ್ನು ನಿತ್ಯವೂ, ಸಕಲರೂ ಅನುಸಂಧಾನ ಮಾಡಬೇಕಾದುದು ಅವಶ್ಯಕ.

ಇಂತಹ ದಿವ್ಯ ಪ್ರಬಂಧವು ತಮಿಳಿನಲ್ಲಿಯೇ ಇದ್ದರೂ. ಸುಮಾರು ಹನ್ನೆರಡು ಶತಮಾನಗಳಿಂದಲೂ ಅನೇಕ ಬುದ್ಧಿಜೀವಿಗಳ ಮನಸ್ಸು, ಹೃದಯ ಗಳನ್ನು ಗೆದ್ದಿದೆ.

| ವ್ಯಾಖ್ಯಾನ | ಗ್ರಂಥಗಳು | ಕರ್ತೃ |
|---|---|---|
| 1. ಆರಾಯಿರಪ್ಪಡಿ | 6,000 ಗ್ರಂಥಗಳು | ತಿರುಕ್ಕುರುಹೈಪ್ಪಿರಾನ್ ಪಿಳ್ಳಾನ್ |
| 2. ಒನ್ಬದಿ ನಾಯಿರಪ್ಪಡಿ | 9,000 ಗ್ರಂಥಗಳು | ನಂಜೀಯರ್ |
| 3. ಪನ್ನೀರಾಯಿರಪ್ಪಡಿ | 12,000 ಗ್ರಂಥಗಳು | ಅಳಹಿಯ ಮಣವಾಳ ಜೀಯರ್ |
| 4. ಇರುಪ್ಪತ್ತು ನಾಲಾಯಿರಪ್ಪಡಿ | 24,000 ಗ್ರಂಥಗಳು | ಪೆರಿಯವಾಚ್ಚಾನ್ ಪಿಳ್ಳೈ |
| 5. ಮುಪ್ಪತ್ತಾರಾಯಿರಪ್ಪಡಿ (ಈಡು) | 36,000 ಗ್ರಂಥಗಳು | ವಡಕ್ಕುತ್ತಿರುವೀಧಿ ಪಿಳ್ಳೈ |

ಇದರ ಮುಖಾಂತರ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸ ಲಾಗಿದೆ. ಕ್ಲಿಷ್ಟವಾದದ್ದರಿಂದ ಅಲ್ಲದೆ ಅನೇಕ ವ್ಯಾಖ್ಯಾನಗಳೂ ಹುಟ್ಟಿ ಕೊಂಡಿವೆ. ಅವುಗಳಲ್ಲಿ ಮುಖ್ಯವಾದುವು ಐದು. ಇವನ್ನು ಪಂಚ ಮಹಾ ವ್ಯಾಖ್ಯಾನಗಳೆಂದು ತಿಳಿಸಲಾಗಿದೆ. ಇವು ಮಣಿಪ್ರವಾಳ ಶೈಲಿಯಲ್ಲಿವೆ.

ಆಚಾರ್ಯ ರಾಮಾನುಜರ ನಂತರವೇ ಈ ವ್ಯಾಖ್ಯಾನಗಳು ಆವಿರ್ಭವಿ- ಸಿರುವುದು ಒಂದು ವಿಶೇಷ. ಅದುವರೆವಿಗೂ ಜನಸಾಮಾನ್ಯರನ್ನು ಆಷ್ಟಾಗಿ

ತಲುಪದೆ ಪಂಡಿತ ಮಂಡಳಿಯು ಸಡುವೆಯೇ ಸಂಚರಿಸುತ್ತಿದ್ದ ತಿರುವಾಯ್ಮೊಳಿ ಗ್ರಂಥವು ಎಲ್ಲರೂ ಅರ್ಥ ಮಾಡಿಕೊಳ್ಳಲು ಅನುಕೂಲವಾಗುವಂತೆ, ಅದರ ಬಗ್ಗೆ ಆಚಾರ್ಯರು ಪ್ರವಚನಗಳನ್ನು ನೀಡುತ್ತಿದ್ದುದು ಸಾಮಾನ್ಯ ವಿಷಯ. ಆದರೆ ಈ ವ್ಯಾಖ್ಯಾನವು ಆ ಪಟ್ಟದಲ್ಲಿ ನಿಲ್ಲದೆ ಮುಂದಿನ ಪೀಳಿಗೆಗೂ ಉಳಿಯಲಿ ಎನ್ನುವ ಭಾವನೆಯಿಂದ ಆಚಾರ್ಯರು ತಮ್ಮ ನೇರ ಶಿಷ್ಯರಾದ ತಿರುಕ್ಕುರು ಹೈಪ್ಪಿರಾನ್ ಪಿಳ್ಳಾನ್‌ರವರಿಗೆ ಆ ವ್ಯಾಖ್ಯಾನಗಳನ್ನು ಗ್ರಂಥಸ್ಥ ಮಾಡುವಂತೆ ಆಜ್ಞಾಪಿಸಿದರು. ಪರಿಣಾಮವಾಗಿ ಪಿಳ್ಳಾನ್‌ರವರು ಪದ್ಯ ತಾತ್ಪರ್ಯ ರೂಪದಲ್ಲಿ ವ್ಯಾಖ್ಯಾನವನ್ನು ರಚಿಸಿದರು. ಸ್ವತಃ ಆಚಾರ್ಯ ರಾಮಾನುಜರೇ ಇದನ್ನು ಪರಾಮರ್ಶಿಸಿ, ಪರ್ಯಾವೇಕ್ಷಿಸಿ, ತಿರುವಾಯ್ಮೊಳಿಯ ಪಾರಾಯಣ ಕಾಲದಲ್ಲಿ, ಪ್ರವಚನ ಸಮಯದಲ್ಲಿ ಉಪಯೋಗಿಸಲು ಅನುಮತಿ ನೀಡಿದರು. ಹೀಗಾಗಿ ಈ ವ್ಯಾಖ್ಯಾನಕ್ಕೆ ಅತ್ಯಂತ ಪವಿತ್ರವಾದ ಸ್ಥಾನವುಂಟು. ಹಾಗೂ ಮುಂದಿನ ವ್ಯಾಖ್ಯಾನಗಳಿಗೂ ಇದು ಮಾರ್ಗದರ್ಶಕವಾಯಿತು.

ಒಂಬತ್ತುನಾಯಿರಪ್ಪಡಿ ಹಾಗೂ ಪನ್ನಿರಾಯಿರಪ್ಪಡಿಗಳು ಪ್ರತಿಪ್ರದಾರ್ಥ ವಿವರಣ ರೂಪದಲ್ಲಿ ಕಾಣಿಸಿಕೊಂಡಿವೆ ಇವು ಭಾಷಾ ಉತ್ಪತ್ತಿಗೂ, ತಾತ್ಪರ್ಯ ಜ್ಞಾನಕ್ಕೂ ಅತ್ಯಂತ ಉಪಯೋಗಕಾರಿಯಾಗಿವೆ.

ಉಳಿದೆರಡು ವ್ಯಾಖ್ಯಾನಗಳಿಗೂ ನಂಪಿಳ್ಳೆಯವರ ಪ್ರವಚನಗಳೇ ಆಧಾರ. ಅವರ ನಿಯಮನದಿಂದಲೇ ಎರಡೂ ರಚಿಸಲ್ಪಟ್ಟಿವೆ. ಅವರು ನೀಡುತ್ತಿದ್ದ ಉಪನ್ಯಾಸಗಳ ಸಾರಾಂಶವನ್ನು ಅವರ ಶಿಷ್ಯರಾದ ಪೆರಿಯ ವಾಚ್ಚಾನ್ ಪಿಳ್ಳೈಯವರು ಸಂಗ್ರಹಿಸಿದರು. ಪದ್ಯ ತಾತ್ಪರ್ಯ ವಿವರಣೆ, ಪದ್ಯಗಳಿಗೆ ಸಂಗತಿ, ದಶಕಗಳಿಗೆ ಸಂಗತಿ, ಶತಕಗಳಿಗೆ ಸಂಗತಿ–ಇತ್ಯಾದಿಗಳಲ್ಲಿ ಚೆನ್ನಾಗಿ ಪ್ರಕಾಶಿತವಾಗಿವೆ.

ಪೆರಿಯ ವಾಚ್ಚಾನ್‌ರವರಂತೆ, ನಂಪಿಳ್ಳೈಯವರ ಮತ್ತೊಬ್ಬ ಶಿಷ್ಯರಾದ ವಡಕ್ಕುತ್ತಿರುವೀಧಿ ಪಿಳ್ಳೈರವರು ತಮ್ಮ ಗುರುಗಳ ಉಪನ್ಯಾಸ ವಿಷಯವನ್ನು ಮಣಿಪ್ರವಾಳದಲ್ಲಿ ಅನುವಾದ ಮಾಡಿ ರಚಿಸಿದರು. ಇದು ಸವಿಸ್ತಾರವಾಗಿ ಅತ್ಯಂತ ಸ್ವಾರಸ್ಯವಾಗಿ ತಮ್ಮ ಗುರುಗಳ ಹೇಳಿಕೆಯಂತೆಯೇ ಪ್ರತಿದಿನ ಕಾಲ-ಕ್ಷೇಪಾನಂತರ ಬರೆಯಲ್ಪಡುತ್ತಿತ್ತು. ಇದಕ್ಕೆ ನಂಪಿಳ್ಳೈಯವರ ಅನುಮತಿ ಇರಲಿಲ್ಲ. ಕೇವಲ ತಾವು ಚಿಂತನೆ ಮಾಡಿಕೊಳ್ಳುವುದಕ್ಕೋಸ್ಕರ ಬರೆಯ-

ಲ್ಪಟ್ಟಿದ್ದು. ಇದು ಗುರುಗಳಿಗೆ ಹೇಗೋ ಗೊತ್ತಾಯಿತು. ಅವರು ತಮ್ಮ ಶಿಷ್ಯರಿಗೆ ಅವರು ಬರೆದಿರುವುದನ್ನು ತಂದು ಒಪ್ಪಿಸುವಂತೆ ಆಜ್ಞಾಪಿಸಿದರು. ಅದರಂತೆಯೇ ವಡಕ್ಕುತ್ತಿರುವೀಧಿಯವರು ತಂದು ಒಪ್ಪಿಸಿದರು. ನಂಪಿಳ್ಳೈಯವರು ಅದನ್ನು ಅಮೂಲಾಗ್ರವಾಗಿ ಓದಿ, ಪರಿಶೀಲಿಸಿದರು. ಅದು ತಮ್ಮ ಉಪನ್ಯಾಸಗಳಂತೆಯೇ ಸ್ವಾರಸ್ಯಪೂರ್ಣವಾಗಿ, ಅರ್ಥಗರ್ಭಿತವಾಗಿದ್ದುದನ್ನು ಕಂಡು ಸಂತೋಷಪಟ್ಟರು. ಅಂತರ್ಯದಲ್ಲಿ ಅವರು ಸಂತೋಷಪಟ್ಟರೂ, ಅದನ್ನು ತೋರಗೊಡದೆ, ಆಕ್ಷೇಪಿಸುವ ರೀತಿಯಲ್ಲಿ,

"ನನ್ನ ಅನುಮತಿಯಿಲ್ಲದೆ ಹೇಗೆ ಇದನ್ನು ರಚಿಸಿದಿರಿ ?" ಎಂದು ಕೇಳಿದರು.

ದಿಗ್ಭ್ರಾಂತರಾದ ವಡಕ್ಕುತ್ತಿರುವೀಧಿಯವರು ಏನು ಹೇಳಲೂ ತೋರದೆ ಸುಮ್ಮನಾದರು. ಸ್ವಲ್ಪ ಸಮಯದ ನಂತರ ನಂಬಿಳ್ಳೈಯವರು,

"ತಾವು ಬರೆದಿರುವುದು ಸೂಕ್ತವಾಗಿದೆ. ಅದು ಸದುಪಯೋಗವಾಗಲಿ !"

ಎಂದು ಶಿಷ್ಯರನ್ನು ಹರಸಿ, ಎಲ್ಲ ವ್ಯಾಖ್ಯಾನಗಳಿಗಿಂತಲೂ ಅದೇ ಸರ್ವ ಶ್ರೇಷ್ಠವೆಂದೂ, ಎಲ್ಲರ ಕಾಲಕ್ಷೇಪಕ್ಕೂ ಅದು ಅರ್ಹವಾದುದೆಂದು ತಾವು ನಿರ್ಣಯಿಸಿರುವುದಾಗಿಯೂ ತಿಳಿಸಿದರು.

ಅದರಂತೆ ಅಂದಿನಿಂದ ಇಂದಿನವರೆಗೂ ಈ ವ್ಯಾಖ್ಯಾನವು ಹೆಚ್ಚು ಹೆಚ್ಚು ಜನಪ್ರಿಯತೆಯನ್ನು ಪಡೆಯುತ್ತಿದೆ. ಈ ವ್ಯಾಖ್ಯಾನವು ನಾಲ್ಕನೆಯ ವ್ಯಾಖ್ಯಾನದಂತೆ ಸವಿಸ್ತಾರವೂ, ಸ್ವಾರಸ್ಯಭರಿತವೂ ಆಗಿದ್ದು, ವಿಶೇಷವಾಗಿ ಕಾಲಕ್ಷೇಪಗಳಲ್ಲಿ ಪಾರಾಯಣ ಮಾಡಲ್ಪಡುತ್ತಿದೆ. ಇದು ಸಾರತಮವಾಗಿ, ಅಮೃತ ರಸ ಘನವಾದ ಮಹಾನಿಧಿಯಾಗಿರುವುದರಿಂದ, ಇದಕ್ಕೆ 'ಈಡು' ಎಂಬ ಹೆಸರನ್ನು ನೀಡಲಾಗಿದೆ.

ಈ ಐದೂ ವ್ಯಾಖ್ಯಾನಗಳೂ 'ಭಗವದ್ವಿಷಯ' ಎನ್ನುವ ಹತ್ತು ಸಂಪುಟಗಳಲ್ಲಿ ಪಂಡಿತರಿಂದ ಪರಿಶೋಧಿಸಲ್ಪಟ್ಟು ಪ್ರಕಟವಾಗಿವೆ.

ಈ ರೀತಿಯಲ್ಲಿ ತಿರುವಾಯ್ಮೊಳಿ ಪ್ರಬಂಧದಲ್ಲಿನ ಮಹದ್ ಗುಣಗಳನ್ನು ಹೊರತರುವುದರಲ್ಲಿ ಈ ವ್ಯಾಖ್ಯಾನಗಳು ಸಫಲವಾಗಿವೆ. ಮಾನವನು ಅರಿಯಬೇಕಾದ ತತ್ವಹಿತ ಪುರುಷಾರ್ಥಗಳನ್ನು ಈ ಪ್ರಬಂಧವು ನೇರವಾಗಿ ತಿಳಿಸುತ್ತದೆ. ಪರಮ ಪ್ರಮಾಣವಾದ ವೇದಗಳ ಉಪದೇಶ ಸಾರವನ್ನು ಹೊಂದಿರುವ ತಿರು-

ವಾಯ್ಮೊಳಿಯು ಯಾವ ರೀತಿಯಲ್ಲಿ ವೇದಗಳಿಗೆ ಸರಿಸಮಾನವಾಗಿ ಪರಮ ಪಾವನವಾದ 'ತಮಿಳು ವೇದ' ವಾಗಿದೆ ಎಂಬುದನ್ನು ಈ ವ್ಯಾಖ್ಯಾನಗಳು ವಿವರಿಸುತ್ತವೆ. ಪರಮಾತ್ಮನ ಸ್ವರೂಪ, ಸ್ವಭಾವಗಳನ್ನು ಈ ಪ್ರಬಂಧವು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತದೆ. ಐಹಿಕ ಐಶ್ವರ್ಯ, ಕೈವಲ್ಯಗಳಷ್ಟೆ ಪುರುಷಾರ್ಥವಲ್ಲ, ಭಗವಂತನ ನಿತ್ಯ ಕೈಂಕರ್ಯ ಮಾಡಿ, ಅವನನ್ನು ಸೇರುವುದೇ ಪರಮ ಪುರುಷಾರ್ಥ ಎಂಬುದನ್ನು ಈ ಕೃತಿ ಪ್ರತಿಪಾದಿಸುತ್ತದೆ. ಭಗವಂತನಲ್ಲಿ ನಿರತಿಶಯ, ಪ್ರೀತಿರೂಪ ಭಕ್ತಿಯನ್ನು ಮೂಡಿಸಿ, ಬೆಳೆಸುತ್ತವೆ.

ತಿರುವಾಯ್ಮೊಳಿಯಲ್ಲಿ ದ್ವಯಮಂತ್ರದ ಮಹತ್ವದ ಪ್ರತಿಪಾದನೆಯಿದೆ. ಇದರಲ್ಲಿನ ಮೊದಲ ಮೂರು ಶತಕಗಳು ದ್ವಯಮಂತ್ರದ ಉತ್ತರಾರ್ಧವನ್ನು ಪ್ರತಿಪಾದಿಸುತ್ತವೆ. ಪೂರ್ವಾರ್ಧದ ಅರ್ಥಗಳನ್ನು ವಿವರಿಸುತ್ತವೆ. ಏಳು, ಎಂಟು, ಒಂಭತ್ತನೆಯ ಶತಕಗಳು ಉಪಾಯೋಪಯೋಗಿಯಾದ ಗುಣಗಳನ್ನೂ, ಆತ್ಮಾತ್ಮೀಯಗಳಲ್ಲಿ ಮಗ್ನವಾಗಿರುವ ಆಸಕ್ತಿಯನ್ನು ಬಿಡುವ ವಿಧಾನವನ್ನೂ, ಭಗವಂತನೊಡನೆ ಚೇತನನಿಗೆ ಇರುವ ನಿರುಪಾಧಿಕ ಸಂಬಂಧವನ್ನು ನಿರೂಪಿಸುತ್ತವೆ. ಅಂತೆಯೇ ಹತ್ತನೇ ಶತಕವು ಫಲ ಪ್ರಾಪ್ತಿಯನ್ನು ನಿರೂಪಿಸುತ್ತದೆ.

ಸಕಲ ವೇದ ಸಂಗ್ರಹವೇ ಮೂಲ ಮಂತ್ರ. ಈ ಮೂಲಮಂತ್ರದ ಸಂಗ್ರಹವೇ ಪ್ರಣವ. ಪ್ರಣವದ ಸಂಗ್ರಹವೇ ಅಕಾರ. ಇದೇ ರೀತಿಯಲ್ಲಿ ತಿರುವಾಯ್ಮೊಳಿಯ ಸಂಗ್ರಹವು ಅದರ ಮೊದಲ ಶತಕದಲ್ಲಿದೆ. ಮೊದಲ ಶತಕದ ಸಂಗ್ರಹವು, ಆ ಶತಕದ ಮೊದಲ ಮೂರು ಪಾಶುರಗಳಲ್ಲಿದೆ. ಅಂತೆಯೇ ಈ ಮೂರು ಪಾಶುರಗಳ ಸಂಗ್ರಹವು ಮೊದಲ ಪಾಶುರದ ಮೊದಲ ಪಾದವಾದ 'ಉಯರ್ವುರ ಅರ ಉಯರ್‌ನಲಂ ಉಡೈಯವನ್ ಯವನವನ್' ಎಂಬುದರಲ್ಲಿ ಸಂಗ್ರಹವಾಗಿದೆಯೆಂದೂ 'ಈಡು' ವ್ಯಾಖ್ಯಾನವು ಅರ್ಥಪೂರ್ಣವಾಗಿ ವಿವರಿಸುತ್ತದೆ.

ಈ ರೀತಿಯಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ನಿಸ್ಪಷ್ಟ ರೂಪ ನೀಡಿದ ತಿರುವಾಯ್ಮೊಳಿಯು ಉತ್ತಮ ಕೋಟಿ ಕಾವ್ಯವಾಗಿದೆ.

ಈಗಾಗಲೇ ತಿಳಿಸಿರುವಂತೆ ಇಂತಹ ಕಾವ್ಯದ ಶ್ರೇಷ್ಠತೆಯ ಬಗ್ಗೆ ಅನುಮಾನವಿಲ್ಲ. ಅಂತೆಯೇ ಇದನ್ನು ಅರ್ಥ ಮಾಡಿಕೊಳ್ಳಲು ವ್ಯಾಖ್ಯಾನಗಳ ಅಧ್ಯಯನವನ್ನು ಮಾಡಲೇಬೇಕು.

ತಮಿಳಿನಲ್ಲಿನ ಈ ವ್ಯಾಖ್ಯಾನಗಳು ಕನ್ನಡದಲ್ಲಿಯೂ ಬಂದಿವೆ. ಇದು ಶ್ರೀವೈಷ್ಣವರ ಪುಣ್ಯವಿಶೇಷ ಹಾಗೂ ಇದೊಂದು ರೀತಿಯ ಭಕ್ತಿಯ ಜಾಗೃತಿಯೂ ಹೌದು. ಇಂತಹ ಆಸಕ್ತ ಚೇತನರಿಗೆ ವಿದ್ವಜ್ಜನರು ಹಾಗೂ ಸಂಸ್ಥೆಗಳು ಇವುಗಳನ್ನು ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡಿ ಪ್ರಕಟಿಸಿಯೂ ಇವೆ.

ಇದಕ್ಕೆ ಪ್ರಾರಂಭ, ಬಹಳ ವರ್ಷಗಳ ಹಿಂದೆಯೇ ಕಲ್ಕಿ ನರಸಿಂಹಾ. ಚಾರ್ಯರು 'ತಿರುವಾಯ್ಮೊಳಿ'ಯನ್ನು ಪಾಶುರ ಪಾಶುರವಾಗಿ ಸುಲಭ ಕನ್ನಡದಲ್ಲಿ ಅನುವಾದ ಮಾಡಿ, ಸೂಕ್ಷ್ಮವಾಗಿ ಅವುಗಳ ಸಾಮಾನ್ಯ ಅರ್ಥಗಳನ್ನು ನೀಡಿದ್ದರು. ಈ ಕಾರ್ಯ ನಡೆದು ದಶಕಗಳೇ ಕಳೆದಿವೆ. ಇದರ ಪ್ರತಿಗಳು ಈಗ ದೊರೆಯುತ್ತಿಲ್ಲ.

1950ರಲ್ಲಿ ಬುರುಡೆ ಕೃಷ್ಣಯ್ಯಂಗಾರ್ ಎನ್ನುವ ಮೇಲುಕೋಟೆ ನಿವಾಸಿಗಳು ತಮ್ಮ ಗುರುಗಳಾದ ಆಳಗಿಯ ಮಣವಾಳ ರಾಮಾನುಜ ಜೀಯರ್ ರವರಿಂದ ಮಂಡ್ಯದಲ್ಲಿನ ಜಿಲ್ಲಾ ಕಛೇರಿಯಲ್ಲಿನ ಹೆಡ್ ಕ್ಲರ್ಕ್ ಉದ್ಯೋಗದಲ್ಲಿದ್ದುಕೊಂಡೇ ಶ್ರೀ ವೈಷ್ಣವ ಸಂಪ್ರದಾಯದ ರಹಸ್ಯ ಗ್ರಂಥಗಳೆಲ್ಲವನ್ನೂ ಅಭ್ಯಾಸ ಮಾಡುತ್ತಾ, ನಂತರದಲ್ಲಿ ತಿರುವಾಯ್ಮೊಳಿಯ ಈಡು ಮುಪ್ಪತ್ತಾರಾಯಿರಪ್ಪಡಿ ಎನ್ನುವ ಭಗವದ್ವಿಷಯ ವ್ಯಾಖ್ಯಾನವನ್ನೂ ಸಂಪೂರ್ಣವಾಗಿ ಅಧ್ಯಯನ ಮಾಡಿದರು. ಅದುವರೆವಿಗೂ ಭಗವದ್ವಿಷಯದ ಈ ಗ್ರಂಥವೂ ಕನ್ನಡಕ್ಕೆ ಬಂದಿರಲಿಲ್ಲ. ಈ ಕೊರತೆಯನ್ನು ಮನಗಂಡ ಕೃಷ್ಣಯ್ಯಂಗಾರ್ ರವರು 'ವಿಷ್ಣುಚಿತ್ತದಾಸ' ಎನ್ನುವ ಕಾವ್ಯನಾಮದಲ್ಲಿ 'ಈಡು ಮುಪ್ಪತ್ತಾರಾಯಿರಪ್ಪಡಿ'ಯನ್ನು ಸಂಪೂರ್ಣವಾಗಿ ಕನ್ನಡಕ್ಕೆ ಅನುವಾದಿಸಿದರು. ಅದು ಬಹಳ ವರ್ಷಗಳವರೆಗೂ ಹಸ್ತಪ್ರತಿಯಲ್ಲೇ ಇದ್ದಿತು.

ಇತ್ತೀಚೆಗೆ ಮೇಲುಕೋಟೆಯ ಸಂಸ್ಕೃತ ಸಂಶೋಧನಾ ಸಂಸತ್‌ನವರು ವಿಷ್ಣುಚಿತ್ತದಾಸರವರ ಪುತ್ರರಿಂದ ಸಂಪೂರ್ಣ ಹಸ್ತಪ್ರತಿಯನ್ನು ಪಡೆದು, ಕೇಂದ್ರ ಸರ್ಕಾರದ ವಿದ್ಯಾ ಇಲಾಖೆಯ ಅನುದಾನದ ಸಹಾಯದಿಂದ ಈ ಕೃತಿಯನ್ನು ಪ್ರಕಟಿಸುವ ಯೋಜನೆಯನ್ನು ಹಾಕಿಕೊಂಡಿತು. ಹಸ್ತಪ್ರತಿಯನ್ನು ತಿದ್ದಿ, ಸುಲಭೀಕರಣಗೊಳಿಸುವುದಕ್ಕಾಗಿ, ಎಟ್. ಎಸ್. ಅನಂತರಂಗಾಚಾರ್‌ರವರ ನೇತೃತ್ವದ ಒಂದು ವಿದ್ವತ್ ಮಂಡಲಿಯನ್ನು ರೂಪಿಸಿ ಓದುಗರಿಗೆ

ಸುಲಭವಾಗಿರುವಂತೆ ನೂತನ ಹಸ್ತಪ್ರತಿಯನ್ನು ಸಿದ್ಧಪಡಿಸಲಾಯಿತು. ಅಂತೆಯೇ 1991ರಲ್ಲಿ ಇದರ ಮೊದಲನೇ ಶತಕದ ವ್ಯಾಖ್ಯಾನದ ಪ್ರಕಟಣೆಯನ್ನು ಸಂಸ್ಥೆ ನೀಡಿತು. ಮೂಲ ತಿರುವಾಯ್ಮೊಳಿ ಪಾಶುರ, ಅದರ ಪ್ರತಿ ಪದದ ಅರ್ಥ, ತಾತ್ಪರ್ಯಗಳಲ್ಲದೆ, ಈಡುವಿನ ಮೂಲವನ್ನು ಕನ್ನಡದ ಅಕ್ಷರಗಳಲ್ಲಿ ನೀಡಿ, ಅದರ ಪ್ರತಿ ಪದಾರ್ಥವನ್ನೂ, ನಂತರದಲ್ಲಿ ಕನ್ನಡದ ತಾತ್ಪರ್ಯವನ್ನೂ ನೀಡಲಾಗಿದೆ.

ಇದನ್ನು ಬೃಹತ್ ಪ್ರಮಾಣದಲ್ಲಿ ಪ್ರಕಟಿಸಲು ಇಚ್ಛಿಸಿರುವ ಸಂಸತ್, ಇದುವರೆವಿಗೂ ನಾಲ್ಕು ಬೃಹತ್ ಸಂಪುಟಗಳನ್ನು ಪ್ರಕಟಿಸಿದೆ. ಇದು ಕನ್ನಡದ ಆಸ್ತಿಕರಿಗೆ ತುಂಬಾ ಉಪಯೋಗವಾಗುವಂತಹುದು. ಈ ನಾಲ್ಕು ಸಂಪುಟಗಳಿಂದೀಚೆಗೆ ಪ್ರಕಟಣೆ ಸ್ಥಗಿತಗೊಂಡಿದೆ.

ಮೇಲುಕೋಟೆಯವರೇ ಆದ ಮುಡುಂಬೈರವರು ನಾಲ್ಕನೇ ಶತಕವನ್ನು ಮಾತ್ರ ಈ ರೂಪರೇಷೆಯಲ್ಲೇ ಅನುವಾದ ಮಾಡಿ, ಪ್ರಕಟಿಸಿದ್ದಾರೆ, ಇದ್ದು ಒಂದೇ ಸಂಪುಟಕ್ಕೆ ಮಿತಿಗೊಂಡುದು ಶೋಚನೀಯ.

ಇದೇ ರೀತಿಯಲ್ಲಿ ಡಾ|| ಎನ್. ಎಸ್. ಅನಂತರಂಗಾಚಾರ್ ರವರು 'ಆರಾಯಿರಪ್ಪಡಿ' ವ್ಯಾಖ್ಯಾನವನ್ನು ಇದೇ ರೀತಿಯಲ್ಲಿ ಅನುವಾದ ಮಾಡಿದ್ದಾರೆ. ಬೆಂಗಳೂರು ಆಂಡವನ್ ಆಶ್ರಮದವರು ಇದನ್ನು ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. 'ತಿರುವಾಯ್ಮೊಳಿ' ಮೂಲ, ಅನುವಾದ, ಆರಾಯಿರಪ್ಪಡಿ ಮೂಲ, ಅದರ ಕನ್ನಡ ಅನುವಾದ, ನಂತರ ಆಯಾಯ ಪಾಶುರದ ಇತರೇ ವ್ಯಾಖ್ಯಾನಗಳ ಸಂಕ್ಷಿಪ್ತ ಸಂಗ್ರಹ. ಇದು ತುಂಬಾ ಸುಲಭ ಕನ್ನಡದಲ್ಲಿದ್ದು ಎಲ್ಲರಿಗೂ ಅರ್ಥವಾಗುವಂತಹದ್ದಾಗಿದೆ. ಇಷ್ಟೇ ಅಲ್ಲದೆ. ಎಲ್ಲಾ ನಾಲ್ಕು ಸಂಪುಟಗಳೂ ಪ್ರಕಟವಾಗಿದ್ದು, ಮಾರುಕಟ್ಟೆಯಲ್ಲಿ ಲಭ್ಯವಿವೆ.

ಇವೆಲ್ಲವುಗಳಿಗಿಂತಲೂ ಭಿನ್ನವಾದೊಂದು ಕೃತಿ ಬೆಳಕಿಗೆ ಬರುವುದರಲ್ಲಿದೆ. ಖ್ಯಾತ ಶ್ರೀವೈಷ್ಣವ ಸಾಹಿತಿಯಾದ ಪ್ರೊ|| ಕೆ. ಎಸ್. ನಾರಾಯಣಾಚಾರ್ಯರು 'ತಿರುವಾಯ್ಮೊಳಿ'ಯ ಎಲ್ಲ ವ್ಯಾಖ್ಯಾನಗಳನ್ನೂ ತಮ್ಮ ಪ್ರವಚನಗಳಿಗಾಗಿ ಆಳವಾಗಿ ಅಧ್ಯಯನ ಮಾಡಿರುವವರು. ಅದರಿಂದ ಅವರು ಈ ಎಲ್ಲ ವ್ಯಾಖ್ಯಾನಗಳ ಸಂಕ್ಷಿಪ್ತ ರೂಪ ಹಾಗೂ ತಮ್ಮದೇ ಆದ ಭಾವನೆಗಳನ್ನು ಸೇರಿಸಿ, ಭಗವದ್ವಿಷಯದ ಬೃಹತ್ ಕೃತಿಯನ್ನು ರಚನೆ ಮಾಡುತ್ತಿದ್ದು, ಇದರ

ಮೊದಲನೇ ಶತಕ ಪ್ರಕಟವಾಗಿದೆ. ಇದರೊಂದಿಗೆ ಉಳಿದ ಶತಕಗಳೂ ಇಷ್ಟರಲ್ಲೆ ಪ್ರಕಟಗೊಳ್ಳುವ ನಿರೀಕ್ಷೆಯಲ್ಲಿದೆ.

ಹೀಗಾಗಿ ಕನ್ನಡ ಶ್ರೀವೈಷ್ಣವ ದರ್ಶನಕ್ಕೆ ವಿಪುಲವಾದ ಸಾಹಿತ್ಯ ಈ ರೀತಿಯಲ್ಲಿ ತುಂಬಲಾಗುತ್ತಿದೆ.

## ಈ ದರ್ಶನದ ಇತರೇ ಗ್ರಂಥಗಳು

ಶ್ರೀವೈಷ್ಣವ ಸಾಹಿತ್ಯದ ಕನ್ನಡ ರೂಪಾಂತರಗಳಲ್ಲಿ ಬಹಳಷ್ಟು ಮೂಲ ಕೃತಿಗಳ ಕನ್ನಡ ಅನುವಾದಗಳಾಗಿವೆ. ದರ್ಶನವನ್ನು ಕುರಿತಾದ ಸ್ವತಂತ್ರ ಕೃತಿಗಳು ಕಡಿಮೆ ಎಂದೆಣಿಸಿದರೂ ಬಂದಿರುವಷ್ಟೂ ಗಮನಾರ್ಹವಾದವು ಗಳಾಗಿವೆ. ಈಗಾಗಲೇ ಕೆಲವನ್ನು ಈ ವಿಭಾಗದಲ್ಲಿ ಸೇರಿಸಲಾಗಿದೆ. ಉಳಿದಿರುವವುಗಳ ವಿಷಯವನ್ನು ಇಲ್ಲಿ ತಿಳಿಸಲು ಪ್ರಯತ್ನಿಸಲಾಗಿದೆ. ಅನೇಕ ಲೇಖಕರು ಈ ನಿಟ್ಟಿನಲ್ಲಿ ಪ್ರಯತ್ನಗಳನ್ನು ನಡೆಸಿದ್ದಾರೆ.

20ನೇ ಶತಮಾನದ ಪ್ರಥಮಾರ್ಧದಲ್ಲಿ ಬಂದಿರುವ ಇಂತಹ ಕೃತಿಗಳು ಆಕಾರದಲ್ಲಿ ಸಣ್ಣ, ಕಡಿಮೆ ಪುಟಗಳ ಪುಸ್ತಕಗಳಾಗಿರುವುದರಿಂದ ಅಂತಹವು ಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿಲ್ಲ.

ಉತ್ತರಾರ್ಧದಲ್ಲಿ ಅನೇಕ ಲೇಖಕರು ಕಾಣಿಸಿಕೊಂಡು ಸಾಕಷ್ಟು ಸೇವೆಯನ್ನು ಮಾಡಿದ್ದಾರೆ.

ಟಿ. ವಿ. ನಾಥಮುನಿ ಅಯ್ಯಂಗಾರ್‌ರವರು 'ಹಯಗ್ರೀವ' ಎನ್ನುವ ಕೃತಿ ಯಲ್ಲಿ ಆ ದೇವನ ಅವತಾರ ತತ್ವವನ್ನು ಚಿತ್ರಿಸಿದ್ದಾರೆ. 'ವೇದಾಭರಣ' ಎನ್ನುವ ಕೃತಿಯಲ್ಲಿ ವಿಶಿಷ್ಟಾದ್ವೈತ ದೃಷ್ಟಿಕೋನದಿಂದ ಕೂಡಿದ ಪುರುಷ ಸೂಕ್ತ, ಶ್ರೀ ಸೂಕ್ತದ ಅನುವಾದಗಳಿವೆ.

ಎಂ. ಓ. ಎಸ್. ಅಯ್ಯಂಗಾರ್‌ರವರು ಪಿಳ್ಳೈ ಲೋಕಾಚಾರ್ಯರ ಪರಮ ಭಕ್ತರು. ಪರಿಣಾಮವಾಗಿ ಕನ್ನಡದಲ್ಲಿ ಮೊಟ್ಟಮೊದಲನೆಯದಾಗಿ ಅವರ ಕೃತಿಗಳ ಕನ್ನಡ ರೂಪವನ್ನು ತಂದುದೇ ಅಲ್ಲದೆ, ಅವರ ಸಿದ್ಧಾಂತ ಪ್ರತಿಪಾದನೆಯ ಗ್ರಂಥಗಳನ್ನು ರಚಿಸಿದರು. ಇಂತಹ ಗ್ರಂಥಗಳಲ್ಲಿ ಮುಖ್ಯ ವಾದುವು – ಪ್ರಪತ್ತಿ ಮಾರ್ಗ, ವಿಶಿಷ್ಟಾದ್ವೈತ ಸಂಗ್ರಹ, ಪರತತ್ತ್ವ, ಸದಾಚಾರ್ಯ ವಿವೇಕ, ಪರಮಾತ್ಮನಿಗೂ ಚಿದ ಚಿತ್ತುಗಳಿಗೂ ಇರುವ ಶರೀರ–

ಶರೀರಿ ಸಂಬಂಧ, ತತ್ತ್ವತ್ರಯ (ಸಂಕ್ಷಿಪ್ತ, ವಿಸ್ತೃತ), ಪ್ರಪತ್ತಿಯೋಗ, ಭಾರತೀಯ ಪರಮಾರ್ಥ, ಶ್ರೀ ಲಕ್ಷ್ಮೀ ತತ್ತ್ವ, ಸಿದ್ಧಾಂತ ತ್ರಯ ಸಂಗ್ರಹ.

ರಘೋಸುತರೂ ಕೂಡ ಶ್ರೀವೈಷ್ಣವ ದರ್ಶನದ ಬಗ್ಗೆ ತಮ್ಮದಾದ ಕಾಣಿಕೆಯನ್ನು ನೀಡಿದ್ದಾರೆ. ಕರ್ನಾಟಕದಲ್ಲಿ 'ಆಂಡಾಳ್' ಹಾಗೂ 'ನಾಥಮುನಿ' ಕೃತಿಗಳಲ್ಲಿ ಅವರು ನೀಡಿರುವ ದರ್ಶನದ ವಿವರಗಳಿವೆ. ಪಿಳ್ಳೈ ಲೋಕಾಚಾರ್ಯರ 'ಅಷ್ಟಾದಶ ರಹಸ್ಯಗಳು' ಕೃತಿಯಲ್ಲಿ ಆ ಆಚಾರ್ಯರ ಸಿದ್ಧಾಂತದ ಪ್ರತಿಪಾದನೆಯ ವಿವರಗಳಿವೆ. ಇದೇ ರೀತಿಯಲ್ಲಿ 'ಆಳ್ವಾರರು ಕಂಡ 108 ದಿವ್ಯ ದೇಶಗಳು' ಕೃತಿಯಲ್ಲಿ ದಿವ್ಯ ದೇಶಗಳ ದರ್ಶನದಿಂದ ಉಂಟಾಗುವ ಪ್ರಭಾವ, ಅವು ಶ್ರೀ ದರ್ಶನದ ಮೇಲೆ ತೋರಿರುವ ಪ್ರಭಾವವನ್ನು ತಿಳಿಸುತ್ತದೆ. ಇತ್ತೀಚೆಗೆ 'ಶ್ರೀವೈಷ್ಣವ ದರ್ಶನ' ಕೃತಿಯಲ್ಲಿ ವೇದಗಳ ಕಾಲದಿಂದ ಪ್ರಸ್ತುತ ಸಮಯದವರೆಗೆ ಈ ದರ್ಶನ ನಡೆದು ಬಂದ ದಾರಿಯನ್ನು ವಿವರಿಸಿರುವುದರೊಂದಿಗೆ, ಆಳ್ವಾರಾಚಾರ್ಯರು ಆ ದರ್ಶನದಲ್ಲಿ ಮಾಡಿಸಿರುವ ವಿಶೇಷ ಬದಲಾವಣೆಗಳನ್ನು ಚಿತ್ರಿಸಿದ್ದಾರೆ. ಇದೇ ಲೇಖಕರು ಬರೆದಿರುವ 'ಭಾರತೀಯ ಸ್ಮೃತಿಗಳು' ಎನ್ನುವ ಗ್ರಂಥದಲ್ಲಿ ಶ್ರೀವೈಷ್ಣವ ದರ್ಶನವು ಯಾವ ಯಾವ ಕೃತಿಯಿಂದ ಎಷ್ಟೆಷ್ಟು ದಾರ್ಶನಿಕ ವಿವರಗಳನ್ನು ಪಡೆದಿವೆ ಎಂಬುದರ ವಿವರಣೆ ಇದೆ. ಹೀಗಾಗಿ ಇವೆರಡೂ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದುದಾಗಿವೆ.

ಇವರ ಪ್ರಯತ್ನ, ಪ್ರೋತಾಹದ ಫಲವಾಗಿ ಆಚಾರ್ಯರುಗಳ ಎಲ್ಲ ಕೃತಿಗಳ ಪರಿಚಯ ವಿವಿಧ ಲೇಖಕರು ಕೈಗೆತ್ತಿಗೊಂಡಿದ್ದಾರೆ. ಈಗಾಗಲೇ ಪಿಳ್ಳೈಲೋಕಾಚಾರ್ಯರು ಜೀವನ ಮತ್ತು ಕೃತಿಗಳು' ಬಿಡುಗಡೆಯಾಗಿವೆ. ಶ್ರೀವತ್ಸಕಲ್‌ಬಾಗಲ್‌ರವರು 'ಶ್ರೀವೇದಾಂತ ದೇಶಿಕರು-ಜೀವನ ಮತ್ತು ಕೃತಿಗಳು,' ಇಷ್ಟರಲ್ಲೆ ಬಿಡುಗಡೆಯಾಗಲಿವೆ. 'ಮಣವಾಳ ಮಾಮುನಿಗಳು-ಜೀವನ ಮತ್ತು ಕೃತಿಗಳು,' ಭಾಷ್ಯಾಕಾರ ರಾಮಾನುಜರು ಜೀವನ ಮತ್ತು ಕೃತಿಗಳು ಪರಾಶರ ಭಟ್ಟರು' ,'ಶ್ರೀಯಾಮುನರು' ಶ್ರೀನಾಥಮುನಿಗಳು ಎನ್ನುವವು. ಈ ಈ ಯೋಜನೆಯಲ್ಲಿ ಸೇರಿವೆ. ಹಸ್ತಪ್ರತಿಗಳು ಸಿದ್ಧವಾಗುತ್ತಿವೆ. ಇವರುಗಳು ಪ್ರತಿಪಾದಿಸಿರುವ ದರ್ಶನವನ್ನು ಈ ಕೃತಿಗಳು ಚಿತ್ರಿಸುತ್ತವೆ.

ರಾಮಾಯಣ, ಮಹಾಭಾರತ, ಭಾಗವತಗಳಲ್ಲಿ ವಿಶಿಷ್ಟಾದ್ವೈತ ತತ್ತ್ವ ಅಡಗಿದೆ. ಇದರ ವಿವರಗಳನ್ನು ಕೆಲವು ಲೇಖಕರು ಚಿತ್ರಿಸಿದ್ದಾರೆ.

ದೇವಶಿಖಾಮಣಿ ಆಳಸಿಂಗ್ರಾಚಾರ್‌ರವರು ತಮ್ಮ ಶ್ರೀಮದ್ರಾಮಾಯಣ (8 ಸಂಪುಟಗಳು), ಶ್ರೀಮಹಾಭಾರತ (24 ಸಂಪುಟಗಳು), ಶ್ರೀಮದ್ಭಾಗವತ (8ಸಂಪುಟಗಳು) ಶ್ರೀಮದ್ರಾಮಾಯಣ ಉತ್ತರಕಾಂಡ ಹಾಗೂ ಶ್ರೀಮದ್ಭಗವದ್ಗೀತೆ ಗ್ರಂಥಗಳಲ್ಲಿ ವಿಶಿಷ್ಟಾದ್ವೈತ ತತ್ತ್ವದ ಹಿನ್ನಲೆಯ ವ್ಯಾಖ್ಯಾನಗಳನ್ನು ಅಡಿ ಟಿಪ್ಪಣಿಗಳಾಗಿ ನೀಡಿದ್ದಾರೆ.

ಇದೇ ರೀತಿಯಲ್ಲಿ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್‌ರವರು ತಮ್ಮ 'ಕನ್ನಡ ವಾಲ್ಮೀಕಿ ರಾಮಾಯಣ' ಎರಡು ಬೃಹತ್ ಸಂಪುಟಗಳಲ್ಲಿ ಅಡಿ ಟಿಪ್ಪಣಿಗಳಲ್ಲಿ ರಾಮಾನುಜ ದರ್ಶನದ ವಿವೇಚನೆಯನ್ನು ನೀಡಿದ್ದಾರೆ.

ಅಂತೆಯೇ ಎಸ್ ರಂಗಾಚಾರ್‌ರವರು ಶ್ರೀಮದ್ರಾಮಾಯಣ ಕಥಾಮೃತ' ಎನ್ನುವ ಕೃತಿಯಲ್ಲಿ ಸೀತಾದೇವಿಯ ಕಟಾಕ್ಷವನ್ನು ವಿವರಿಸುವ ಈ ದೃಷ್ಟಿಯಿಂದ ರಾಮಾಯಣವನ್ನು ವೀಕ್ಷಿಸುವ ಒಂದು ಅಪರೂಪದ ದೃಷ್ಟಿಕೋನವಿದೆ.

ಈ ಕಡೆ ಎರಡು ಕೃತಿಗಳೂ ಆ ಲೇಖಕರ ಮಹತ್ವದ ಕೃತಿಗಳಾಗಿದ್ದುದ ಅವು ಬಿಡುಗಡೆಯಾದ ಕೆಲವೇ ತಿಂಗಳುಗಳಲ್ಲಿ ಅವರು ವೈಕುಂಠವಾಸಿಗಳಾದರು.

ಎಂ. ಇ. ರಂಗಾಚಾರ್‌ರವರು 'ವಾಲ್ಮೀಕಿ ರಾಮಾಯಣ'ದಲ್ಲಿ ವಿಶಿಷ್ಟಾದ್ವೈತ ತತ್ತ್ವವನ್ನು ಪ್ರತಿಪಾದಿಸುವ ಘಟನೆಗಳನ್ನೆ ಸೇರಿಸಿ, ಒಂದು ಕೃತಿಯನ್ನು ರಚಿಸಿದ್ದಾರೆ. ವಿಭೀಷಣನ ಶರಣಾಗತಿ, ಲಕ್ಷ್ಮಣನ ಅನನ್ಯತೆ, ಮಂಡೋದರಿ ಹಾಗೂ ಶಬರಿಯ ದೈವಭಕ್ತಿ ಇತ್ಯಾದಿಗಳನ್ನು ಲೇಖಕರು ವಿವರಿಸಿದ್ದಾರೆ.

ಡಾ|| ಎನ್. ಎಸ್. ಅನಂತರಂಗಾಚಾರ್‌ರವರು ಕನ್ನಡ ಶ್ರೀವೈಷ್ಣವ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ 'ನಮ್ಮಾಳ್ವರ್ ದರ್ಶನ' ಅವರ ಒಂದು ಉತ್ತಮ ಕೃತಿ. ಇತ್ತೀಚೆಗೆ ಇವರು 'ಶ್ರೀ ರಾಮಾನುಜ ಸೂಕ್ತಿ ಮುಕ್ತಾವಲೀ' ಎನ್ನುವ ಒಂದು ಉತ್ತಮ ಕೃತಿಯನ್ನು ಕನ್ನಡಿಗರಿಗೆ ನೀಡಿದ್ದಾರೆ. ಇದರಲ್ಲಿ ಶ್ರೀ ರಾಮಾನುಜರ ಕೃತಿಗಳಿಂದ ಉಪಯುಕ್ತ ಸೂಕ್ತಿಗಳನ್ನು ಆರಿಸಿ, ಅವುಗಳ ಕನ್ನಡ ಅನುವಾದವನ್ನು ನೀಡಿದ್ದಾರೆ.

ಎಂ. ಎ. ನಾರಾಯಣ ಅಯ್ಯಂಗಾರ್ ಮತ್ತು ಅವರ ಮಕ್ಕಳಾದ ಎಂ. ಡಿ. ವೇದವಲ್ಲಿ ಹಾಗೂ ಎಂ. ಎ. ಸಿಂಗಮ್ಮನವರುಗಳು ಶ್ರೀ ವೈಷ್ಣವ ದರ್ಶನಕ್ಕೆ ಅನುಪಮ ಕಾಣಿಕೆ ನೀಡಿದ್ದಾರೆ. ನಾರಾಯಣ ಅಯ್ಯಂಗಾರ್ (188 ? = 12-2-1969) ರವರು ಸಾಮಾನ್ಯ ಕೃತಿಗಳ ರೂಪದಲ್ಲಿ

ವಿಶಿಷ್ಟಾದ್ವೈತ ತತ್ತ್ವಗಳನ್ನು ಬಹು ಸೊಗಸಾಗಿ, ಪರೋಕ್ಷವಾಗಿ ಚಿತ್ರಿಸಿದ್ದಾರೆ. ಈ ದರ್ಶನದ ವಿವಿಧ ಮಗ್ಗುಲುಗಳನ್ನು, ಹರವುಗಳನ್ನು ತಮ್ಮ ಕೃತಿಗಳಲ್ಲಿ, ಜೀವನದಲ್ಲಿ ರೂಪಿಸಿ, ಆದರ್ಶರೆನಿಸಿದ್ದಾರೆ. ಇವರ 'ಜೀವನದಲ್ಲಿ ಶಾಂತಿ ಸಾಧನೆ', 'ಶಾಂತಿ ಮಾರ್ಗ', 'ಭಗವದ್ಗೀತೆ', 'ನಾಸ್ತಿಕವಾದಿಗಳಿಗೆ ಭಾರತೀಯ ವೇದಾಂತಿಗಳ ಪ್ರತಿವಾದ', 'ಕನ್ನಡಿಗರ ಜ್ಞಾನ ದೀಪಿಕೆ' ಇತ್ಯಾದಿಯವು. ಎಂ. ಡಿ. ವೇದವಲ್ಲಿಯವರ 'ಮಂತ್ರರಾಜ', 'ಶರಣಾಗತಿ' 'ಗೀತೆಯ ಸಂದೇಶ', 'ವಿಶಿಷ್ಟಾದ್ವೈತ ಸಿದ್ಧಾಂತ' ಇತ್ಯಾದಿಯವು.

ಇವಲ್ಲದೆ ಹೆಚ್. ಪುಟ್ಟಸ್ವಾಮಿಯವರ 'ಶಠಜಿದ್ದರ್ಶನ ದರ್ಪಣ', ಹೆಚ್. ಜೆ. ರಾಮಯ್ಯಂಗಾರ್‌ರವರ ಕೆಲವು ಕೃತಿಗಳು ಈ ಸಿದ್ಧಾಂತವನ್ನು ಪ್ರತಿಪಾದಿಸುತ್ತವೆ.

ಕೆಲವು ಗ್ರಂಥಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ಬಗ್ಗೆ ಲೇಖನಗಳು ಪ್ರಕಟವಾಗಿವೆ. ಕರ್ನಾಟಕ ಪರಂಪರೆಯಲ್ಲಿ ಕರ್ನಾಟಕದಲ್ಲಿ ವಿಶಿಷ್ಟಾದ್ವೈತ ; ಆನಂದವನದ ಅಮೃತೋತ್ಸವ ಸಂಚಿಕೆಯಲ್ಲಿ ವಿಶಿಷ್ಟಾದ್ವೈತ ದರ್ಶನ, ಕನ್ನಡದಲ್ಲಿ ವಿಶಿಷ್ಟಾದ್ವೈತ ದರ್ಶನ ಪ್ರಬಂಧಗಳು ; ಭಾರತೀಯ ತತ್ತ್ವಶಾಸ್ತ್ರ ಸಂಗ್ರಹದಲ್ಲಿ ವಿಶಿಷ್ಟಾದ್ವೈತ ವೇದಾಂತ ಎನ್ನುವ ಅಧ್ಯಾಯ ; ಯುಗಯಾತ್ರೀ ಭಾರತೀಯ ಸಂಸ್ಕೃತಿಯಲ್ಲಿನ ಶ್ರೀ ರಾಮಾನುಜರ ವಿಶಿಷ್ಟಾದ್ವೈತ ಎನ್ನುವ ಅಧ್ಯಾಯ ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಚಿದಾನಂದಮೂರ್ತಿಯವರು) ಗ್ರಂಥದಲ್ಲಿ ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮ, ಶ್ರೀ ರಾಮಾನುಜರು ಎನ್ನುವ ಬರಹಗಳು ಈ ದರ್ಶನವನ್ನು ಪ್ರತಿನಿಧಿಸುತ್ತವೆ.

ಪ್ರಬಂಧಗಳ ಸಂಕಲನಗಳೂ ಈ ನಿಟ್ಟಿನಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ಮುಖ್ಯವಾದುವು, ರಘುಸುತರಿಂದ ರಚಿತವಾದ 'ಸಂಪ್ರದಾಯ', 'ಶ್ರೀ ರಾಮಾನುಜ' ; ಹೆಚ್. ಜೆ. ರಾಮಯ್ಯಂಗಾರ್‌ರವರ ಕೃತಿಗಳು ಹೆಸರಿಸುವಂತಹವು.

ವಿವಿಧ ಪತ್ರಿಕೆಗಳಲ್ಲಿ ವಿಶಿಷ್ಟಾದ್ವೈತ ದರ್ಶನದ ಬಗ್ಗೆ ಲೇಖನಗಳನ್ನು ಅನೇಕ ಲೇಖಕರು ಬರೆದಿರುತ್ತಾರೆ. ಅಂತಹ ನೂರಾರು ಪ್ರಬಂಧಗಳು ಪ್ರಕಟವಾಗಿದ್ದು, ಇದುವರೆವಿಗೂ ಸಂಗ್ರಹ ರೂಪದಲ್ಲಿ ಪ್ರಕಟವಾಗಿಲ್ಲದಿರುವುದು ಶೋಚನೀಯ. ಸಪ್ತಗಿರಿ, ಉಭಯವೇದ, ಯೋಗಕ್ಷೇಮ ಇಂದಿಗೂ ಬೆಳಕು

ಕಾಣುತ್ತವೆ. ಕೈಂಕರ್ಯ, ಶ್ರೀರಾಮಾನುಜ ಇತ್ಯಾದಿಯವು ಮಿಂಚಿನ ಹುಳುವಿನಂತೆ ಕಂಡು ಬಂದು ಮರೆಯಾಗಿವೆ. ಇಂತಹ ಪತ್ರಿಕೆಗಳು ಮರೆಯಾದ ಮೇಲೆ ಅವುಗಳಲ್ಲಿನ ತುಂಬಾ ಉಪಯುಕ್ತವಾದ ಪ್ರಬಂಧಗಳೂ ಮರೆಯಾದಂತೆಯೇ ಲೆಕ್ಕ. ಆದುದರಿಂದ ಲೇಖಕರು ಭವಿಷ್ಯದ ಹಾಗೂ ಶ್ರೀವೈಷ್ಣವ ಸಾಹಿತ್ಯದ ಹಿತದ ದೃಷ್ಟಿಯಿಂದ ಇಂತಹವುಗಳ ಸಂಗ್ರಹ ರೂಪದ ಪುಸ್ತಕಗಳ ರೂಪದಲ್ಲಿ ಮುದ್ರಿಸಿ ಪ್ರಕಟಿಸುವುದು ಅತ್ಯಂತ ಅಗತ್ಯ.

ಸಾವೇನೀರ್, ಸ್ಮರಣ ಸಂಚಿಕೆಗಳು, ನೆನಪಿನ ಸಂಚಿಕೆಗಳಲ್ಲಿಯೂ ಇಂತಹ ಪ್ರಬಂಧಗಳು ಬೆಳಕು ಕಂಡಿವೆ. ಅವುಗಳಲ್ಲಿ ಬಹಳಷ್ಟು ಉಪಯುಕ್ತವಾದವುಗಳು, ಅವುಗಳನ್ನು ಮೇಲೆ ಹೇಳಿದ ರೀತಿಯಲ್ಲಿ ಸದುಪಯೋಗಪಡಿಸಿಕೊಳ್ಳುವುದು ಅತ್ಯಂತ ಆವಶ್ಯಕ. ಶ್ರೀವೈಷ್ಣವ ಸಾಹಿತ್ಯಾಭಿವೃದ್ಧಿಗೂ ತುಂಬಾ ಸಹಾಯಕವಾಗುತ್ತದೆ.

# ಶ್ರೀವೈಷ್ಣವ ದರ್ಶನ ಮತ್ತು ಸಂಸ್ಕೃತಿ

ದರ್ಶನ ಮತ್ತು ಸಂಸ್ಕೃತಿಗೆ ಅನೂಚಾನವಾದ ಸತ್ಸಂಬಂಧವಿದೆ. ಪ್ರತಿಯೊಂದು ಧರ್ಮವೂ ತನ್ನದೇ ಆದ ಸಂಸ್ಕೃತಿಯನ್ನು ಹೊಂದಿರುತ್ತದೆ. ವೇದಗಳಿಂದ 'ವೇದ ಸಂಸ್ಕೃತಿ', ಪುರಾಣಗಳಿಂದ 'ಪೌರಾಣಿಕ ಸಂಸ್ಕೃತಿ' ಇತ್ಯಾದಿ. ಇದೇ ರೀತಿಯಲ್ಲಿ ವೈಷ್ಣವ ಧರ್ಮವನ್ನು ಅನುಸರಿಸುವವರು 'ವೈಷ್ಣವ ಸಂಸ್ಕೃತಿ' ಯನ್ನು ಹೊಂದಿರುತ್ತಾರೆ.

ವೈಷ್ಣವ ಧರ್ಮವು ಹೇಗೆ ಅನಾದಿಯೋ, ವೈಷ್ಣವ ಸಂಸ್ಕೃತಿಯೂ ಹಾಗೆಯೇ ಅನಾದಿ. ವೇದ, ಉಪನಿಷತ್ತುಗಳು, ಮಹಾಕಾವ್ಯಗಳಲ್ಲಿ ವೈಷ್ಣವ ಸಂಸ್ಕೃತಿಯು ನೆಲೆಸಿತ್ತು ಎನ್ನುವುದನ್ನು ಸ್ಪಷ್ಟವಾಗಿ ಕಾಣಬಹುದು. ತಿಲಕ ಧಾರಣೆ, ವಿಷ್ಣು ಪೂಜೆ, ಯಜ್ಞ ಯಾಗಾದಿಗಳಲ್ಲಿ ವಿಷ್ಣುವನ್ನು ಆಹ್ವಾನಿಸುವಿಕೆ ಇತ್ಯಾದಿ ವೈಷ್ಣವ ಧರ್ಮಾಚರಣೆಯು ವೈಷ್ಣವ ಸಂಸ್ಕೃತಿಯ ವಿವಿಧ ಮುಖಗಳಾಗಿವೆ.

ಶ್ರೀರಾಮಾನುಜರವರೆವಿಗೆ ವೈಷ್ಣವ ಸಂಸ್ಕೃತಿ ಎಂದು ಹೆಸರು ಪಡೆದಿದ್ದುದು, ಅವರು ಹೆಸರಿಸಿದ 'ವಿಶಿಷ್ಟಾದ್ವೈತ ಸಿದ್ಧಾಂತ'ದ ಪರಿಣಾಮವಾಗಿ 'ಶ್ರೀವೈಷ್ಣವ ಸಂಸ್ಕೃತಿ' ಎಂಬ ಹೆಸರನ್ನು ಪಡೆಯಿತು. ಅಲ್ಲಿಂದೀಚೆಗೆ ಈ ಹೆಸರೇ ಶಾಶ್ವತವಾಯಿತು.

ದೇವಾಲಯಗಳ ನಿರ್ಮಾಣವು ಸಂಸ್ಕೃತಿಯ ಒಂದು ಭಾಗ. ಇವು ಕಲೆಯ ಪ್ರತೀಕ ಹಾಗೂ ಕೇಂದ್ರವೂ ಆಗುತ್ತದೆ. ಶ್ರೀವೈಷ್ಣವ ದೇವಾಲಯಗಳು ಪ್ರಪಂಚಾದ್ಯಂತ ಅನೇಕವಿವೆ. ಶ್ರೀರಂಗ, ಮೇಲುಕೋಟೆ, 108 ದಿವ್ಯ ಕ್ಷೇತ್ರಗಳಲ್ಲಿ, ತಿರುಪತಿಗಳಲ್ಲಿ ನೂರಾರು ದೇವಾಲಯಗಳಲ್ಲಿ ಶ್ರೀವೈಷ್ಣವ ಧರ್ಮ, ದರ್ಶನಗಳನ್ನು ಪ್ರಚಾರ ಮಾಡುತ್ತಿವೆ. ಅಲ್ಲದೆ ಹೊಸ ಹೊಸ ದೇವಾಲಯಗಳೂ ನಿರ್ಮಾಣವಾಗಿವೆ. ವಿಷ್ಣುವರ್ಧನ, ಚಿಕ್ಕದೇವರಾಜ ಒಡೆಯರು, ಕೃಷ್ಣದೇವರಾಯ ಇತ್ಯಾದಿ ಶ್ರೀವೈಷ್ಣವ ದೊರೆಗಳು ಬೇಲೂರು, ತಲಕಾಡು, ವಿಜಯನಗರ ಇತ್ಯಾದಿ ನಗರಗಳಲ್ಲಿ ಅನೇಕ ವಿಷ್ಣು ದೇವಾಲಯಗಳನ್ನು ನಿರ್ಮಿಸಿ ಕೀರ್ತಿವಂತರಾಗಿದ್ದಾರೆ. ಇವು ಇತಿಹಾಸದಲ್ಲಿ ಪ್ರಪಂಚಾದ್ಯಂತ ಅಜರಾಮರವಾಗಿವೆ. ಶ್ರೀವೈಷ್ಣವ ಸಂಪ್ರದಾಯಕ್ಕೆ ಅನುಗುಣವಾಗಿ ಈ

ದೇವಾಲಯಗಳ ನಿರ್ಮಾಣ ಕಾರ್ಯ ನಡೆದಿದೆ.

ಶ್ರೀವೈಷ್ಣವರಲ್ಲಿ 'ಅರೆಯಾರ್' ಸಂಪ್ರದಾಯವಿದೆ. ಮಹಾವಿಷ್ಣುವಿನ ಹಿರಿಮೆಯನ್ನು, ಅವನ ಪರತ್ವವನ್ನು ಹಾಡುವುದು, ನೃತ್ಯದ ಮುಖಾಂತರ ಅಭಿನಯಿಸಿ ತೋರಿಸುವುದು ಇತ್ಯಾದಿಗಳು ಬೇರೆಯೇ ಆದ ಸಂಸ್ಕೃತಿಯ ಮಜಲನ್ನು ಪ್ರದರ್ಶಿಸುತ್ತವೆ. ಅರೆಯಾರ್ ಹೆಸರಿನ ವಂಶಸ್ಥರು ಇಂದಿಗೂ ಇದ್ದಾರೆ. ಆದರೆ ಅವರು ಈ ಪರಂಪರೆಯನ್ನು ಅನುಸರಿಸುತ್ತಿಲ್ಲ.

ಊಟ, ತಿಂಡಿಗಳು, ನಡೆ, ನುಡಿಗಳಲ್ಲಿಯೂ ಶ್ರೀವೈಷ್ಣವರು ತಮ್ಮದೇ ರೀತಿ ನೀತಿಗಳನ್ನು ಹೊಂದಿದ್ದಾರೆ. ಸಾಮಾನ್ಯವಾಗಿ ತಾಮಸ ಊಟ ಉತ್ತೇಜಕಗಳಾದ ಈರುಳ್ಳಿ, ಬೆಳ್ಳುಳ್ಳಿ, ಮೂಲಂಗಿ, ದಾಲ್ಚಿನ್ನಿ-ಇತ್ಯಾದಿಗಳನ್ನು ಇವರು ಉಪಯೋಗಿಸುವುದಿಲ್ಲ. ಪುಳಿಹೋಗರೆ – ಅಯ್ಯಂಗಾರರ ಟ್ರೇಡ್ ಮಾರ್ಕ್ ಎನ್ನುವಷ್ಟರ ಮಟ್ಟಿಗೆ ಅವರಿಗೆ ಹೊಂದಿಕೊಂಡಿದೆ. ಶುದ್ಧ ಸ್ವರೂಪದ ಪುಳಿಹೋಗರೆ ಬಹಳಷ್ಟು ಸೇವಿಸುವುದಕ್ಕೆ ಆಗುವುದಿಲ್ಲ. ಇದೇ ರೀತಿಯಲ್ಲಿ ಸಕ್ಕರೆ ಮತ್ತು ಉಪ್ಪು ಪೊಂಗಲ್‌ಗಳು ಇವರದ್ದೇ ಆದ ವೈವಿಧ್ಯತೆಯಿಂದ ಕೂಡಿದೆ.

ಮುಖದಲ್ಲಿ ಧರಿಸುವ ಊರ್ಧ್ವಪುಂಡ್ರವು ಮೊದಲಿನಿಂದಲೂ ಒಂದೇ ಸಮನಾಗಿದೆ. ಅಲ್ಪ ಭೇದವಿದೆಯಷ್ಟೇ ಹೊರತು, ಪ್ರಾರಂಭಿಕ ಕಾಲದಿಂದ ಈವತ್ತಿನ ವರೆಗೂ ಹಾಗೆಯೇ ಇದೆ. ಇತ್ತೀಚೆಗೆ ಆಧುನಿಕತೆ ತಲೆ ಹಾಕಿ, ಕೇವಲ ಕೆಂಪು ನಾಮವನ್ನು ಮಾತ್ರ ಧರಿಸುವ ಮಟ್ಟಕ್ಕೆ ಬಂದಿದ್ದರೂ, ಗ್ರಾಮಾಂತರ ಪ್ರದೇಶಗಳಲ್ಲಿ ದ್ವಾದಶ ತಿರುಮಣ್‌ಗಳು ಹಾಗೂ ಸ್ಪಷ್ಟ ಊರ್ಧ್ವಪುಂಡ್ರಗಳನ್ನು ತಪ್ಪದೆ ಧರಿಸುವುದು ರೂಢಿಯಲ್ಲಿದೆ. ಇದಕ್ಕೆ ಅನುಗುಣವಾಗಿ ಹೆಂಗಸರು ವಿಶೇಷ ದಿನಗಳು 'ಮಡಿ ಸಾಬು' ಎನ್ನುವ ಹೆಂಗಸರ ಕಚ್ಚೆ ಸೀರೆ ಉಡುವ ರೀತಿ, ಮದುವೆ ಹೆಣ್ಣನ್ನು ಕೊಂಡೆ ಹಾಕಿ (ತಲೆಗೂದಲನ್ನು ಜೋಡಿಸುವ ವಿಶೇಷ ರೀತಿ) ಸಿದ್ಧಗೊಳಿಸುವ ರೀತಿ ಇಂದಿಗೂ ರೂಢಿಯಲ್ಲಿದೆ' ಇದಕ್ಕೆ ಅನೇಕ ವಿಶೇಷ ಸಂಪ್ರದಾಯಗಳೂ ರೂಢಿಯಲ್ಲಿವೆ.

ಪ್ರತಿ ಶ್ರೀವೈಷ್ಣವನಿಗೂ ಗೋದಾದೇವಿಯ ಹುಟ್ಟು ಹಬ್ಬ (ತಿರುನಕ್ಷತ್ರ-ತಿರುವಾಡಿಪ್ಪೂರಂ), ರಾಮಾನುಜರು ಹಾಗೂ ಇತರೇ ಆಚಾರ್ಯರುಗಳ ತಿರುನಕ್ಷತ್ರ, ಆಳ್ವಾರರ ತಿರುನಕ್ಷತ್ರಗಳನ್ನು ಆಚರಿಸುವುದು ಪವಿತ್ರವಾಗಿರುತ್ತದೆ.

ಇದೇ ರೀತಿಯಲ್ಲಿ ಧನುರ್ಮಾಸ (ಡಿಸೆಂಬರ್ 15 ರಿಂದ ಜನವರಿ 14 ರವರೆಗಿನ ಒಂದು ತಿಂಗಳ ವ್ರತ), ಸಂಕ್ರಾಂತಿ ಹಬ್ಬ, ಶ್ರೀಕೃಷ್ಣ ಜನ್ಮಾಷ್ಟಮಿಗಳನ್ನು ಆಚರಿಸುವುದು ಪವಿತ್ರವಾದವುಗಳೆಂದು ತಿಳಿಯಲಾಗಿದೆ.

ಇತಿಹಾಸದ ಪ್ರಾರಂಭದ ಕಾಲದಿಂದಲೂ ಶ್ರೀವೈಷ್ಣವರು ಉತ್ತಮ ವಿದ್ವತ್ತನ್ನು ಪಡೆದು, ತಮಿಳು ವೇದಗಳಲ್ಲಿಯೂ ಪಾಂಡಿತ್ಯವನ್ನು ಪಡೆದವ ರಾಗಿದ್ದರು. ಅನೇಕರು ಆಸ್ಥಾನ ಕವಿಗಳೂ ಆಗಿದ್ದರು. ಸಂಸ್ಕೃತ ವಿದ್ವಾಂಸ ರಾಗಿದ್ದ ಇವರು ಕಾವ್ಯ, ನಾಟಕ, ಅಲಂಕಾರ, ಶಾಸ್ತ್ರಗಳಲ್ಲಿ ಪರಿಣತ ರಾಗಿರುತ್ತಿದ್ದರು.

ಈ ಆಧುನಿಕ ಯುಗದಲ್ಲಿ ಎಂಜನಿಯರಿಂಗ್, ಡಾಕ್ಟರುಗಳಾಗಿ ಅನೇಕ ಶ್ರೀವೈಷ್ಣವರು ಭಾರತ, ಅಮೇರಿಕಾ ಮತ್ತಿತರ ದೇಶಗಳಲ್ಲಿ ಹರಡಿದ್ದಾರೆ. ಬುದ್ಧಿವಂತಿಕೆ ಹಾಗೂ ಸೂಕ್ಷ್ಮಮತಿಗಳಿಗೆ ಹೆಸರುವಾಸಿಯಾಗಿದ್ದಾರೆ.

ಇತ್ತೀಚಿನ ವರ್ಷಗಳಲ್ಲಿಯಂತೂ ಕಲೆ, ಸಾಹಿತ್ಯ, ಸಂಗೀತಗಳಲ್ಲಿಯೂ ಅನೇಕ ಶ್ರೀವೈಷ್ಣವರಿರುವುದನ್ನು ಕಾಣಬಹುದು. ಆದರೆ ವೈಷ್ಣವತ್ವಕ್ಕೇ ಮೀಸಲಾದ ಸಂಗೀತ, ಕಲೆಗಳು, ನಾಟಕ, ನೃತ್ಯ ಪ್ರಭೇದಗಳನ್ನು ಇವರು ಸೃಷ್ಟಿಸಲಿಲ್ಲ.

ರಚನಾತ್ಮಕವಾದ ಶ್ರೀವೈಷ್ಣವ ಸಾಹಿತ್ಯ, ಸಂಗೀತಗಳನ್ನೂ ಇವರುಗಳು ಅನ್ವೇಷಿಸಲಿಲ್ಲ.

ರಾಜಾಶ್ರಯವನ್ನು ಪಡೆದಾಗ ಉಚ್ಚ ಮಟ್ಟಕ್ಕೇರಿದ್ದ ಶ್ರೀವೈಷ್ಣವ ಸಂಸ್ಕೃತಿಯು ನಂತರದ ವರ್ಷಗಳಲ್ಲಿ ಇಳಿಮುಖವಾಗತೊಡಗಿ, ಸ್ವಯೂಥ ಕಲಹ, ಅಂತರ್ಯದ ಬಿರುಕುಗಳಿಂದ ನರಳುತ್ತಿದೆ, ಕೇವಲ ಇತರೇ ಜಾತಿಗಳ ಒತ್ತಡದ ಭಾರದಿಂದ ಶ್ರೀವೈಷ್ಣವ ಸಂಸ್ಕೃತಿಯು ಕುಗ್ಗಿಹೋಗಿದೆ.

ಭಾರತದ ರಾಜ್ಯಾಂಗವು ಇತರೇ ಜಾತಿಗಳಿಗೆ ನೀಡುವ ಪ್ರೋತ್ಸಾಹ, ಆಯಾಯ ಜಾತಿಗಳವರೇ ಜಾಗೃತಿಗೊಂಡು ಅಭಿವೃದ್ಧಿಯಾಗಿರುವ ರೀತಿ, ಭಾರತ ಸಮಾಜದ ಮೇಲ್ ಸ್ತರವನ್ನು ತಲುಪಿರುವ ರೀತಿ, ರಾಜಕೀಯ, ಆರ್ಥಿಕ, ಭೌತಿಕವಾಗಿ ಅವರುಗಳು ತಲೆ ಎತ್ತಿ ನಿಂತಿರುವ ಪರಿ, ಶ್ರೀವೈಷ್ಣವರಿಗೆ ಮಾರ್ಗದರ್ಶಿಯಾಗಬೇಕು. ನಿಜ. ಆದರೆ ಶ್ರೀವೈಷ್ಣವರಲ್ಲಿ ಇಂದಿಗೂ ಈ ಜಾಗೃತಿ ಎನ್ನುವ ಹೊಸ ರೂಪ ಕಂಡು ಬಂದಿಲ್ಲ. ಅಂತರ್ಮತೀಯ ಕಲಹ

ಗಳಂತೆ ಒಳ ಪಂಗಡಗಳ ನಡುವಣ ಹೋರಾಟ, ಬಡಿದಾಟಗಳು, ಒಗ್ಗಟ್ಟು, ಹುಮ್ಮಸ್ಸು ಇಲ್ಲದಿರುವಿಕೆಗಳು ಶ್ರೀವೈಷ್ಣವರನ್ನು ಪತನದ ಹಾದಿಯೆಡೆ ಒಯ್ಯುತ್ತಿದೆ. ವಿವಿಧ ಮಠಗಳು ಹಾಗೂ ಅವುಗಳ ಬೆಂಬಲಿಗರು ಒಟ್ಟು ಗೂಡುತ್ತಿಲ್ಲ. ಅಸಮಾಧಾನಗಳು, ಸ್ವಾರ್ಥ ಸಾಧಕತೆ, ಪರಸ್ಪರ ಅರಿವಿಲ್ಲ ದಿರುವಿಕೆ–ಇತ್ಯಾದಿಗಳಿಂದ ಶ್ರೀವೈಷ್ಣವ ಸಮಾಜವು ನಿಸ್ತೇಜಗೊಂಡಿದೆ. ಇದರ ಭವಿಷ್ಯವೂ ಮಂಕಾಗಿದೆ. 'ನಿಮ್ಮ ಉದ್ಧಾರ ನಿಮ್ಮ ಕೈಯಲ್ಲಿ' ಎನ್ನುವ ಘೋಷಣೆಯನ್ನು ಇವರು ಸದಾ ನೆನಪಿನಲ್ಲಿಟ್ಟುಕೊಂಡು, ಒಟ್ಟುಗೂಡಿ, ಮುಂದುವರೆಯದಿದ್ದಲ್ಲಿ ನಾಶ ಖಂಡಿತ.

# ರೇವಣಚರ್ಲ ಕೃಷ್ಣಮಾಚಾರ್ಯ, ಎಸ್. ನಾರಾಯಣಮ್ಮ

ರೇವಣಚರ್ಲ ಕೃಷ್ಣಮಾಚಾರ್ಯರುವರಸೆಯಲ್ಲಿ ನಮ್ಮ ಭಾವ, ಊರಿನ ವರಿಗೆಲ್ಲ 'ಮಾಟ್ಲ ಕಿಟ್ಟಪ್ಪ' (ಮಾತಿನ ಕಿಟ್ಟಪ್ಪ) ಚಿಕ್ಕಬಳ್ಳಾಪುರ ತಾಲ್ಲೂಕು, ಶ್ರೀರಾಮಪುರ ಗ್ರಾಮದವರು ಅವರು ಜಾನಪದ ಕಥೆಗಳ 'ವಿಶ್ವ ಕೋಶ' ಅದನ್ನು ಅವರು ಹೇಳುತ್ತಿದ್ದ ರೀತಿ ಅವರದೇ ಹಾಸ್ಯ ಚಟಾಕಿಗಳೊಂದಿಗೆ ನಿರರ್ಗಳವಾಗಿ ಅವರ ಸಿರಿಕಂಠದಿಂದ ಹರಿಯುತ್ತಿದ್ದ ವಾಗ್ಧಾರೆಯ ಜೊತೆಗೆ ಅವರಪರಪಾತ್ರಾಭಿನಯವೂ,ಬಾಲಕರಾಗಿದ್ದ ನಮಗೆ ಊಟ-ತಿಂಡಿ- ನಿದ್ರೆಗಳನ್ನು ಮರೆಸಿ ಬಿಡುತ್ತಿದ್ದವು.

ಕನ್ನಡ,ತೆಲುಗು ಭಾಷೆಗಳಲ್ಲಿ ಅವರ ಪಾಂಡಿತ್ಯ ಮುಂದುವರೆಯುತ್ತಿತ್ತು. ಭಾಷಾ ಮಾಧುರ್ಯ ಅದರ ಸೊಗಸು ಅವರ ಬಾಯಿಂದಲೇ ಕೇಳಿ ನಲಿಯಬೇಕು. ಪ್ರಾಸಬದ್ಧ ಸಂಭಾಷಣೆ, ಮಾತು ಅವರಿಗೆ ತುಂಬಾ ಪ್ರಿಯ. ಕೋಲಾರ ಜಿಲ್ಲೆಯ ಎಲ್ಲ ಗ್ರಾಮಗಳ ಹೆಸರೂ ಅವರಿಗೆ ಗೊತ್ತಿತ್ತು. ಅವನ್ನು ಪ್ರಾಸಮಯವಾಗಿ ಹೇಳುವುದೆಂದರೆ ಅವರಿಗೆ ಮೋಜು. ಅವರೊಬ್ಬ ಕಿಂದರ ಜೋಗಿಯಾಗಿದ್ದರು. ಮಕ್ಕಳ ಹಿಂಡು ಸದಾ ಅವರ ಹಿಂದೆ ಇರುತ್ತಿತ್ತು. ಮಕ್ಕಳೊಂದಿಗೆ ಅವರು ನಡೆದು ಕೊಳ್ಳುತ್ತಿದ್ದ ರೀತಿ ಸ್ಮರಣೀಯ. ಅವರಿಗೆ ರಾಗಗಳು ಗೊತ್ತಿರಲಿಲ್ಲ. ಆದರೆ ಅವರು ಸಂಗೀತದ ಗಣಿಯಾಗಿದ್ದರು. ಹಾಡುಗಳನ್ನು ಹೇಳುತ್ತಾ ವೈಮರೆಯುವುದೂ ಉಂಟು. ದೇವರ ನಾಮಗಳು ನಿಶ್ಶಬ್ದ, ಮನೋಹರ. ಅವರು ಹಾಡುತ್ತಿದ್ದರೆ, ಆರ್ಕೆಸ್ಟ್ರಾ ತರಹ ಇರುತ್ತಿತ್ತು. ಮಿಮಿಕ್ರಿಯಲ್ಲಿ, ಜಾನಪದ ನೃತ್ಯದಲ್ಲಿ, ಕೋಲಾಟದಲ್ಲಿ ಎತ್ತಿದ ಕೈ. ದವಡೆಗಳನ್ನು ತಮ್ಮ ಕೈಯ್ಯಿಂದ ಹೊಡೆದುಕೊಳ್ಳುತ್ತಾ, ತಬಲಾ ನುಡಿಸುವಂತೆ ಧ್ವನಿ ಮಾಡುತ್ತಿದ್ದರು. ನನ್ನ ಬರವಣಿಗೆಯನ್ನು ಆಸಕ್ತಿಯಿಂದ ಓದುತ್ತಿದ್ದ ಅವರು "ರಂಗಪ್ಪ!ಗುಪ್ಪಬಾಗ ರಾಸ್ತಾವು. ಕ್ಯಾರಿ ಆನ್!" ಎನ್ನುತ್ತಿದ್ದರು. ಆಗ ಜಾನಪದವು ಇಂದಿನಷ್ಟು ಕನ್ನಡದಲ್ಲಿ ಅಭಿವೃದ್ಧಿಯಾಗಿರಲಿಲ್ಲ, ನನಗೂ ಅಷ್ಟು ಹೊಳೆಯಲಿಲ್ಲ. ಸಾಹಿತ್ಯಕ್ಕೆ ಅವರ ಜ್ಞಾನವನ್ನು ಸಂಗ್ರಹಿಸದೆ ಬಹಳ ನಷ್ಟವಾಯಿತು. ಗಾದೆಗಳ ಜ್ಞಾನ ಅವರಲ್ಲಿ ತುಂಬಾ ಇತ್ತು. ಜೀವನದ ಸಾರ್ಥಕತೆಯನ್ನು ಅನು

ಭವಿಸಿದ ಅವರು ಭೂಲೋಕದಲ್ಲಿ ಜನರನ್ನು ಸಾಕು, ಪರಮಾತನನ್ನು ರಂಜಿಸಲೊ ಎಂಬಂತೆ ಸ್ವರ್ಗಾರೋಹಣ ಮಾಡಿ ಅಮರರಾದರು. ಇಂದಿಗೂ ಉತ್ತರಾರ್ಧದ ಕೋಲಾರ ಜಿಲ್ಲೆಯಲ್ಲಿ ಅವರು ಚಿರಂಜೀವಿಗಳು.

ಹೆಸರಿಗೆ ತಕ್ಕಂತಹ, ಅನ್ವರ್ಥದ ಅನ್ನಪೂರ್ಣೆ ಇವರ ಪತ್ನಿ ನಾಣಕ್ಕ (ನಾರಾಯಣಮ್ಮ). ಇವರ ಮನೆ ಈಕೆಯ ಧರ್ಮ ಛತ್ರ. ಒಂದು ಹೊತ್ತಿಗೆ ಕನಿಷ್ಠ 50 ಜನವಾದರೂ ಊಟ ಮಾಡುತ್ತಿದ್ದರು. ನಗುಮೊಗದ ಈಕೆಯ ಆತ್ಮೀಯ ಆಹ್ವಾನ ಎಲ್ಲರ ಮನ ಸೂರೆಗೊಳ್ಳುತ್ತಿತ್ತು. ಇಂತಹ ನಿತ್ಯ ಸಂತರ್ಪಣೆ ಅರ್ಧ ಶತಮಾನ ನಡೆಯಿತೆನ್ನಬಹುದು. ದಲಿತ ರೈತರ ಬಂಧುವಾಗಿದ್ದ ಈಕೆ ಯಾರಿಗೂ ಏನೂ ಇಲ್ಲನೆಂದವರಲ್ಲ. ಮದುವೆ ಮನೆಗಳಿಗೆ ಅತಿಥಿಯಾಗಿ ಬರುವ ಈಕೆ ಸಾವಿರ ಜನಕ್ಕೂ ಅಡಿಗೆ ಮಾಡಿ, ಬಡಿಸುವ ಸಾಮರ್ಥ್ಯವಿದ್ದವರು.

ಇಂತಹ ದೈವ ಸಮಾನ ದಂಪತಿಗಳ ನಾಲ್ವರುಪುತ್ರರಲ್ಲಿ ಪ್ರಥಮ ಹಾಗೂ ಚತುರ್ಥರು ಶಿಕ್ಷಣ ಇಲಾಖೆಯಲ್ಲಿ ಸೇವೆ ಮಾಡಿ, ಸೈ ಎನ್ನಿಸಿ ಕೊಂಡವರು. ಖ್ಯಾತಿವೆತ್ತ ಬೆಂಗಳೂರು ನ್ಯಾಷನಲ್ ಕಾಲೇಜಿನಲ್ಲಿ ಗಣಿತದ ಪ್ರಾಧ್ಯಾಪಕರಾಗಿ, ನಂತರ ಪ್ರಾಂಶುಪಾಲರಾಗಿ ನಿವೃತ್ತಿ ಹೊಂದಿದ ಗಣಿತಶಾಸ್ತ್ರಜ್ಞ ಕೆ. ರಾಮಾಚಾರ್‌ರವರು ಇವರ ಪ್ರಥಮಪುತ್ರ. ಬಿಡಿಟಿ ಎಂಜಿನಿಯರಿಂಗ್ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ ಎಸ್. ಕೆ. ನಾರಾಯಣ್‌ರವರು ನಾಲ್ಕನೇ ಪುತ್ರರು.



ಭಾರತದಲ್ಲಿನ ಇತರೇ ದರ್ಶನಗಳಂತೆ ಶ್ರೀವೈಷ್ಣವ ದರ್ಶನವೂ ತನ್ನದೇ ಆದ ಮಾರ್ಗದಲ್ಲಿ ಮುಂದುವರೆದು, ಇಂದಿನ ಸ್ಥಿತಿಯನ್ನು ತಲುಪಿದೆ. ಈ ದರ್ಶನದ ಉಗಮ ಯಾವಾಗ, ಇದು ನಡೆದು ಬಂದ ದಾರಿ ಎಂತಹುದು - ಎಂಬುದನ್ನು ವಿವರಿಸುವ ಕೃತಿಗಳು ಭಾರತೀಯ ಸಾಹಿತ್ಯದಲ್ಲಿ ಬೆರಳೆಣಿಸುವಷ್ಟು ಬಂದಿದೆ ಎಂದರೆ ಆಶ್ಚರ್ಯವಾಗುತ್ತದೆ. ಕನ್ನಡದಲ್ಲಿಯಂತೂ ಇಂತಹ ಕೃತಿ ಪ್ರಕಟವಾಗಿಯೇ ಇಲ್ಲ. ಈ ಕೊರತೆಯನ್ನು ವಿದ್ವಾನ್ 'ರಘುಸುತ'ರು ಈ ಕೃತಿಯ ಮೂಲಕ ನೀಗಿಸಿದ್ದಾರೆ. ಯಾವ ಯಾವ ಕಾಲದಲ್ಲಿ ಅದು ಯಾವ ಯಾವ ರೂಪವನ್ನು ಪಡೆದಿತ್ತು, ಯಾವ ಹೆಸರುಗಳಿಂದ ಕರೆಯಲ್ಪಡುತ್ತಿತ್ತು, ಅದರ ಸ್ವರೂಪವೇನು, ಯಾವ ಯಾವ ಮಹನೀಯರು ಈ ದರ್ಶನದ ಅಭಿವೃದ್ಧಿಗಾಗಿ ದುಡಿದು, ಮಡಿದರು, ಯಾವ ಯಾವ ರಾಜರು, ಜನಾಂಗ ಇದರ ಔನ್ನತ್ಯಕ್ಕಾಗಿ ದುಡಿದರು, ಇದರಲ್ಲಿ ಕನ್ನಡ ನಾಡಿನ ಪಾತ್ರವೇನು ಹಾಗೂ ಅದರ ಕೊಡುಗೆಯೇನು ಎಂಬುದರ ಸಂಪೂರ್ಣ ವಿವರಗಳನ್ನು ಲೇಖಕರು ಸರಸ, ಜನ ಸಾಮಾನ್ಯರೂ ಅರ್ಥ ಮಾಡಿಕೊಳ್ಳುವ ಶೈಲಿಯಲ್ಲಿ ರಚಿಸಿ ಪ್ರಕಟಿಸಿದ್ದಾರೆ. ಬಹಳಷ್ಟು ಸಂಶೋಧನೆಗಳು, ಮರಾಮರ್ಶೆಗಳಿಂದ ಈ ಅಪರ ವಯಸ್ಸಿನಲ್ಲಿ ಅವರು ನೀಡಿರುವ ಈ ಕಾಣಿಕೆ ಕನ್ನಡ ಸಾಹಿತ್ಯಕ್ಕೆ ಬಹು ಉಪಯೋಗಿಯಾದುದು. ಸರ್ವ ಜನೋಪಯೋಗಿಯಾದ ಈ ಕೃತಿಯು ಜನಪ್ರಿಯವಾಗುವುದರಲ್ಲಿ ಸಂಶಯವಿಲ್ಲ.

-ಪ್ರಕಾಶಕರು